॥ श्रीः ॥

॥ श्री गुरुराजो विजयते ॥

श्रीराघवेन्द्रतीर्थविरचिता

# तन्त्रदीपिका

प्रथमसंपुटम्

समन्वयाध्यायः अविरोधाध्यायश्च

प्रा. डि. प्रह्लादाचार्यः, एम्.ए., विद्वान्
इत्यनेन विरचित-
कन्नडभाषानुवादसहिता

श्री गुरुराजा असोसियेषन्
माडल्हौस् स्ट्रीट्, बेंगळूरु-४
इत्येतैः प्रकाशिता

|| ಶ್ರೀಃ ||

|| ಶ್ರೀ ಗುರುರಾಜೋ ವಿಜಯತೇ ||

ಶ್ರೀ ರಾಘವೇಂದ್ರತೀರ್ಥವಿರಚಿತಾ

# ತಂತ್ರದೀಪಿಕಾ

## [ ಪ್ರಥಮ ಸಂಪುಟ ]

( ಶ್ರೀವೇದವ್ಯಾಸಪ್ರಣೀತ ಬ್ರಹ್ಮಮೀಮಾಂಸಾ ಶಾಸ್ತ್ರದ ಸಮನ್ವಯಾಧ್ಯಾಯ, ಅವಿರೋಧಾಧ್ಯಾಯಗಳ ವ್ಯಾಖ್ಯಾನ )

**ಪ್ರೊ|| ಡಿ. ಪ್ರಹ್ಲಾದಾಚಾರ್ಯ, ಎಂ.ಎ., ವಿದ್ವಾನ್**

**ಇವರಿಂದ ರಚಿತವಾದ ಕನ್ನಡಾನುವಾದ ಸಹಿತ**



ಪ್ರಕಾಶಕರು

ಶ್ರೀ ಗುರುರಾಜಾ ಅಸೋಸಿಯೇಷನ್ (ರಿ)

**ಮಾಡಲ್‌ಹೌಸ್ ಬ್ಲಾಕ್, ಬಸವನಗುಡಿ**

**ಬೆಂಗಳೂರು-560 004**

TANTRADĪPIKĀ by Sri Rāghavendratīrtha. I Vol.–Samanvaya and Avirodha Adhyayas — Translated into Kannada by Vidwan D. Prahladacharya. Published by Sree Gururaja Association, Model House Street, Bangalore-4. Pp. 389. 2000 Copies. August 1987.

Copies can be had from

**The Secretary**
**SREE GURURAJA ASSOCIATION**
**Sri Raghavendraswamy Mutt**
**Model House Street**
**Bangalore-560 004**

Printed by D. S. Krishnachar at Prabha Printing House, 22-A, Dr. D. V. Gundappa Road, Basavanagudi, Bangalore - 560 004

|| ಶ್ರೀಃ ||

|| ಶ್ರೀ ಗುರುರಾಜೋ ವಿಜಯತೇ ||

# ಪ್ರಕಾಶಕರ ನುಡಿ

ಶ್ರೀ ರಾಘವೇಂದ್ರ ಗುರುಸಾರ್ವಭೌಮರ ಅಮರ ಕೃತಿಗಳಲ್ಲಿ ರತ್ನಪ್ರಾಯವಾದ "**ತಂತ್ರದೀಪಿಕಾ**" ಗ್ರಂಥದ ಪ್ರಥಮ, ದ್ವಿತೀಯಾಧ್ಯಾಯಗಳನ್ನೊಳಗೊಂಡ ಪ್ರಥಮ ಸಂಪುಟವನ್ನು ಅನುವಾದ ಸಹಿತವಾಗಿ ಪ್ರಕಟಿಸಿ ಶ್ರೀ ಗುರುರಾಜರ ಅಶೇಷ ಭಕ್ತವೃಂದಕ್ಕೆ ಒದಗಿಸಲು ಅತೀವ ಆನಂದವಾಗುತ್ತದೆ.

ನಮ್ಮ ಶ್ರೀ ಗುರುರಾಜಾ ಅಸೋಸಿಯೇಷನ್ 1946 ರಲ್ಲಿ ಶ್ರೀ ರಾಘವೇಂದ್ರ ಗುರುಸಾರ್ವಭೌಮರ ವೃಂದಾವನ ಪ್ರತಿಷ್ಠಾಪನಾ ಶುಭ ದಿವಸದಿಂದಲೂ ಸತತವಾಗಿ ನಿತ್ಯೋತ್ಸವ, ಮಾಸೋತ್ಸವ, ವಿಶೇಷೋತ್ಸವ, ಆರಾಧನಾ ಮಹೋತ್ಸವಗಳನ್ನು ಅತ್ಯಂತ ವ್ಯವಸ್ಥಿತವಾಗಿ, ವಿಜೃಂಭಣೆಯಿಂದ ನಡೆಯಿಸಿಕೊಂಡು ಬರುತ್ತಿರುವುದು ಕರ್ನಾಟಕದ ಎಲ್ಲಾ ಹರಿಗುರುಭಕ್ತರಿಗೂ ವಿದಿತವೇ ಆಗಿದೆ. ಅಷ್ಟೇ ಶ್ರದ್ಧಾಭಕ್ತಿಪುರಸ್ಸರವಾಗಿ ನಿರಂತರ ಜ್ಞಾನಯಜ್ಞವನ್ನು ಶ್ರೀಮದಾನಂದತೀರ್ಥ ಭಗವತ್ಪಾದರು, ಶ್ರೀಜಯತೀರ್ಥರು, ಶ್ರೀವ್ಯಾಸರಾಜರು, ಶ್ರೀರಾಘವೇಂದ್ರರು ಮುಂತಾದ ಜ್ಞಾನಿಶ್ರೇಷ್ಠರಿಂದ ರಚಿತವಾದ ಸಚ್ಛಾಸ್ತ್ರಪಾಠ, ಪ್ರವಚನ, ಪುರಾಣ, ಹರಿಕಥಾ ಮೊದಲಾದ ಜ್ಞಾನಕಾರ್ಯವನ್ನು ಪ್ರತಿನಿತ್ಯ ಪ್ರಾತಃಕಾಲ ಮತ್ತು ಸಾಯಂಕಾಲ ನಡೆಯಿಸುತ್ತಿರುವುದು ಅಶೇಷ ಮಾಧ್ವ ವೃಂದದ ಮೆಚ್ಚುಗೆಯನ್ನು ಪಡೆದಿದೆ.

ತತ್ವಜ್ಞಾನ ಪ್ರಸಾರಕ್ಕೆ ಪೂರಕವಾದ ಗ್ರಂಥ ಪ್ರಕಾಶನಾ ಕಾರ್ಯವನ್ನೂ ನಮ್ಮ ಅಸೋಸಿಯೇಷನ್ ವಿಶಿಷ್ಟರೀತಿಯಿಂದ ನಡೆಯಿಸಿಕೊಂಡು ಬರುತ್ತಲಿದೆ. ಶ್ರೀಮಠದ ರಜತೋತ್ಸವ ಸಂದರ್ಭದಲ್ಲಿ, ಶ್ರೀಮದಾನಂದತೀರ್ಥ ಭಗವತ್ಪಾದ ವಿರಚಿತ "**ಶ್ರೀಬ್ರಹ್ಮಸೂತ್ರಾಣುಭಾಷ್ಯಮ್**" ಮತ್ತು ಶ್ರೀ ರಾಘವೇಂದ್ರತೀರ್ಥರಚಿತ "**ತತ್ತ್ವಮಂಜರೀ**" ಗ್ರಂಥವು, ವೇದಾಂತವಿದ್ವಾನ್ ಮೀಮಾಂಸಾ ಶಿರೋಮಣಿ ಪ್ರೊ|| ಕೆ. ಟಿ. ಪಾಂಡುರಂಗಿ ಅವರ ವಿಶಿಷ್ಟ ಕನ್ನಡಾನುವಾದ ಸಹಿತವಾಗಿ ಪ್ರಕಟಿತವಾಯಿತು. ಈ ಗ್ರಂಥವನ್ನು ಮಾಧ್ವಜನತೆ ಅತ್ಯಂತ ಆದರೋತ್ಸಾಹಗಳಿಂದ ಪಡೆದು ನಮಗೆ ಬಹಳ ಪ್ರೋತ್ಸಾಹ ನೀಡಿತು. ಹಾಗೆಯೇ ಶ್ರೀ|| ಎಸ್. ಎನ್. ನಾಗರಾಜಾಚಾರ್ಯರಿಂದ ಸಂಗ್ರಹಿಸಲ್ಪಟ್ಟ ವರಾಹಪುರಾಣೋಕ್ತ "**ಶ್ರೀಗೀತಾಮಾಹಾತ್ಮ್ಯಂ**" ಮತ್ತು ಶ್ರೀ|| ಎನ್. ಕೆ. ನರಸಿಂಹಮೂರ್ತಿಯವರ ಕನ್ನಡಾನುವಾದ ಸಹಿತವಾಗಿ ಶ್ರೀರಾಘವೇಂದ್ರ ಗುರುಸಾರ್ವಭೌಮರಿಂದ ರಚಿತವಾದ "**ಶ್ರೀರಾಮ ಚಾರಿತ್ರ್ಯ ಮಂಜರೀ**" ಮತ್ತು "**ಶ್ರೀಕೃಷ್ಣ ಚಾರಿತ್ರ್ಯ ಮಂಜರೀ**" ಗ್ರಂಥಗಳನ್ನೂ ಪ್ರಕಟಿಸಲಾಯಿತು.

ಪ್ರಕೃತ, ಶ್ರೀಹರಿಗುರುಗಳ ಪ್ರೇರಣಾನುಸಾರವಾಗಿ ಆಡಳಿತ ಮಂಡಲಿಯು, ಶ್ರೀಗುರುಸಾರ್ವಭೌಮರ ಕೃತಿರತ್ನಗಳಲ್ಲಿ ಶ್ರೇಷ್ಠವಾದ **"ತಂತ್ರದೀಪಿಕಾ"** ಗ್ರಂಥ ವನ್ನು ಕನ್ನಡಾನುವಾದ ಸಮೇತ ಪ್ರಕಟಿಸಲು ಕಾರ್ಯನಿರತವಾಗಿ, 1985 ರಲ್ಲಿ ಗ್ರಂಥ ಪ್ರಕಾಶನ ಉಪಸಮಿತಿಯನ್ನು ರಚಿಸಿತು. ಉಪಸಮಿತಿಯವರು ಗ್ರಂಥಾನುವಾದ ವನ್ನು ಮಾಡಲು ವೇದಮೂರ್ತಿ ಡಿ. ಪ್ರಹ್ಲಾದಾಚಾರ್ಯ, ಎಂ.ಎ., ವಿದ್ವಾನ್, ಅವರನ್ನು ಪ್ರಾರ್ಥಿಸಿದರು. ಸಂಸ್ಕೃತ ಶಾಸ್ತ್ರಗ್ರಂಥಗಳ ಕನ್ನಡಾನುವಾದ ಎಷ್ಟು ಕ್ಲಿಷ್ಟಕರ ವೆನ್ನುವುದು ವಿದ್ವದ್ವೇದ್ಯವಾದ ವಿಷಯ. ವೇದಮೂರ್ತಿ ಡಿ. ಪ್ರಹ್ಲಾದಾಚಾರ್ಯರು ನಮ್ಮ ಶ್ರೀಮಠದ ಮೇಲಿನ ಅಭಿಮಾನದಿಂದಲೂ, ಶ್ರೀ ಹರಿಗುರುಗಳಲ್ಲಿರುವ ತಮ್ಮ ಭಕ್ತ್ಯಾದರಗಳ ದ್ಯೋತಕವಾಗಿಯೂ ಸಂತೋಷದಿಂದ ಒಪ್ಪಿ, ವಿದ್ವಜ್ಜನರ ಶ್ಲಾಘನೆಗೆ ಪಾತ್ರವಾಗುವ ರೀತಿಯಲ್ಲಿ ಅನುವಾದವನ್ನು ಒದಗಿಸಿದ್ದಾರೆ. ಇದಕ್ಕಾಗಿ ವೇದಮೂರ್ತಿ ಶ್ರೀ ಡಿ. ಪ್ರಹ್ಲಾದಾಚಾರ್ಯರಿಗೆ ನಮ್ಮ ಅನಂತವಂದನೆಗಳನ್ನು ಅರ್ಪಿಸುತ್ತೇವೆ.

ಈ ಗ್ರಂಥಕ್ಕೆ ಆಶೀರ್ವಚನಪೂರ್ವಕ ಶುಭಾಶಂಸನೆಯನ್ನು ಶ್ರೀ ಫಲಿಮಾರು ಮತ್ತು ಶ್ರೀ ಭಂಡಾರಕೇರಿ ಮಠಾಧೀಶರಾದ ಶ್ರೀ॥ ಶ್ರೀ॥ ವಿದ್ಯಾಮಾನ್ಯತೀರ್ಥ ಶ್ರೀಪಾದಂಗಳವರು ಪರಮಾನುಗ್ರಹ ಮಾಡಿದ್ದಾರೆ. ಇನ್ನೂ ಹೆಚ್ಚಿನ ರೀತಿಯಲ್ಲಿ ನಮ್ಮ ಅಸೋಸಿಯೇಷನ್ ನಿಂದ ಜ್ಞಾನಕಾರ್ಯಗಳು ನಡೆಯುವಂತೆ ಆಶೀರ್ವದಿಸಬೇಕೆಂದು ಶ್ರೀಶ್ರೀಪಾದರಲ್ಲಿ ನಮ್ಮ ವಿನಮ್ರ ಸಾಷ್ಟಾಂಗಪೂರ್ವಕ ಪ್ರಾರ್ಥನಾ.

ಕೊನೆಯಲ್ಲಿ ಸಮಸ್ತ ಮಾಧ್ವಬಂಧುಗಳಲ್ಲಿ ವಿನಂತಿ : ಶಾಸ್ತ್ರಗ್ರಂಥಗಳ ಭಾಷಾನು ವಾದ, ಮುದ್ರಣ, ಸಂಯೋಜನಗಳು ಕಾಲನಿರ್ಬಂಧದಿಂದ ಆಗುವಂತಹ ಕೆಲಸಗಳಲ್ಲ. ಈ ಗ್ರಂಥದ ಪ್ರಕಟನೆಯಲ್ಲಿ ಕಾಲವಿಲಂಬವಾದುದಕ್ಕೆ ವಿಷಾದಿಸುತ್ತೇವೆ. ಇದೇ ಸಂದರ್ಭ ದಲ್ಲಿ ಉಳಿದ ಎರಡು ಅಧ್ಯಾಯಗಳ ಅನುವಾದ ಸಹಿತವಾದ ತಂತ್ರದೀಪಿಕಾ ದ್ವಿತೀಯ ಸಂಪುಟವನ್ನು ಸಾಧ್ಯವಾದಷ್ಟು ಜಾಗ್ರತೆ ಓದುಗರಿಗೆ ಒದಗಿಸುವ ಭರವಸೆಯನ್ನು ಕೊಡುತ್ತೇವೆ.

ಗ್ರಂಥಗ್ರಾಹಕರಲ್ಲಿ ಒಂದು ಬಿನ್ನಹ : ಶಾಸ್ತ್ರಗ್ರಂಥಗಳ ರಕ್ಷಣೆ ಹಾಗು ಪಾಠ ಪ್ರವಚನಗಳಿಗೆ ಗ್ರಂಥಗಳ ಮುದ್ರಣ–ಪ್ರಕಾಶನಗಳು ಅಗತ್ಯವೆನ್ನುವುದು ಎಲ್ಲರಿಗೂ ತಿಳಿದ ವಿಷಯ. ಆದ್ದರಿಂದ ತತ್ತ್ವಜ್ಞಾನಾಕಾಂಕ್ಷಿಗಳೂ, ಶ್ರೀಮದಾಚಾರ್ಯರ ಅನುಗ್ರಹಾ ಕಾಂಕ್ಷಿಗಳೂ ಆದ ಸಹೃದಯರು ಈ ಗ್ರಂಥವನ್ನು ಪಡೆದು ನಮ್ಮ ಅಸೋಸಿಯೇಷನ್ ಹಮ್ಮಿಕೊಂಡಿರುವ ಮುಂದಿನ ಗ್ರಂಥಗಳ ಪ್ರಕಾಶನೆಗೆ ನೆರವು ನೀಡುವರೆಂದು ಆಶಿಸುತ್ತೇವೆ.

ಪ್ರಭಾ ಮುದ್ರಣಾಲಯದ ಮಾಲೀಕರಾದ ಶ್ರೀ ಡಿ. ಎಸ್. ಕೃಷ್ಣಾಚಾರ್ಯರು ಈ ಗ್ರಂಥವನ್ನು ಅಂದವಾಗಿ, ಅಚ್ಚುಕಟ್ಟಾಗಿ ಮುದ್ರಿಸಿಕೊಟ್ಟಿದ್ದಾರೆ. ಅವರಿಗೂ, ಪ್ರಭಾ ಮುದ್ರಣಾಲಯದ ಸಿಬ್ಬಂದಿವರ್ಗಕ್ಕೂ ನಮ್ಮ ಅಭಿನಂದನೆಗಳು.

ತಂತ್ರದೀಪಿಕಾ ಪ್ರಕಾಶನದ ಈ ಸೇವೆಯಿಂದ ಶ್ರೀ ರಾಘವೇಂದ್ರ ಗುರ್ವಂತರ್ಯಾಮಿ ಶ್ರೀಭಾರತೀರಮಣಮುಖ್ಯಪ್ರಾಣಾಂತರ್ಗತ ಸೀತಾಪತಿ ಶ್ರೀರಾಮಚಂದ್ರಸ್ವಾಮಿ ಪ್ರೀತನಾಗಲಿ ಎಂದು ಪ್ರಾರ್ಥಿಸುವೆವು.

**ಅಧ್ಯಕ್ಷರು ಮತ್ತು ಆಡಳಿತ ಮಂಡಲಿ ಸದಸ್ಯರು**

8–8–1987 **ಶ್ರೀ ಗುರುರಾಜಾ ಅಸೋಸಿಯೇಷನ್**

|| ಶ್ರೀಃ ||

# ಪೀಠಿಕೆ

ಮಹಾಮಹಿಮಶಾಲಿಗಳೆಂದು ಲೋಕವಿಖ್ಯಾತರಾದ ಶ್ರೀ ರಾಘವೇಂದ್ರ ಸ್ವಾಮಿಗಳು ದ್ವೈತವೇದಾಂತ ಗ್ರಂಥಕಾರರಲ್ಲಿ ಅಪ್ರತಿಮ ಟಿಪ್ಪಣೀಕಾರರೆಂದು ವಿದ್ವತ್ಸಮುದಾಯದಲ್ಲಿ ಪ್ರಖ್ಯಾತರಾದವರು. ಸುಮಾರು ನಲವತ್ತು ಗ್ರಂಥಗಳನ್ನು ರಚಿಸಿರುವ ಅವರು ದ್ವೈತವಾಙ್ಮಯಕ್ಕೆ ಸಲ್ಲಿಸಿರುವ ಸೇವೆ ಅಮೋಘವಾದದ್ದು. ಪ್ರಸ್ಥಾನತ್ರಯವೆಂದು ಪ್ರಸಿದ್ಧವಾಗಿರುವ ಬ್ರಹ್ಮಸೂತ್ರಗಳು, ಗೀತೆ, ಉಪನಿಷತ್ತು– ಇವುಗಳಿಗೆ ಮತ್ತು ಋಗ್ವೇದದ ಕೆಲವು ಭಾಗಕ್ಕೆ ನೇರವಾಗಿ ವ್ಯಾಖ್ಯಾನಗಳನ್ನು ರಚಿಸಿ ರುವುದಲ್ಲದೆ, ದ್ವೈತವೇದಾಂತಪ್ರಪಂಚದಲ್ಲಿ ಮುನಿತ್ರಯರೆಂದು ಪ್ರಖ್ಯಾತರಾದ ಶ್ರೀಮಧ್ವರು, ಶ್ರೀಜಯತೀರ್ಥರು ಮತ್ತು ಶ್ರೀವ್ಯಾಸತೀರ್ಥರ ಗ್ರಂಥಗಳಿಗೆ ಟಿಪ್ಪಣಿ ಗಳನ್ನು ರಚಿಸಿ ಜಿಜ್ಞಾಸುಗಳನ್ನು ಅನುಗ್ರಹಿಸಿರುವ ಅಸಾಧಾರಣಕೀರ್ತಿ ಶ್ರೀರಾಯರದ್ದು. ಉತ್ತರಮೀಮಾಂಸೆಗೆ ಮಾತ್ರವಲ್ಲದೆ ಪೂರ್ವಮೀಮಾಂಸಾಸೂತ್ರಗಳಿಗೂ ಸ್ವತಂತ್ರ ವ್ಯಾಖ್ಯಾನವನ್ನು ರಚಿಸಿರುವುದು ಶ್ರೀರಾಯರ ಮತ್ತೊಂದು ವೈಶಿಷ್ಟ್ಯ.

ದ್ವೈತವೇದಾಂತಗ್ರಂಥಗಳಿಗೆ ಟಿಪ್ಪಣಿಗಳನ್ನು ರಚಿಸಿರುವವರಲ್ಲಿ ಸರ್ವಮಾನ್ಯ ರಾದವರು ಕೆಲವರು ಮಾತ್ರ. ಶ್ರೀ ರಾಘವೇಂದ್ರಸ್ವಾಮಿಗಳು ಅವರಲ್ಲೊಬ್ಬರು. ಅವರು ತಮ್ಮ ಟಿಪ್ಪಣಿಗಳಲ್ಲಿ ವ್ಯಕ್ತಪಡಿಸಿದ ಅಭಿಪ್ರಾಯಕ್ಕೆ ಭಿನ್ನಾಭಿಪ್ರಾಯವೇ ಇಲ್ಲ. ಅವರ ಮಾತು ಸರ್ವರಿಗೂ ಶಿರೋಧಾರ್ಯ. ಅವರು ತಮ್ಮ ಗ್ರಂಥಗಳಲ್ಲಿ ಅನುಸರಿಸಿರುವ ಶೈಲಿಯೂ ವೈಶಿಷ್ಟ್ಯಪೂರ್ಣವಾದದ್ದು. ಅವರ ಮಾತುಗಳು ಮಿತ, ಸರಳ, ಆದರೆ ಅಷ್ಟೇ ಖಚಿತ ಮತ್ತು ತಲಸ್ಪರ್ಶಿಯಾದ ವಿವರಣೆ. ಆಧಾರಗ್ರಂಥಗಳ ಬಗ್ಗೆ ಅವರು ನೀಡುವ ಮಾಹಿತಿ ಸಂಶೋಧಕರಿಗೆ ಅತ್ಯಂತ ಸಹಾಯಕ. ವ್ಯಾಕರಣ ಮತ್ತು ಪೂರ್ವಮೀಮಾಂಸೆಯ ವಿಷಯಗಳು ಪ್ರಸ್ತುತವಾದ ಸಂದರ್ಭಗಳಲ್ಲಂತೂ ಆಯಾ ಶಾಸ್ತ್ರದ ಮರ್ಯಾದೆಯನ್ನನುಸರಿಸಿ ಅವರು ನೀಡುವ ವಿವರಣೆ ಆ ಶಾಸ್ತ್ರೀಯ ವಿಷಯಗಳ ನಮ್ಮ ಅರಿವಿಗೆ ಒಂದು ಪೂರ್ಣತೆಯನ್ನು ತಂದುಕೊಡುವಂಥಾದ್ದು. ವ್ಯಾಖ್ಯಾನಸಂದರ್ಭದಲ್ಲಿ ಅವರು ತೋರ್ಪಡಿಸುವ ಸೌಜನ್ಯವೂ ಅಪೂರ್ವವಾದದ್ದು. ಕ್ಲಿಷ್ಟವಾದ ಅನೇಕ ಕಡೆಗಳಲ್ಲಿ ಅವರು ತಮ್ಮ ವ್ಯಾಖ್ಯಾನವನ್ನು ಬರೆದ ನಂತರ ಅನ್ಯರ ವ್ಯಾಖ್ಯಾನಗಳನ್ನೂ ಉಲ್ಲೇಖಿಸುವುದುಂಟು. ಆದರೆ ಎಲ್ಲೂ ಖಂಡನೆಯ ಮಾತಿಲ್ಲ. ಅವುಗಳ ಯುಕ್ತಾಯುಕ್ತತೆಯ ವಿಚಾರ ಅಧ್ಯಯನ ಮಾಡುವವರ ವಿವೇಚನೆಗೆ

ಬಿಟ್ಟಿದ್ದು. ಇದು, ಶ್ರೀ ರಾಘವೇಂದ್ರಸ್ವಾಮಿಗಳ ಗ್ರಂಥಗಳ ವೈಶಿಷ್ಟ್ಯದ ಸ್ಥೂಲ ಪರಿಚಯವೆನ್ನಬಹುದು. ಒಟ್ಟಿನಲ್ಲಿ, ಐಹಿಕ ಫಲಗಳನ್ನರಸಿ ಬಂದವರ ವಿಷಯದಲ್ಲಿ ಶ್ರೀ ರಾಯರು ಎಷ್ಟು ಕರುಣಾಳುಗಳೋ, ಜ್ಞಾನವನ್ನರಸಿ ಬರುವವರಿಗೆ, ಅವರು ಅದಕ್ಕೂ ಮಿಗಿಲಾಗಿ ತಮ್ಮ ಗ್ರಂಥಗಳ ಮೂಲಕ ನಿರಂತರ ಕೃಪೆ ತೋರುತ್ತಿದ್ದಾರೆ.

ಬ್ರಹ್ಮಸೂತ್ರಗಳಿಗೆ ಸಂಬಂಧಪಟ್ಟಂತೆ ಶ್ರೀ ರಾಘವೇಂದ್ರಸ್ವಾಮಿಗಳು ರಚಿಸಿರುವ ಗ್ರಂಥಗಳು ಆರು. ಅವು—ಪರಿಮಳ, ಭಾವದೀಪ, ಪ್ರಕಾಶ, ತತ್ತ್ವಮಂಜರೀ, ನ್ಯಾಯಮುಕ್ತಾವಳೀ ಮತ್ತು ತಂತ್ರದೀಪಿಕಾ.

**ಪರಿಮಳ**—ಬ್ರಹ್ಮಸೂತ್ರಗಳ ವ್ಯಾಖ್ಯಾನವಾಗಿ ಶ್ರೀಮಧ್ವಾಚಾರ್ಯರು ರಚಿಸಿರುವ ಅನುವ್ಯಾಖ್ಯಾನಕ್ಕೆ ಶ್ರೀಜಯತೀರ್ಥರ ಲೋಕೋತ್ತರ ಟೀಕೆ ನ್ಯಾಯಸುಧೆಯೆಂದು ಪ್ರಸಿದ್ಧವಾಗಿದೆ. ಆ ನ್ಯಾಯಸುಧೆಯ ವಿಖ್ಯಾತ ಟಿಪ್ಪಣಿ—ಪರಿಮಳ. ಶ್ರೀರಾಘವೇಂದ್ರಸ್ವಾಮಿಗಳಿಗೆ ಪರಿಮಳಾಚಾರ್ಯರೆಂಬ ಪ್ರಶಸ್ತಿಯನ್ನು ತಂದುಕೊಟ್ಟ ಖ್ಯಾತಿ ಈ ಗ್ರಂಥದ್ದು.

**ಭಾವದೀಪ**—ಶ್ರೀಮದಾಚಾರ್ಯರ ಬ್ರಹ್ಮಸೂತ್ರಭಾಷ್ಯಕ್ಕೆ ಶ್ರೀಜಯತೀರ್ಥರು ರಚಿಸಿರುವ ಟೀಕೆ–ತತ್ತ್ವಪ್ರಕಾಶಿಕಾ. ಆ ಟೀಕೆಯ ಟಿಪ್ಪಣಿ ಭಾವದೀಪ. ಶ್ರೀ ರಾಯರು ರಚಿಸಿರುವ ಅನೇಕ ಟಿಪ್ಪಣಿಗಳನ್ನು ಅವರು ಭಾವದೀಪವೆಂದೇ ಕರೆದಿದ್ದಾರೆ. ಈ ಭಾವದೀಪವನ್ನು ತತ್ತ್ವಪ್ರಕಾಶಿಕಾ–ಭಾವದೀಪವೆಂದು ಕರೆಯುವ ವಾಡಿಕೆ ಇದೆ.

**ಪ್ರಕಾಶ**—ಶ್ರೀಜಯತೀರ್ಥರ ತತ್ತ್ವಪ್ರಕಾಶಿಕೆಗೆ ಶ್ರೀವ್ಯಾಸರಾಜರು ರಚಿಸಿರುವ ಉದ್ದಾಮವ್ಯಾಖ್ಯಾನ—ತಾತ್ಪರ್ಯಚಂದ್ರಿಕೆ. ಇದರ ಟಿಪ್ಪಣಿ ಪ್ರಕಾಶ. ಹೀಗೆ ಒಂದು ಗ್ರಂಥಕ್ಕೆ ಸಾಕ್ಷಾತ್ ವ್ಯಾಖ್ಯಾನ ಮತ್ತು ಆ ಗ್ರಂಥದ ವ್ಯಾಖ್ಯಾನದ ವ್ಯಾಖ್ಯಾನ ಇವೆರಡನ್ನೂ ರಚಿಸಿರುವ ಅಪೂರ್ವ ವೈಶಿಷ್ಟ್ಯ ಶ್ರೀ ರಾಯರದ್ದು.

**ತತ್ತ್ವಮಂಜರೀ**—ಶ್ರೀಮದಾಚಾರ್ಯರ ಬ್ರಹ್ಮಸೂತ್ರಾಣುಭಾಷ್ಯದ ಟಿಪ್ಪಣಿ. ಅನಂತೋಽರ್ಥಃ ಪ್ರಕಟಿತಃ ತ್ವಯ್ಯಾಣೌ ಭಾಷ್ಯಸಂಗ್ರಹೇ ' ಎಂದು ಶ್ರೀಮಧ್ವವಿಜಯದಲ್ಲಿ ಅಣುಭಾಷ್ಯವನ್ನು ವರ್ಣಿಸಲಾಗಿದೆ. ಈ ವರ್ಣನೆ ಅಕ್ಷರಶಃ ಸತ್ಯವೆಂದು ಶ್ರೀ ರಾಯರ ಈ ಟಿಪ್ಪಣಿಯು ಮನವರಿಕೆ ಮಾಡಿಕೊಡುವುದು.

**ನ್ಯಾಯಮುಕ್ತಾವಳೀ**—ಬ್ರಹ್ಮಸೂತ್ರಗಳ ಪ್ರತಿಯೊಂದು ಅಧಿಕರಣಗಳ ಶರೀರವನ್ನು ಸಂಕ್ಷಿಪ್ತವಾಗಿ ಸಂಗ್ರಹಿಸಿರುವ ಸ್ವತಂತ್ರ ಗ್ರಂಥ.

**ತಂತ್ರದೀಪಿಕಾ**—ಬ್ರಹ್ಮಸೂತ್ರಗಳ ವ್ಯಾಖ್ಯಾನರೂಪವಾದ ಈ ಗ್ರಂಥಕ್ಕೆ ಶ್ರೀ ರಾಯರು ಇಟ್ಟಿರುವ ತಂತ್ರದೀಪಿಕಾ ಎಂಬ ಹೆಸರು ಅನ್ವರ್ಥವಾಗಿದೆ. ತಂತ್ರ ಎಂದರೆ ಶಾಸ್ತ್ರ ಪ್ರಕೃತ, ಬ್ರಹ್ಮಮೀಮಾಂಸಾಶಾಸ್ತ್ರ. ಈ ವ್ಯಾಖ್ಯಾನವು ಆ ಶಾಸ್ತ್ರದ

ಬಗ್ಗೆ ಬೆಳಕು ಚೆಲ್ಲುವ ದೀಪಿಕೆಯಾಗಿದೆ. ಶ್ರೀ ರಾಘವೇಂದ್ರ ವಿಜಯದಲ್ಲಿ ಈ ಗ್ರಂಥ ರಚನೆಯನ್ನು ಬಹು ಸುಂದರವಾಗಿ ವರ್ಣಿಸಿದ್ದಾರೆ—

ಸೂತ್ರಪಾತ್ರರುಚಿರಂ ಕಲಿತಾರ್ಥ ನ್ಯಾಯಪೂರ್ವಕಸುಧಾಜ್ಯಭರೇಣ |
ತಂತ್ರದೀಪಮನುಬೋಧಯದರ್ಥಂ ಭಾಷ್ಯವರ್ತಿಕಮಯಂ ತನುತೇಸ್ಮ ||
(ಸರ್ಗ ೮, ಶ್ಲೋ. ೧೦)

'ಸೂತ್ರಾರ್ಥಗಳನ್ನು ಯಥಾವತ್ತಾಗಿ ಬೆಳಗಿಸುವ ಈ ತಂತ್ರದೀಪಕ್ಕೆ ಬ್ರಹ್ಮ ಸೂತ್ರಗಳೇ ಹಣತೆ. ಸೂತ್ರಭಾಷ್ಯವೇ ಬತ್ತಿ. ನ್ಯಾಯಸುಧೆಯೆಂಬ ಆಜ್ಯವನ್ನು ಸುರಿದು ಶ್ರೀ ರಾಘವೇಂದ್ರರು ಈ ದೀಪವನ್ನು ಪ್ರಜ್ವಲಗೊಳಿಸಿದರು'.

ಗ್ರಂಥದ ಹೆಸರೇ ಸೂಚಿಸುವಂತೆ ಬ್ರಹ್ಮಸೂತ್ರಗಳನ್ನು ವಿವರಿಸುವುದೇ ಶ್ರೀ ರಾಯರ ಉದ್ದೇಶ. ಸೂತ್ರಪ್ರಸ್ಥಾನಕ್ಕೆ ಸಂಬಂಧಿಸಿದ ಅವರ ಇತರ ಗ್ರಂಥ ಗಳಿಂದಲೂ ಸೂತ್ರವಿವರಣೆ ದೊರೆಯಬಹುದು. ಆದರೆ ಇಲ್ಲಿ ವಿವರಣೆಯ ರೀತಿ ವಿಭಿನ್ನವಾಗಿದೆ. ಇಲ್ಲಿ ಶ್ರೀ ರಾಯರು ಪ್ರತಿಯೊಂದು ಅಧಿಕರಣದ ಉದ್ದೇಶವನ್ನು ಮೊದಲು ಸಂಕ್ಷಿಪ್ತವಾಗಿ ಹೇಳಿ, ಪೂರ್ವಪಕ್ಷವನ್ನು ಸಂಗ್ರಹವಾಗಿ ನಿರೂಪಿಸುವರು. ಅನಂತರ ಆ ಪೂರ್ವಪಕ್ಷಕ್ಕೆ ಉತ್ತರ ನೀಡುವ ಸೂತ್ರವನ್ನು ಉಲ್ಲೇಖಿಸಿ ಆ ಸೂತ್ರವು ಒಂದು ಪರಿಪೂರ್ಣವಾದ ವಾಕ್ಯವಾಗುವುದಕ್ಕೆ ಆವಶ್ಯಕವಾದ ಪದಗಳ ಅಧ್ಯಾಹಾರ, ಅನುವೃತ್ತಿ, ಆವೃತ್ತಿ, ಶೇಷಪೂರಣ ಮೊದಲಾದವನ್ನು ಹೇಳುವರು. ಹೀಗೆ ಪರಿಪೂರ್ಣ ವಾಕ್ಯವಾಗಿ ರೂಪುಗೊಂಡ ಸೂತ್ರಕ್ಕೆ ಅನ್ವಯಾನುಸಾರ ಪ್ರತಿಪದಾರ್ಥ ಹೇಳಿ ಸೂತ್ರದ ಭಾವವನ್ನೂ ಸಂಗ್ರಹಿಸುವರು. ತತ್ತ್ವಪ್ರದೀಪ, ಸುಧಾ, ಚಂದ್ರಿಕಾ ಮೊದಲಾದ ಗ್ರಂಥಗಳಲ್ಲಿ ಆ ಸೂತ್ರಕ್ಕೆ ಬೇರೊಂದು ವ್ಯಾಖ್ಯಾನ ಮಾಡಿದ್ದಲ್ಲಿ ಆ ವ್ಯಾಖ್ಯಾನವನ್ನೂ ಉಲ್ಲೇಖಿಸುವರು. ಸೂತ್ರಗಳಲ್ಲಿ ಮೇಲುನೋಟಕ್ಕೆ ಕಾಣಬರುವ ಪುನರುಕ್ತಿ, ವಿರೋಧ ಮೊದಲಾದವುಗಳನ್ನು ಪ್ರಸ್ತಾಪಿಸಿ ಪರಿಹರಿಸುವರು. ಅಲ್ಲದೆ, ಪ್ರತಿಪಾದದ ಕೊನೆಯಲ್ಲಿ ಆ ಪಾದದ ಅಧಿಕರಣಗಳಿಂದ ಸಿದ್ಧವಾಗುವ ಪ್ರಮೇಯ ಗಳನ್ನು ಸಂಗ್ರಹಿಸುವರು. ಹೀಗೆ ಈ ಗ್ರಂಥವು ದ್ವೈತಸಿದ್ಧಾಂತಕ್ಕನುಗುಣವಾದ, ಬ್ರಹ್ಮಸೂತ್ರಗಳ ಒಂದು ಪರಿಪೂರ್ಣ ವ್ಯಾಖ್ಯಾನವಾಗಿದೆ.

ಇಂತಹ ಪ್ರೌಢಶಾಸ್ತ್ರ ಗ್ರಂಥದ ಕನ್ನಡ ಅನುವಾದವನ್ನು ಸಿದ್ಧಗೊಳಿಸುವ ಹೊಣೆಗಾರಿಕೆಯನ್ನು ಶ್ರೀ ಕೆ. ಟಿ. ಪಾಂಡುರಂಗಿಯವರ ಸೂಚನೆಯಂತೆ ಮಾಡೆಲ್ ಹೌಸ್ ಬೀದಿಯ ಶ್ರೀ ರಾಯರ ಮಠದವರು ನನಗೊಪ್ಪಿಸಿದಾಗ ಹಿಂಜರಿಕೆಯ ಮನಸ್ಸಿನಿಂದಲೇ ನಾನದನ್ನು ಒಪ್ಪಿಕೊಂಡೆ. ಶಾಸ್ತ್ರ ಗ್ರಂಥಗಳ ಕನ್ನಡ ಅನುವಾದ ವನ್ನು ಎರಡು ರೀತಿಯಿಂದ ಮಾಡಲು ಸಾಧ್ಯವಿದೆ ಒಂದು, ಸಾಮಾನ್ಯ ಓದುಗರಿಗೂ ಗ್ರಹಿಸಲು ಅನುಕೂಲವಾಗುವಂತೆ ಗ್ರಂಥದ ಘಟ್ಟಗಳ ಸಾರವನ್ನು ಮಾತ್ರ ತಿಳಿಗನ್ನಡ ದಲ್ಲಿ, ಮೂಲದ ಛಾಯೆಯನ್ನು ಅನುಸರಿಸಿ ಸಂಗ್ರಹಿಸುವುದು. ಇನ್ನೊಂದು,

ಪ್ರತಿಯೊಂದು ವಾಕ್ಯವನ್ನೂ ಆದಷ್ಟು ಸರಳವಾಗಿ ಕನ್ನಡದಲ್ಲಿ ಅನುವಾದಿಸುವುದು. ಎರಡನೆ ರೀತಿಯ ಅನುವಾದದಲ್ಲಿ, ಮೂಲದಲ್ಲಿ ಬರುವ ಯಾವ ವಿಷಯವನ್ನೂ, ಮುಖ್ಯ ವಿಷಯದ ದೃಷ್ಟಿಯಿಂದ ಅದು ಗೌಣವಾಗಿರಲಿ, ಬಿಡಲಿ, ಅಲಕ್ಷಿಸಲಾಗದು. ಮೊದಲನೆ ರೀತಿಯ ಅನುವಾದ, ಶಾಸ್ತ್ರ ಪರಿಭಾಷೆಯ ಹೆಚ್ಚಿನ ಪರಿಚಯವಿಲ್ಲದ ವರಿಗೂ ಎಟುಕವಂಥಾದ್ದು. ಇನ್ನೊಂದು ರೀತಿಯ ಅನುವಾದವನ್ನು ಗ್ರಹಿಸಲು ಶಾಸ್ತ್ರಾಭ್ಯಾಸದ ಹಿನ್ನೆಲೆ ಅತ್ಯಗತ್ಯ. ತಂತ್ರದೀಪಿಕೆಯ ಈ ಅನುವಾದ ಎರಡನೆ ರೀತಿಯದಾಗಿದೆ. ಪ್ರತಿಯೊಂದು ಸೂತ್ರವೂ ವಿವಕ್ಷಿತವಾದ ಅರ್ಥವನ್ನು ಹೇಗೆ ಕೊಡುವುದೆಂದು ತೋರಿಸುವುದು ಶ್ರೀ ರಾಯರ ಈ ಗ್ರಂಥರಚನೆಯ ಮುಖ್ಯ ಉದ್ದೇಶ ಗಳಲ್ಲೊಂದೆನ್ನುವುದು ಸ್ಪಷ್ಟ. ಅಗತ್ಯವಾದ ಪದಗಳ ಅಧ್ಯಾಹಾರ, ಆವೃತ್ತಿ ಮೊದಲಾದ ವ್ಯಾಖ್ಯಾನ ತಂತ್ರಗಳೆಲ್ಲವನ್ನೂ ಅದಕ್ಕಾಗಿಯೇ ಈ ಗ್ರಂಥದಲ್ಲಿ ಶ್ರೀ ರಾಯರು ವಿಶೇಷವಾಗಿ ತೋರಿಸಿದ್ದಾರೆ. ಆ ಉದ್ದೇಶ ಅನುವಾದದ ಮೂಲಕ ಅಭ್ಯಾಸಿಗಳಿಗೆ ಮುಟ್ಟಬೇಕಾದಲ್ಲಿ ಪ್ರತಿಯೊಂದೂ ವಾಕ್ಯದ ಅನುವಾದವನ್ನು ಕೊಡ ಬೇಕಾಗುವುದು. ಅನುವಾದದ ಜೊತೆಗೆ ಮೂಲವನ್ನೂ ಕೊಟ್ಟಿರುವುದರಿಂದ ಶಾಸ್ತ್ರಾಭ್ಯಾಸದ ಸ್ವಲ್ಪ ಹಿನ್ನೆಲೆ ಇರುವವರಿಗೆ ಇಂತಹ ಅನುವಾದವನ್ನು ಅನುಸರಿಸು ವುದು ಕ್ಲೇಶಕರವಾಗಲಾರದೆಂದು ಭಾವಿಸಿದ್ದೇನೆ. ಅಲ್ಲದೆ, ವಿದ್ವಾಂಸರ ಸಹಾಯದಿಂದ ಗ್ರಂಥವನ್ನೊಮ್ಮೆ ಅರ್ಥ ಮಾಡಿಕೊಂಡಿರುವವರಿಗೆ ಮನನ ಮಾಡಲು ಇಂತಹ ಅನುವಾದಗಳು ಹೆಚ್ಚು ಉಪಯುಕ್ತವಾಗುವವು. ಕ್ಲೇಶವಿದ್ದ ಕಡೆ, ಪಾರಿಭಾಷಿಕ ಪದಗಳನ್ನು ಉಪಯೋಗಿಸಿರುವ ಕಡೆ ಮತ್ತು ಅಭ್ಯಾಸಿಗಳಿಗೆ ಸಾರವನ್ನು ಸಂಗ್ರಹಿಸಿ ಕೊಡುವುದು ಅಗತ್ಯವೆಂದೆನಿಸಿದ ಕಡೆಯಲ್ಲೆಲ್ಲ ಅಡಿಟಿಪ್ಪಣಿಗಳನ್ನು ಕೊಡಲಾಗಿದೆ. ಕೆಲವೆಡೆ ಓದುಗರ ಸೌಲಭ್ಯದ ದೃಷ್ಟಿಯಿಂದ ಪಾರಿಭಾಷಿಕ ಪದಗಳನ್ನು ಸ್ಥೂಲ ದೃಷ್ಟಿಯಿಂದ ಅನುವಾದಿಸಿರುವುದೂ ಉಂಟು.

ಈ ಅನುವಾದಗ್ರಂಥ ಬಿಡುಗಡೆಯಾಗುವ ಈ ಸಂದರ್ಭದಲ್ಲಿ ನನಗೆ ವೇದಾಂತ ವಿದ್ಯೆಯನ್ನು ಉಪದೇಶಿಸಿ ಅನುಗ್ರಹಿಸಿದ ಪರಮಪೂಜ್ಯ ಶ್ರೀ ಫಲಿಮಾರು-ಭಂಡಾರಕೇರಿ ಮಠಾಧೀಶರಾದ ಶ್ರೀ ವಿದ್ಯಾಮಾನ್ಯತೀರ್ಥ ಶ್ರೀಪಾದಂಗಳವರ ಮತ್ತು ಪರಮಪೂಜ್ಯ ಶ್ರೀ ಪೇಜಾವರಮಠಾಧೀಶ ಶ್ರೀ ವಿಶ್ವೇಶತೀರ್ಥ ಶ್ರೀಪಾದಂಗಳವರ ಚರಣಸನ್ನಿಧಿಯಲ್ಲಿ ಭಕ್ತಿಕೃತಜ್ಞತಾಪೂರ್ವಕವಾದ ಸಾಷ್ಟಾಂಗ ಪ್ರಣಾಮಗಳನ್ನು ಸಲ್ಲಿಸುವುದು ನನ್ನ ಆದ್ಯಕರ್ತವ್ಯವಾಗಿದೆ. ಈ ಅನುವಾದದಲ್ಲಿ ಗುಣಾಂಶವೇನಿದ್ದರೂ ಈ ಗುರುದ್ವಯರಿಗೇ ಸೇರತಕ್ಕದ್ದೆಂದೂ ದೋಷಗಳೆಲ್ಲವೂ ನನ್ನದೆಂದೂ ವಿನಮ್ರತೆಯಿಂದ ನಿವೇದಿಸುತ್ತೇನೆ. ನನ್ನ ಪ್ರಾಧ್ಯಾಪಕರಾದ ಶ್ರೀ ಕೆ. ಟಿ. ಪಾಂಡುರಂಗಿಯವರ ಉತ್ತೇಜನ ಮಾರ್ಗ ದರ್ಶನಗಳ ನೆರವಿಲ್ಲದಿದ್ದಲ್ಲಿ ನಾನು ಈ ಅನುವಾದ ಕಾರ್ಯವನ್ನು ಒಪ್ಪಿಕೊಳ್ಳುವ ಧೈರ್ಯ ವಹಿಸುತ್ತಿರಲಿಲ್ಲ. ನನ್ನನ್ನು ನಿರ್ವ್ಯಾಜ ಅಭಿಮಾನದಿಂದ ಹುರಿದುಂಬಿಸಿ, ಅಮೂಲ್ಯ ಸಲಹೆಗಳನ್ನು ನೀಡಿ ನನ್ನಿಂದ ಈ ಕೆಲಸವನ್ನು ಮಾಡಿಸಿದ ಶ್ರೀ ಪಾಂಡುರಂಗಿ

ಯವರಿಗೆ ನನ್ನ ಕೃತಜ್ಞತಾಪೂರ್ವಕ ವಂದನೆಗಳನ್ನು ಸಲ್ಲಿಸುತ್ತೇನೆ. ಈ ಗ್ರಂಥದ ಮುದ್ರಣಕಾಲದಲ್ಲಿ ಕರಡಚ್ಚನ್ನು ಪರಿಶೀಲಿಸಿ ಅನುವಾದದ ಬಗ್ಗೆ ಉಪಯುಕ್ತ. ಸೂಚನೆಗಳನ್ನು ನೀಡುತ್ತಿದ್ದವರು ವಿದ್ವಾನ್ ಶ್ರೀ ಜಿ. ಗುರುವೆಂಕಟಾಚಾರ್ಯರು. ತಂತ್ರದೀಪಿಕಾ ಸಂಸ್ಕೃತ ಹಸ್ತಪ್ರತಿಯನ್ನು ಬರೆದು ಕೊಟ್ಟವರು ವಿದ್ವಾನ್ ಶ್ರೀ ಎಸ್. ವಿಠಲದಾಸ ಭಟ್ಟರು. ಈ ಇಬ್ಬರು ಆತ್ಮೀಯ ಮಿತ್ರರಿಗೆ ನನ್ನ ಹಾರ್ದಿಕ ಕೃತಜ್ಞತೆಗಳು.

ಇಂತಹ ಒಂದು ಗ್ರಂಥದ ಮುದ್ರಣವಾಗಬೇಕೆಂದು ಸಂಕಲ್ಪಿಸಿದ ಮಾಡೆಲ್ ಹೌಸ್ ಬೀದಿಯ ಶ್ರೀ ರಾಘವೇಂದ್ರಮಠದ ಶ್ರೀ ಗುರುರಾಜಾ ಅಸೋಸಿಯೇಷನ್‌ನ ಸದಸ್ಯರು ಎಲ್ಲರ ಕೃತಜ್ಞತೆಗೆ ಪಾತ್ರರು. ಶ್ರೀ ರಾಯರ ಭಕ್ತರು ಸಲ್ಲಿಸುವ ಕಾಣಿಕೆ ಯಲ್ಲಿ ಒಂದಂಶವನ್ನು ಜ್ಞಾನಕಾರ್ಯಕ್ಕೆ ಉಪಯೋಗಿಸಿದಲ್ಲಿ ಶ್ರೀ ರಾಯರಿಗೆ ಅತ್ಯಂತ ಪ್ರೀತಿಯಾಗುವುದೆಂದು ಮನಗಂಡು ಆ ಕಾರ್ಯವನ್ನು ಅತ್ಯಂತ ಶ್ರದ್ಧೆಯಿಂದ ನಡೆಸು ತ್ತಿರುವ ಅಸಾಧಾರಣ ವೈಶಿಷ್ಟ್ಯ ಈ ಮಠದ ಆಡಳಿತ ಸಮಿತಿಯದ್ದು. ಎಲ್ಲ ಜಿಜ್ಞಾಸು ಭಕ್ತರ ಪರವಾಗಿ ಶ್ರೀಮಠದ ಆಡಳಿತ ಸಮಿತಿಗೆ ಹಾರ್ದಿಕ ಅಭಿನಂದನೆಗಳನ್ನು ಸಲ್ಲಿಸುತ್ತೇನೆ.

ನಿರ್ದುಷ್ಟ ಹಾಗೂ ಅಚ್ಚುಕಟ್ಟಾದ ಮುದ್ರಣಕ್ಕೆ ಖ್ಯಾತರಾದವರು ಪ್ರಭಾ ಮುದ್ರಣಾಲಯದ ಶ್ರೀ ಡಿ. ಎಸ್. ಕೃಷ್ಣಾಚಾರ್ಯರು. ಶ್ರೀ ರಾಯರಲ್ಲಿ ಅವರಿಗಿರುವ ಅಮಿತ ಭಕ್ತಿ ಮತ್ತು ದ್ವೈತ ವೇದಾಂತ ಗ್ರಂಥಗಳ ಮುದ್ರಣದಲ್ಲಿರುವ ಅಪಾರ ಶ್ರದ್ಧೆಗಳ ಫಲವಾಗಿ ಈ ಗ್ರಂಥ ಇಷ್ಟು ಸುಂದರವಾಗಿ ಹೊರಬಂದಿದೆ. ಶ್ರೀ ಡಿ. ಎಸ್. ಕೃಷ್ಣಾಚಾರ್ಯರಿಗೆ ನನ್ನ ಹಾರ್ದಿಕ ವಂದನೆಗಳು.

**ಡಿ. ಪ್ರಹ್ಲಾದಾಚಾರ್ಯ**

# ಶುಭಾಶಂಸನೆ

**ಪರ್ಯಾಯ ಶ್ರೀ ಪಲಿಮಾರು ಮಠ**

**ಹೃಷೀಕೇಶತೀರ್ಥ ಸಂಸ್ಥಾನಂ,**

**ಶ್ರೀ ಕೃಷ್ಣ ಮಠ,**

**ಉಡುಪಿ, ದ. ಕ. – 576 101** ತಾ॥ 28–6–1987

ತಂತ್ರದೀಪಿಕೆಯು ಬ್ರಹ್ಮಸೂತ್ರಾರ್ಥವನ್ನು ತಿಳಿಯುವದಕ್ಕೋಸ್ಕರ ಅತ್ಯಾವಶ್ಯಕವಾಗಿದೆ. ಶ್ರೀ ರಾಘವೇಂದ್ರಸ್ವಾಮಿಗಳು ಇಷ್ಟಾರ್ಥಸಿದ್ಧಿಗೋಸ್ಕರ ಅವಶ್ಯ ಆಶ್ರಯಣೀಯರು ಹೇಗೋ ಹಾಗೆಯೇ ಅವರ ಎಲ್ಲ ಗ್ರಂಥಗಳೂ ಕೂಡ ಶಾಸ್ತ್ರಾರ್ಥಸಿದ್ಧಿಗೋಸ್ಕರ ಆಶ್ರಯಣೀಯಗಳೇ ಆಗಿ ಇವೆ. ಅವರ ಎಲ್ಲ ಗ್ರಂಥಗಳು ಅನ್ಯೂನಾನತಿರಿಕ್ತಗಳು ಮತ್ತು ಬಾಲಕರಿಗೂ ಬೋಧಕಗಳು, ಪಂಡಿತರಿಗೂ ದುರ್ನಿರೂಪಗಳು. ಅಂತಹ ಗ್ರಂಥದ ಸರಳ ಕನ್ನಡ ಭಾಷಾನುವಾದವು ಸಜ್ಜನರಿಗೆ ಅತ್ಯಂತ ಅಪೇಕ್ಷಿತವಾಗಿತ್ತು. ಆ ಅಪೇಕ್ಷೆಯು ಈಗ ವಿದ್ವದ್ವರೇಣ್ಯರಾದ ಶ್ರೀ ಡಿ. ಪ್ರಹ್ಲಾದಾಚಾರ್ಯರ ದ್ವಾರಾ ಮಾಡಲ್‌ಹೌಸ್ ಶ್ರೀ ರಾಘವೇಂದ್ರ ಮಠ ಬೆಂಗಳೂರು ಇವರಿಂದ ಪೂರ್ಣವಾಗಿದೆ. ಈ ಅನುವಾದವನ್ನು ಅನೇಕ ಕಡೆಗಳಲ್ಲಿ ನೋಡಿದೆವು. ಯಥಾರ್ಥವಾದ ಅನುವಾದವಾಗಿದೆ. ಇದನ್ನುನೋಡಿ ನಮಗೆ ತುಂಬಾ ಸಂತೋಷವಾಗಿದೆ. ಸಜ್ಜನವರ್ಗಕ್ಕೆ ದೊಡ್ಡ ಉಪಕಾರವಾಗಿದೆ. ಇಂತಹ ಉತ್ತಮ ಕಾರ್ಯಗಳು ಶ್ರೀಮಠದವರ ಕಡೆಯಿಂದ ಸದಾ ನಡೆದುಬರಲಿ ಎಂದು ಅಂತಃಕರಣಪೂರ್ವಕ ಆಶಿಸುತ್ತೇವೆ.

ಇತ್ಯನೇಕ ನಾರಾಯಣ ಸ್ಮರಣ

**ಶ್ರೀ ವಿದ್ಯಾಮಾನ್ಯತೀರ್ಥ ಶ್ರೀಪಾದಂಗಳವರು**

# ವಿಷಯಾನುಕ್ರಮಣಿಕೆ

## ಸಮನ್ವಯಾಧ್ಯಾಯ—ಪ್ರಥಮಪಾದ



## ಸಮನ್ವಯಾಧ್ಯಾಯ—ದ್ವಿತೀಯಪಾದ

## ಸಮನ್ವಯಾಧ್ಯಾಯ—ತೃತೀಯಪಾದ



## ಸಮನ್ವಯಾಧ್ಯಾಯ—ಚತುರ್ಥಪಾದ

## ಅವಿರೋಧಾಧ್ಯಾಯ—ಪ್ರಥಮಪಾದ



## ಅವಿರೋಧಾಧ್ಯಾಯ—ದ್ವಿತೀಯಪಾದ

## ಅವಿರೋಧಾಧ್ಯಾಯ—ತೃತೀಯಪಾದ



## ಅವಿರೋಧಾಧ್ಯಾಯ—ಚತುರ್ಥಪಾದ

|| श्रीः ||

|| श्रीजानकीवदनाम्भोजराजहंसाय रामचन्द्राय नमः ||

|| श्री गुरुभ्यो नमः || हरिः ॐ ||

## श्रीराघवेन्द्रतीर्थविरचिता

# तन्त्रदीपिका

प्रणम्य गुणसम्पूर्णं दोषातीतं रमापतिम् ।
पूर्णबोधं गुरूनन्यान् कुर्मः सूत्रार्थसङ्ग्रहम् ॥ १ ॥

गुरुपादकृतोऽप्यस्ति सङ्ग्रहो हृदयङ्गमः ।
प्रस्थानभेदप्रोक्तार्थसङ्ग्रहोऽथाप्ययं मम ॥ २ ॥

---

ಶ್ರೀಃ

## ಶ್ರೀರಾಘವೇಂದ್ರತೀರ್ಥವಿರಚಿತ

# ತಂತ್ರದೀಪಿಕಾ

(ಕನ್ನಡ ಅನುವಾದ)

**ಮಂಗಲಾಚರಣ**

ಗುಣಸಂಪೂರ್ಣನೂ, ದೋಷಾತೀತನೂ ಆದ ರಮಾಪತಿಯನ್ನೂ, ಪೂರ್ಣಬೋಧರನ್ನೂ, ಇತರ ಗುರುಗಳನ್ನೂ ನಮಸ್ಕರಿಸಿ ಬ್ರಹ್ಮಸೂತ್ರಗಳ ಅರ್ಥಸಂಗ್ರಹವನ್ನು ಮಾಡುವೆವು || ೧ ||

**ಗ್ರಂಥದ ಸಾರ್ಥಕತೆ**

ನಮ್ಮ ಪರಮಗುರುಗಳಾದ ಶ್ರೀ ವಿಜಯೀಂದ್ರತೀರ್ಥರೂ ಹೃದಯಂಗಮವಾದ ಸೂತ್ರಾರ್ಥಸಂಗ್ರಹವನ್ನು ಮಾಡಿದ್ದಾರೆ. ಆದರೂ, ನಮ್ಮ ಈ ಗ್ರಂಥವು ಬೇರೆ ಬೇರೆ ಪ್ರಸ್ಥಾನಗಳಲ್ಲಿ ನಿರೂಪಿತವಾಗಿರುವ ಅರ್ಥಗಳ ಸಂಗ್ರಹರೂಪವಾಗಿದೆ. || ೨ ||

ब्रह्मरुद्रादिभिः ज्ञानार्थं अर्थितो नारायणः व्यासत्वेन अवतीर्य उत्सन्नान् वेदान् अभिव्यक्तिपूर्वकं अनेकधा विभज्य तदर्थनिर्णयाय ब्रह्मसूत्राणि व्यातेने ॥ तत्रेदमादिमं सूत्रम् —

जिज्ञासाधिकरणम्—१

## ॥ ॐ अथातो ब्रह्मजिज्ञासा ॐ ॥ १-१-१

अत्र नये चतुरध्यायात्मकैतच्छास्त्रस्य आरम्भणीयत्वोपयुक्ततया जिज्ञासाकर्तव्यत्वं समर्थ्यते । अत्र आद्यन्तयोः ओङ्कारः "स्रवत्यनोङ्कृतं ब्रह्म परस्ताच्च विशीर्यते" इति श्रुतिसिद्धः । आद्यः दृष्टादृष्टार्थः । अत एव एतत्सूत्रावयवत्वात् सर्वसूत्रेषु अनुषङ्गः न स्यात् इति सर्वसूत्रेषु अदृष्टमात्रार्थतयाऽऽदौ अनुषङ्गायासंहिततया

---

**ಶಾಸ್ತ್ರದ ಅವತರಣಿಕೆ**

ಬ್ರಹ್ಮ, ರುದ್ರ ಮೊದಲಾದವರಿಂದ ಜ್ಞಾನಕ್ಕೋಸ್ಕರ ಪ್ರಾರ್ಥಿಸಲ್ಪಟ್ಟ ನಾರಾಯಣನು ವ್ಯಾಸರಾಗಿ ಅವತರಿಸಿ, ನಷ್ಟವಾಗಿದ್ದ ವೇದಗಳನ್ನೆಲ್ಲ ಅಭಿವ್ಯಕ್ತಿಗೊಳಿಸಿ, ಅವುಗಳನ್ನು ಅನೇಕ ಪ್ರಕಾರವಾಗಿ ವಿಭಾಗಿಸಿ, ಅವುಗಳ ಅರ್ಥನಿರ್ಣಯಕ್ಕೋಸ್ಕರ ಬ್ರಹ್ಮಸೂತ್ರಗಳನ್ನು ರಚಿಸಿದನು. ಆ ಬ್ರಹ್ಮಸೂತ್ರಗಳಲ್ಲಿ ಮೊದಲನೆಯ ಸೂತ್ರ—

ಜಿಜ್ಞಾಸಾಧಿಕರಣ—೧

## ಓಂ ಅಥಾತೋ ಬ್ರಹ್ಮಜಿಜ್ಞಾಸಾ ಓಂ (೧-೧-೧)

ಈ ಜಿಜ್ಞಾಸಾಧಿಕರಣದಲ್ಲಿ, ನಾಲ್ಕು ಅಧ್ಯಾಯಗಳಿಂದ ಕೂಡಿದ ಬ್ರಹ್ಮಮೀಮಾಂಸಾಶಾಸ್ತ್ರವು ಆರಂಭಿಸಲು ಯೋಗ್ಯವೆಂದು ಪ್ರತಿಪಾದಿಸಲು ಬ್ರಹ್ಮವಿಚಾರವು ಅವಶ್ಯ ಕರ್ತವ್ಯವೆಂದು ಸಮರ್ಥಿಸಲಾಗುವುದು.

**ಓಂಕಾರವು ದೃಷ್ಟಾದೃಷ್ಟಾರ್ಥಕವಾದುದು**

ಈ ಮೊದಲನೆಯ ಸೂತ್ರದ ಆದಿ ಮತ್ತು ಅಂತ್ಯದಲ್ಲಿ ಓಂಕಾರವಿರುವುದೆಂದು "ಸ್ರವತ್ಯನೋಂಕೃತಂ ಬ್ರಹ್ಮ ಪರಸ್ತಾಚ್ಚ ವಿಶೀರ್ಯತೇ" ಎಂಬ ಶ್ರುತಿಯಿಂದ ಸಿದ್ಧವಾಗಿದೆ. ಆದಿಯಲ್ಲಿರುವ ಓಂಕಾರವು ದೃಷ್ಟ ಮತ್ತು ಅದೃಷ್ಟ—ಈ ಎರಡೂ ಬಗೆಯ

पठ्यते । अन्त्यः अदृष्टमात्रार्थः । न सूत्रावयवः । अन्वयप्रतियोग्य-समर्पक इति यावत् । ओङ्काराथशब्दौ मङ्गलफलकौ क्रमात् गुणपूर्त्या-नन्तर्यवाचकौ । ओमित्येतत् योग्यतया जिज्ञासागुणभूतब्रह्म-विशेषणम् । अथेति योग्यतया अधिकारात् इत्यन्वेति । अत इति "यस्य प्रसादात्" इत्यादिनिर्णयश्रुत्यादिस्थं फलादि परामृश्यते । ब्रह्मशब्दः गुणपूर्त्यर्थः सन् चिदचिद्विलक्षणविष्णुवाची । "स विष्णुराह हि तं ब्रह्मेत्याचक्षते" इत्युक्तेः । ब्रह्मणो जिज्ञासा इति कर्मणि षष्ठ्या

---

ಪ್ರಯೋಜನವುಳ್ಳದ್ದು. ಹೀಗೆ ದೃಷ್ಟವಾದ ಪ್ರಯೋಜನವಿರುವುದರಿಂದ ಈ ಮೊದಲನೆಯ ಸೂತ್ರದ ಅವಯವವಾದ ಓಂಕಾರವು ಮುಂದಿನ ಎಲ್ಲ ಸೂತ್ರಗಳಲ್ಲಿ ಅನುವೃತ್ತಿಯನ್ನು ಪಡೆಯಲಾರದೆಂಬ ಕಾರಣದಿಂದ, ಎಲ್ಲ ಸೂತ್ರಗಳಲ್ಲೂ ಅದೃಷ್ಟಪ್ರಯೋಜನಕ್ಕೋಸ್ಕರ ಓಂಕಾರದ ಅನುವೃತ್ತಿಯಿದೆ ಎಂಬುದನ್ನು ಸೂಚಿಸಲು ಈ ಸೂತ್ರದಲ್ಲಿ ಓಂಕಾರವನ್ನು ಅಥ ಶಬ್ದದೊಡನೆ ಸಂಧಿಮಾಡದೆ ಪಠಿಸಲಾಗಿದೆ. ಕೊನೆಯ ಓಂಕಾರವು ಕೇವಲ ಅದೃಷ್ಟಪ್ರಯೋಜನವುಳ್ಳದ್ದು ; ಸೂತ್ರಾವಯವವಲ್ಲ. ಅಂದರೆ, ಕೊನೆಯ ಓಂಕಾರವು ಸೂತ್ರದ ಯಾವುದೇ ಪದದ ಅರ್ಥದೊಡನೆ ಅನ್ವಯವನ್ನು ಪಡೆದಿರುವ ಅರ್ಥವನ್ನು ಹೇಳುವುದಿಲ್ಲವೆಂದು ಭಾವ.

### ಓಂ, ಅಥ, ಅತಃ ಮತ್ತು ಬ್ರಹ್ಮ ಪದಗಳ ಅರ್ಥ

ಓಂಕಾರ ಮತ್ತು ಅಥ ಶಬ್ದಗಳು ಮಂಗಳರೂಪವಾದ ಫಲವನ್ನು ಉಂಟುಮಾಡುವವು ಮತ್ತು ಕ್ರಮವಾಗಿ ಗುಣಪೂರ್ಣತ್ವ ಮತ್ತು ಆನಂತರ್ಯ ಎಂಬ ಅರ್ಥವನ್ನು ಕೊಡುವವು. ಓಂಕಾರದ ಅರ್ಥವಾದ ಗುಣಪೂರ್ಣತ್ವವು ತನ್ನ ಅನ್ವಯಯೋಗ್ಯತೆಯನ್ನು ಪಡೆದಿರುವ ಜಿಜ್ಞಾಸಾವಿಷಯನಾದ ಬ್ರಹ್ಮನಿಗೆ ವಿಶೇಷಣವಾಗಿದೆ. 'ಅಥ' ಪದವು ತನ್ನೊಂದಿಗೆ ಅನ್ವಯಯೋಗ್ಯತೆಯನ್ನು ಪಡೆದಿರುವ 'ಅಧಿಕಾರಾತ್' ಎಂಬ ಪದದೊಡನೆ ಅನ್ವಯ ಪಡೆದಿದೆ. 'ಅತಃ' ಎಂಬ ಪದವು "ಯಸ್ಯ ಪ್ರಸಾದಾತ್ ಪರಮಾರ್ತಿರೂಪಾದಸ್ಮಾತ್ ಸಂಸಾರಾತ್ ಮುಚ್ಯತೇ ನಾಪರೇಣ" ಇತ್ಯಾದಿ ನಿರ್ಣಯಿಸಲ್ಪಡಬೇಕಾದ ಶ್ರುತಿ ಮೊದಲಾದವುಗಳಲ್ಲಿ ಹೇಳಿರುವ ಮೋಕ್ಷರೂಪವಾದ ಫಲ ಮೊದಲಾದವುಗಳನ್ನು ಪರಾಮರ್ಶಿಸುತ್ತದೆ. 'ಬ್ರಹ್ಮ' ಶಬ್ದವು ಗುಣಪೂರ್ಣತ್ವವೆಂಬ ಅರ್ಥವನ್ನು ಕೊಡುವ ಮೂಲಕ ಚಿದಚಿದ್ವಿಲಕ್ಷಣನಾದ ವಿಷ್ಣುವನ್ನು ಹೇಳುತ್ತದೆ. "ಸ ವಿಷ್ಣುರಾಹ ಹಿ ತಂ ಬ್ರಹ್ಮೇತ್ಯಾಚಕ್ಷತೇ" ಎಂಬ ದೈವೀಮೀಮಾಂಸಾಸೂತ್ರವು ಬ್ರಹ್ಮಶಬ್ದದ ಅರ್ಥ ವಿಷ್ಣುವೆಂದು ಸಮರ್ಥಿಸುತ್ತದೆ. ಬ್ರಹ್ಮಣೋ ಜಿಜ್ಞಾಸಾ

*

समासः । ततश्च, अथ अध्ययनशमदमादिरूपाधिकारसम्पत्त्य-नन्तरम्, अतः अकारवाच्यात् प्रसन्नात् ब्रह्मणः, ज्ञानोत्थप्रसादज-मोक्षाख्यफलसत्त्वात्, बन्धस्य सत्यत्वात्, आगमस्य प्रामाण्यात्, सिद्धार्थप्रमापकत्वात् वा । ॐ ब्रह्मणो गुणपरिपूर्णस्य विष्णोः जिज्ञासा कर्तव्या इति शेषः । ब्रह्मज्ञानाय सर्ववेदविषयकश्रवणमनन-निदिध्यासनरूपा मननमात्ररूपा वा "तद्विजिज्ञासस्व" इत्यादिश्रुत्युक्ता कर्तव्या इत्यर्थः । ॐब्रह्मशब्दयोः यौगिकत्वेपि एकस्य रूढत्व-माश्रित्य विशेषवाचित्वेन "आत्मेति तूपगच्छन्ति" इत्यत्रेवान्वयो

---

ಎಂಬುದಾಗಿ ಕರ್ಮಾರ್ಥಕ ಷಷ್ಠೀವಿಭಕ್ತ್ಯಂತಪದದೊಂದಿಗೆ ಜಿಜ್ಞಾಸಾಪದವು ಸಮಾಸ ಪಡೆದಿದೆ. ಆದ್ದರಿಂದ,

**ಸೂತ್ರಾರ್ಥ**

ಅಥ—ಅಧ್ಯಯನ, ಶಮ, ದಮ ಮೊದಲಾದ ಅಧಿಕಾರವನ್ನು ಪಡೆದನಂತರ,

ಅತಃ—(1) ಅಕಾರವಾಚ್ಯನಾದ, ಪ್ರಸನ್ನನಾದ ಬ್ರಹ್ಮನಿಂದ, ಜ್ಞಾನ, ಅದರಿಂದ ಪ್ರಸಾದ ಇವುಗಳ ಮೂಲಕ ಮೋಕ್ಷವೆಂಬ ಫಲವು ದೊರೆಯುವುದರಿಂದ,

(2) ಸಂಸಾರಬಂಧವು ಸತ್ಯವಾದದ್ದರಿಂದ,

(3) ಆಗಮಗಳು ಪ್ರಮಾಣವಾದ್ದರಿಂದ,

(4) ಆಗಮಗಳಿಗೆ ಸಿದ್ಧವಾದ ವಿಷಯದಲ್ಲಿ ಯಥಾರ್ಥಜ್ಞಾನವನ್ನುಂಟು ಮಾಡುವ ಸಾಮರ್ಥ್ಯವಿರುವುದರಿಂದ

ಓಂ—ಗುಣಪರಿಪೂರ್ಣನಾದ

ಬ್ರಹ್ಮಣಃ—ವಿಷ್ಣುವಿನ

ಜಿಜ್ಞಾಸಾ—ವಿಚಾರವು

ಕರ್ತವ್ಯಾ—ಮಾಡಲ್ಪಡತಕ್ಕದ್ದು. ಇಲ್ಲಿ 'ಕರ್ತವ್ಯಾ' ಎಂಬ ಪದವನ್ನು ಸೇರಿಸಿ ಕೊಳ್ಳಲಾಗಿದೆ.

ಬ್ರಹ್ಮಜ್ಞಾನಕ್ಕೋಸ್ಕರ ಸಮಸ್ತವೇದಗಳ ಶ್ರವಣ, ಮನನ ಮತ್ತು ನಿದಿಧ್ಯಾಸನ ರೂಪವಾದ ಅಥವಾ ಕೇವಲ ಮನನಾತ್ಮಕವಾದ 'ತದ್ವಿಜಿಜ್ಞಾಸಸ್ವ' ಎಂಬ ಶ್ರುತಿಯಲ್ಲಿ ಹೇಳಲ್ಪಟ್ಟ ಜಿಜ್ಞಾಸೆಯು ಮಾಡಲ್ಪಡತಕ್ಕದ್ದೆಂದು ಅರ್ಥ.

बोध्यः । ब्रह्मशब्दात् विषयसिद्धावपि ओमित्युक्तिः न केवलं ब्रह्मशब्दात् विषयसिद्धिः "ओमित्येतदक्षरं उद्गीथं उपासीत" इत्यादौ गुणपूर्णार्थोङ्कारादपि इति युक्त्यन्तरसूचनाय । ब्रह्मणि किं मानं इत्यतः वेदरूपप्रमाणसूचनाय च । ओङ्कारवाच्यस्य ब्रह್मणः इत्युक्त्या व्याहृतिगायत्रिपुरुषसूक्तद्वारा सर्ववेदानां तद्व्याख्यानत्वात्

---

### ಓಂಕಾರವು ಬ್ರಹ್ಮಪದಕ್ಕೆ ವಿಶೇಷಣ

'ಓಂ' ಮತ್ತು 'ಬ್ರಹ್ಮ' ಈ ಎರಡೂ ಪದಗಳು[1] ಯೌಗಿಕವಾಗಿದ್ದರೂ ಒಂದನ್ನು ರೂಢಶಬ್ದವೆಂದು ಪರಿಗಣಿಸಬೇಕು. ಹೀಗೆ ಆ ಪದವು ವಿಶೇಷ್ಯವಾಚಕ ವಾಗುವುದರಿಂದ 'ಆತ್ಮೇತಿ ತೂಪಗಚ್ಛಂತಿ' (ಬ್ರ. ಸೂ. ೪-೧-೩) ಎಂಬಲ್ಲಿಯಂತೆ ಅನ್ವಯವನ್ನು ತಿಳಿಯತಕ್ಕದ್ದು.

### ಓಂಕಾರವು ವ್ಯರ್ಥವಲ್ಲ

ಬ್ರಹ್ಮಶಬ್ದದಿಂದಲೇ ಶಾಸ್ತ್ರಕ್ಕೆ ವಿಷಯವಿರುವುದೆಂದು ಸಿದ್ಧವಾಗುವುದರಿಂದ ಸೂತ್ರದಲ್ಲಿ ಓಂಕಾರವು ವ್ಯರ್ಥ ಎಂದು ತೋರಬಹುದು. ಆದರೆ, ಕೇವಲ ಬ್ರಹ್ಮ ಶಬ್ದದಿಂದಲ್ಲದೇ, "ಓಮಿತ್ಯೇತದಕ್ಷರಮುದ್ಗೀಥಮುಪಾಸೀತ" ಮುಂತಾದ ಶ್ರುತಿಗಳ ಲ್ಲಿರುವ, ಗುಣಪೂರ್ಣ ಎಂಬ ಅರ್ಥವಿರುವ ಓಂಕಾರದಿಂದಲೂ ಶಾಸ್ತ್ರದ ವಿಷಯವು ಸಿದ್ಧವಾಗುವುದು ಎಂಬ ಯುಕ್ತ್ಯಂತರವನ್ನು ಸೂಚಿಸಲು ಸೂತ್ರದಲ್ಲಿ ಓಂಕಾರವನ್ನು ಸೇರಿಸಲಾಗಿದೆ. ಇಷ್ಟೇ ಅಲ್ಲದೆ, ಬ್ರಹ್ಮನಲ್ಲಿ ಪ್ರಮಾಣವೇನು ಎಂಬ ಪ್ರಶ್ನೆಗೆ ಉತ್ತರ ವಾಗಿ ವೇದಗಳೇ ಬ್ರಹ್ಮನ ವಿಷಯದಲ್ಲಿ ಪ್ರಮಾಣಗಳು ಎಂದು ಸೂಚಿಸಲೂ ಓಂಕಾರ ವನ್ನು ಪ್ರಯೋಗಿಸಲಾಗಿದೆ. 'ಓಂಕಾರವಾಚ್ಯನಾದ ಬ್ರಹ್ಮನ' ಎಂಬ ಉಕ್ತಿಯಿಂದ, ವ್ಯಾಹೃತಿ, ಗಾಯತ್ರೀ ಮತ್ತು ಪುರುಷಸೂಕ್ತ ಇವುಗಳ ಮೂಲಕ ಸಮಸ್ತವೇದಗಳೂ

---

1. ಯೋಗವೆಂದರೆ ಅವಯವಶಕ್ತಿ. 'ಪಂಕ' ಮತ್ತು 'ಜ' ಎಂಬ ಅವಯವಗಳ ಸಾಮರ್ಥ್ಯ ದಿಂದ 'ಕೆಸರಿನಿಂದ ಹುಟ್ಟಿದ್ದು' ಎಂಬ ಅರ್ಥವನ್ನು ಕೊಡುವ ಪಂಕಜಶಬ್ದ ಯೌಗಿಕ. ಅದರಂತೆ 'ಓಂ' ಮತ್ತು 'ಬ್ರಹ್ಮ' ಪದಗಳು ತಮ್ಮ ಅವಯವಶಕ್ತಿಯಿಂದ 'ಗುಣಪೂರ್ಣ' ಎಂಬ ಅರ್ಥ ವನ್ನು ತಿಳಿಸುತ್ತವೆ. ಆದ್ದರಿಂದ ಓಂ ಬ್ರಹ್ಮ ಎಂದು ಹೇಳಿದಾಗ 'ಗುಣಪೂರ್ಣ ಗುಣಪೂರ್ಣ' ಎಂದು ಅನನ್ವಿತ ಪದಪ್ರಯೋಗ ಮಾಡಿದಂತಾಗುವುದು ಎಂಬ ಆಕ್ಷೇಪಕ್ಕೆ ಇಲ್ಲಿ ಸಮಾಧಾನ ನೀಡ ಲಾಗಿದೆ. 'ಆತ್ಮೇತಿ ತೂಪಗಚ್ಛಂತಿ' ಎಂಬ ಸೂತ್ರದಲ್ಲಿ ಆತ್ಮಶಬ್ದವನ್ನು ಆವರ್ತಿಸಿಕೊಂಡು ಒಂದು ಆತ್ಮಶಬ್ದಕ್ಕೆ ರೂಢಿಯ ಬಲದಿಂದ ವಿಷ್ಣುವೆಂದೂ, ಇನ್ನೊಂದು ಆತ್ಮಶಬ್ದಕ್ಕೆ ಯೋಗದಿಂದ ಸ್ವಾಮಿ ಎಂದೂ ಅರ್ಥಮಾಡಿದಂತೆ ಇಲ್ಲೂ, ಓಂ ಬ್ರಹ್ಮ ಪದಗಳಲ್ಲಿ ಒಂದಕ್ಕೆ ರೂಢಿಯಿಂದ ವಿಷ್ಣು ವೆಂದೂ ಇನ್ನೊಂದಕ್ಕೆ ಯೋಗದಿಂದ ಗುಣಪೂರ್ಣನೆಂದೂ ಅರ್ಥಮಾಡಿ 'ವಿಷ್ಣುವು ಗುಣಪೂರ್ಣ' ಎಂಬ ಅನ್ವಿತವಾದ ಅರ್ಥವನ್ನು ಪಡೆಯಬಹುದೆಂದು ಭಾವ.

वेदा एव तत्र मानमिति सिद्धेरिति भावः। तेन ब्रह्मणः प्रमितत्वेऽनुग्राह्यप्रमाणाभावात् जिज्ञासा न कर्तव्या इति न शङ्क्यम्। गुरुपादास्तु ब्रह्म किं इत्यतः ॐ इत्युक्तम्। रक्षकस्य इत्यर्थः। अवतिरूपत्वात्। रक्षकश्च विष्णुः प्रसिद्ध इत्याहुः ॥ विभाषा गुण इति गुणशब्दस्य

ಓಂಕಾರದ ವ್ಯಾಖ್ಯಾನವಾದುದರಿಂದ ವೇದಗಳೇ ಬ್ರಹ್ಮನ ವಿಷಯದಲ್ಲಿ ಪ್ರಮಾಣವೆಂದು ಸಿದ್ಧವಾಗುವುದೆಂದು ಭಾವ.[1] ಇದರಿಂದ, ಬ್ರಹ್ಮನು ಪ್ರಮಾಣಸಿದ್ಧನಲ್ಲವಾದ್ದರಿಂದ, ಜಿಜ್ಞಾಸೆಯನ್ನು ಮಾಡಲು ಉಪಯುಕ್ತವಾದ ಪ್ರಮಾಣಗಳೇ ಇಲ್ಲವಾದ್ದರಿಂದ ಬ್ರಹ್ಮನ ಜಿಜ್ಞಾಸೆಯನ್ನು ಮಾಡಲಾಗದು ಎಂಬ ಶಂಕೆಗೆ ಅವಕಾಶವಿಲ್ಲ.

### ಶ್ರೀ ವಿಜಯೀಂದ್ರಸ್ವಾಮಿಗಳ ಓಂಕಾರದ ವಿವರಣೆ

ಗುರುಪಾದರಾದರೋ "ಬ್ರಹ್ಮನು ಯಾರು ? ಎಂಬ ಪ್ರಶ್ನೆಗೆ ಉತ್ತರರೂಪವಾಗಿ ಸೂತ್ರದಲ್ಲಿ 'ಓಂ' ಎಂಬ ಪದವಿದೆ ; 'ರಕ್ಷಕನಾದ' ಎಂದರ್ಥ. ಏಕೆಂದರೆ ಓಂಕಾರವು 'ಅವ್' ಧಾತುವಿನ ರೂಪವಾಗಿದೆ. ವಿಷ್ಣು ರಕ್ಷಕನೆನ್ನುವುದು ಪ್ರಸಿದ್ಧವಾದುದು" ಎಂದು ಹೇಳಿದ್ದಾರೆ.[2]

### ಅತಃ ಎಂಬ ರೂಪದ ಸಾಧುತ್ವ

ವಿಭಾಷಾ ಗುಣೇ[3] (ಪಾ. ಸೂ. ೨–೩–೨೫) ಇತ್ಯಾದಿ ಸೂತ್ರದಲ್ಲಿ ಗುಣಶಬ್ದಕ್ಕೆ

---

1. ಓಂಕಾರವು ಅ, ಉ, ಮ ಎಂಬ ಮೂರು ಅಕ್ಷರಗಳನ್ನೊಳಗೊಂಡಿದೆ. ಭೂಃ, ಭುವಃ, ಸುವಃ ಎಂಬ ವ್ಯಾಹೃತಿಯು ಈ ಮೂರು ಅಕ್ಷರಗಳ ವ್ಯಾಖ್ಯಾನವಾಗಿದೆ. ಮೂರು ಪಾದಗಳುಳ್ಳ ಗಾಯತ್ರೀಮಂತ್ರವು ವ್ಯಾಹೃತಿಯ ವ್ಯಾಖ್ಯಾನರೂಪವಾಗಿದೆ. ಈ ಗಾಯತ್ರೀಮಂತ್ರದ ವ್ಯಾಖ್ಯಾನರೂಪವಾದದ್ದು ಮೂರು ಮಂತ್ರಗಳುಳ್ಳ ಪುರುಷಸೂಕ್ತ. ಪುರುಷಸೂಕ್ತದ ವ್ಯಾಖ್ಯಾನವೇ ಸಮಸ್ತ ವೇದಗಳು. "ಓಂ ಬ್ರಹ್ಮಜಿಜ್ಞಾಸಾ ಕರ್ತವ್ಯಾ"—ಓಂಕಾರವಾಚ್ಯನಾದ ಬ್ರಹ್ಮನ ಜಿಜ್ಞಾಸೆಯನ್ನು ಮಾಡತಕ್ಕದ್ದು ಎಂಬ ಉಕ್ತಿಯು ಬ್ರಹ್ಮನು ಓಂಕಾರವಾಚ್ಯನೆಂದು ತಿಳಿಸುವುದರ ಮೂಲಕ ಸಮಸ್ತ ವೇದಗಳೂ ಬ್ರಹ್ಮನ ವಿಷಯದಲ್ಲಿ ಪ್ರಮಾಣವೆಂದು ತಿಳಿಸುತ್ತದೆ.

2. ಗುರುಪಾದರು ಶ್ರೀವಿಜಯೀಂದ್ರಸ್ವಾಮಿಗಳು. ಶ್ರೀರಾಘವೇಂದ್ರಸ್ವಾಮಿಗಳ ಪರಮಗುರುಗಳು. ಓಂಕಾರವು 'ಅವ್' ಧಾತುವಿನಿಂದ ನಿಷ್ಪನ್ನವಾಗಿದೆ. ಅವ್ ಧಾತುವಿಗೆ ರಕ್ಷಣೆ ಎಂಬ ಅರ್ಥವಿರುವುದರಿಂದ ಓಂಕಾರಕ್ಕೆ ರಕ್ಷಕನೆಂದು ಅರ್ಥವಾಗುವುದು ಎಂದು ಅವರ ಅಭಿಪ್ರಾಯ.

3. ವಿಭಾಷಾ ಗುಣೇ ಅಸ್ತ್ರಿಯಾಮ್ ಎಂಬ ಪಾಣಿನಿ ಸೂತ್ರಕ್ಕೆ ಸ್ತ್ರೀಲಿಂಗದಲ್ಲಿಲ್ಲದ, ಗುಣವಾಗಿರುವ ಹೇತುವಾಚಕಶಬ್ದಕ್ಕೆ ಪಂಚಮೀವಿಭಕ್ತಿಯು ವಿಕಲ್ಪವಾಗಿ ಬರುವುದೆಂದು ಅರ್ಥ. ಗುಣಶಬ್ದಕ್ಕೆ ತಾರ್ಕಿಕಾಭಿಮತ ಗುಣವಾಚಕ ಎಂದು ಅರ್ಥ ಹೇಳಿದಲ್ಲಿ ಬ್ರಹ್ಮವಾಚಕವಾದ ಅಕಾರದ ಮುಂದೆ ಪಂಚಮೀವಿಭಕ್ತಿ ಸೇರಿ ಅತಃ ಎಂದು ರೂಪವಾಗಲಾರದು. ಆದ್ದರಿಂದ ಗುಣಶಬ್ದಕ್ಕೆ ಪರತಂತ್ರ ಎಂದು ಅರ್ಥವೇ ಹೊರತು ತಾರ್ಕಿಕರ ಗುಣಗಳಲ್ಲ ಎಂದು ಇಲ್ಲಿ ವಿವರಿಸಲಾಗಿದೆ. ಬ್ರಹ್ಮವಾಚಕ 'ಅ'ಕಾರವು ಈ ಸೂತ್ರದಲ್ಲಿ ಪ್ರಧಾನವಾಗಿಲ್ಲ. ಅಪ್ರಧಾನ ಅಥವಾ ಪರತಂತ್ರವಾಗಿದೆ. ಆದ್ದರಿಂದ ಪಂಚಮೀವಿಭಕ್ತಿ ಬರಬಹುದೆಂದು ಭಾವ.

परतन्त्रमात्रार्थकत्वोक्तेः अत इति साधु । कृद्योगलक्षणा च षष्ठी समस्यत इत्युक्तेः ब्रह्मजिज्ञासा इति साधु । कर्तुः अनुपादानात् न उभयप्राप्तौ कर्मणीति षष्ठी । तेन कर्मणि च इति न निषेधः । पूर्वेणाध्यायद्वयेन ब्रह्मशब्दार्थस्य उत्तरेण च साधनफलयोः उपपादनात् ब्रह्मणः अथ जिज्ञासा इति वाच्ये अथात इत्यादि अथातःशब्दयोः स्वरूपतः अर्थतश्च आधिक्यादिति सूचनाय । अत्र अथातोब्रह्मपदानि क्रमात् निरधिकारिकत्वनिष्फलत्वनिर्विषयत्वशङ्काव्युदासकानि ॥ १ ॥

---

ಪರತಂತ್ರ ಅಥವಾ ಅಪ್ರಧಾನ ಎಂದರ್ಥ ಹೊರತು ತಾರ್ಕಿಕರು ಹೇಳುವ ಗುಣಗಳು ಅರ್ಥವಲ್ಲ. ಆದ್ದರಿಂದ 'ಅತಃ' ಎಂಬ ರೂಪವು ಸಾಧುವಾಗಿದೆ.

ಕೃದಂತಪದದ ಯೋಗದಿಂದಾಗಿ ಷಷ್ಠೀವಿಭಕ್ತ್ಯಂತವಾದ ಪದವು ಸಮಾಸವನ್ನು ಪಡೆಯುತ್ತದೆ ಎಂದಿರುವುದರಿಂದ ಬ್ರಹ್ಮಜಿಜ್ಞಾಸಾ ಎಂಬ ಪದವು ನಿರ್ದುಷ್ಟವಾಗಿದೆ. ಈ ಸೂತ್ರದಲ್ಲಿ ಕರ್ತೃವಾಚಕಪದವಿಲ್ಲದಿರುವುದರಿಂದ "ಉಭಯಪ್ರಾಪ್ತೌ ಕರ್ಮಣಿ" ಎಂಬ ಸೂತ್ರದಿಂದ ಷಷ್ಠೀವಿಭಕ್ತಿಯು ಬರಲು ಅವಕಾಶವಿಲ್ಲ. ಆದ್ದರಿಂದ 'ಕರ್ಮಣಿ ಚ' ಎಂಬ ಸೂತ್ರದಿಂದ ಷಷ್ಠೀತತ್ಪುರುಷಸಮಾಸದ ನಿಷೇಧವಿಲ್ಲ.

### ಸೂತ್ರದ ಆನುಪೂರ್ವಿಯ ಸಮರ್ಥನೆ

ಮೊದಲನೆಯ ಎರಡು ಅಧ್ಯಾಯಗಳಲ್ಲಿ ಬ್ರಹ್ಮಶಬ್ದಾರ್ಥದ, ಕೊನೆಯ ಎರಡು ಅಧ್ಯಾಯಗಳಲ್ಲಿ ಸಾಧನ ಮತ್ತು ಫಲಗಳ ಪ್ರತಿಪಾದನೆ ಇರುವುದರಿಂದ 'ಬ್ರಹ್ಮಣೋಽಥ ಜಿಜ್ಞಾಸಾ' ಎಂದು ಸೂತ್ರವಿರಬೇಕಾಗಿತ್ತು. ಆದರೂ 'ಅಥಾತೋ ಬ್ರಹ್ಮಜಿಜ್ಞಾಸಾ' ಎಂದು ಸೂತ್ರವನ್ನು ರಚಿಸಿರುವುದು ಅಥ ಮತ್ತು ಅತಃ ಶಬ್ದಗಳಿಗೆ ಶಬ್ದದ ದೃಷ್ಟಿಯಿಂದ ಹಾಗೂ ಅರ್ಥದ ದೃಷ್ಟಿಯಿಂದ ಮಹತ್ತ್ವವಿದೆ ಎಂದು ಸೂಚಿಸುವುದಕ್ಕಾಗಿ. ಈ ಸೂತ್ರದ ಅಥ, ಅತಃ ಮತ್ತು ಬ್ರಹ್ಮ—ಈ ಪದಗಳು ಕ್ರಮವಾಗಿ ಬ್ರಹ್ಮಮೀಮಾಂಸಾಶಾಸ್ತ್ರವು ನಿರಧಿಕಾರಿಕ, ನಿಷ್ಫಲ ಮತ್ತು ನಿರ್ವಿಷಯ ಎಂಬ ಆಕ್ಷೇಪಗಳನ್ನು ನಿರಾಕರಿಸುತ್ತವೆ.

जन्माधिकरणम्—२

## ॥ ॐ जन्माद्यस्य यतः ॐ ॥ १-१-२

अत्र नये जिज्ञास्यब्रह्मणो लक्षणमुच्यते । यत इत्युक्तेः तदिति लभ्यते । जन्म आदिः यस्य स्थितिलयनियमनज्ञानाज्ञान-बन्धमोक्षजातस्य तत् जन्मादि । अस्य प्रमितस्य चिदचिदात्मकस्य विश्वस्य जन्मादि यतः समासव्यासाभ्यां यथायोग्यं भवति तत् जन्मादिकारणं ब्रह्मेत्यर्थः । सृष्टिहेतुत्वादीनि प्रत्येकं अष्टौ लक्षणानि वैभवादुक्तानीति बोध्यम् । लब्धजन्मनः स्थित्यादीति जन्मनः

---

ಜನ್ಮಾಧಿಕರಣ—೨

## ಓಂ ಜನ್ಮಾದ್ಯಸ್ಯ ಯತಃ ಓಂ (೧-೧-೨)

**ಸೂತ್ರಾರ್ಥ ವಿವರಣೆ**

ಈ ಅಧಿಕರಣದಲ್ಲಿ ಜಿಜ್ಞಾಸ್ಯನಾದ ಬ್ರಹ್ಮನ ಲಕ್ಷಣವು ಹೇಳಲ್ಪಟ್ಟಿದೆ. ಸೂತ್ರದಲ್ಲಿ 'ಯತಃ' ಎಂಬ ಪದವಿರುವುದರಿಂದ 'ತತ್' ಎಂಬ ಪದವು ಲಭಿಸುತ್ತದೆ. ಜನ್ಮವು ಆದಿಯಲ್ಲುಳ್ಳದ್ದು ಯಾವುದೋ ಅದು ಅಂದರೆ ಸೃಷ್ಟಿ, ಸ್ಥಿತಿ, ನಿಯಮನ, ಜ್ಞಾನ, ಅಜ್ಞಾನ, ಬಂಧ ಮತ್ತು ಮೋಕ್ಷ ಇವುಗಳ ಸಮೂಹವು ಜನ್ಮಾದಿ.

ಅಸ್ಯ—ಪ್ರಮಾಣಸಿದ್ಧವಾದ ಚೇತನಾಚೇತನಾತ್ಮಕವಾದ ಈ ವಿಶ್ವಕ್ಕೆ
ಜನ್ಮಾದಿ—ಜನ್ಮ ಮೊದಲಾದವುಗಳು
ಯತಃ—ಯಾರಿಂದ ಸಮಸ್ತವಾಗಿಯಾಗಲೀ, ಕೆಲವೇ ಆಗಲಿ ಆಯಾಯಾ ವಸ್ತುವಿನ ಯೋಗ್ಯತೆಯಂತೆ ಉಂಟಾಗುವವೋ
ತತ್—ಆ ಜನ್ಮಾದಿ ಕಾರಣನು
ಬ್ರಹ್ಮ—ಬ್ರಹ್ಮನಾಗಿದ್ದಾನೆ

ಎಂದು ಸೂತ್ರದ ಅರ್ಥ.

**ಸೃಷ್ಟಿಹೇತುತ್ವ ಮೊದಲಾದ ಎಂಟೂ ಪ್ರತ್ಯೇಕವಾಗಿ ಬ್ರಹ್ಮನ ಲಕ್ಷಣಗಳು ಮತ್ತು ಮುಮುಕ್ಷುವಿನಿಂದ ಅವಶ್ಯ ಜ್ಞೇಯಗಳು**

ಸೃಷ್ಟಿಹೇತುತ್ವ ಮೊದಲಾದ ಎಂಟೂ ಪ್ರತ್ಯೇಕವಾಗಿ ಬ್ರಹ್ಮನ ಲಕ್ಷಣಗಳು. ಬ್ರಹ್ಮನ ವೈಭವವನ್ನು ತೋರಿಸಲು ಅವುಗಳೆಲ್ಲವನ್ನೂ ಇಲ್ಲಿ ಹೇಳಲಾಗಿದೆ. ಜನ್ಮ

आदित्वोक्तिः । चिद्गतसुखादीनां अचिद्गतवृद्ध्यादीनां च सत्त्वेऽपि विचारविधायकेषु "यतो वा" इत्यादिनानावाक्येषु "उत्पत्तिस्थिति" इत्यादिस्मृतौ च सृष्ट्याद्यष्टकर्तृत्वस्यैव लक्षणत्वेन उक्तत्वात् "सृष्टि-रक्षाहृतिज्ञान" इत्याद्युक्त्या विशिष्य सृष्ट्याद्यष्टकर्तृत्वस्यैव मुमुक्षु-ज्ञेयत्वादष्टकस्यैव ग्रहणम् । अस्येति चिदचितोरिव तत्सम्बन्धि-ज्ञानादेरपि नियमनसिद्धिः ॥ २ ॥

शास्त्रयोनित्वाधिकरणम्—३

## ॥ ॐ शास्त्रयोनित्वात् ॐ ॥ १-१-३

अत्र नये प्रागुक्तलक्षणस्य अतिव्याप्तिनिरासाय प्रमाणमुच्यते । तस्य जन्मादिकारणस्य इति वर्तते । शास्त्रं वेदः तदनुसारिपौरुषेय-

---

ವನ್ನು ಪಡೆದದ್ದು ಮಾತ್ರ ಸ್ಥಿತಿ ಮೊದಲಾದವುಗಳನ್ನು ಹೊಂದಬಲ್ಲುದು ಎಂಬ ಕಾರಣ ದಿಂದ ಜನ್ಮವನ್ನು ಮೊದಲನೆಯದನ್ನಾಗಿ ಹೇಳಲಾಗಿದೆ. ಚೇತನರಲ್ಲಿರುವ ಸುಖ ಮೊದಲಾದವುಗಳೂ, ಅಚೇತನವಸ್ತುಗಳ ವೃದ್ಧಿ ಮೊದಲಾದವುಗಳೂ ಇದ್ದರೂ ಕೂಡ, ಬ್ರಹ್ಮವಿಚಾರವನ್ನು ವಿಧಿಸುವ 'ಯತೋ ವಾ' ಮೊದಲಾದ ನಾನಾ ಶ್ರುತಿವಾಕ್ಯ ಗಳಲ್ಲಿ ಮತ್ತು 'ಉತ್ಪತ್ತಿ ಸ್ಥಿತಿ' ಮೊದಲಾದ ಸ್ಮೃತಿಗಳಲ್ಲಿ ಸೃಷ್ಟ್ಯಾದ್ಯಷ್ಟಕರ್ತೃತ್ವ ವನ್ನೇ ಬ್ರಹ್ಮನ ಲಕ್ಷಣವೆಂದು ಹೇಳಿರುವುದರಿಂದ ಅಥವಾ 'ಸೃಷ್ಟಿರಕ್ಷಾಹೃತಿಜ್ಞಾನ' ಇತ್ಯಾದಿ ಪ್ರಮಾಣಗಳು, ಮುಮುಕ್ಷುಗಳು ಸೃಷ್ಟ್ಯಾದ್ಯಷ್ಟಕರ್ತೃತ್ವವನ್ನೇ ವಿಶೇಷ ವಾಗಿ ತಿಳಿಯಬೇಕೆಂದು ಹೇಳಿರುವುದರಿಂದ ಈ ಸೂತ್ರದಲ್ಲಿ ಸೃಷ್ಟಿ ಮೊದಲಾದ ಎಂಟನ್ನು ಮಾತ್ರ ಗ್ರಹಿಸಲಾಗಿದೆ. 'ಅಸ್ಯ' ಎಂಬ ಪದದಿಂದ ಚೇತನ ಮತ್ತು ಅಚೇತನರನ್ನು ತೆಗೆದುಕೊಳ್ಳುವಂತೆ ಅವರಿಗೆ ಸಂಬಂಧಿಸಿದ ಜ್ಞಾನ ಮೊದಲಾದವು ಗಳನ್ನೂ ತೆಗೆದುಕೊಳ್ಳುವುದರಿಂದ ಚೇತನಾಚೇತನರ ಜ್ಞಾನಾದಿಗಳ ನಿಯಮನವೂ ಬ್ರಹ್ಮನ ಲಕ್ಷಣವೆಂದು ಸಿದ್ಧವಾಗುತ್ತದೆ. ॥ ೨ ॥

ಶಾಸ್ತ್ರಯೋನಿತ್ವಾಧಿಕರಣ—೩

## ಓಂ ಶಾಸ್ತ್ರಯೋನಿತ್ವಾತ್ ಓಂ (೧-೧-೩)

**ಸೂತ್ರಾರ್ಥ ವಿವರಣೆ**

ಈ ಅಧಿಕರಣದಲ್ಲಿ ಹಿಂದೆ ಹೇಳಿದ ಲಕ್ಷಣಕ್ಕೆ ಅತಿವ್ಯಾಪ್ತಿಯನ್ನು ನಿರಾಕರಿಸಲು ಜನ್ಮಾದಿ ಕಾರಣದ ವಿಷಯದಲ್ಲಿ ಪ್ರಮಾಣವನ್ನು ಹೇಳಲಾಗಿದೆ. 'ತಸ್ಯ ಜನ್ಮಾದಿ

ग्रन्थश्च योनिः ज्ञप्तिकारणं प्रमाणं इति यावत् यस्य तच्छास्त्रयोनि। तस्य भावः तत्त्वं तस्मादित्यर्थः । अनुमानेन पाशुपतादिना वा न जन्मादिकारणं ज्ञेयमिति नातिव्याप्तिः इति भावः । वेदयोनित्वात् इति वाच्ये शास्त्र इत्युक्तिः "ऋग्यजुस्सामाथर्वाश्च" इति स्मृत्युक्तशास्त्र-ग्रहणाय। तेन अनुमानं " नैव शास्त्रं कुवर्त्म तत् " इत्युक्तपाशुपता-द्यशास्त्रं च व्यावर्तितम्। मानत्वात् इति वाच्ये 'योनित्वात्' इत्युक्तिः मानत्वोपपादनाय । शास्त्रपदलभ्यभ्रान्त्यहेतुताकस्य ज्ञप्तिहेतोः मानताध्रौव्यात् । ऋगादेः अनादित्वादिना निर्दोषत्वेन शास्त्र इत्युक्त्या भ्रान्त्यहेतुत्वलाभात् । अस्य स्मृतिनयात् अगतार्थता चन्द्रिकायां बोध्या ॥ ३ ॥

---

ಕಾರಣಸ್ಯ' ಎಂಬ ಪದಗಳನ್ನು ಈ ಸೂತ್ರಕ್ಕೆ ಸೇರಿಸಿಕೊಳ್ಳಬೇಕು. ಶಾಸ್ತ್ರವೆಂದರೆ ವೇದ ಮತ್ತು ಅವುಗಳಿಗೆ ಅನುಸಾರಿಯಾದ ಪೌರುಷೇಯ ಗ್ರಂಥಗಳು. ಯೋನಿ ಯೆಂದರೆ ಜ್ಞಾನಕ್ಕೆ ಕಾರಣವಾದದ್ದು, ಪ್ರಮಾಣವೆಂದರ್ಥ. ವೇದಾದಿ ಶಾಸ್ತ್ರಗಳೇ ಪ್ರಮಾಣವಾಗುಳ್ಳದ್ದು ಯಾವುದೋ ಅದು ಶಾಸ್ತ್ರಯೋನಿ. ಶಾಸ್ತ್ರಯೋನಿತ್ವವೆಂದರೆ ಶಾಸ್ತ್ರಯೋನಿಯಾಗಿರುವುದು. ಆ ಜನ್ಮಾದಿಕಾರಣನ ಜ್ಞಾನಕ್ಕೆ ವೇದಾದಿಶಾಸ್ತ್ರಗಳೇ ಕಾರಣವಾಗಿರುವುದರಿಂದ ಎಂದು ಒಟ್ಟು ಅರ್ಥ. ಅನುಮಾನದಿಂದಾಗಲಿ ಪಾಶುಪತಾ ದ್ಯಾಗಮಗಳಿಂದಾಗಲಿ ಜನ್ಮಾದಿಕಾರಣನು ತಿಳಿಯಲ್ಪಡುವುದಿಲ್ಲವಾದ್ದರಿಂದ ಅತಿವ್ಯಾಪ್ತಿ ಯಿಲ್ಲವೆಂದು ಭಾವ

**ಸೂತ್ರದಲ್ಲಿರುವ ಪದಗಳ ಔಚಿತ್ಯ**

ವೇದಯೋನಿತ್ವಾತ್ ಎಂದು ಹೇಳಬೇಕಾಗಿದ್ದರೂ ಶಾಸ್ತ್ರಯೋನಿತ್ವಾತ್ ಎಂದು ಹೇಳಿರುವುದು "ಋಗ್ಯಜುಃಸಾಮಾಥರ್ವಾಶ್ಚ" ಎಂಬ ಸ್ಮೃತಿಯಲ್ಲಿ ಹೇಳಿದ ಶಾಸ್ತ್ರಗಳನ್ನು ಸಂಗ್ರಹಿಸುವುದಕ್ಕಾಗಿ. ಹೀಗೆ ಶಾಸ್ತ್ರಪದವು ಅನುಮಾನ ವನ್ನೂ "ನೈವ ಶಾಸ್ತ್ರಂ ಕುವರ್ತ್ಮ ತತ್" ಎಂಬಲ್ಲಿ ಹೇಳಿದ ಶಾಸ್ತ್ರವಲ್ಲದ ಪಾಶುಪತಾ ದ್ಯಾಗಮಗಳನ್ನೂ ವ್ಯಾವೃತ್ತಿಗೊಳಿಸುತ್ತದೆ. 'ಮಾನತ್ವಾತ್' ಎಂದು ಹೇಳಬೇಕಿ ದ್ದಾಗ 'ಯೋನಿತ್ವಾತ್' ಎಂದು ಹೇಳಿರುವುದು ಶಾಸ್ತ್ರಗಳಿಗೆ ಪ್ರಾಮಾಣ್ಯವನ್ನು ಪ್ರತಿಪಾದಿಸುವುದಕ್ಕಾಗಿ. ಬ್ರಹ್ಮಜ್ಞಾನಕಾರಣವು ಭ್ರಾಂತಿಗೆ ಹೇತುವಲ್ಲವೆಂದು ಶಾಸ್ತ್ರಪದದಿಂದ ಸಿದ್ಧವಾದಮೇಲೆ ಅದು ಪ್ರಮಾಣವೆಂದೇ ನಿಶ್ಚಿತವಾಗುತ್ತದೆ. ಅನಾದಿ

समन्वयाधिकरणम्—४

## ॥ ॐ तत्तु समन्वयात् ॐ ॥ १-१-४

अत्र नये पुनरतिव्याप्तिनिरासाय विष्णोरेव जगत्कारणत्वेन शास्त्रयोनित्वं समर्थ्यते । शास्त्रयोनीति वर्तते । समित्येतत् शास्त्रपदेनापि अन्वेति । तस्य कार्त्स्न्यं मुख्यत्वं चार्थः । तुरेव । अन्वीयन्ते शक्तितात्पर्यगोचरेण सम्बध्यन्ते तथा ज्ञायन्त इति यावत् वाक्यान्यनेन इति अन्वय उपक्रमादिलिङ्गसङ्घः । सबलाबलत्वादिना विचिन्तितश्चासौ अन्वयश्च तस्मात् उपक्रमादिलिङ्ग-

---

ಯಾಗಿರುವುದೇ ಮೊದಲಾದ ಕಾರಣಗಳಿಂದ ನಿರ್ದೋಷವಾದ ಋಗಾದಿಗಳು ಶಾಸ್ತ್ರಪದ ದಿಂದ ಭ್ರಾಂತಿಹೇತುವಲ್ಲವೆಂದು ಸಿದ್ಧವಾಗುವವು. ಈ ಅಧಿಕರಣಕ್ಕೆ ಸ್ಮೃತ್ಯಧಿಕರಣ ದಿಂದ ಗತಾರ್ಥತಾದೋಷವಿಲ್ಲವೆನ್ನುವುದನ್ನು ಚಂದ್ರಿಕಾಗ್ರಂಥದಿಂದ ತಿಳಿಯತಕ್ಕದ್ದು.

ಸಮನ್ವಯಾಧಿಕರಣ—೪

## ಓಂ ತತ್ತು ಸಮನ್ವಯಾತ್ ಓಂ (೧-೧-೪)

**ಸೂತ್ರದ ಅವತರಣಿಕೆ ಮತ್ತು ಸೂತ್ರಾರ್ಥ ವಿವರಣೆ**

ಈ ಅಧಿಕರಣದಲ್ಲಿ ಪುನಃ ಅತಿವ್ಯಾಪ್ತಿಯನ್ನು ನಿರಾಕರಿಸಲು ಜಗತ್ಕಾರಣನೆಂದು ಶಾಸ್ತ್ರಪ್ರತಿಪಾದ್ಯನು ವಿಷ್ಣುವೇ ಎಂಬುದನ್ನು ಸಮರ್ಥಿಸಲಾಗುವುದು. 'ಶಾಸ್ತ್ರಯೋನಿ' ಎಂಬ ಪದವನ್ನು ಇಲ್ಲಿ ಸೇರಿಸಿಕೊಳ್ಳಬೇಕು. 'ಸಮ್' ಎಂಬುದು 'ಶಾಸ್ತ್ರ' ಪದ ದೊಂದಿಗೂ ಅನ್ವಯವನ್ನು ಪಡೆದಿದೆ. ಆ 'ಸಮ್' ಪದಕ್ಕೆ ಕಾರ್ತ್ಸ್ನ್ಯ ಅಥವಾ ಸಾಕಲ್ಯ ಮತ್ತು ಮುಖ್ಯತ್ವ ಇವೆರಡೂ ಅರ್ಥಗಳು. 'ತು' ಶಬ್ದಕ್ಕೆ ಏವ ಎಂದು ಅರ್ಥ ಯಾವುದರಿಂದಾಗಿ ವಾಕ್ಯಗಳು ಶಕ್ತಿ ಮತ್ತು ತಾತ್ಪರ್ಯರೂಪವಾದ ಸಂಬಂಧ ವನ್ನು ಪಡೆದಿರುವಂತೆ ತಿಳಿದುಬರುವುದೋ ಅಂತಹ ಉಪಕ್ರಮ ಮೊದಲಾದ ತಾತ್ಪರ್ಯಲಿಂಗಗಳ ಸಮೂಹವು " ಅನ್ವೀಯಂತೆ ಏತೇನ ಇತಿ ಅನ್ವಯಃ " ಎಂಬ ವಿವರಣೆಗನುಗುಣವಾಗಿ 'ಅನ್ವಯ' ಶಬ್ದದ ಅರ್ಥವಾಗಿರುವುದು.

(ಸಮನ್ವಯಾತ್).—ಸಬಲವೋ ಅಥವಾ ದುರ್ಬಲವೋ ಎಂಬುದಾಗಿ ಚೆನ್ನಾಗಿ ವಿಮರ್ಶಿಸಲ್ಪಟ್ಟ ಅನ್ವಯದಿಂದ ಅಂದರೆ ಉಪಕ್ರಮ ಮೊದಲಾದವುಗಳ ಸಮೂಹ ದಿಂದ,

समुदायात् मुख्यया वृत्त्या कृत्स्नशास्त्रयोनिः कृत्स्नशास्त्रतात्पर्यविषयः तत्तु तदेव प्रकृतविष्णवाख्यं ब्रह्मैव इत्यर्थः। उपक्रमादेरिति वाच्ये अन्वयादिति यौगिकोक्त्या न शास्त्रतात्पर्यज्ञप्तौ आपातप्रतीतिः उपक्रमाद्यनपेक्षव्याख्यातृवचनं वा लिङ्गमिति सूचितम्। तेन न ताभ्यां अन्येषां जगद्धेतुत्वं कल्प्यमिति भावः। समन्वयैरिति वाच्ये समुदायबुद्ध्या अन्वयात् इत्युक्तिस्तु उपक्रमादीनां अविरोध-सूचनार्था। उपक्रमादेः तात्पर्यव्यभिचारनिरासाय समित्युक्तिः।

(ಸಂ ಶಾಸ್ತ್ರಯೋನಿ)—ಮುಖ್ಯವೃತ್ತಿಯಿಂದ ಸಕಲಶಾಸ್ತ್ರಯೋನಿಯಾದವನು ಅಂದರೆ ಸಕಲಶಾಸ್ತ್ರಗಳ ತಾತ್ಪರ್ಯವಿಷಯವಾದವನು,

ತತ್ ತು—ಪ್ರಕೃತನಾದ ವಿಷ್ಣುವೆಂಬ ಹೆಸರುಳ್ಳ ಬ್ರಹ್ಮನೇ ಆಗಿದ್ದಾನೆ ಎಂದು (ಸೂತ್ರದ) ಅರ್ಥ.

## 'ಅನ್ವಯಾತ್' ಎಂಬ ಪದವನ್ನು ಉಪಯೋಗಿಸಿರುವುದರ ವೈಶಿಷ್ಟ್ಯ

'ಉಪಕ್ರಮಾದಿಗಳಿಂದ' ಎಂದು ಹೇಳುವ ಬದಲು 'ಅನ್ವಯಾತ್' ಎಂಬ ಯೌಗಿಕಶಬ್ದವನ್ನು ಪ್ರಯೋಗಿಸಿರುವುದರಿಂದ, ಶಾಸ್ತ್ರದ ತಾತ್ಪರ್ಯವನ್ನು ತಿಳಿಯಲು ವಿಮರ್ಶಪೂರ್ವಕವಲ್ಲದ ಜ್ಞಾನವಾಗಲೀ, ಉಪಕ್ರಮಾದಿಗಳ ಸಹಾಯವನ್ನು ಪಡೆಯದ ವ್ಯಾಖ್ಯಾನಕಾರರ ವಚನಗಳಾಗಲೀ ಉಪಯುಕ್ತವಾಗಲಾರವು ಎಂದು ಸೂಚಿತ ವಾಗುವುದು. ಆದ್ದರಿಂದ, [1]ಆಪಾತಪ್ರತೀತಿಯಿಂದಾಗಲೀ, ಉಪಕ್ರಮಾದಿಗಳನ್ನು ವಿಚಾರಿಸದ ವ್ಯಾಖ್ಯಾತೃಗಳ ವಚನಗಳಿಂದಾಗಲೀ ವಿಷ್ಣುವ್ಯತಿರಿಕ್ತರಾದ ರುದ್ರಾದಿಗಳಿಗೆ ಜಗತ್ಕಾರಣತ್ವವನ್ನು ಕಲ್ಪಿಸಬಾರದೆಂದು ಭಾವ.

[2]"ಸಮನ್ವಯೈಃ" ಎಂದು ಹೇಳುವ ಬದಲು ಉಪಕ್ರಮಾದಿಗಳ ಸಮುದಾಯದ ವಿವಕ್ಷೆಯಿಂದ 'ಅನ್ವಯಾತ್' ಎಂದು ಹೇಳಿರುವುದು ಉಪಕ್ರಮ ಮೊದಲಾದವುಗಳಿಗೆ ಪರಸ್ಪರ ವಿರೋಧವಿರುವುದಿಲ್ಲವೆಂದು ಸೂಚಿಸಲು.

1. ಆಪಾತಪ್ರತೀತಿ—ವಿಮರ್ಶಪೂರ್ವಕವಲ್ಲದ ತಿಳುವಳಿಕೆ.

2. ಉಪಕ್ರಮ, ಉಪಸಂಹಾರ ಮೊದಲಾದ ಅನೇಕ ತಾತ್ಪರ್ಯಲಿಂಗಗಳನ್ನು ಹೇಳುವ 'ಸಮನ್ವಯ' ಪದವು ಬಹುವಚನದಲ್ಲಿರಬೇಕಾಗಿತ್ತು. ಆದರೂ ಸಮುದಾಯೈಕವಚನವನ್ನು ಉಪಯೋಗಿಸಿರುವುದು ಉಪಕ್ರಮಾದಿಗಳಿಗೆ ಪರಸ್ಪರ ಅವಿರೋಧವನ್ನು ಸೂಚಿಸಲೆಂದು ಭಾವ.

जन्मादिसूत्रप्रकृततत्पदे मण्डूकप्लुत्या अनुवर्तमानेऽपि पुनः तद्ग्रहणं अवधारणार्थतुशब्दान्वयार्थम् । अन्यथा अन्वयपदस्य उपक्रमादीनां लिङ्गत्वोक्तावेव चारितार्थ्यात् प्रतीतिव्याख्यानानिरासकतया तन्निरासार्थत्वेन श्रुतेन समन्वयात् इत्यनेनैव अन्वीयेत । अज्झनगमां सनीत्यादौ अज्ग्रहणस्य अङ्गेनेव अत्रापि समस्तस्यापि संशब्दस्य अन्यान्वयो बोध्यः । सुधायां तु उपक्रमादिलिङ्गनिर्णीतात् समन्वयात्

---

**ಸವರ್ ಮತ್ತು ತತ್ ಪದಗಳ ಪ್ರಯೋಜನ**

ಶಾಸ್ತ್ರತಾತ್ಪರ್ಯವಿಲ್ಲದಿರುವ ವಿಷಯದಲ್ಲೂ ಉಪಕ್ರಮಾದಿಗಳಿರಬಹುದೆಂಬುದನ್ನು ನಿರಾಕರಿಸಲು 'ಸವರ್' ಎಂದು ಹೇಳಲಾಗಿದೆ. "ಜನ್ಮಾದ್ಯಸ್ಯ ಯತಃ" ಎಂಬ ಸೂತ್ರದಲ್ಲಿ ಪ್ರಸಕ್ತವಾಗಿರುವ 'ತತ್' ಪದವನ್ನೇ [1]ಮಂಡೂಕಪ್ಲುತಿಯಿಂದ ಈ ಸೂತ್ರಕ್ಕೂ ಅನುವೃತ್ತಿಮಾಡಿಕೊಳ್ಳಲು ಸಾಧ್ಯವಿದ್ದರೂ ಪುನಃ ಆ ಪದವನ್ನು ಇಲ್ಲಿ ಪ್ರಯೋಗಿಸಿರುವುದು ಅವಧಾರಣಾರ್ಥಕವಾದ 'ತು' ಶಬ್ದವು 'ತತ್' ಪದದೊಂದಿಗೆ ಅನ್ವಯವನ್ನು ಪಡೆಯುವುದೆಂದು ಸೂಚಿಸಲು.

[2]ಹೀಗೆ 'ತತ್' ಪದವನ್ನು ಸೂತ್ರದಲ್ಲಿ ಗ್ರಹಿಸದಿದ್ದಲ್ಲಿ, 'ಅನ್ವಯ' ಪದವು ಉಪಕ್ರಮಾದಿಗಳನ್ನು ಲಿಂಗಗಳೆಂದು ತಿಳಿಸುವುದರಲ್ಲೇ ಚರಿತಾರ್ಥವಾಗಿ ಆಪಾತ ಪ್ರತೀತಿಯನ್ನಾಗಲೀ ಉಪಕ್ರಮಾದಿಗಳನ್ನು ಅವಲಂಬಿಸದ ವ್ಯಾಖ್ಯಾನವನ್ನಾಗಲೀ ನಿರಾಕರಿಸುವುದಿಲ್ಲವಾದ್ದರಿಂದ ಅಂತಹ ಪ್ರತೀತಿ–ವ್ಯಾಖ್ಯಾನಗಳನ್ನು ನಿರಾಕರಿಸುವುದಕ್ಕಾಗಿ ಸೂತ್ರದಲ್ಲಿ ಶ್ರುತವಾಗಿರುವ 'ಸಮನ್ವಯಾತ್' ಎಂಬ ಪದದೊಂದಿಗೇ ಅನ್ವಯವನ್ನು ಪಡೆದೀತು.

---

1. ಮಂಡೂಕಪ್ಲುತಿಯೆಂದರೆ ಕಪ್ಪೆಯ ಜಿಗಿತ. ಕಪ್ಪೆ ಮಧ್ಯೆ ಸ್ವಲ್ಪ ಪ್ರದೇಶವನ್ನು ಬಿಟ್ಟು ಮುಂದಕ್ಕೆ ಹಾರುವಂತೆ ಜನ್ಮಾದಿಸೂತ್ರದ 'ತತ್' ಪದವು ಶಾಸ್ತ್ರಯೋನಿಸೂತ್ರವನ್ನು ಬಿಟ್ಟು ಸಮನ್ವಯಸೂತ್ರಕ್ಕೆ ಅನುವೃತ್ತಿ ಪಡೆಯುವುದೆಂದು ಹೇಳಬಹುದೆಂಬು ಭಾವ.

2. ಸಮನ್ವಯಸೂತ್ರದಲ್ಲಿ 'ತತ್' ಪದವನ್ನು ಗ್ರಹಿಸದೇ ಹಿಂದಿನ ಸೂತ್ರದಿಂದ ಅನುವೃತ್ತಿ ಮಾಡಿಕೊಳ್ಳುವುದಾದಲ್ಲಿ 'ತು ಸಮನ್ವಯಾತ್' ಎಂದಿಷ್ಟೇ ಸೂತ್ರವಾದೀತು. ಒಂದು ಪದವು ತನ್ನೊಂದಿಗೆ ಶ್ರುತವಾದ ಇನ್ನೊಂದು ಪದದೊಂದಿಗೆ ಅನ್ವಯವನ್ನು ಪಡೆಯುವುದು ಎಂಬ ಸಾಮಾನ್ಯ ನಿಯಮದ ಪ್ರಕಾರ 'ತು' ಶಬ್ದವು 'ಸಮನ್ವಯಾತ್' ಎಂಬ ಪದದೊಂದಿಗೇ ಅನ್ವಯವನ್ನು ಪಡೆದೀತು ಎಂದು ಭಾವ.

सम्यग्वचनवृत्त्या तत्परत्वरूपसम्बन्धात् तदेव शास्त्रयोनि शास्त्रजन्य-प्रमाविषय इति वृत्त्यन्तरं च उक्तम् ॥ ४ ॥

ईक्षत्यधिकरणम्—५

## ॥ ॐ ईक्षतेर्नाशब्दम् ॐ ॥ १-१-५

अत्र नये संशब्दोक्तवाच्यत्वं सर्वशास्त्रयोनित्वं च समर्थ्यते। तदिति वर्तते। न विद्यते शब्दः वाचकः यस्य तदशब्दं अवाच्यम्।

---

**ಸಮ್ ಪದಕ್ಕೆ ಶಾಸ್ತ್ರ ಪದದೊಂದಿಗೆ ಅನ್ವಯದ ಸಮರ್ಥನೆ**

[1] ಅರ್ಝ್ಝನಗಮಾಂ ಸನಿ (ಪಾ.ಸೂ. ೬-೪-೧೬) ಇತ್ಯಾದಿ ಸೂತ್ರಗಳಲ್ಲಿ ಅಚ್ ಪದವು ಅಂಗಪದದಿಂದ ಹೇಗೋ ಹಾಗೆ ಸಮಾಸವನ್ನು ಪಡೆದಿರುವ 'ಸಂ' ಶಬ್ದಕ್ಕೂ ಸಮಾಸದಲ್ಲಿಲ್ಲದ ಪದದೊಂದಿಗೆ ಅನ್ವಯವನ್ನು ತಿಳಿಯತಕ್ಕದ್ದು.

**ಸುಧಾ ರೀತ್ಯಾ ವ್ಯಾಖ್ಯಾನಾಂತರ**

ಸುಧಾದಲ್ಲಾದರೋ ಉಪಕ್ರಮಾದಿ ಲಿಂಗಗಳಿಂದ ನಿರ್ಣೀತವಾದ ಸಮನ್ವಯದಿಂದ ಅಂದರೆ ಸಮ್—ಸಮ್ಯಕ್—ವಚನವೃತ್ತಿಯಿಂದ ತತ್‌ಪರತ್ವರೂಪವಾದ ಸಂಬಂಧದಿಂದ ತದೇವ—ಆ ಬ್ರಹ್ಮನೇ ಶಾಸ್ತ್ರಯೋನಿ—ಶಾಸ್ತ್ರದಿಂದ ಉಂಟಾಗುವ ಯಥಾರ್ಥಜ್ಞಾನಕ್ಕೆ ವಿಷಯನಾಗಿದ್ದಾನೆ ಎಂದು ವ್ಯಾಖ್ಯಾನಾಂತರವನ್ನೂ ಹೇಳಲಾಗಿದೆ.

ಈಕ್ಷತ್ಯಧಿಕರಣ—೫

## ಓಮ್ ಈಕ್ಷತೇರ್ನಾಶಬ್ದಮ್ ಓಮ್ (೧-೧-೫)

**ಸೂತ್ರದ ಉದ್ದೇಶ**

ಈ ಅಧಿಕರಣದಲ್ಲಿ ಹಿಂದಿನ ಸೂತ್ರದ 'ಸಮ್' ಶಬ್ದದಿಂದ ಸೂಚಿತವಾದ ವಾಚ್ಯತ್ವ ಮತ್ತು ಸಮಸ್ತಶಾಸ್ತ್ರತಾತ್ಪರ್ಯವಿಷಯತ್ವ—ಇವು ಸಮರ್ಥಿಸಲ್ಪಟ್ಟಿವೆ.

1. ಅರ್ಝ್ಝನಗಮಾಂ ಸನಿ—ಅಜಂತವಾದ ಅಂಗಕ್ಕೆ, ಹನ್ ಧಾತುವಿಗೆ ಮತ್ತು ಅಜಾದೇಶವಾದ ಗಮ್ ಧಾತುವಿಗೆ ಝಲಾದಿಯಾದ ಸನ್ ಪ್ರತ್ಯಯವು ಪರದಲ್ಲಿದ್ದಾಗ ದೀರ್ಘ ಬರುವುದೆಂದು ಸೂತ್ರಾರ್ಥ. ಇಲ್ಲಿ ಅಚ್ (ಅಜಂತ) ಪದವು ಸಮಾಸದ ಏಕದೇಶವಾಗಿದ್ದು ಸಮಾಸದಲ್ಲಿ ಇಲ್ಲದಿರುವ ಅಂಗಪದದೊಂದಿಗೆ ಅನ್ವಯವನ್ನು ಪಡೆದಿದೆ. ಹಾಗೆಯೇ 'ಸಮನ್ವಯಾತ್' ಎಂಬ ಸಮಾಸದ ಏಕದೇಶವಾದ 'ಸಂ' ಶಬ್ದವು ಸಮಾಸದಲ್ಲಿಲ್ಲದ 'ಶಾಸ್ತ್ರ' ಪದದೊಂದಿಗೆ ಅನ್ವಯವನ್ನು ಪಡೆಯುತ್ತದೆಂದು ಭಾವ.

ईक्षतेरिति धातुनिर्देशेन तदर्थः ईक्षणं लक्ष्यते । तस्य च असम्बद्धस्य अहेतुत्वात् सम्बन्धस्य च कर्तृत्वादिरूपस्य श्रुत्यननुगमेन विपक्षे बाधकाभावप्रसङ्गेन च अयोगात् क्रियाकर्मभावस्यैव सिद्धिः । ईक्षतेः ईक्षणीयत्वात् तद्ब्रह्म अशब्दं न किंतु वाच्यमेव इत्यर्थः । न च

---

**ಅಶಬ್ದಂ, ಈಕ್ಷತೇಃ ಪದಗಳ ಅರ್ಥವಿವರಣೆ**

ಹಿಂದಿನ ಸೂತ್ರದ 'ತತ್' ಪದವನ್ನು ಇಲ್ಲಿ ಅನುವೃತ್ತಿ ಮಾಡಿಕೊಳ್ಳಬೇಕು. ಯಾವುದಕ್ಕೆ ಶಬ್ದವು ವಾಚಕವಾಗಿಲ್ಲವೋ ಅದು 'ಅಶಬ್ದ' ಅಂದರೆ ಅವಾಚ್ಯ—ಯಾವುದೇ ಶಬ್ದದ ಮುಖ್ಯಾರ್ಥವಲ್ಲದ್ದು. 'ಈಕ್ಷತೇಃ' ಎಂದು ಧಾತುವನ್ನು ನಿರ್ದೇಶಿಸುವ ಪದದಿಂದ 'ಈಕ್ಷ್' ಧಾತುವಿನ ಅರ್ಥವಾದ ಈಕ್ಷಣವನ್ನು ಲಕ್ಷಣಾವೃತ್ತಿಯಿಂದ ತೆಗೆದುಕೊಳ್ಳಬೇಕು. ಬ್ರಹ್ಮನು ಅಶಬ್ದನಲ್ಲವೆಂದು ಸಮರ್ಥಿಸಲು ಹೇಳಲ್ಪಟ್ಟ [1]ಈಕ್ಷಣವು ಬ್ರಹ್ಮನಿಗೆ ಸಂಬಂಧಪಡದಿದ್ದಲ್ಲಿ ಅಶಬ್ದನಲ್ಲವೆಂದು ಸಮರ್ಥಿಸುವ ಹೇತುವಾಗಲಾರದು. ಈಕ್ಷಣದ ಸಂಬಂಧವು ಬ್ರಹ್ಮನಿಗೆ [2]ಕರ್ತೃತ್ವರೂಪವಾದುದೆಂದು ಹೇಳಿದರೆ ಪ್ರಕೃತಸೂತ್ರಕ್ಕೆ 'ಪುರುಷಮ್ ಈಕ್ಷತೇ' ಎಂಬ ಶ್ರುತಿಯು ಅನುಗಮ ಬರಲಾರದು. ಅಲ್ಲದೇ, ಬ್ರಹ್ಮನು [3]ಈಕ್ಷಣಕರ್ತೃವಾಗಿದ್ದರೂ ಅಶಬ್ದನೇಕಾಗಿರಬಾರದು ಎಂಬ ಶಂಕೆಗೆ ಬಾಧಕ ತರ್ಕವನ್ನೂ ಹೇಳಲಾಗದು. ಹೀಗೆ ಬ್ರಹ್ಮನಿಗೆ ಈಕ್ಷಣದ ಕರ್ತೃತ್ವರೂಪವಾದ ಸಂಬಂಧವು ಈ ಸೂತ್ರದಲ್ಲಿ ವಿವಕ್ಷಿತವಾದುದೆಂದು ಹೇಳಿದರೆ ಬ್ರಹ್ಮನಿಗೆ ಅಶಬ್ದತ್ವವನ್ನು ನಿರಾಕರಿಸಲು ಸಾಧ್ಯವಾಗಲಾರದು. ಆದ್ದರಿಂದ ಈಕ್ಷಣಕ್ಕೂ ಬ್ರಹ್ಮನಿಗೂ ಕ್ರಿಯಾಕರ್ಮಭಾವರೂಪವಾದ ಸಂಬಂಧವೇ ಇಲ್ಲಿ ವಿವಕ್ಷಿತವೆಂದು ಸಿದ್ಧವಾಗುವುದು.

**ಸೂತ್ರಾರ್ಥ ವಿವರಣೆ**

ಈಕ್ಷತೇಃ—ಈಕ್ಷಣೀಯನಾದುದರಿಂದ ಅಂದರೆ ಜ್ಞಾನವಿಷಯನಾದುದರಿಂದ,
(ತತ್)—ಆ ಬ್ರಹ್ಮನು
ಅಶಬ್ದಂ ನ—ಅಶಬ್ದನಲ್ಲ, ವಾಚ್ಯನೇ ಆಗಿದ್ದಾನೆ ಎಂದು ಸೂತ್ರಾರ್ಥ.

---

1. ಈಕ್ಷಣವೆಂದರೆ ಜ್ಞಾನ.

2. ಈಕ್ಷಣಕರ್ತೃತ್ವವೆಂದರೆ ಜ್ಞಾನಕ್ಕೆ ಆಶ್ರಯವಾಗಿರುವುದು. ಈಕ್ಷಣಸಂಬಂಧವು ಬ್ರಹ್ಮನಲ್ಲಿ ಕರ್ತೃತ್ವರೂಪವಾದುದು ಇಲ್ಲಿ ವಿವಕ್ಷಿತವೆಂದಾದರೆ ಬ್ರಹ್ಮನಿಗೆ ಈಕ್ಷಣಕರ್ಮತ್ವವನ್ನು ಹೇಳುವ ಶ್ರುತಿಯನ್ನು ಸೂತ್ರ ಅನುಕರಿಸಿದಂತಾಗುವುದಿಲ್ಲ. ಸೂತ್ರವು ಸಾಮಾನ್ಯವಾಗಿ ಶ್ರುತಿಯನ್ನು ಅನುಕರಿಸುವುದೆಂದು ಭಾವ.

3. ಬ್ರಹ್ಮನು ಜ್ಞಾನಕ್ಕೆ ಕರ್ತೃ ಅಥವಾ ಆಶ್ರಯನೆಂದು ಒಪ್ಪಿದಮಾತ್ರಕ್ಕೆ ಶಬ್ದವಾಚ್ಯನಾಗಬೇಕೆಂದಿಲ್ಲ. ಆದರೆ ಪ್ರತ್ಯಕ್ಷಾನುಮಾನಾವೇದ್ಯನಾದ ಬ್ರಹ್ಮನು ಜ್ಞಾನರೂಪಕ್ರಿಯೆಗೆ ಕರ್ಮ ಅಥವಾ ವಿಷಯನಾಗಿದ್ದಾನೆಂದು ಹೇಳಿದಲ್ಲಿ ಶಬ್ದವಾಚ್ಯನೆಂದೇ ಸಿದ್ಧನಾಗುತ್ತಾನೆಂದು ಭಾವ.

असिद्धो हेतुः । "पुरिशयं पुरुषं ईक्षते" इति श्रुतेः । न चाप्रयोजकत्वम् । अक्षानुमानावेद्यस्य शब्दात् ईक्षणं वचनवृत्तिमन्तरा न युक्तमिति तात्पर्यात् । न अशब्दं ईक्षतेरिति वाच्ये ईक्षतेरित्याद्युक्तिरनियमसूचनार्था । आमनन्ति कस्मात् उच्यते ब्रह्मेति वाच्यत्वश्रुत्यादिसत्त्वेपि तस्य अवाच्यत्वश्रुत्यादिना प्रतिरुद्धत्वेन अनिर्णायकत्वाच्छब्दात् नाशब्दं इत्यनुक्त्वा तदनुग्राहकन्याय एव

---

### ಬ್ರಹ್ಮನು ಈಕ್ಷಣೀಯ, ಆದ್ದರಿಂದಲೇ ಶಬ್ದವಾಚ್ಯ

ಬ್ರಹ್ಮನು ಜ್ಞಾನವಿಷಯನೇ ಅಲ್ಲವಾದ್ದರಿಂದ ಈಕ್ಷಣೀಯತ್ವವೆಂಬ ಹೇತು ಅಸಿದ್ಧವೆಂದು ಹೇಳಕೂಡದು. ಏಕೆಂದರೆ, "ಪುರಿಶಯಂ ಪುರುಷಮಿಕ್ಷತೇ" ಎಂಬ ಶ್ರುತಿಯಿಂದ ಬ್ರಹ್ಮನು ಜ್ಞಾನವಿಷಯನೆಂದು ಸಿದ್ಧನಾಗಿದ್ದಾನೆ. ಬ್ರಹ್ಮನು ಈಕ್ಷಣೀಯನಾಗಿದ್ದರೂ ಶಬ್ದವಾಚ್ಯನೇಕಾಗಬೇಕು ಎಂದು ಶಂಕಿಸಿ ಈಕ್ಷಣೀಯತ್ವ ಹೇತುವು ಅಪ್ರಯೋಜಕವೆಂದೂ ಹೇಳಬಾರದು. ಏಕೆಂದರೆ, ಪ್ರತ್ಯಕ್ಷ, ಅನುಮಾನಗಳಿಂದ ತಿಳಿಯಲ್ಪಡದ ಬ್ರಹ್ಮನು ಶಬ್ದದಿಂದ ತಿಳಿಯಲ್ಪಡಬೇಕಾದರೆ ಶಬ್ದವಾಚ್ಯತ್ವವಿಲ್ಲದಿದ್ದರೆ ಸಾಧ್ಯವಾಗಲಾರದು ಎಂಬುದೇ ಸೂತ್ರದ ತಾತ್ಪರ್ಯವಾಗಿದೆ.

### ಸೂತ್ರದ ಆನುಪೂರ್ವಿಯ ಸಮರ್ಥನೆ

[1]'ನಾಶಬ್ದಮ್ ಈಕ್ಷತೇಃ' ಎಂದು ಹೇಳುವ ಬದಲು 'ಈಕ್ಷತೇರ್ನಾಶಬ್ದಮ್' ಎಂದು ಹೇಳಿರುವುದು ಪ್ರತಿಜ್ಞಾವಾಕ್ಯವನ್ನು ಮೊದಲು ಹೇಳಿ ಅನಂತರವೇ ಹೇತುವನ್ನು ಹೇಳಬೇಕು ಎಂಬ ನಿಯಮವಿಲ್ಲವೆಂದು ಸೂಚಿಸಲು.

"ಆಮನಂತಿ, ಕಸ್ಮಾದುಚ್ಯತೇ ಬ್ರಹ್ಮೇತಿ" ಇತ್ಯಾದಿಯಾದ ಬ್ರಹ್ಮನಿಗೆ ವಾಚ್ಯತ್ವವನ್ನು ಹೇಳುವ ಶ್ರುತಿ ಮೊದಲಾದವುಗಳು ಇರುವುದರಿಂದ "ಶಬ್ದಾತ್ ನಾಶಬ್ದಮ್" ಎಂದೇ ಸೂತ್ರವಿರಬೇಕಾಗಿತ್ತು. ಆದರೆ ವಾಚ್ಯತ್ವವನ್ನು ಹೇಳುವ ಶ್ರುತಿಗಳು ಅವಾಚ್ಯತ್ವವನ್ನು ಹೇಳುವ ಶ್ರುತಿಗಳ ಪ್ರತಿರೋಧದಿಂದಾಗಿ ನಿರ್ಣಾಯಕವಾಗಲಾರವು. ಆದ್ದರಿಂದ "ಶಬ್ದಾತ್ ನಾಶಬ್ದಮ್" ಎಂದು ಹೇಳದೇ [2]ವಾಚ್ಯತ್ವಕ್ಕೆ

---

1. ಅನುಮಾನವನ್ನು ಪ್ರಯೋಗಿಸುವಾಗ ಮೊದಲು ಪ್ರತಿಜ್ಞಾವಾಕ್ಯವನ್ನೇ ಹೇಳಬೇಕೆಂಬ ತಾರ್ಕಿಕರ ನಿಯಮ ಆಧಾರರಹಿತವೆಂದು ಸೂತ್ರಕಾರರು ಸೂಚಿಸುತ್ತಿದ್ದಾರೆಂದು ತಾತ್ಪರ್ಯ.

2. ಪ್ರತ್ಯಕ್ಷಾನುಮಾನಗಳಿಂದ ಅವೇದ್ಯನಾದ ಬ್ರಹ್ಮನು ಈಕ್ಷಣೀಯ—ಜ್ಞಾನವಿಷಯ—ನಾಗಿದ್ದಾನೆ ಎಂದಲ್ಲಿ ಶಬ್ದಗಳ ಮೂಲಕವೇ ವೇದ್ಯನಾಗುತ್ತಾನೆ, ಅರ್ಥಾತ್ ವಾಚ್ಯನಾಗಿದ್ದಾನೆ ಎಂದು ಸಿದ್ಧವಾಗುವುದರಿಂದ ಈಕ್ಷಣೀಯತ್ವವು ವಾಚ್ಯತ್ವಕ್ಕೆ ಅನುಗ್ರಾಹಕ ಯುಕ್ತಿ.

ईक्षणीयत्वमुक्तम् । तेन श्रुतिप्राप्तं युक्तिमात्रात् कथं निरस्यमिति प्रत्युक्तम् । अवाच्यमिति वाच्ये अशब्दमित्युक्तिः अशब्दमस्पर्शमिति श्रुत्यनुगमाय । ईक्षतेर्वाच्यमिति वाच्ये अशब्दं नेत्युक्तिः वाच्यत्वविधिः अवाच्यत्वनिरासश्च श्रुत्यर्थाभ्यां कृतो यथा स्यादिति।

उक्तमाक्षिप्य समाधत्ते—

॥ ॐ गौणश्चेन्नात्मशब्दात् ॐ ॥ १-१-६

पुरुषमीक्षत इत्यादावीक्षणीयः त्रिगुणबद्धो जीवः, न विष्णुरत ईक्षणीयत्वं तत्रासिद्धमिति चेन्न । आत्मानं पश्येदित्यादौ

---

ಅನುಗ್ರಾಹಕವಾದ ಯುಕ್ತಿಯಾಗಿರುವ ಈಕ್ಷಣೀಯತ್ವವನ್ನು ಸೂತ್ರದಲ್ಲಿ ಹೇಳಲಾಗಿದೆ. ಇದರಿಂದಾಗಿ ಶ್ರುತಿಸಿದ್ಧವಾದ ಅವಾಚ್ಯತ್ವವನ್ನು ಈಕ್ಷಣೀಯತ್ವವೆಂಬ ಕೇವಲ ಯುಕ್ತಿಯಿಂದ ನಿರಾಕರಿಸುವುದು ಹೇಗೆ ಎಂಬ ಆಕ್ಷೇಪಕ್ಕೆ ಸಮಾಧಾನವನ್ನು ನೀಡಿದಂತಾಯಿತು.

**ಈಕ್ಷತೇಃ 'ನ ಅವಾಚ್ಯಂ' ಎಂದಾಗಲೀ 'ವಾಚ್ಯಂ' ಎಂದಾಗಲೀ ಸೂತ್ರ ವಿನ್ಯಾಸ ಮಾಡದಿರುವುದರ ಕಾರಣ**

ಸೂತ್ರದಲ್ಲಿ 'ಅವಾಚ್ಯಮ್' ಎಂಬ ಪದದ ಬದಲು 'ಅಶಬ್ದಮ್' ಎಂಬ ಪದವನ್ನು ಪಯೋಗಿಸಿರುವುದು "ಅಶಬ್ದಮಸ್ಪರ್ಶಮರೂಪಮವ್ಯಯಮ್" ಎಂಬ [1]ಶ್ರುತಿಯ ಅನುಗಮವನ್ನು ಸೂಚಿಸುವುದಕ್ಕಾಗಿ. "ಈಕ್ಷತೇರ್ವಾಚ್ಯಮ್" ಎಂದು ಸೂತ್ರವನ್ನು ರಚಿಸುವ ಬದಲು "ಈಕ್ಷತೇಃ ನ ಅಶಬ್ದಮ್" ಎಂದು ಸೂತ್ರವನ್ನು ರಚಿಸಿರುವುದು ವಾಚ್ಯತ್ವದ ವಿಧಾನ ಮತ್ತು ಅವಾಚ್ಯತ್ವದ ನಿರಾಕರಣೆ—ಎರಡನ್ನೂ ಶ್ರುತಿ ಮತ್ತು ಅರ್ಥಗಳಿಂದ ಮಾಡಿದಂತಾಗುವುದು ಎಂಬುದನ್ನು ಸೂಚಿಸಲು.[2]

ಹಿಂದಿನ ಸೂತ್ರದಲ್ಲಿ ಹೇಳಿದ್ದನ್ನು ಆಕ್ಷೇಪಿಸಿ ಸಮಾಧಾನವನ್ನು ಮುಂದಿನ ಸೂತ್ರ ನೀಡುತ್ತದೆ—

ಓಂ ಗೌಣಶ್ಚೇನ್ನಾತ್ಮಶಬ್ದಾತ್ ಓಂ (೧-೧-೬)

**ಸೂತ್ರಾರ್ಥ**

"ಪುರುಷಮ್ ಈಕ್ಷತೇ" ಇತ್ಯಾದಿ ಶ್ರುತಿಯಲ್ಲಿ ಈಕ್ಷಣೀಯನೆಂದು ಹೇಳಲ್ಪಟ್ಟವನು ಸತ್ತ್ವರಜಸ್ತಮೋಗುಣಗಳಿಂದ ಬದ್ಧನಾದ ಜೀವನು, ವಿಷ್ಣುವಲ್ಲ. ಆದ್ದರಿಂದ

---

1. ಶ್ರುತಿಯ ಅನುಗಮ—ಶ್ರುತಿಯ ಅನುಕರಣೆ.

2. ಅಶಬ್ದಂ ನ ಎಂಬ ಶ್ರುತಿ—ಅಂದರೆ ವಾಕ್ಯದಿಂದ ಅವಾಚ್ಯತ್ವದ ನಿರಾಕರಣೆ ಮತ್ತು ಅರ್ಥಾತ್ ವಾಚ್ಯತ್ವದ ವಿಧಾನ ಮಾಡಿದಂತಾಗುವುದು ಎಂದು ಭಾವ.

ईक्षणीये आत्मपदश्रवणात् । उपलक्षणमेतत् । पुरुषब्रह्मादिशब्दादित्यर्थः । प्राक् तदित्यन्वयाय अशब्दमित्युक्तावपि इह आत्मपदान्वयाय 'गौण इति पुंनिर्देशः ॥

ननु तथापि जीवः किं न इत्यतः आह—

**॥ ॐ तन्निष्ठस्य मोक्षोपदेशात् ॐ ॥ १-१-७**

तन्निष्ठस्य आत्मनिष्ठस्य । "यस्यानुवित्तः प्रतिबुद्ध आत्मा, तस्य लोकः स उ लोक एव" इति मोक्षोपदेशात् न गौणः आत्मशब्देनोक्त

---

ಈಕ್ಷಣೀಯತ್ವವು ವಿಷ್ಣುವಿನಲ್ಲಿ ಇಲ್ಲ ಎಂದರೆ ಅದು ಸರಿಯಲ್ಲ. ಏಕೆಂದರೆ, "ಆತ್ಮಾನಂ ಪಶ್ಯೇತ್" ಇತ್ಯಾದಿ ಶ್ರುತಿಯಲ್ಲಿ ಈಕ್ಷಣೀಯನಲ್ಲಿ 'ಆತ್ಮ' ಪದವು ಶ್ರುತವಾಗಿದೆ. ಇದು [1]ಉಪಲಕ್ಷಣ. ಪುರುಷ, ಬ್ರಹ್ಮ ಮೊದಲಾದ ಶಬ್ದಗಳು ಶ್ರುತವಾಗಿರುವುದರಿಂದಲೂ ಈಕ್ಷಣೀಯನು ಜೀವನಲ್ಲವೆಂದು ಅರ್ಥ.

**'ಗೌಣಃ' ಎಂದು ಪುಲ್ಲಿಂಗ ನಿರ್ದೇಶದ ಸಮರ್ಥನೆ**

[2]ಹಿಂದಿನ ಸೂತ್ರದಲ್ಲಿ, "ತತ್ತು ಸಮನ್ವಯಾತ್" ಎಂಬ ಸೂತ್ರದಿಂದ ಅನುವೃತ್ತಿ ಮಾಡಲ್ಪಟ್ಟ 'ತತ್' ಪದದೊಂದಿಗೆ ಅನ್ವಯಕ್ಕಾಗಿ 'ಅಶಬ್ದಮ್' ಎಂದು ಹೇಳಿದ್ದರೂ ಈ ಸೂತ್ರದಲ್ಲಿ 'ಆತ್ಮ' ಪದದೊಂದಿಗೆ ಅನ್ವಯಕ್ಕೋಸ್ಕರ 'ಗೌಣಃ' ಎಂದು ಪುಲ್ಲಿಂಗ ಪ್ರಯೋಗವಿದೆ.

ಈಕ್ಷಣೀಯನಲ್ಲಿ ಆತ್ಮಪದದ ಪ್ರಯೋಗವಿದ್ದರೂ ಈಕ್ಷಣೀಯನು ಜೀವನೇ ಏಕಾಗಬಾರದು ಎಂಬ ಆಕ್ಷೇಪಕ್ಕೆ ಉತ್ತರ—

**ಓಂ ತನ್ನಿಷ್ಠಸ್ಯ ಮೋಕ್ಷೋಪದೇಶಾತ್ ಓಂ (೧-೧-೭)**

**ಸೂತ್ರಾರ್ಥ ವಿವರಣೆ ಮತ್ತು ತಾತ್ಪರ್ಯ**

ತನ್ನಿಷ್ಠಸ್ಯ—ಆತ್ಮನಿಷ್ಠನಾದವನಿಗೆ, [3]"ಯಸ್ಯಾನುವಿತ್ತಃ ಪ್ರತಿಬುದ್ಧ ಆತ್ಮಾ

---

1. ಆತ್ಮಶಬ್ದದ ಪ್ರಯೋಗದಂತೆ ಪುರುಷ, ಬ್ರಹ್ಮ ಮೊದಲಾದ ಶಬ್ದಗಳ ಪ್ರಯೋಗಗಳೂ ಈಕ್ಷಣೀಯನು ಜೀವನಲ್ಲವೆಂದು ಸಮರ್ಥಿಸುತ್ತವೆ ಎಂದು ಭಾವ.

2. ತತ್ ಪದವು ನಪುಂಸಕಲಿಂಗದಲ್ಲಿರುವುದರಿಂದ ಅಶಬ್ದಮ್ ಎಂದು ನಪುಂಸಕಲಿಂಗದ ಪ್ರಯೋಗ. ಆತ್ಮಪದವು ಪುಲ್ಲಿಂಗವಾದುದರಿಂದ ಗೌಣಃ ಎಂದು ಪುಲ್ಲಿಂಗಪ್ರಯೋಗ ಎಂದು ಭಾವ.

3. ಯಸ್ಯಾನುವಿತ್ತಃ ಪ್ರತಿಬುದ್ಧ ಆತ್ಮಾ ಅಸ್ಮಿನ್ ಸಂದೇಹೇ ಗಹನೇ ಪ್ರವಿಷ್ಟಃ । ಸ ವಿಶ್ವಕೃತ್ ಸ ಹಿ ಸರ್ವಸ್ಯ ಕರ್ತಾ ತಸ್ಯ ಲೋಕಃ ಸ ಉ ಲೋಕ ಏವ ॥ (ಬೃ. ಉ. ೬-೪-೧೩) ಎಂದು ಶ್ರುತಿ. ಸರ್ವಕರ್ತನೂ ಆದ್ದರಿಂದಲೇ ವಾಯುವನ್ನು ಸೃಜಿಸಿದವನೂ, ಸರ್ವಜ್ಞನೂ, ಮಧ್ಯದೇಹದಲ್ಲಿ ಹೃದಯಗುಹೆಯಲ್ಲಿ ನೆಲೆಸಿದವನೂ ಆದ ಆತ್ಮನನ್ನು ಚೆನ್ನಾಗಿ ತಿಳಿದ ಉಪಾಸಕನು ಆ ಆತ್ಮನ ಅಂದರೆ ವಿಷ್ಣುವಿನ ಲೋಕವನ್ನು ಪಡೆಯುತ್ತಾನೆಂದು ಶ್ರುತ್ಯರ್ಥ.

इत्यर्थः । गौणज्ञानात् गुणनिवृत्तिरूपमुक्त्ययोगादिति भावः । अत एव प्राग् जीव इति वाच्ये गौण इत्युक्तिः ।

इतश्च न गौणस्तथेत्याह—

॥ ॐ हेयत्वावचनाच्च ॐ ॥ १-१-८

"तमेवैकं जानथ आत्मानं अन्या वाचो विमुञ्चथ" इति आत्मशब्दार्थस्य हेयत्वावचनात् प्रत्युताहेयत्ववचनात् अन्यस्य हेयत्ववचनाच्चेत्यर्थः । सुधायां तु गौणशब्दस्य मायाशबलब्रह्मपरत्वमुपेत्य

---

ತಸ್ಯ ಲೋಕಃ ಸ ಉ ಲೋಕ ಏವ" ಎಂಬ ಶ್ರುತಿಯಲ್ಲಿ ಮೋಕ್ಷವಾಗುವುದೆಂದು ಉಪದೇಶವಿರುವುದರಿಂದ ತ್ರಿಗುಣಬದ್ಧನಾದ ಜೀವನು ಆತ್ಮಶಬ್ದದಿಂದ ಹೇಳಲ್ಪಟ್ಟಿಲ್ಲ ಎಂದು ಅರ್ಥ. ಗುಣಬದ್ಧನಾದ ಜೀವನ ಜ್ಞಾನದಿಂದ ಗುಣನಿವೃತ್ತಿರೂಪವಾದ ಮುಕ್ತಿಯಾಗಲಾರದು ; ಆದ್ದರಿಂದ ಗೌಣಜೀವನು ಆತ್ಮಶಬ್ದದಿಂದ ಹೇಳಲ್ಪಟ್ಟಿಲ್ಲವೆಂದು ಭಾವ. [1]ಆದ್ದರಿಂದಲೇ ಹಿಂದಿನ ಸೂತ್ರದಲ್ಲಿ 'ಜೀವಃ' ಎಂದು ಹೇಳುವ ಬದಲು 'ಗೌಣಃ' ಎಂದು ಹೇಳಿರುವುದು.

ಈ ಮುಂದೆ ಹೇಳುವ ಕಾರಣದಿಂದಲೂ ಗುಣಬದ್ಧನಾದ ಜೀವನು ಈಕ್ಷಣೀಯನಲ್ಲವೆಂದು ಹೇಳುವ ಸೂತ್ರ—

ಓಂ ಹೇಯತ್ವಾವಚನಾಚ್ಚ ಓಂ (೧-೧-೮)

**ಸೂತ್ರಾರ್ಥ**

"ತಮೇವೈಕಂ ಜಾನಥ ಆತ್ಮಾನಂ ಅನ್ಯಾ ವಾಚೋ ವಿಮುಂಚಥ" ಎಂಬ ಶ್ರುತಿಯಲ್ಲಿ ಆತ್ಮಪದದ ಅರ್ಥವು ಹೇಯವೆಂದು ಹೇಳದಿರುವುದರಿಂದ, ಅದಕ್ಕೆ ಬದಲಾಗಿ ಅಹೇಯತ್ವವನ್ನು ಹೇಳಿರುವುದರಿಂದ ಮತ್ತು ಆತ್ಮಪದಾರ್ಥವ್ಯತಿರಿಕ್ತವಾದುದು ಹೇಯವೆಂದು ಹೇಳಿರುವುದರಿಂದಲೂ ಕೂಡ ಆತ್ಮಪದದ ಅರ್ಥವು ಜೀವನಲ್ಲವೆಂದು ಅರ್ಥ.

**ಮೇಲಿನ ಮೂರು ಸೂತ್ರಗಳಿಗೆ ವ್ಯಾಖ್ಯಾನಾಂತರ**

ಸುಧಾದಲ್ಲಾದರೋ ಗೌಣಶಬ್ದವು ಮಾಯಾವಿಶಿಷ್ಟಬ್ರಹ್ಮಪರವೆಂದು ಅಂಗೀಕರಿಸಿ ಮೂರೂ ಸೂತ್ರಗಳು ವ್ಯಾಖ್ಯಾನಿಸಲ್ಪಟ್ಟಿವೆ. ತತ್ತ್ವಪ್ರದೀಪ, ಸನ್ನ್ಯಾಯರತ್ನಾವಳಿಗಳಲ್ಲಿ "ಈಕ್ಷಣೀಯನು ಗೌಣನಲ್ಲವೆನ್ನುವುದು ಆತ್ಮಶಬ್ದ ಮೊದಲಾದವುಗಳ

---

1. ಗುಣಬದ್ಧನ ಜ್ಞಾನ ಗುಣನಿವೃತ್ತಿರೂಪವಾದ ಮೋಕ್ಷಕ್ಕೆ ಕಾರಣವಾಗಲಾರದೆಂಬ ಯುಕ್ತಿ ಗೌಣಪದದಿಂದ ಸೂಚಿತವಾಗುವಂತೆ ಜೀವಪದದಿಂದ ಸೂಚಿತವಾಗುವುದಿಲ್ಲವಾದ್ದರಿಂದ ಜೀವಪದವನ್ನು ಸೂತ್ರದಲ್ಲಿ ಉಪಯೋಗಿಸಿಲ್ಲವೆಂದು ಭಾವ.

सूत्रत्रयं व्याख्यातम् । तत्वप्रदीप-सन्न्यायरत्नावल्योस्तु न केवल-मात्मशब्दादिबलादीक्षणीयो. न गौणः । किंतु तन्निष्ठस्येत्यादिसूत्र-द्वयोक्तहेतुभ्यामपीति तन्निष्ठस्येत्यादिसूत्रद्वयमन्यथा व्याख्यातम् ।

इतश्च निर्गुणो वाच्य इत्याह—

॥ ॐ स्वाप्ययात् ॐ ॥ १-१-९

नाशब्दमिति वर्तते । निर्गुणमिति च प्रकृतम् । "आत्मन्येवात्मानं विलापयति" इति श्रुत्युक्तत्वाच्च निर्गुणं ब्रह्म नाशब्दं किंतु वाच्यमेवेति बहिरेव योज्यम् । कुतोऽयं श्रुत्युक्तो निर्गुण इति चेत् स्वाप्ययात् । स्वेति तन्त्रम् । स्वस्य स्वस्मिन् अप्ययवचनादिति योज्यम् । एवं च स्वाप्ययाच्चेति स्यादिति नाशङ्क्यम् ।

---

ಬಲದಿಂದ ಮಾತ್ರವೇ ಅಲ್ಲ : ತನ್ನಿಷ್ಠಸ್ಯ ಇತ್ಯಾದಿ ಎರಡು ಸೂತ್ರಗಳಿಂದ ಹೇಳಲ್ಪಟ್ಟ ಯುಕ್ತಿಗಳಿಂದಲೂ ಸಿದ್ಧವಾಗುವುದು" ಎಂಬುದಾಗಿ ತನ್ನಿಷ್ಠಸ್ಯ ಇತ್ಯಾದಿ ಎರಡು ಸೂತ್ರಗಳು ಇನ್ನೊಂದು ರೀತಿಯಿಂದ ವ್ಯಾಖ್ಯಾತವಾಗಿವೆ.

ಈ ಮುಂದಿನ ಕಾರಣದಿಂದಲೂ ಗುಣತ್ರಯರಹಿತನಾದ ಪರಬ್ರಹ್ಮನು ವಾಚ್ಯನಾಗಿದ್ದಾನೆ ಎಂದು ಹೇಳುವ ಸೂತ್ರ—

ಓಂ ಸ್ವಾಪ್ಯಯಾತ್ ಓಂ (೧-೧-೯)

**ಸೂತ್ರಾರ್ಥ ವಿವರಣೆ**

"ನ ಅಶಬ್ದಮ್" ಎಂಬ ಪದಗಳು ಹಿಂದಿನ ಸೂತ್ರದಿಂದ ಅನುವೃತ್ತಿಗೊಳ್ಳುತ್ತವೆ. ಪ್ರಕೃತ ಸಂದರ್ಭಕ್ಕನುಗುಣವಾಗಿ 'ನಿರ್ಗುಣಮ್' ಎಂಬ ಪದವೂ ಲಬ್ಧವಾಗುತ್ತದೆ. "ಆತ್ಮನ್ಯೇವಾತ್ಮಾನಂ ವಿಲಾಪಯತಿ" ಎಂಬ ಶ್ರುತಿಯಲ್ಲಿ ಹೇಳಲ್ಪಟ್ಟಿರುವುದರಿಂದಲೂ ಕೂಡ ಗುಣತ್ರಯರಹಿತನಾದ ಬ್ರಹ್ಮನು ಅಶಬ್ದನಲ್ಲ, ವಾಚ್ಯನೇ ಆಗಿದ್ದಾನೆ" ಎಂಬ ವಾಕ್ಯವನ್ನು ಈ ಸೂತ್ರಕ್ಕೆ ಮುಂಚಿತವಾಗಿ ಯೋಜಿಸಿಕೊಳ್ಳಬೇಕು. ಈ ಶ್ರುತಿಯಲ್ಲಿ ಹೇಳಲ್ಪಟ್ಟಿರುವವನು ನಿರ್ಗುಣನೇ ಏಕಾಗಬೇಕು ಎಂಬ ಪ್ರಶ್ನೆಗೆ ಉತ್ತರ—'ಸ್ವಾಪ್ಯಯಾತ್'. ಇಲ್ಲಿ 'ಸ್ವ' ಎಂಬ ಪದವನ್ನು ಆವೃತ್ತಿಮಾಡಿಕೊಳ್ಳಬೇಕು. "ತನಗೆ ತನ್ನಲ್ಲಿ ಲಯವನ್ನು ಹೇಳಿರುವುದರಿಂದ" ಎಂದು ವಾಕ್ಯವನ್ನು

शाखान्तरेषु रुद्रादि जगद्धेतुत्वेन उच्यतामित्यतः सर्वशास्त्रयोनित्वं विष्णोरेवेत्याह—

॥ ॐ गतिसामान्यात् ॐ ॥ १-१-१०

तत्तु शास्त्रयोनीति वर्तते । गतेः सर्वशाखोत्पाद्यज्ञानस्य सामान्यात् समानत्वात् एकरूपत्वश्रवणात् "सर्वे वेदा युक्तयः"

---

ಯೋಜಿಸಿಕೊಳ್ಳಬೇಕು. [1]ಹೀಗೆ ವ್ಯಾಖ್ಯಾನಮಾಡುವುದರಿಂದ 'ಸ್ವಾಪ್ಯಯಾಚ್ಚ' ಎಂದು ಸೂತ್ರವಿರಬೇಕಾಗಿತ್ತು ಎಂಬ ಶಂಕೆಗೆ ಅವಕಾಶವಿಲ್ಲ.

ವೇದಗಳ ಇತರ ಶಾಖೆಗಳಲ್ಲಿ ರುದ್ರ ಮೊದಲಾದ ದೇವತೆಗಳೇ ಜಗತ್ಕಾರಣರೆಂದು ಪ್ರತಿಪಾದಿಸಲ್ಪಟ್ಟಿರಬಹುದು ಎಂಬ ಸಂದೇಹನಿವಾರಣೆಗಾಗಿ ಸರ್ವಶಾಸ್ತ್ರಪ್ರತಿಪಾದ್ಯನು ವಿಷ್ಣುವೇ ಎಂದು ಹೇಳುವ ಸೂತ್ರ—

ಓಂ ಗತಿಸಾಮಾನ್ಯಾತ್ ಓಂ (೧-೧-೧೦)

**ಸೂತ್ರಾರ್ಥ**

'ತತ್ತು' 'ಶಾಸ್ತ್ರಯೋನಿ' ಎಂಬ ಪದಗಳು ಅನುವೃತ್ತವಾಗುತ್ತವೆ.

ಗತೇಃ—ಸರ್ವಶಾಖೆಗಳಿಂದ ಹುಟ್ಟುವ ಜ್ಞಾನಕ್ಕೆ,

ಸಾಮಾನ್ಯಾತ್—ಸಮಾನತೆಯು ಎಂದರೆ ಏಕರೂಪತೆಯು "ಸರ್ವೇ ವೇದಾ ಯುಕ್ತಯಃ" ಮೊದಲಾದ ಶ್ರುತಿಗಳಲ್ಲಿ ಕೇಳಿಬರುವುದರಿಂದ, ತದೇವ–ವಿಷ್ಣುವೆಂಬ ಹೆಸರಿನ ಬ್ರಹ್ಮನೇ ಜಗತ್ಕಾರಣನೆಂದು ಸರ್ವಶಾಸ್ತ್ರಪ್ರತಿಪಾದ್ಯನಾಗಿದ್ದಾನೆ. ಬೇರೆ ಶಾಖೆಗಳಲ್ಲಿ ಬೇರೆ ರೀತಿಯಾಗಿ ಹೇಳುವುದಿಲ್ಲ ಎಂದು ಸೂತ್ರಾರ್ಥ.

**ವ್ಯಾಖ್ಯಾನಾಂತರ**

ಇನ್ನೊಂದು ವ್ಯಾಖ್ಯಾನ — ಗತಿಸಾಮಾನ್ಯಾತ್ – ಗತಿಸಾಮಾನ್ಯಾನುಮಾನದಿಂದ. ಸೂತ್ರಕಾರರು ನಿರ್ಣಯಿಸಿರುವ ವೇದಶಾಖೆಯನ್ನು ದೃಷ್ಟಾಂತವಾಗಿಟ್ಟು

---

1. ಬ್ರಹ್ಮನು ಅವಾಚ್ಯನಲ್ಲ ಎಂದು ಸಾಧಿಸಲು ಹಿಂದೆ ಹೇಳಿದ ಯುಕ್ತಿಗೆ ಜೊತೆಯಾಗಿ ಇನ್ನೊಂದು ಯುಕ್ತಿಯನ್ನು ಹೇಳಿದ್ದಲ್ಲಿ, ಅಥವಾ ಈಕ್ಷಣೀಯನು ಗೌಣನಲ್ಲ ಎಂದು ಸಮರ್ಥಿಸಲು ಹಿಂದಿನ ಯುಕ್ತಿಗಳ ಜೊತೆಗೆ ಮತ್ತೊಂದು ಯುಕ್ತಿಯನ್ನು ಈ ಸೂತ್ರದಲ್ಲಿ ಹೇಳಿದ್ದಲ್ಲಿ 'ಸ್ವಾಪ್ಯಯಾಚ್ಚ' ಎಂದು ಚಕಾರ ಬೇಕಾಗುತ್ತಿತ್ತು. ಆದರೆ 'ಆತ್ಮಾನಂ ವಿಲಾಪಯತಿ' ಇತ್ಯಾದಿ ಶ್ರುತಿಪ್ರತಿಪಾದ್ಯನು ನಿರ್ಗುಣನೇ ಏಕೆ ಎಂಬ ಪ್ರಶ್ನೆಗೆ ಈ ಸೂತ್ರ ಉತ್ತರ ಕೊಡುವುದರಿಂದ 'ಚ'ಕಾರ ಬೇಕಾಗಿಲ್ಲವೆಂದು ಭಾವ.

इत्यादौ तदेव विष्ण्वाख्यं ब्रह्मैव कारणत्वेन सर्वशास्त्रयोनि न त्वन्यत्र अन्यथा उच्यत इत्यर्थः । वृत्त्यन्तरं तु गतिसामान्यात् गतिसामान्यानुमानात् इति । सूत्रकृन्निर्णीतशाखादृष्टान्तेन शाखात्वेन हेतुना शाखान्तरेऽप्येतदनुमानादित्यर्थः । चन्द्रिकायां तु आत्मशब्दमोक्षोपदेशहेयत्वानुक्तिस्वाप्ययाः शाखान्तरे गौणात्मन्यपि स्युरित्यवतार्य गतेः सर्वत्रैकरूप्यमेवेत्यप्यर्थ उक्तः ।

इतश्च निर्गुणं ब्रह्म वाच्यमित्याह—

॥ ओँ श्रुतत्वाच्च ओँ ॥ १-१-११

तत् नाशब्दमिति वर्तते । निर्गुणस्येति प्रकृतम् । केवलो निर्गुणश्च इति सत्वादिगुणहीनस्य श्रुतत्वाच्च तत् नाशब्दमित्यर्थः । लक्षणया श्रुतत्वस्य अनवस्थादुःस्थत्वादिति भावः ॥ ५ ॥

---

ಕೊಂಡು ಇತರ ಶಾಖೆಗಳೂ, ವೇದಶಾಖೆಗಳಾಗಿರುವ ಕಾರಣದಿಂದ ವಿಷ್ಣ್ವಾಖ್ಯ ಪರಬ್ರಹ್ಮನನ್ನೇ ಜಗತ್ಕಾರಣನೆಂದು ಪ್ರತಿಪಾದಿಸುತ್ತವೆ ಎಂದು ಅನುಮಾನಮಾಡುವುದರಿಂದ" ಎಂದು ಸೂತ್ರಾರ್ಥ.

**ಚಂದ್ರಿಕಾರೀತ್ಯಾ ವ್ಯಾಖ್ಯಾನಾಂತರ**

ಚಂದ್ರಿಕೆಯಲ್ಲಿ—ಆತ್ಮಶಬ್ದ, ಮೋಕ್ಷೋಪದೇಶ, ಹೇಯತ್ವಾನುಕ್ತಿ ಮತ್ತು ಸ್ವಾಪ್ಯಯ ಇವುಗಳು ಶಾಖಾಂತರದಲ್ಲಿ ಗೌಣಾತ್ಮನ ವಿಷಯದಲ್ಲೂ ಹೇಳಲ್ಪಟ್ಟಿರಬಹುದು ಎಂದು ಅವತರಣಿಕೆಯನ್ನು ನೀಡಿ ಜ್ಞಾನವು ಎಲ್ಲ ಶಾಖೆಗಳಿಂದಲೂ ಏಕರೂಪವಾಗಿ ಉಂಟಾಗುವುದು ಎಂದೂ ಸೂತ್ರಾರ್ಥವನ್ನು ಹೇಳಲಾಗಿದೆ.

ಈ ಮುಂದೆ ಹೇಳುವ ಕಾರಣದಿಂದಲೂ ನಿರ್ಗುಣಬ್ರಹ್ಮನು ವಾಚ್ಯನಾಗಿದ್ದಾನೆ ಎಂದು ಹೇಳಲು ಸೂತ್ರ—

ಓಂ ಶ್ರುತತ್ವಾಚ್ಚ ಓಂ (೧-೧-೧೧)

**ಸೂತ್ರಾರ್ಥ**

"ತತ್ ನ ಅಶಬ್ದಮ್" ಎಂಬ ಪದಗಳು ಅನುವೃತ್ತವಾಗುತ್ತವೆ. ಸಂದರ್ಭವಶಾತ್ 'ನಿರ್ಗುಣಸ್ಯ' ಎಂಬ ಪದವು ದೊರಕುವುದು. "ಕೇವಲೋ ನಿರ್ಗುಣಶ್ಚ"

प्रतिज्ञातं समन्वयं प्रकटयत्यध्यायशेषेण । अन्यत्रोभयत्रान्यत्रैव प्रसिद्धभेदात् त्रिविधवैदिकशब्दानां नामलिङ्गभेदेन प्रत्येकं द्वैविध्यात् आद्यपादे अन्यत्रप्रसिद्धानां नामात्मकशब्दानां समन्वय उच्यते ॥

आनन्दमयाधिकरणम्—६

## ॥ ॐ आनन्दमयोऽभ्यासात् ॐ ॥ १-१-१२

अत्र नये गुणिसामान्यवाचका गुणवाचकाश्च नामात्मकाः शब्दास्समन्वीयन्ते । तत्त्विति आध्यायपरिसमाप्ति साध्यार्पकतया

---

ಎಂದು ಸತ್ತ್ವಾದಿಗುಣರಹಿತನು ಶ್ರುತನಾಗಿರುವುದರಿಂದ ಬ್ರಹ್ಮನು ಅವಾಚ್ಯನಲ್ಲ ಎಂದು ಸೂತ್ರಾರ್ಥ. ಲಕ್ಷಣಾವೃತ್ತಿಯಿಂದ ಬ್ರಹ್ಮನು ಶ್ರುತನಾಗಿದ್ದಾನೆ ಎಂದು ಹೇಳಿದಲ್ಲಿ ಅನವಸ್ಥಾದೋಷವು ಅಪರಿಹಾರ್ಯವೆಂದು ಭಾವ.

**ಅಧ್ಯಾಯಶೇಷದ ಮತ್ತು ಮೊದಲನೆಯ ಪಾದದ ಪ್ರತಿಪಾದ್ಯ ವಿಷಯ**

ಪ್ರತಿಜ್ಞೆಮಾಡಲ್ಪಟ್ಟ ಸಮನ್ವಯವನ್ನು ಅಧ್ಯಾಯದ ಉಳಿದ ಭಾಗದಿಂದ (ಸೂತ್ರಕಾರರು) ಸ್ಪಷ್ಟಪಡಿಸುತ್ತಾರೆ. ಅನ್ಯತ್ರಪ್ರಸಿದ್ಧ, ಉಭಯತ್ರ ಪ್ರಸಿದ್ಧ, ಅನ್ಯತ್ರೈವ ಪ್ರಸಿದ್ಧ ಎಂದು ಮೂರು ವಿಧವಾದ ವೈದಿಕಶಬ್ದಗಳು ಪ್ರತ್ಯೇಕವಾಗಿ ನಾಮಾತ್ಮಕ ಮತ್ತು ಲಿಂಗಾತ್ಮಕವೆಂದು ಎರಡು ವಿಧವಾಗಿರುವುದರಿಂದ ಮೊದಲನೆಯ ಪಾದದಲ್ಲಿ ಅನ್ಯತ್ರಪ್ರಸಿದ್ಧ ನಾಮಾತ್ಮಕ ಶಬ್ದಗಳ ಸಮನ್ವಯವು ಹೇಳಲ್ಪಡುತ್ತದೆ.

ಆನಂದಮಯಾಧಿಕರಣ—೬

## ಓಂ ಆನಂದಮಯೋಽಭ್ಯಾಸಾತ್ ಓಂ (೧-೧-೧೨)

**ಅಧಿಕರಣಪ್ರತಿಪಾದ್ಯ ವಿಷಯ**

ಈ ಅಧಿಕರಣದಲ್ಲಿ ಗುಣಿಸಾಮಾನ್ಯವಾಚಕ ಮತ್ತು ಗುಣವಾಚಕವಾಗಿರುವ ನಾಮಾತ್ಮಕಶಬ್ದಗಳು ಸಮನ್ವಯಗೊಳಿಸಲ್ಪಡುತ್ತವೆ.

**ಸೂತ್ರಾರ್ಥ**

ಈ ಅಧ್ಯಾಯ ಕೊನೆಗೊಳ್ಳುವವರೆಗೆ ಪ್ರಾಯಶಃ ಪ್ರತಿಯೊಂದು ಅಧಿಕರಣದಲ್ಲೂ 'ತತ್ತು' ಎಂಬ ಪದಗಳು, ಸಾಧಿಸಬೇಕಾದ ಅಂಶವನ್ನು ಪ್ರತಿಪಾದಿಸುವ ಸಲುವಾಗಿ ಅನುವೃತ್ತಿಗೊಳ್ಳುತ್ತವೆ. 'ಆನಂದಮಯ' ಎಂಬ ಪದ ಇಲ್ಲಿ ಉಪಲಕ್ಷಣ. ತೈತ್ತಿರೀಯ ದಲ್ಲಿ ಕೇಳಿಬರುವ ಆನಂದಮಯ ಮೊದಲಾದ ಐದೂ ತತ್ ತು—ಅದೇ ಆಗಿದೆ ಅಂದರೆ

प्रतिनयं प्रायेण अनुवर्तते । आनन्दमय इत्युपलक्षणम् । तैत्तिरीये श्रुता आनन्दमयादयः पञ्च तत्तु तदेव ब्रह्मैव । आनन्दमयादिशब्द-वाच्यं ब्रह्मैवेत्यर्थः । एवमग्रेऽपि प्रतिनयमर्थो ध्येयः । कुतः अभ्यासात् । अत्राभ्यासशब्देन तदेकदेशोऽसकृदुक्तिमात्रं गृह्यते । प्रतिप्रकरणं "येऽन्नं ब्रह्मोपासते" इत्यादिरूपेण ब्रह्मशब्दश्रवणा-दित्यर्थः । यद्वा "अन्योन्तर आत्मा", "एतमन्नमयमात्मानमुपसङ्क्रा-मति", "एतमन्नमयमात्मानमुपसङ्क्रम्य" इति प्रतिप्रकरणं त्रिः श्रवणादात्मशब्दाभ्यासादित्यर्थः । यद्वा "अन्नं ब्रह्मेति व्यजानात्" इत्युत्तरानुवाके ब्रह्मशब्दसत्त्वात् द्विः श्रवणेन ब्रह्मशब्दाभ्यासादे-वेत्यर्थः ॥ उत्तरं कल्पद्वयं चन्द्रिकोक्तम् । श्रुतौ अन्नमयस्यादित्वेऽ-

---

ಬ್ರಹ್ಮವೇ ಆಗಿದೆ. ಆನಂದಮಯ ಮೊದಲಾದ ಶಬ್ದಗಳಿಂದ ವಾಚ್ಯವಾದದ್ದು ಬ್ರಹ್ಮವೇ ಎಂದರ್ಥ. ಇದೇ ರೀತಿಯಾಗಿ ಮುಂದೆಯೂ ಪ್ರತಿಯೊಂದು ಅಧಿಕರಣದಲ್ಲೂ ಅರ್ಥ ವನ್ನು ತಿಳಿಯಬೇಕು.

ಆನಂದಮಯಾದಿಶಬ್ದವಾಚ್ಯವಾದದ್ದು ಬ್ರಹ್ಮವೇ ಏಕೆ ? — ಎಂಬುದಕ್ಕೆ ಉತ್ತರ 'ಅಭ್ಯಾಸಾತ್' ಇಲ್ಲಿ 'ಅಭ್ಯಾಸ' ಶಬ್ದದಿಂದ ಅಭ್ಯಾಸಪದದ ಅರ್ಥದ ಒಂದು ಭಾಗವಾದ 'ಅಸಕೃತ್ ಉಕ್ತಿ' ಅಂದರೆ 'ಅನೇಕ ಬಾರಿ ಉಚ್ಚಾರಣೆ'ಯನ್ನು ಮಾತ್ರ ತೆಗೆದುಕೊಳ್ಳಲಾಗಿದೆ. ಪ್ರತಿಪ್ರಕರಣದಲ್ಲೂ "ಯೇಽನ್ನಂ ಬ್ರಹ್ಮೋಪಾಸತೇ" ಇತ್ಯಾದಿ ಯಾಗಿ ಬ್ರಹ್ಮಶಬ್ದದ ಶ್ರವಣವಿರುವುದರಿಂದ ಎಂದು ಅರ್ಥ.

### 'ಅಭ್ಯಾಸ'ಪದಕ್ಕೆ ವ್ಯಾಖ್ಯಾನಾಂತರ

ಅಥವಾ "ಅನ್ಯೋಽಂತರ ಆತ್ಮಾ", "ಏತಮನ್ನಮಯಮಾತ್ಮಾನಮುಪ-ಸಂಕ್ರಾಮತಿ", "ಏತಮನ್ನಮಯಮಾತ್ಮಾನಮುಪಸಂಕ್ರಮ್ಯ" ಎಂಬುದಾಗಿ ಪ್ರತಿ ಪ್ರಕರಣದಲ್ಲೂ ಮೂರು ಬಾರಿ ಕೇಳಿಬರುವುದರಿಂದ—ಆತ್ಮಶಬ್ದದ ಅಭ್ಯಾಸದಿಂದ ಎಂದು ಅರ್ಥ. ಅಥವಾ "ಅನ್ನಂ ಬ್ರಹ್ಮೇತಿ ವ್ಯಜಾನಾತ್" ಎಂದು ಮುಂದಿನ ಅನುವಾಕದಲ್ಲಿ ಬ್ರಹ್ಮಶಬ್ದವಿರುವುದರಿಂದ, ಎರಡು ಬಾರಿ (ಬ್ರಹ್ಮಶಬ್ದದ) ಶ್ರವಣ ವಿರುವುದರಿಂದ 'ಬ್ರಹ್ಮಶಬ್ದಾಭ್ಯಾಸದಿಂದ' ಎಂದೇ ಅರ್ಥ. (ಈ ಮೇಲಿನ ಮೂರು ಕಲ್ಪಗಳಲ್ಲಿ) ಮುಂದಿನ ಎರಡು ಕಲ್ಪಗಳು ತಾತ್ಪರ್ಯಚಂದ್ರಿಕೆಯಲ್ಲಿ ಉಕ್ತವಾಗಿವೆ.

ष्यानन्दमयस्येतरोपलक्षकत्वेनोक्तिः जिज्ञासाक्षेपकावयवत्वादिपूर्वपक्ष-हेतोः सत्त्वात् सर्वापेक्षितानन्दवाचित्वाच्च । आद्यकल्पे ब्रह्मशब्दादिति वाच्येऽभ्यासादित्युक्तिर्विज्ञानानन्दमययोः सोऽप्यस्तीति सूचनाय ॥

उक्तमाक्षिप्य समाधत्ते—

## ॥ ॐ विकारशब्दान्नेति चेन्न प्राचुर्यात् ॐ ॥

### १-१-१३

विकारार्थकमयट्शब्दादन्नमयादिर्न ब्रह्मेति चेन्न । प्राचुर्यात् प्राचुर्यार्थत्वादत्र मयट्शब्दजातस्येत्यर्थः । शब्दादिति समुदायाभि-

---

'ಅನ್ನಮಯಃ ಬ್ರಹ್ಮಶಬ್ದಾತ್' ಎಂದು ಸೂತ್ರರಚನೆ ಏಕಿಲ್ಲ ?

ತೈತ್ತಿರೀಯ ಶ್ರುತಿಯಲ್ಲಿ ಅನ್ನಮಯಶಬ್ದವೇ ಮೊದಲನೆಯದಾಗಿದ್ದರೂ ಸೂತ್ರದಲ್ಲಿ ಆನಂದಮಯಶಬ್ದವನ್ನೇ ಅನ್ನಮಯಾದಿಗಳ ಸಂಗ್ರಾಹಕವಾಗಿ ಹೇಳಿರುವುದಕ್ಕೆ ಕಾರಣ "ಬ್ರಹ್ಮಜಿಜ್ಞಾಸೆಯನ್ನು ಮಾಡತಕ್ಕದ್ದಲ್ಲ" ಎಂಬ ಪೂರ್ವಪಕ್ಷದ ಯುಕ್ತಿಗಳಾದ ಅವಯವತ್ವ ಮೊದಲಾದವು ಆನಂದಮಯನ ವಿಷಯದಲ್ಲಿ ಇರುವುದು ಮತ್ತು ಆನಂದಮಯಶಬ್ದವು ಸರ್ವರೂ ಅಪೇಕ್ಷಿಸುವ ಆನಂದದ ವಾಚಕವಾಗಿರುವುದು. (ಮೇಲೆ ಹೇಳಿದ ಮೂರು ಕಲ್ಪಗಳಲ್ಲಿ) ಮೊದಲನೆಯ ಕಲ್ಪದಲ್ಲಿ 'ಬ್ರಹ್ಮಶಬ್ದಾತ್' ಎಂದೇ ಸೂತ್ರವಿರಬೇಕಾಗಿತ್ತು. 'ಅಭ್ಯಾಸಾತ್' ಎಂದು ಹೇಳಿರುವುದು ವಿಜ್ಞಾನಮಯ ಮತ್ತು ಆನಂದಮಯದ ವಿಷಯದಲ್ಲಿ ಬ್ರಹ್ಮಶಬ್ದಾಭ್ಯಾಸವೂ ಇದೆ ಎಂದು ಸೂಚಿಸಲು.

ಈಗ ಹೇಳಿದ್ದನ್ನು ಆಕ್ಷೇಪಿಸಿ ಸಮಾಧಾನ ನೀಡುವ ಸೂತ್ರ—

## ಓಂ ವಿಕಾರಶಬ್ದಾನ್ನೇತಿ ಚೇನ್ನ ಪ್ರಾಚುರ್ಯಾತ್ ಓಂ

### (೧-೧-೧೩)

**ಸೂತ್ರಾರ್ಥ**

ವಿಕಾರವೆಂಬ ಅರ್ಥವಿರುವ 'ಮಯಟ್' ಪ್ರತ್ಯಯವಿರುವುದರಿಂದ ಅನ್ನಮಯ ಮೊದಲಾದವು ಬ್ರಹ್ಮವಲ್ಲವೆಂದರೆ—ಅದು ಸರಿಯಲ್ಲ. ಪ್ರಾಚುರ್ಯಾತ್—ಇಲ್ಲಿರುವ 'ಮಯಟ್' ಶಬ್ದಗಳ ಸಮೂಹವು 'ಪ್ರಾಚುರ್ಯ' ಎಂಬ ಅರ್ಥವನ್ನು ಪಡೆದಿರುವುದರಿಂದ ಎಂದು ಅರ್ಥ. (ಸೂತ್ರದಲ್ಲಿ) 'ಶಬ್ದಾತ್' ಎನ್ನುವುದು ಸಮುದಾಯದ ಅಭಿಪ್ರಾಯವುಳ್ಳದ್ದು. 'ವಿಕಾರ' ಮತ್ತು 'ಪ್ರಾಚುರ್ಯ'ಗಳು ಅನ್ನಮಯಾದಿಗಳನ್ನು ಬ್ರಹ್ಮನೆನ್ನಲು ಇರುವ ಇತರ ಬಾಧಕಗಳಿಗೆ ಮತ್ತು ಅವುಗಳ ಪರಿಹಾರಕ್ಕೆ

प्रायम् । विकारेति प्राचुर्यादिति च बाधकान्तरतत्समाध्योरुपलक्षणम् । समन्वेयशब्दगतत्वादस्य स्वशब्देनोक्तिः ॥

आनन्दमयमात्रस्य ब्रह्मत्वे मयटः प्राचुर्यार्थत्वे च हेत्वन्तरमाह—

॥ ॐ तद्धेतुव्यपदेशाच्च ॐ ॥ १-१-१४

आनन्दमयस्तत्त्विति वर्तते । मयट् प्राचुर्यार्थ इति च । तस्य विष्णोस्तत्र पूर्णानन्दत्वे "को ह्येवान्यात्" इति लोकचेष्टकत्वाख्यहेतुव्यपदेशादित्यर्थः । सौत्रं तदिति पदं तन्त्रम् । यद्यानन्दमयो न ब्रह्म, मयट् च न प्राचुर्यार्थस्तदा आकाशाख्यविष्णोः पूर्णानन्दत्वे हेतुं न ब्रूयादिति भावः ॥

---

ಉಪಲಕ್ಷಣವಾಗಿವೆ. ಸಮನ್ವಯಗೊಳಿಸುತ್ತಿರುವ ಅನ್ನಮಯಾದಿ ಶಬ್ದಗಳಲ್ಲೇ ಇರುವುದರಿಂದ ವಿಕಾರ ಮತ್ತು ಪ್ರಾಚುರ್ಯಗಳನ್ನು ಆಯಾ ಶಬ್ದದಿಂದಲೇ ಸೂತ್ರದಲ್ಲಿ ಹೇಳಲಾಗಿದೆ.

ಆನಂದಮಯನು ಬ್ರಹ್ಮನಾಗಿದ್ದಾನೆ ಎಂಬ ವಿಷಯದಲ್ಲೂ ಮತ್ತು 'ಮಯಟ್' ಶಬ್ದವು ಪ್ರಾಚುರ್ಯಾರ್ಥಕವಾದುದು ಎಂಬುದರಲ್ಲಿಯೂ ಇನ್ನೊಂದು ಯುಕ್ತಿಯನ್ನು ಹೇಳುವ ಸೂತ್ರ—

ಓಂ ತದ್ಧೇತುವ್ಯಪದೇಶಾಚ್ಚ ಓಂ (೧-೧-೧೪)

**ಸೂತ್ರಾರ್ಥ**

'ಆನಂದಮಯಃ', 'ತತ್ ತು' ಎಂಬ ಪದಗಳು ಹಿಂದಿನ ಸೂತ್ರಗಳಿಂದ ಅನುವೃತ್ತಿಗೊಳ್ಳುತ್ತವೆ. 'ಮಯಟ್ ಪ್ರಾಚುರ್ಯಾರ್ಥಃ' ಎಂಬ ಪದಗಳನ್ನೂ ಇಲ್ಲಿ ಅಧ್ಯಾಹಾರ ಮಾಡಿಕೊಳ್ಳಬೇಕು. ತಸ್ಯ–ವಿಷ್ಣುವಿನ, ತತ್ರ–ಪೂರ್ಣಾನಂದತ್ವ ವಿಷಯದಲ್ಲಿ 'ಕೋ ಹ್ಯೇವಾನ್ಯಾತ್" ಎಂಬುದಾಗಿ ಲೋಕಚೇಷ್ಟಕತ್ವವೆಂಬ ಹೇತುವನ್ನು ಹೇಳಿರುವುದರಿಂದ ಎಂದು ಅರ್ಥ. ಸೂತ್ರದಲ್ಲಿರುವ 'ತತ್' ಎಂಬ ಪದವನ್ನು ಆವೃತ್ತಿಮಾಡಿಕೊಳ್ಳಬೇಕು. ಆನಂದಮಯನು ಬ್ರಹ್ಮನಲ್ಲದಿದ್ದರೆ, ಮಯಟ್ ಪ್ರತ್ಯಯವು ಪ್ರಾಚುರ್ಯ ಎಂಬ ಅರ್ಥವುಳ್ಳದ್ದಲ್ಲದಿದ್ದರೆ ಆಕಾಶನಾಮಕ ವಿಷ್ಣುವು ಪೂರ್ಣಾನಂದನು ಎಂಬ ವಿಷಯದಲ್ಲಿ (ಶ್ರುತಿಯು) ಹೇತುವನ್ನು ಹೇಳಬಾರದಿತ್ತೆಂದು ಭಾವ.

इतश्चानन्दमयादयः पञ्चापि ब्रह्मेत्याह—

**॥ ॐ मान्त्रवर्णिकमेव च गीयते ॐ ॥ १-१-१५**

**आनन्दमयादिर्ब्रह्मेति वर्तते । चो यत इत्यर्थे । किञ्चेति समुच्चये वा । मन्त्रवर्णः "सत्यं ज्ञानमनन्तं" इति वेदः तेन प्रोक्तं मान्त्रवर्णिकम् । मन्त्रवर्णेन लक्षणवत्तयोक्तं परं ब्रह्मैवान्नमयादिशब्दपञ्चकेन गीयते । यतोऽतश्च पञ्चापि ब्रह्मैवेत्यर्थः । सत्यज्ञानानन्तपदानामन्नमयादिशब्दानां चार्थानुसन्धाने एकार्थत्वप्रतीतेरिति भावः। एतेनाभ्यासादित्युक्तब्रह्मशब्दोऽमुख्य इति निरस्तम् । मान्त्रवर्णिकपरब्रह्मण एवात्र गानादिति ॥**

---

ಈ ಮುಂದೆ ಹೇಳುವ ಕಾರಣದಿಂದಲೂ ಆನಂದಮಯ ಮೊದಲಾದ ಐದೂ ಬ್ರಹ್ಮವೇ ಎಂದು ಹೇಳುವ ಸೂತ್ರ—

ಓಂ ಮಾಂತ್ರವರ್ಣಿಕಮೇವ ಚ ಗೀಯತೇ ಓಂ
(೧-೧-೧೫)

**ಸೂತ್ರಾರ್ಥ**

'ಆನಂದಮಯಾದಿಃ ಬ್ರಹ್ಮ' ಎಂಬ ಪದಗಳನ್ನು ಇಲ್ಲಿ ಸೇರಿಸಿಕೊಳ್ಳಬೇಕು. 'ಚ' ಎಂಬ ಪದವು 'ಯತಃ' ಎಂಬ ಅರ್ಥದಲ್ಲಿ ಉಪಯೋಗಿಸಲ್ಪಟ್ಟಿದೆ. ಅಥವಾ 'ಕಿಂಚ' ಎಂಬುದಾಗಿ ಸಮುಚ್ಚಯಾರ್ಥದಲ್ಲಿದೆ. ಮಂತ್ರವರ್ಣವೆಂದರೆ 'ಸತ್ಯಂ ಜ್ಞಾನಮನಂತಂ' ಎಂಬ ವೇದ. ಆ ಮಂತ್ರವರ್ಣದಿಂದ ಹೇಳಲ್ಪಟ್ಟದ್ದು ಮಾಂತ್ರವರ್ಣಿಕ. ಮಂತ್ರವರ್ಣದಿಂದ ಸತ್ಯಜ್ಞಾನಾದಿ ಲಕ್ಷಣವಿಶಿಷ್ಟವಾಗಿ ಹೇಳಲ್ಪಟ್ಟಿರುವ ಪರಬ್ರಹ್ಮನೇ ಅನ್ನಮಯ ಮೊದಲಾದ ಐದು ಶಬ್ದಗಳಿಂದಲೂ ವರ್ಣಿಸಲ್ಪಡುತ್ತಿದ್ದಾನೆ ಎಂಬ ಕಾರಣದಿಂದಲೂ ಅನ್ನಮಯ ಮೊದಲಾದ ಐದೂ ಬ್ರಹ್ಮನೇ ಎಂದು ಅರ್ಥ. ಸತ್ಯ, ಜ್ಞಾನ ಮತ್ತು ಅನಂತ ಎಂಬ ಪದಗಳಿಗೂ ಅನ್ನಮಯಾದಿ ಶಬ್ದಗಳಿಗೂ ಅರ್ಥವನ್ನು ವಿಮರ್ಶಿಸಲಾಗಿ ಒಂದೇ ಅರ್ಥವಿರುವುದು ಕಾಣಬರುವುದು–ಎಂದು ಭಾವ.

**'ಬ್ರಹ್ಮ'ಶಬ್ದವು ಕೋಶಪರವಾದುದು, ಪರಬ್ರಹ್ಮಪರವಲ್ಲ ಎಂಬ ವಾದವೂ ಈ ಸೂತ್ರದಿಂದ ನಿರಾಕೃತವಾಗಿದೆ**

ಹೀಗೆ ಮಂತ್ರವರ್ಣಪ್ರತಿಪಾದ್ಯನಾದ ಪರಬ್ರಹ್ಮನನ್ನೇ ಅನ್ನಮಯಾದಿ ಪ್ರಕರಣದಲ್ಲಿ ವರ್ಣಿಸಿರುವುದರಿಂದ ಆನಂದಮಯನು ಬ್ರಹ್ಮನೆಂದು ಸಾಧಿಸಲು 'ಅಭ್ಯಾಸಾತ್' ಎಂಬ ಸೂತ್ರಾಂಶದಿಂದ ಹೇಳಲ್ಪಟ್ಟ ಬ್ರಹ್ಮಶಬ್ದವು ಮುಖ್ಯಾರ್ಥಕವಲ್ಲ, ಕೋಶರೂಪವಾದ ಅಮುಖ್ಯಾರ್ಥಪರವಾದುದು ಎಂಬ ವಾದವು ನಿರಾಕರಿಸಲ್ಪಡುವುದು.

विरिञ्चादिरेव किं नेत्यत आह—

॥ ॐ नेतरोऽनुपपत्तेः ॐ ॥ १-१-१६

आनन्दमयादिरिति वर्तते। इतरस्तदितरो विष्णिवतरश्चतुर्मुखादिर्न भवति। कुतः? "ब्रह्मविदाप्नोति परम्" इत्युक्तमुक्तिहेतुज्ञानविषयत्वस्यानुपपत्तेः। तस्यैवान्नमयादित्वेनोक्तत्वादित्यर्थः। "विभाषा गुणेऽस्त्रियाम्" इत्यत्र विभाषा गुण इति योगविभागोक्तेरनुपपत्तेरिति साधु। एवमग्रेऽपि ॥

---

ಚತುರ್ಮುಖಬ್ರಹ್ಮನೇ ಮೊದಲಾದವರು ಆನಂದಮಯಾದಿ ಶಬ್ದವಾಚ್ಯರು ಏಕಾಗಬಾರದು ಎಂಬ ಪ್ರಶ್ನೆಗೆ ಉತ್ತರ—

ಓಂ ನೇತರೋಽನುಪಪತ್ತೇಃ ಓಂ (೧-೧-೧೬)

**ಸೂತ್ರಾರ್ಥ**

'ಆನಂದಮಯಾದಿಃ' ಎಂಬ ಪದವನ್ನು ಇಲ್ಲಿ ಅಧ್ಯಾಹಾರಮಾಡಿಕೊಳ್ಳಬೇಕು. ಇತರಃ-ವಿಷ್ಣುವ್ಯತಿರಿಕ್ತರಾದ ಚತುರ್ಮುಖಾದಿಗಳು, ನ-(ಆನಂದಮಯಾದಿ ಶಬ್ದವಾಚ್ಯರು) ಅಲ್ಲ. ಏಕೆಂದರೆ, "ಬ್ರಹ್ಮವಿದಾಪ್ನೋತಿ ಪರಮ್" ಎಂಬಲ್ಲಿ ಹೇಳಲ್ಪಟ್ಟಿರುವವನೇ ಅನ್ನಮಯ ಮೊದಲಾದ ಶಬ್ದಗಳಿಂದ ಹೇಳಲ್ಪಟ್ಟಿದ್ದಾನೆ. "ಬ್ರಹ್ಮವಿದಾಪ್ನೋತಿ ಪರಮ್" ಎಂಬ ವಾಕ್ಯದಲ್ಲಿ ಹೇಳಿರುವ "ಮೋಕ್ಷಕಾರಣವಾದ ಜ್ಞಾನಕ್ಕೆ ವಿಷಯವಾಗುವಿಕೆ"ಯು ಚತುರ್ಮುಖಾದಿಗಳಿಗೆ ಯುಕ್ತವಾಗಲಾರದು ಎಂದು ಅರ್ಥ.

**'ಅನುಪಪತ್ತೇಃ' ಎಂಬ ಪ್ರಯೋಗ ಅಸಾಧುವಲ್ಲ**

'ವಿಭಾಷಾ ಗುಣೇಽಸ್ತ್ರಿಯಾಮ್' (ಪಾ. ಸೂ. ೨-೩-೨೫) ಎಂಬ ಸೂತ್ರದಲ್ಲಿ 'ವಿಭಾಷಾ ಗುಣೇ' ಎಂದು ಸೂತ್ರವನ್ನು ವಿಭಾಗಿಸುವುದರಿಂದ 'ಅನುಪಪತ್ತೇಃ' ಎಂಬ ಪ್ರಯೋಗವು ಸಾಧುವಾಗಿದೆ.[1] ಇದರಂತೆ ಮುಂದೆಯೂ ಸಮಾಧಾನವನ್ನು ಹೇಳಬೇಕು.

---

1. ಸ್ತ್ರೀಲಿಂಗದಲ್ಲಿ ಇಲ್ಲದಿರುವ ಗುಣ ಮತ್ತು ಹೇತುವಾಚಕವಾಗಿರುವ ಶಬ್ದಕ್ಕೆ ಪಂಚಮೀ ವಿಭಕ್ತಿ ಬರುವುದೆಂದು ಸೂತ್ರಾರ್ಥ. 'ಅನುಪಪತ್ತಿ' ಎಂಬ ಶಬ್ದವು ಸ್ತ್ರೀಲಿಂಗದಲ್ಲಿರುವುದರಿಂದ ಪಂಚಮೀವಿಭಕ್ತಿ ಬರಲಾರದೆಂದು ಆಕ್ಷೇಪ. 'ವಿಭಾಷಾ ಗುಣೇ' ಮತ್ತು 'ಅಸ್ತ್ರಿಯಾಮ್' ಎಂದು ಸೂತ್ರವನ್ನು ಎರಡಾಗಿ ವಿಭಾಗಿಸಬೇಕು. ಮೊದಲನೆಯ ಸೂತ್ರದ ಪ್ರಕಾರ ಗುಣ ಮತ್ತು ಹೇತುವಾಚಕವಾಗಿರುವ ಶಬ್ದಕ್ಕೆ ಪಂಚಮೀವಿಭಕ್ತಿ ಬರುತ್ತದೆ. ಆದ್ದರಿಂದ ಅನುಪಪತ್ತಿ ಶಬ್ದಕ್ಕೆ ಪಂಚಮೀವಿಭಕ್ತಿ ಬರಲು ಅಡ್ಡಿಯಿಲ್ಲವೆಂದು ಸಮಾಧಾನ.

इतश्चैवमित्याह—

॥ ॐ भेदव्यपदेशाच्च ॐ ॥ १-१-१७

आनन्दमयो नेतर इति वर्तते। आनन्दमयाद्भेदव्यपदेशाच्चानन्दमयो नेतर इत्यर्थः । "स एको ब्रह्मण आनन्दः" इत्यादिना विरिञ्चादेः परिमितानन्दत्वमुक्त्वा "यतो वाच" इत्यानन्दमयस्य पूर्णानन्दत्वोक्तेरिति भावः । सुधायां तु आनन्दमयादेर्विरिञ्चादित्वं युज्यते। मुक्तिहेतुज्ञानत्वादिब्रह्मधर्माणां ब्रह्माभेदाज्जीवानां कथञ्चिदुपपत्तेरित्याशङ्कायां "भेदव्यपदेशाच्च" इति सूत्रम्। तत्र चशब्दो

---

ಈ ಮುಂದಿನ ಕಾರಣದಿಂದಲೂ ಚತುರ್ಮುಖಾದಿಗಳು ಆನಂದಮಯಾದಿಗಳಲ್ಲ ಎಂದು ಹೇಳಲು ಸೂತ್ರ—

ಓಂ ಭೇದವ್ಯಪದೇಶಾಚ್ಚ ಓಂ (೧-೧-೧೭)

**ಸೂತ್ರಾರ್ಥ**

"ಆನಂದಮಯಃ ನ ಇತರಃ" ಎಂಬ ಪದಗಳನ್ನು ಇಲ್ಲಿ ಸೇರಿಸಿಕೊಳ್ಳಬೇಕು. ಆನಂದಮಯನಿಂದ ಭೇದವನ್ನು ಹೇಳಿರುವುದರಿಂದ ಆನಂದಮಯನು ಇತರರಲ್ಲ ಎಂದು ಸೂತ್ರಾರ್ಥ. "ಸ ಏಕೋ ಬ್ರಹ್ಮಣ ಆನಂದಃ" ಮೊದಲಾದ ವಾಕ್ಯಗಳಿಂದ ವಿರಿಂಚ ಮೊದಲಾದವರಿಗೆ ಪರಿಮಿತವಾದ ಆನಂದವನ್ನು ಹೇಳಿ, "ಯತೋ ವಾಚೋ" ಎಂಬ ವಾಕ್ಯದಿಂದ ಆನಂದಮಯನಿಗೆ ಪೂರ್ಣಾನಂದತ್ವವನ್ನು ಹೇಳಿರುವುದರಿಂದ ಎಂದು ಭಾವ.

**ಸುಧಾರೀತ್ಯಾ ವ್ಯಾಖ್ಯಾನಾಂತರ**

ಸುಧಾದಲ್ಲಾದರೋ "ಆನಂದಮಯಾದಿಗಳು ವಿರಿಂಚ ಮೊದಲಾದವರು ಆಗಬಹುದು. 'ಮುಕ್ತಿಹೇತುಜ್ಞಾನವಿಷಯತ್ವ' ಮೊದಲಾದ ಬ್ರಹ್ಮಧರ್ಮಗಳು ಬ್ರಹ್ಮನಿಂದ ಅಭಿನ್ನವಾಗಿರುವುದರಿಂದ ಬ್ರಹ್ಮಾಭಿನ್ನನಾದ ಜೀವನಿಗೂ ಕಥಂಚಿತ್ ಹೊಂದಬಹುದು" ಎಂದು ಆಶಂಕಿಸಿ ಅದಕ್ಕೆ ಉತ್ತರವಾಗಿ 'ಭೇದವ್ಯಪದೇಶಾಚ್ಚ' ಎಂದು ಸೂತ್ರ ಬಂದಿದೆ ಎಂದು ಹೇಳಿದೆ. ಅಲ್ಲಿ 'ಚ' ಶಬ್ದವು "ಚತುರ್ಮುಖಾದಿ ಜೀವರು ಆನಂದಮಯಾದಿಗಳಲ್ಲ ಎಂದಷ್ಟೇ ಅಲ್ಲ. ಅವರು ಬ್ರಹ್ಮಾಭಿನ್ನರೂ ಅಲ್ಲ. 'ಸ ಯಶ್ಚಾಯಂ ಪುರುಷೇ ಯಶ್ಚಾಸಾವಾದಿತ್ಯೇ' ಎಂಬಲ್ಲಿ (ಜೀವನು ಅಧಿಷ್ಠಾನವೆಂದೂ) ಬ್ರಹ್ಮನು ಅಧಿಷ್ಠಾತೃವೆಂದು ಜೀವರಿಗೆ ಬ್ರಹ್ಮಭೇದವನ್ನು ಹೇಳಿರುವುದರಿಂದ" ಎಂದು ವ್ಯಾಖ್ಯಾನಿಸಲ್ಪಟ್ಟಿದೆ.

न केवलमितर आनन्दमयादिर्नेति किन्तु ब्रह्माभिन्नश्च नेत्यर्थे "स यश्चायं पुरुषे। यश्चासावादित्ये" इत्यादावधिष्ठातृत्वादिना ब्रह्मभेदस्य व्यपदेशादिति व्याख्यातम् ॥

नन्वस्त्वानन्दमयादिर्ब्रह्म। तद्भेदो विरिञ्चादेर्न युक्तः। शरीरत्वात्मत्वाद्यनुमानविरोधादित्यत आह—

## ॥ ॐ कामाच्च नानुमानापेक्षा ॐ ॥ १-१-१८

चोऽवधारणे। अदृष्टेऽर्थे शुष्कानुमानापेक्षा न कार्या। कामात् कामचारित्वादेवेत्यर्थः। प्रत्यक्षस्याद्वैतेऽप्रसरात् श्रुतेश्च "तद्गुणसारत्वात्" इत्यत्र निरस्तत्वादनुमानमेवाशङ्क्य प्रत्युक्तम्।

---

ಆನಂದಮಯಾದಿಗಳು ಪರಬ್ರಹ್ಮನೇ ಆಗಿರಬಹುದು. ಆದರೆ ವಿರಿಂಚಾದಿಗಳು ಬ್ರಹ್ಮಭಿನ್ನರು ಎಂದು ಹೇಳುವುದು ಯುಕ್ತವಲ್ಲ ಏಕೆಂದರೆ, ಜೀವಬ್ರಹ್ಮಭೇದವನ್ನು ಒಪ್ಪಿದಲ್ಲಿ, "ಎಲ್ಲ ಶರೀರಗಳೂ ನನ್ನ ಭೋಗಕ್ಕೆ ಸಾಧನಗಳಾಗಿವೆ, ಶರೀರವಾಗಿರುವುದರಿಂದ, ನನ್ನ ಶರೀರದಂತೆ", "ಎಲ್ಲ ಆತ್ಮರೂ ಪರಮಾತ್ಮನಿಂದ ಅಭಿನ್ನರಾಗಿದ್ದಾರೆ, ಆತ್ಮರಾಗಿರುವುದರಿಂದ, ಪರಮಾತ್ಮನಂತೆ" ಇತ್ಯಾದಿ ಅನುಮಾನಗಳಿಂದ ವಿರೋಧ ಬರುವುದು ಎಂಬ ಆಕ್ಷೇಪಕ್ಕೆ ಸಮಾಧಾನವನ್ನು ನೀಡುವ ಸೂತ್ರ—

## ಓಂ ಕಾಮಾಚ್ಚ ನಾನುಮಾನಾಪೇಕ್ಷಾ ಓಂ (೧--೧--೧೮)

**ಸೂತ್ರಾರ್ಥ**

ಇಲ್ಲಿ 'ಚ' ಶಬ್ದವು ಅವಧಾರಣಾರ್ಥಕವಾದುದು ಪ್ರತ್ಯಕ್ಷವಲ್ಲದ ವಿಷಯದಲ್ಲಿ ಶುಷ್ಕವಾದ ಅನುಮಾನಗಳನ್ನು ಪ್ರಯೋಗಿಸಬಾರದು ಕಾಮಾತ್–ಇಂಥ ಅನುಮಾನಗಳು ಕಾಮಚಾರಿಯಾಗಿರುವುದೇ ಇದಕ್ಕೆ ಕಾರಣ ಎಂದು ಅರ್ಥ. ಅಭೇದ ವಿಷಯದಲ್ಲಿ ಪ್ರತ್ಯಕ್ಷಕ್ಕೆ ಅವಕಾಶವೇ ಇಲ್ಲದ್ದರಿಂದ, 'ತದ್ಗುಣಸಾರತ್ವಾತ್' ಎಂಬ ಸೂತ್ರದಲ್ಲಿ ಅಭೇದವಿಷಯದಲ್ಲಿ ಶ್ರುತಿಯನ್ನು ನಿರಾಕರಿಸುವುದರಿಂದ ಅನುಮಾನವೇ ಪ್ರಮಾಣವೆಂದು ಹೇಳಬೇಕಾಗುವುದು ಎಂದು ಆಶಂಕಿಸಿ ಅದನ್ನು ಈ ಸೂತ್ರದಲ್ಲಿ ನಿರಾಕರಿಸಲಾಗಿದೆ.

ಜೀವಬ್ರಹ್ಮರಿಗೆ ಹೇಳುವ ಭೇದವು ಅಸತ್ಯವಾದುದು. ಆದ್ದರಿಂದ ಯಾವ ದೋಷವೂ ಇಲ್ಲ ಎಂಬ ಪೂರ್ವಪಕ್ಷಕ್ಕೆ ಉತ್ತರ—

ननूक्तभेदोऽसत्य एवातो न दोष इत्यत आह—

॥ ॐ अस्मिन्नस्य च तद्योगं शास्ति ॐ ॥ १-१-१९

चशब्दो युक्तिसमुच्चये । श्रुतिर्मुक्तावपीति शेषः । अस्मिन् प्रकरणे । अस्येतरस्य जीवस्य । तेनानन्दमयादिरूपेण ब्रह्मणा सह योगं सम्बन्धं मुक्तावपि "सोऽश्नुत" इति श्रुतिः शास्ति यतोऽत ऐक्यायोगादानन्दमयादिर्नेतर इत्यर्थः । न केवलं भेदव्यपदेशात् किन्तु मुक्तावपि भेदाक्षेपकतद्योगशासनाच्चेति चार्थः । तदानीन्तनो भेदो नासत्य इति भावः । यद्वा इतश्चानन्दमयादिर्ब्रह्मेत्याह ॥ अस्मिन्निति ॥ अस्मिन् प्रकरणे । अस्य "स य एवं वित्" इत्युक्तस्य ब्रह्मविदस्तद्योगं तैरन्नमयादिभिर्योगं प्राप्तिं फलत्वेन "एतमन्नमयमात्मानम्" इति श्रुतिः शास्ति यतोऽतश्चानन्दमयादिर्ब्रह्मैवेत्यर्थः । न हि ब्रह्मज्ञानादन्यप्राप्तिर्युक्तेति भावः ॥ ६ ॥

---

ಓಂ ಅಸ್ಮಿನ್ನಸ್ಯ ಚ ತದ್ಯೋಗಂ ಶಾಸ್ತಿ ಓಂ (೧-೧-೧೯)

**ಸೂತ್ರಾರ್ಥ**

'ಚ' ಶಬ್ದವು ಯುಕ್ತಿಸಮುಚ್ಚಯವನ್ನು ಹೇಳುತ್ತದೆ. 'ಶ್ರುತಿಃ ಮುಕ್ತಾವಪಿ' ಎಂಬ ಉಳಿದ ಪದಗಳನ್ನು ಸೇರಿಸಿಕೊಳ್ಳಬೇಕು. ಅಸ್ಮಿನ್–ಈ ಪ್ರಕರಣದಲ್ಲಿ, ಅಸ್ಯ–ಬ್ರಹ್ಮಭಿನ್ನನಾದ ಜೀವನಿಗೆ, ತೇನ–ಆನಂದಮಯಾದಿರೂಪನಾದ ಬ್ರಹ್ಮನೊಂದಿಗೆ, ಯೋಗಂ–ಸಂಬಂಧವನ್ನು, ಮುಕ್ತೌ ಅಪಿ–ಮುಕ್ತಿಯಲ್ಲೂ ( ಇರತಕ್ಕದ್ದೆಂದು ) 'ಸೋಽಶ್ನುತೇ' ಎಂಬ ಶ್ರುತಿಯು, ಶಾಸ್ತಿ–ಹೇಳುತ್ತಿದೆ. ಆದ್ದರಿಂದ ಜೀವಬ್ರಹ್ಮರಿಗೆ ಐಕ್ಯ ಯುಕ್ತವಲ್ಲದ ಕಾರಣ ಆನಂದಮಯಾದಿಗಳು ಇತರರಲ್ಲ ಎಂದು ಅರ್ಥ.

" ಭೇದವ್ಯಪದೇಶದಿಂದ ಮಾತ್ರವೇ ಅಲ್ಲ, ಮುಕ್ತಿಯಲ್ಲೂ ಭೇದವನ್ನು ಸಾಧಿಸುವ ಬ್ರಹ್ಮನ ಸಂಬಂಧವನ್ನು ಶ್ರುತಿಯು ಹೇಳುವುದರಿಂದಲೂ ಕೂಡ " ಎಂದು 'ಚ'ಶಬ್ದದ ಅರ್ಥ. ಮುಕ್ತಿಕಾಲದ ಭೇದ ಅಸತ್ಯವಲ್ಲವೆಂದು ಭಾವ.

**ವ್ಯಾಖ್ಯಾನಾಂತರ**

ಅಥವಾ, ಈ ಮುಂದೆ ಹೇಳುವ ಕಾರಣದಿಂದಲೂ ಆನಂದಮಯಾದಿಗಳು ಪರಬ್ರಹ್ಮನೇ ಎಂದು 'ಅಸ್ಮಿನ್' ಇತ್ಯಾದಿ ಸೂತ್ರವು ಹೇಳುತ್ತದೆ. ಅಸ್ಮಿನ್–ಈ ಪ್ರಕರಣ

अन्तःस्थत्वाधिकरणम्—७

## ॥ ॐ अन्तस्तद्धर्मोपदेशात् ॐ ॥ १-१-२०

**अत्र नयेऽन्तस्थत्वलिङ्गद्वाराऽधिदैवगतसर्वनामसमन्वयः क्रियते। तत्त्विति वर्तते। श्रुतमिति शेषः। "अन्तःप्रविष्टं कर्तारम्" "अन्तश्चन्द्रमसि" इति तैत्तिरीयेऽन्तः श्रुतं ब्रह्मैव न त्विन्द्रादिः। तस्य ब्रह्मणो धर्माणां समुद्रस्थत्वब्रह्माण्डवीर्यत्वादिरूपाणां तत्रान्तः श्रुते**

---

ದಲ್ಲಿ, ಅಸ್ಯ–'ಸ ಯ ಏವಂವಿದ್' ಎಂದು ಹೇಳಲ್ಪಟ್ಟ ಬ್ರಹ್ಮಜ್ಞಾನಿಗೆ, ತದ್ಯೋಗಂ–ತೈಃ–ಅನ್ನಮಯಾದಿಗಳಿಂದ, ಯೋಗಂ–ಪ್ರಾಪ್ತಿಯನ್ನು ಫಲವೆಂಬುದಾಗಿ 'ಏತಮನ್ನಮಯಮಾತ್ಮಾನಂ' ಎಂಬ ಶ್ರುತಿಯು ಹೇಳುತ್ತದೆ. ಆದ್ದರಿಂದಲೂ ಆನಂದಮಯಾದಿಗಳು ಬ್ರಹ್ಮನೇ ಎಂದು ಅರ್ಥ. ಬ್ರಹ್ಮಜ್ಞಾನದಿಂದ ಬ್ರಹ್ಮಭಿನ್ನನನ್ನು ಹೊಂದುವುದು ಯುಕ್ತವಲ್ಲವಷ್ಟೇ ಎಂದು ಭಾವ.

ಅಂತಃಸ್ಥತ್ವಾಧಿಕರಣ—೭

## ಓಂ ಅಂತಸ್ತದ್ಧರ್ಮೋಪದೇಶಾತ್ ಓಂ (೧–೧–೨೦)

**ಅಧಿಕರಣದ ಉದ್ದೇಶ ಮತ್ತು ಸೂತ್ರಾರ್ಥ**

ಈ ಅಧಿಕರಣದಲ್ಲಿ ಅಂತಃಸ್ಥತ್ವಲಿಂಗದ ಮೂಲಕವಾಗಿ ದೇವತಾವಾಚಕಗಳಾದ ಎಲ್ಲ ನಾಮಾತ್ಮಕಶಬ್ದಗಳ ಸಮನ್ವಯವು ಮಾಡಲ್ಪಡುತ್ತದೆ. 'ತತ್ ತು' ಎಂಬ ಪದಗಳನ್ನು ಅನುವೃತ್ತಿಮಾಡಿಕೊಳ್ಳಬೇಕು. 'ಶ್ರುತಂ ಎಂಬ ಪದವನ್ನು ಸೇರಿಸಿಕೊಳ್ಳಬೇಕು. 'ಅಂತಃ ಪ್ರವಿಷ್ಟಂ ಕರ್ತಾರಂ', 'ಅಂತಶ್ಚಂದ್ರಮಸಿ' ಇತ್ಯಾದಿ ತೈತ್ತಿರೀಯ ಶ್ರುತಿಯಲ್ಲಿ ಅಂತಃ–ಅಂತಃಸ್ಥನೆಂದು ಶ್ರುತನಾಗಿರುವವನು ಬ್ರಹ್ಮನೇ, ಇಂದ್ರಾದಿಗಳಲ್ಲ. ಏಕೆಂದರೆ, ತಸ್ಯ-ಆ ಬ್ರಹ್ಮನ ಧರ್ಮಗಳಾದ ಸಮುದ್ರಸ್ಥತ್ವ, ಬ್ರಹ್ಮಾಂಡವೀರ್ಯತ್ವ ಮೊದಲಾದವುಗಳು, ತತ್ರ–ಆ ಅಂತಃಸ್ಥನಲ್ಲಿ 'ಅಂತಃ ಸಮುದ್ರೇ', 'ಯಸ್ಯಾಂಡಕೋಶಂ' ಮೊದಲಾದ ಶ್ರುತಿವಾಕ್ಯಗಳಿಂದ ಹೇಳಲ್ಪಟ್ಟಿವೆ ಎಂದು ಅರ್ಥ.

**'ತದ್ಧರ್ಮ' ಎಂಬಲ್ಲಿ ತತ್ ಪದವು ಆವಶ್ಯಕ**

'ಧರ್ಮೋಪದೇಶಾತ್' ಎಂದಿಷ್ಟೇ ಹೇಳಿದ್ದರೂ ಸಾಕಾಗುತ್ತಿತ್ತು. ಆದರೂ 'ತತ್' ಎಂಬ ಪದವನ್ನು ಸೇರಿಸಿರುವುದು, ಆ ಧರ್ಮಗಳು ಬ್ರಹ್ಮನನ್ನು ಬಿಟ್ಟು ಬೇರೆಲ್ಲೂ ಇಲ್ಲ ಮತ್ತು ಬ್ರಹ್ಮನಲ್ಲಿ ಇವೆ ಎಂಬುದನ್ನು ತೋರಿಸಲು. ಈ ಸೂತ್ರದಲ್ಲಿ

"अन्तः समुद्रे", "यस्याण्डकोशम्" इत्यादिनोपदेशादित्यर्थः। धर्मोपदेशादित्येव पूर्तौ तदित्युक्तिस्तेषां ब्रह्माव्यभिचारित्वपक्षधर्मत्वयोः प्रदर्शनार्था। अन्तस्तदिति तन्त्रम्। एवमग्रेऽपि।

नन्वत्रेन्द्रादिश्रुतीनामपि सत्त्वात् श्रुतिलिङ्गानुरोधेनेन्द्रादेरन्तस्थेन ब्रह्मणा अभेदादिन्द्रादिरप्यन्तस्थोऽस्त्वित्यत आह—

॥ ॐ भेदव्यपदेशाच्चान्यः ॐ ॥ १-१-२१

चः समुच्चये। तदिति वर्तते। इन्द्रादिभ्य इति योग्यतया लभ्यते। न केवलं तच्छब्दार्थो विष्णुरन्तः श्रुतः किन्त्विन्द्रादिभ्योऽन्यश्च। कुतः। "इन्द्रस्यात्मा" "वायोरात्मानम्" इत्यादौ इन्द्राद्यन्तर्यामित्वाद्युक्त्या भेदव्यपदेशादित्यर्थः। श्रुतयस्तु ब्रह्मणि नेया

---

'ಅಂತಃ' ಮತ್ತು 'ತತ್' ಈ ಪದಗಳನ್ನು ಆವೃತ್ತಿಮಾಡಿಕೊಳ್ಳಲಾಗಿದೆ. ಇದೇ ರೀತಿ ಮುಂದೆಯೂ ವ್ಯಾಖ್ಯಾನವನ್ನು ತಿಳಿಯಬೇಕು.

ಈ ಅಧಿಕರಣದ ವಿಷಯವಾಕ್ಯದಲ್ಲಿ ಇಂದ್ರ ಮೊದಲಾದ ಶಬ್ದಗಳೂ ಇರುವುದರಿಂದ, ಇಂದ್ರಾದಿ ಶ್ರುತಿ ಮತ್ತು ಸಮುದ್ರಸ್ಥತ್ವಾದಿಲಿಂಗ ಇವೆರಡನ್ನು ಅನುಸರಿಸಲು ಇಂದ್ರಾದಿಗಳಿಗೆ ಅಂತಃಸ್ಥನಾದ ಬ್ರಹ್ಮನಿಂದ ಅಭೇದವನ್ನು ಹೇಳಬೇಕಾಗುವುದು. ಆದ್ದರಿಂದ ಇಂದ್ರಾದಿಗಳೂ ಅಂತಃಸ್ಥರಾಗಬಹುದು ಎಂಬ ಪೂರ್ವಪಕ್ಷಕ್ಕೆ ಉತ್ತರ—

## ಓಂ ಭೇದವ್ಯಪದೇಶಾಚ್ಚಾನ್ಯಃ ಓಂ (೧--೧--೨೧)

**ಸೂತ್ರಾರ್ಥ**

ಇಲ್ಲಿ 'ಚ' ಶಬ್ದವು ಸಮುಚ್ಚಯಾರ್ಥಕವಾಗಿದೆ. 'ತತ್' ಎಂಬ ಪದವನ್ನು ಅನುವೃತ್ತಿಮಾಡಿಕೊಳ್ಳಬೇಕು. ಅನ್ಯಪದದೊಂದಿಗೆ ಅನ್ವಯಯೋಗ್ಯತೆ ಇರುವುದರಿಂದ 'ಇಂದ್ರಾದಿಭ್ಯಃ' ಎಂಬ ಪದವೂ ಇಲ್ಲಿ ಲಭ್ಯವಾಗುತ್ತದೆ. ತಚ್ಛಬ್ದಾರ್ಥನಾದ ವಿಷ್ಣುವು ಅಂತಃಸ್ಥನೆಂದು ಶ್ರುತನಾಗಿದ್ದಾನೆ ಎಂಬುದಷ್ಟೇ ಅಲ್ಲ, ಅವನು ಇಂದ್ರಾದಿಭ್ಯಃ ಅನ್ಯಶ್ಚ–ಇಂದ್ರಾದಿಗಳಿಂದ ಭಿನ್ನನೂ ಆಗಿದ್ದಾನೆ. ಏಕೆಂದರೆ, 'ಇಂದ್ರಸ್ಯಾತ್ಮಾ', 'ವಾಯೋರಾತ್ಮಾನಂ' ಮೊದಲಾದ ವಾಕ್ಯಗಳಲ್ಲಿ ಅಂತಃಸ್ಥನನ್ನು ಇಂದ್ರಾದಿಗಳ ಅಂತರ್ಯಾಮಿಯೆಂದು ಹೇಳಿ ಭೇದವನ್ನು ಹೇಳಲಾಗಿದೆ ಎಂದು ಅರ್ಥ. ಇಂದ್ರ ಮೊದಲಾದ ಶಬ್ದಗಳನ್ನು ಬ್ರಹ್ಮನಲ್ಲೇ ಸಮನ್ವಯಮಾಡಬೇಕೆಂದು ಭಾವ.

इति भावः। तदित्यनुवृत्तेरन्यदिति वाच्ये पुंनिर्देशः श्रौतात्मपदानुसारात् ॥७॥

आकाशाधिकरणम्—८

## ॥ ॐ आकाशस्तल्लिङ्गात् ॐ ॥ १-१-२२

अत्र नये आधिभौतिकसर्वनामसमन्वय उच्यते। प्राधान्यादन्योपलक्षकत्वेनाकाशस्योक्तिः। तत्त्विति वर्तते। "आकाश इति होवाच" इति छान्दोग्यस्थाकाशो हरिरेव। महायोगविद्भूढिभ्यां

---

**'ಅನ್ಯಃ' ಎಂದು ಪುಲ್ಲಿಂಗ ನಿರ್ದೇಶದ ಔಚಿತ್ಯ**

'ತತ್' ಎಂಬ (ನಪುಂಸಕಲಿಂಗದ) ಶಬ್ದವನ್ನು ಅನುವೃತ್ತಿಮಾಡಿಕೊಂಡಿರುವುದರಿಂದ (ನಪುಂಸಕಲಿಂಗದ) 'ಅನ್ಯತ್' ಎಂಬ ಶಬ್ದವನ್ನೇ ಸೂತ್ರದಲ್ಲಿ ಹೇಳಬೇಕಾಗಿತ್ತು. ಆದರೆ ಶ್ರುತಿಯಲ್ಲಿರುವ (ಪುಲ್ಲಿಂಗ) ಆತ್ಮಪದವನ್ನನುಸರಿಸಿ 'ಅನ್ಯಃ' ಎಂದು ಪುಲ್ಲಿಂಗದಿಂದ ನಿರ್ದೇಶಿಸಲಾಗಿದೆ.

ಆಕಾಶಾಧಿಕರಣ—೮

## ಓಂ ಆಕಾಶಸ್ತಲ್ಲಿಂಗಾತ್ ಓಂ (೧--೧--೨೨)

**ಅಧಿಕರಣ ಪ್ರತಿಪಾದ್ಯ ವಿಷಯ**

[1]ಈ ಅಧಿಕರಣದಲ್ಲಿ ಭೂತವಾಚಕಗಳಾದ ಸಕಲ ನಾಮಾತ್ಮಕ ಶಬ್ದಗಳ ಸಮನ್ವಯವನ್ನು ಹೇಳಲಾಗಿದೆ ಭೂತಗಳಲ್ಲಿ ಆಕಾಶವು ಪ್ರಧಾನವಾದದ್ದರಿಂದ ಇತರ ಭೂತಗಳಿಗೆ ಉಪಲಕ್ಷಣವಾಗಿ ಆಕಾಶವನ್ನು ಸೂತ್ರದಲ್ಲಿ ಹೇಳಲಾಗಿದೆ.

**ಸೂತ್ರಾರ್ಥ**

'ತತ್ ತು' ಎಂಬ ಪದಗಳನ್ನು ಅನುವೃತ್ತಿಮಾಡಿಕೊಳ್ಳಬೇಕು. "ಆಕಾಶ ಇತಿ ಹೋವಾಚ" ಎಂದು ಛಾಂದೋಗ್ಯಪ್ರತಿಪಾದ್ಯವಾದ ಆಕಾಶವು ಹರಿಯೇ.

---

1. 'ಅಸ್ಯ ಲೋಕಸ್ಯ ಕಾ ಗತಿರಿತ್ಯಾಕಾಶ ಇತಿ ಹೋವಾಚ' (ಛಾಂ. ೧—೯) ಎಂಬ ಶ್ರುತಿಯು ಇಲ್ಲಿ ವಿಷಯವಾಕ್ಯ. ಇಲ್ಲಿ ಪ್ರತ್ಯಕ್ಷಾದಿಸಿದ್ಧವಾದ ಪೃಥಿವ್ಯಾದಿ ಲೋಕಕ್ಕೆ ಮತ್ತು ಅದರ ಅಭಿಮಾನಿಯಾದ ಚತುರ್ಮುಖನಿಗೆ ಆಶ್ರಯನು ಯಾರು ? ಎಂಬ ಪ್ರಶ್ನೆಗೆ ಆಕಾಶವೇ ಆಶ್ರಯವೆಂದು ಉತ್ತರಿಸಲಾಗಿದೆ. ಈ ಆಕಾಶವು ಭೂತಾಕಾಶವೆಂದು ಪೂರ್ವಪಕ್ಷ. 'ಸ ಏಷ ಪರೋವರೀಯಾನುದ್ಗೀಥಃ' (ಛಾಂ. ೧—೯) ಎಂಬಲ್ಲಿ ಪರೋವರೀಯಸ್ತ್ವ ಅಥವಾ ಉತ್ತಮೋತ್ತಮೋತ್ತಮತ್ವ ಮೊದಲಾದ ವಿಷ್ಣುಲಿಂಗಗಳಿಂದ ಇಲ್ಲಿ ಆಕಾಶಶಬ್ದವಾಚ್ಯನು ವಿಷ್ಣುವೇ ಎಂದು ಸಿದ್ಧಾಂತ.

मुख्यवृत्त्या ब्रह्मपर आकाशशब्द इति यावत् । न तु रूढ्या भूताकाशम् । "स एषः परोवरीयानुद्गीथः स एषोऽनन्तः" इति परोवरीयस्त्वादेस्तत्राकाशे तस्य विष्णोर्लिङ्गादित्यर्थः। ब्रह्माव्यभिचारिलिङ्गस्याकाशे श्रवणादिति यावत् । लिङ्गादित्युक्तिः समुदायाशया । प्रतिनयं तत्त्वित्यवधारणार्थकतोरनुवृत्तिः "अभिमानिव्यपदेशस्तु" इत्यत्राभिमानिदेवतेव महायोगविद्वद्रूढिभ्यामीश एव तत्तच्छब्दमुख्यार्थ इति दर्शयितुम् । अन्यस्य मुख्यत्वे वा अस्यामुख्यत्वे वा तदयोगात् । एवं च मुख्यामुख्यन्यायेनैव श्रुतिषु तैस्तैश्शब्दै-

---

ಮಹಾಯೋಗ, ವಿದ್ವದ್ರೂಢಿಗಳಿಂದ ಮುಖ್ಯವೃತ್ತಿಯಿಂದ ಆಕಾಶಶಬ್ದವು ಬ್ರಹ್ಮಪರವಾಗಿದೆ ಎಂದು ಸಾರಾಂಶ. ರೂಢಿ ಇರುವುದರಿಂದ ಆಕಾಶಶಬ್ದವು ಭೂತಾಕಾಶಪರವಾದುದೆಂದು ಮಾತ್ರ ಹೇಳಬಾರದು. ಏಕೆಂದರೆ 'ಸ ಏಷ ಪರೋವರೀಯಾನುದ್ಗೀಥಃ ಸ ಏಷೋಽನಂತಃ' ಎಂಬುದಾಗಿ ಪರೋವರೀಯಸ್ತ್ವ ಮೊದಲಾದ ವಿಷ್ಣುಲಿಂಗಗಳು ಆಕಾಶನಲ್ಲಿ ಇರುವುದರಿಂದ ಎಂದು ಅರ್ಥ. ಬ್ರಹ್ಮನನ್ನು ಬಿಟ್ಟು ಇತರತ್ರ ಇಲ್ಲದಿರುವ ಲಿಂಗಗಳು ಆಕಾಶನಲ್ಲಿ ಶ್ರುತವಾಗಿರುವುದರಿಂದ ಎಂದು ಅಭಿಪ್ರಾಯ. 'ಲಿಂಗಾತ್' ಎಂಬ ಪದವು ಲಿಂಗಗಳ ಸಮುದಾಯಾಭಿಪ್ರಾಯ ಉಳ್ಳದ್ದು.

### 'ತು' ಶಬ್ದವನ್ನು ಪ್ರತಿಯೊಂದು ಅಧಿಕರಣದಲ್ಲೂ ಅನುವೃತ್ತಿಮಾಡಿಕೊಳ್ಳುವುದರ ಪ್ರಯೋಜನ

ಪ್ರತಿಯೊಂದು ಅಧಿಕರಣದಲ್ಲೂ (ತತ್ತು ಸಮನ್ವಯಾತ್ ಎಂಬ ಸೂತ್ರದಿಂದ) ಅವಧಾರಣಾರ್ಥಕ 'ತು' ಶಬ್ದವನ್ನು ಅನುವೃತ್ತಿಮಾಡಿಕೊಳ್ಳುವುದು, 'ಅಭಿಮಾನಿವ್ಯಪದೇಶಸ್ತು........' (ಬ್ರ.ಸೂ. ೨-೧-೬) ಎಂಬ ಸೂತ್ರದಲ್ಲಿ ತಿಳಿಸಿದಂತೆ ಅಭಿಮಾನಿ ದೇವತೆಯು ಆಯಾ ಶಬ್ದದ ಮುಖ್ಯಾರ್ಥವಾಗಿರುವಂತೆ ಮಹಾಯೋಗ-ವಿದ್ವದ್ರೂಢಿಗಳಿಂದ ಬ್ರಹ್ಮನೇ ಆಯಾ ಶಬ್ದಗಳ ಮುಖ್ಯಾರ್ಥನೆಂದು ತೋರಿಸಲು. ಬ್ರಹ್ಮಭಿನ್ನವಾದ ವಸ್ತುವೇ ಶಬ್ದದ ಮುಖ್ಯಾರ್ಥವಾಗಿದ್ದಲ್ಲಿ ಅಥವಾ ಬ್ರಹ್ಮನು ಅಮುಖ್ಯಾರ್ಥವೆಂದಾದಲ್ಲಿ (ಬ್ರಹ್ಮನೇ ಅರ್ಥವೆಂದು ಹೇಳುವ) 'ತು' ಶಬ್ದವು ಯುಕ್ತವಾಗಲಾರದು. ಈ ರೀತಿಯಾಗಿ ಬ್ರಹ್ಮನೇ ಶಬ್ದದ ಮುಖ್ಯಾರ್ಥನೆಂದಾದಮೇಲೆ, ಮುಖ್ಯ ಮತ್ತು ಅಮುಖ್ಯ ಅರ್ಥಗಳಲ್ಲಿ ಮುಖ್ಯಾರ್ಥವನ್ನೇ ಶಬ್ದವು ತಿಳಿಸುವುದು ಎಂದು ಹೇಳುವ ಮುಖ್ಯಾಮುಖ್ಯಯೋಃ ಮುಖ್ಯೇ ಕಾರ್ಯಸಂಪ್ರತ್ಯಯಃ ಎಂಬ ನ್ಯಾಯದಂತೆ ಶ್ರುತಿಗಳಲ್ಲಿ ಆಯಾ ಶಬ್ದಗಳಿಂದ ವಿಷ್ಣುವನ್ನೇ ಗ್ರಹಿಸಬೇಕೆಂದು

विष्णुग्रहणसिद्धावप्यभ्यासतद्धर्मतल्लिङ्गाद्युक्तिस्तात्पर्यज्ञप्त्यर्था। मुख्यत्वं नेत्यभ्युपेत्य, अनुवादेन वेति ज्ञेयम् ॥ ८ ॥

प्राणाधिकरणम्—९

## ॥ ॐ अत एव प्राणः ॐ ॥ १-१-२३

अत्र नये आध्यात्मिकाशेषनामसमन्वय उच्यते । प्राधान्यादन्योपलक्षणत्वेन प्राणोक्तिः । "तद्वै त्वं प्राण" इत्युक्तः प्राणो ब्रह्मैव । न तु रूढ्या मुख्यप्राणः । कुतः ? अत एव "श्रीश्च ते लक्ष्मीश्च

---

ಸಿದ್ಧವಾಗುವುದು. ಹೀಗಿದ್ದರೂ, ಸೂತ್ರಗಳಲ್ಲಿ ಬ್ರಹ್ಮಶಬ್ದಾಭ್ಯಾಸ, ಬ್ರಹ್ಮಧರ್ಮ, ಬ್ರಹ್ಮಲಿಂಗ ಮೊದಲಾದವುಗಳನ್ನು ಹೇಳಿರುವುದು ಶ್ರುತಿಗಳಿಗೆ ವಿಷ್ಣುವಿನಲ್ಲೇ ತಾತ್ಪರ್ಯವಿದೆಯೆನ್ನುವುದನ್ನು ಸೂಚಿಸಲು. ಅಥವಾ, ಬ್ರಹ್ಮನು ಶಬ್ದಗಳ ಮುಖ್ಯಾರ್ಥನಲ್ಲವೆಂಬ ಪೂರ್ವಪಕ್ಷಿಯ ವಾದವನ್ನು ಅಂಗೀಕರಿಸಿಯಾಗಲೀ, ಅನುವಾದಕ್ಕೋಸ್ಕರವಾಗಲೀ ಬ್ರಹ್ಮಲಿಂಗಾದಿಗಳನ್ನು ಹೇಳಿದೆ ಎಂದು ತಿಳಿಯಬೇಕು.[1]

ಪ್ರಾಣಾಧಿಕರಣ—೯

## ಓಂ ಅತ ಏವ ಪ್ರಾಣಃ ಓಂ (೧-೧-೨೩)

**ಅಧಿಕರಣದ ಉದ್ದೇಶ**

ಈ ಅಧಿಕರಣದಲ್ಲಿ ಆಧ್ಯಾತ್ಮಿಕವಾದ ಅಂದರೆ ದೇಹಸಂಬಂಧಿ ವಾಚಕಗಳಾದ ಸಮಸ್ತ ನಾಮಾತ್ಮಕ ಶಬ್ದಗಳ ಸಮನ್ವಯವನ್ನು ಹೇಳಲಾಗಿದೆ. ಆಧ್ಯಾತ್ಮಿಕಗಳಲ್ಲಿ ಪ್ರಾಣನಿಗೆ ಪ್ರಾಧಾನ್ಯವಿರುವುದರಿಂದ ಇತರ ಆಧ್ಯಾತ್ಮಿಕವಾಚಕ ಶಬ್ದಗಳ ಉಪಲಕ್ಷಣವಾಗಿ ಪ್ರಾಣಶಬ್ದವನ್ನು ಸೂತ್ರದಲ್ಲಿ ಹೇಳಲಾಗಿದೆ.

---

1. ಇಲ್ಲಿ ಬ್ರಹ್ಮಶಬ್ದಾಭ್ಯಾಸ, ಬ್ರಹ್ಮಲಿಂಗ ಮೊದಲಾದವುಗಳದ್ನು ಸೂತ್ರದಲ್ಲಿ ಹೇಳಿರುವುದರ ಔಚಿತ್ಯವನ್ನು ಮೂರು ವಿಧವಾಗಿ ತೋರಿಸಲಾಗಿದೆ. ೧. ಆಕಾಶಶಬ್ದಕ್ಕೆ ಬ್ರಹ್ಮನು ಮುಖ್ಯಾರ್ಥವೆಂದು ಸಿದ್ಧವಾಗಿದ್ದರೂ 'ಆಕಾಶ ಇತಿ ಹೋವಾಚ' ಎಂಬ ಶ್ರುತಿಗೆ ಬ್ರಹ್ಮನಲ್ಲೇ ತಾತ್ಪರ್ಯವೆಂದು ಸಾಧಿಸಲು ಸೂತ್ರದಲ್ಲಿ ಲಿಂಗವನ್ನು ಹೇಳಿದೆ. ೨. ಎಲ್ಲ ಶಬ್ದಗಳ ಮುಖ್ಯಾರ್ಥ ಬ್ರಹ್ಮನಲ್ಲವೆಂಬ ಪೂರ್ವಪಕ್ಷಿಯ ಅಭಿಪ್ರಾಯವನ್ನು ಅಂಗೀಕರಿಸಿದರೂ ಪ್ರಕೃತ ಶ್ರುತಿಯಲ್ಲಿ ಆಕಾಶ ಶಬ್ದಕ್ಕೆ ಬ್ರಹ್ಮನೇ ಅರ್ಥವೆಂದು ಸಿದ್ಧವಾಗುವುದೆಂದು ತೋರಿಸಲು ಸೂತ್ರದಲ್ಲಿ ಲಿಂಗವನ್ನು ಹೇಳಲಾಗಿದೆ. ೩. ಆಕಾಶ ಶಬ್ದದ ಮುಖ್ಯಾರ್ಥ ಬ್ರಹ್ಮನೆಂದು ಸಿದ್ಧವಾಗಿದ್ದರೂ, ಲಿಂಗಗಳಿಂದ ಮುಖ್ಯತ್ವವನ್ನು ಹೇಳಿರುವುದು ಅನುವಾದದ ದೃಷ್ಟಿಯಿಂದ.

पत्न्यौ" इति निरवकाशश्रीलक्ष्मीपतित्वलिङ्गादेवेत्यर्थः । एवेति "शब्दादेव" इत्यत्रेव लिङ्गस्य निरवकाशत्वमाह ॥ ९ ॥

ज्योतिरधिकरणम्—१०

## ॥ ॐ ज्योतिश्चरणाभिधानात् ॐ ॥ १-१-२४

अत्र नये सूक्तगताशेषनामसमन्वय उच्यते । प्रकाशवाचित्वेन

---

**ಸೂತ್ರಾರ್ಥ**

[1] 'ತದ್ವೈ ತ್ವಂ ಪ್ರಾಣಃ' ಎಂಬ ಶ್ರುತಿಯಲ್ಲಿ ಹೇಳಲ್ಪಟ್ಟಿರುವ ಪ್ರಾಣನು ಬ್ರಹ್ಮನೇ, ರೂಢಿಯಿಂದ ಮುಖ್ಯಪ್ರಾಣನಲ್ಲ. ಏಕೆಂದರೆ, ಅತ ಏವ– 'ಶ್ರೀಶ್ಚ ತೇ ಲಕ್ಷ್ಮೀಶ್ಚ ಪತ್ನ್ಯೌ' ಎಂಬುದಾಗಿ ಶ್ರೀಲಕ್ಷ್ಮೀಪತಿತ್ವರೂಪವಾದ ನಿರವಕಾಶವಾದ ವಿಷ್ಣುಲಿಂಗವಿರುವುದರಿಂದಲೇ ಎಂದು ಅರ್ಥ. 'ಶಬ್ದಾದೇವ ಪ್ರಮಿತಃ' (ಬ್ರ. ಸೂ. ೧-೩-೨೪) ಎಂಬ ಸೂತ್ರದಲ್ಲಿ ಏವಕಾರವು (ವಾಮನಶಬ್ದಕ್ಕೆ) ನಿರವಕಾಶತ್ವವನ್ನು ಹೇಳುವಂತೆ ಈ ಸೂತ್ರದಲ್ಲಿ ಏವಕಾರವು ಲಿಂಗಕ್ಕೆ ನಿರವಕಾಶತ್ವವನ್ನು ಹೇಳುತ್ತದೆ.

ಜ್ಯೋತಿರಧಿಕರಣ—೧೦

## ಓಂ ಜ್ಯೋತಿಶ್ಚರಣಾಭಿಧಾನಾತ್ ಓಂ (೧-೧-೨೪)

**ಅಧಿಕರಣದ ಉದ್ದೇಶ**

ಈ ಅಧಿಕರಣದಲ್ಲಿ ಸೂಕ್ತವಾಚಕಗಳಾದ ಅಶೇಷ ನಾಮಾತ್ಮಕಶಬ್ದಗಳ ಸಮನ್ವಯವನ್ನು ಹೇಳಲಾಗಿದೆ. ಪ್ರಕಾಶವಾಚಕವಾಗಿರುವ ಪ್ರಯುಕ್ತ ಇರುವ ಪ್ರಾಧಾನ್ಯದಿಂದ ಅಥವಾ ಪೂರ್ವಪಕ್ಷಯುಕ್ತಿಯಾದ 'ಹೃದಯಾಹಿತತ್ವ' ಇರುವುದರಿಂದ ಇತರ ಸೂಕ್ತಗತ ನಾಮಗಳಿಗೆ ಉಪಲಕ್ಷಣವಾಗಿ ಜ್ಯೋತಿಸ್ಸನ್ನು ಸೂತ್ರದಲ್ಲಿ ಹೇಳಲಾಗಿದೆ.

---

1. 'ತದ್ವೈ ತ್ವಂ ಪ್ರಾಣೋ ಅಭವಃ ಮಹಾನ್ ಭೋಗಃ ಪ್ರಜಾಪತೇಃ । ಭುಜಃ ಕರಿಷ್ಯಮಾಣಃ ಯದ್ದೇವಾನ್ ಪ್ರಾಣಯೋ ನವ ॥' (ತೈ. ಆ. ೩–೧೪) ಎಂಬ ಶ್ರುತಿಯು ಇಲ್ಲಿ ವಿಷಯವಾಕ್ಯ. ಎಲೈ ಪ್ರಾಣನೇ, ಹಿರಣ್ಯಗರ್ಭ ಮೊದಲಾದ ಸಕಲ ಜೀವರಿಗೂ ಆನಂದವನ್ನು ನೀಡುವ ನೀನು ಪೂರ್ಣಾನಂದನಾಗಿದ್ದೀಯೆ. ಇಂದ್ರಿಯಾಭಿಮಾನಿ ದೇವತೆಗಳೆಲ್ಲರೂ ತಮ್ಮ ತಮ್ಮ ಕ್ರಿಯೆಗಳನ್ನು ಮಾಡುವಂತೆ ಮಾಡುವ ನೀನು ಪ್ರಾಣಶಬ್ದವಾಚ್ಯನಾಗಿದ್ದೀಯೆ ಎಂದು ಶ್ರುತ್ಯರ್ಥ.

प्राधान्याद्वा पूर्वाक्षेपकहृदयाहितत्वयुक्ततया वाऽन्योपलक्षणत्वेन ज्योतिष उक्तिः। "ज्योतिर्हृदय आहितम्" इति सूक्तोक्तं ज्योतिः तत्तु ब्रह्मैव । न त्वग्निसूक्तगतत्वादिनाऽग्निः । "वि मे कर्णा पतयतः" इत्यादिना कर्णादीनां विचरणाभिधानात्। कर्णादिसर्वेन्द्रियविदूरत्वादित्यर्थः । अपरिच्छिन्नवैभवादिति यावत् । विचरणेति वाच्ये चरणेत्युक्तिरुपसर्गस्य द्योतकत्वमात्राद्वा वि मे मनश्चरतीति श्रुत्यनुगमार्था वेति ॥ १० ॥

---

**ಸೂತ್ರಾರ್ಥ**

1 'ಜ್ಯೋತಿರ್ಹೃದಯ ಆಹಿತಂ ಯತ್' ಎಂಬ ಸೂಕ್ತದಲ್ಲಿ ಹೇಳಲ್ಪಟ್ಟಿರುವ ಜ್ಯೋತಿಃ-ಜ್ಯೋತಿಸ್ಸು, ತತ್ತು-ಬ್ರಹ್ಮನೇ ಆಗಿದ್ದಾನೆ, ಹೊರತು ಅಗ್ನಿಸೂಕ್ತದಲ್ಲಿ ಹೇಳಲ್ಪಟ್ಟಿರುವುದೇ ಮೊದಲಾದ ಕಾರಣಗಳಿಂದ ಅಗ್ನಿಯಲ್ಲ. 'ವಿ ಮೇ ಕರ್ಣಾ ಪತಯತೋ' ಇತ್ಯಾದಿ ವಾಕ್ಯದಿಂದ ಕರ್ಣಾದಿ ಇಂದ್ರಿಯಗಳಿಗೆ ವಿಚರಣವನ್ನು ಹೇಳಿರುವುದರಿಂದ—ಕರ್ಣಾದಿ ಸರ್ವೇಂದ್ರಿಯಗಳಿಗೆ ವಿದೂರನಾಗಿರುವಿಕೆ ಎಂಬ ಲಿಂಗದಿಂದ ಎಂದು ಅರ್ಥ. ಅಪರಿಮಿತವಾದ ವೈಭವದಿಂದ ಎಂದು ಸಾರ. ಸೂತ್ರದಲ್ಲಿ 'ವಿಚರಣ' ಎಂದೇ ಹೇಳಬೇಕಾಗಿತ್ತು. 'ಚರಣ' ಎಂದು ಹೇಳಿರುವುದು ಉಪಸರ್ಗಗಳು ಅರ್ಥಕ್ಕೆ ದ್ಯೋತಕ ಮಾತ್ರ, ವಾಚಕವಲ್ಲ ಎಂಬ ಕಾರಣದಿಂದ ಅಥವಾ 'ವಿ ಮೇ ಮನಶ್ಚರತಿ' ಎಂಬ ಶ್ರುತಿಯ ಅನುಗಮಕ್ಕೋಸ್ಕರ.

---

1. 'ವಿ ಮೇ ಕರ್ಣಾ ಪತಯತೋ ವಿ ಚಕ್ಷುರ್ವೀದಂ ಜ್ಯೋತಿರ್ಹೃದಯ ಆಹಿತಂ ಯತ್ | ವಿ ಮೇ ಮನಶ್ಚರತಿ ದೂರ ಆಧೀಃ ಕಿಂ ಸ್ವಿದ್ವಕ್ಷ್ಯಾಮಿ ಕಿಮು ನೂ ಮನಿಷ್ಯೇ ||' (ಋ. ೬-೯-೬) ಎಂಬ ಶ್ರುತಿ ಇಲ್ಲಿ ವಿಷಯವಾಕ್ಯ. ಮಂತ್ರದ್ರಷ್ಟೃವಾದ ಋಷಿಯ ವಾಕ್ಯ ಇದು. 'ನನ್ನ ಕರ್ಣಗಳು ಮತ್ತು ಚಕ್ಷುಸ್ಸು ಜ್ಯೋತಿಸ್ಸಿಗೆ ವಿರುದ್ಧವಾಗಿ ಹೋಗುತ್ತಿವೆ. ಹೃದಯದಲ್ಲಿ ಸನ್ನಿಹಿತವಾದ ಜ್ಯೋತಿಸ್ಸು ಕರ್ಣಾದಿಗಳಿಂದ ದೂರದಲ್ಲಿದೆ. ಹಾಗೆಯೇ ನನ್ನ ಮನಸ್ಸೂ ಜ್ಯೋತಿಸ್ಸಿಗೆ ದೂರದಲ್ಲೇ ಇವೆ. ಅಲ್ಪಬುದ್ಧಿಯುಳ್ಳವನಾದ ನಾನು ಏನು ತಾನೇ ಹೇಳಲಿ ? ಏನನ್ನು ಚಿಂತಿಸಲಿ ?' ಎಂದು ಮಂತ್ರಾರ್ಥ. ಪ್ರಸಿದ್ಧವಾದ ಅಗ್ನಿಯೇ ಈ ಜ್ಯೋತಿಸ್ಸೆಂದು ಪೂರ್ವಪಕ್ಷ. ಅಪರಿಮಿತ ವೈಭವವನ್ನು ಸೂಚಿಸುವ ಕರ್ಣಾದಿ ವಿದೂರತ್ವವು ಪರಬ್ರಹ್ಮನಲ್ಲೇ ಯುಕ್ತವಾದುದರಿಂದ ಈ ಜ್ಯೋತಿಸ್ಸು ಪರಬ್ರಹ್ಮವೆಂದು ಸಿದ್ಧಾಂತ.

गायत्र्यधिकरणम्—११

## ॥ ॐ छन्दोऽभिधानान्नेति चेन्न तथा चेतोर्पण-निगदात्तथा हि दर्शनम् ॐ ॥ १-१-२५

अत्र नयेऽधिवेदगतगायत्र्याद्यशेषछन्दोनामसमन्वयं ब्रूते । प्राधान्यादन्योपलक्षणत्वेन गायत्र्याः सूचनेनोपादानम् । छन्द इत्यावृत्तिः । "गायत्री वा इदं सर्वम्" इत्युक्तगायत्री छन्दः स्यात् । कुतः ? गायत्रीपदेन छन्दसोऽभिधानात् । तच्छब्दस्य तत्र रूढत्वादिति

---

ಗಾಯತ್ರ್ಯಧಿಕರಣ—೧೧

## ಓಂ ಛಂದೋಽಭಿಧಾನಾನ್ನೇತಿ ಚೇನ್ನ ತಥಾ ಚೇತೋಽರ್ಪಣನಿಗದಾತ್ ತಥಾ ಹಿ ದರ್ಶನಮ್ ಓಂ (೧-೧-೨೫)

**ಅಧಿಕರಣದ ಉದ್ದೇಶ**

ಈ [1]ಅಧಿಕರಣದಲ್ಲಿ ವೇದಸಂಬಂಧಿ ವಾಚಕಗಳಾದ ಗಾಯತ್ರೀ ಮೊದಲಾದ ಅಶೇಷ ಛಂದೋವಾಚಕ ನಾಮಗಳ ಸಮನ್ವಯವನ್ನು ಹೇಳಲಾಗಿದೆ. ಛಂದಸ್ಸುಗಳಲ್ಲಿ ಗಾಯತ್ರೀಛಂದಸ್ಸಿಗೆ ಪ್ರಾಧಾನ್ಯವಿರುವುದರಿಂದ, ಇತರ ಛಂದಸ್ಸುಗಳ ಉಪಲಕ್ಷಣವಾಗಿ ಗಾಯತ್ರಿಯನ್ನು ಛಂದಃಶಬ್ದದಿಂದ ಸೂಚಿಸುವ ಮೂಲಕ ಗ್ರಹಿಸಲಾಗಿದೆ.

**ಸೂತ್ರಾರ್ಥ**

ಸೂತ್ರದಲ್ಲಿ 'ಛಂದಃ' ಎಂಬ ಪದವನ್ನು ಆವೃತ್ತಿಮಾಡಬೇಕು. 'ಗಾಯತ್ರೀ ವಾ ಇದಂ ಸರ್ವಂ' ಎಂಬಲ್ಲಿ ಹೇಳಲ್ಪಟ್ಟ ಗಾಯತ್ರಿಯು ಛಂದಸ್ಸೇ ಆಗಿರಬೇಕು. ಏಕೆಂದರೆ ಗಾಯತ್ರೀಪದದಿಂದ ಛಂದಸ್ಸೇ ಹೇಳಲ್ಪಡುತ್ತಿದೆ. ಗಾಯತ್ರೀ ಶಬ್ದಕ್ಕೆ ಗಾಯತ್ರೀ ಛಂದಸ್ಸಿನಲ್ಲಿ ರೂಢಿಯಿರುವುದರಿಂದ ಎಂದು ತಾತ್ಪರ್ಯ. ಆದ್ದರಿಂದ

---

1. 'ಗಾಯತ್ರೀ ವಾ ಇದಂ ಸರ್ವಂ' (ಛಾಂ. ೩-೧೨-೧) ಎಂಬ ಶ್ರುತಿ ಇಲ್ಲಿ ವಿಷಯವಾಕ್ಯ. ಇಲ್ಲಿ ಶ್ರುತವಾಗಿರುವ ಗಾಯತ್ರಿಯು ಪ್ರಸಿದ್ಧವಾದ ಗಾಯತ್ರೀ ಛಂದಸ್ಸೆಂದು ಪೂರ್ವಪಕ್ಷ. 'ಗಾಯತಿ ತ್ರಾಯತಿ ಚ' (ಛಾಂ. ೩-೧೨-೧) ಎಂಬ ಮುಂದಿನ ವಾಕ್ಯದಲ್ಲಿ ಪ್ರಥಮತಃ ವೇದವಕ್ತೃತ್ವರೂಪವಾದ ಗಾನಕರ್ತೃತ್ವ ಮತ್ತು ಸರ್ವರಕ್ಷಕತ್ವರೂಪವಾದ ತ್ರಾಣಕರ್ತೃತ್ವ ಮೊದಲಾದ ಬ್ರಹ್ಮನ ಲಿಂಗಗಳಿರುವುದರಿಂದ ಈ ಗಾಯತ್ರಿಯು ಬ್ರಹ್ಮವೆಂದು ಸಿದ್ಧಾಂತ.

यावत् । न ब्रह्मेति चेत् । न । कुतः? तथा हि दर्शनम् । दर्शनं श्रुतिः । "गायति त्रायति च" इति गानत्राणकर्तृत्वादिलिङ्गबोधकश्रुतिर्हि यतोऽत इत्यर्थः । अप्रसिद्धपदेन ब्रह्मणो निर्देशो किं प्रयोजनमत उक्तं–तथेति । गानादिकर्तृत्वगुणविशिष्टतया चेतस्यर्पणायोपासनायेत्यर्थः । निगदात् "गायत्री वा इदं सर्वम्" इति कथनादित्यर्थः । चेतोर्पणेत्युक्तिरुपासनास्वरूपोक्त्यर्था । एवं नयान्तरे अप्रसिद्धशब्दोक्तिकृत्यं बोध्यम् । सुधायां तु "परो दिवो ज्योतिः" इत्युक्तं ज्योतिश्छन्द एव । न विष्णुः । "गायत्री वा" इत्युपक्रमे गायत्रीरूपछन्दसोऽभिधानादिति चेदित्यपि शङ्कार्थः । गानत्राणकर्तृत्वाद्गायत्री ब्रह्मेति ज्योतिरपि ब्रह्मेति परिहारोऽभिमतः ॥

---

('ಗಾಯತ್ರೀ ವಾ ಇದಂ' ಇತ್ಯಾದಿ ವಾಕ್ಯದಲ್ಲಿ ಪ್ರಸಕ್ತವಾದ) ಗಾಯತ್ರಿಯು ಬ್ರಹ್ಮನಲ್ಲ ಎಂದರೆ ಅದು ಸರಿಯಲ್ಲ. ಏಕೆಂದರೆ, ತಥಾ ಹಿ ದರ್ಶನವ್ — ದರ್ಶನವೆಂದರೆ ಶ್ರುತಿ. 'ಗಾಯತಿ ತ್ರಾಯತಿ ಚ' ಎಂಬುದಾಗಿ ಗಾನಕರ್ತೃತ್ವ, ತ್ರಾಣಕರ್ತೃತ್ವ ಮೊದಲಾದ ಬ್ರಹ್ಮಲಿಂಗಗಳನ್ನು ಬೋಧಿಸುವ ಶ್ರುತಿ ಇರುವುದರಿಂದ ಎಂದು ಅರ್ಥ.

**ಗಾಯತ್ರೀ ಮೊದಲಾದ ಅಪ್ರಸಿದ್ಧ ಪದಗಳಿಂದ ಬ್ರಹ್ಮನನ್ನು ನಿರ್ದೇಶಿಸುವುದರ ಉದ್ದೇಶ**

ಗಾಯತ್ರಿಯೆಂಬ ಅಪ್ರಸಿದ್ಧ ಪದದಿಂದ ಬ್ರಹ್ಮನನ್ನು ನಿರ್ದೇಶಿಸುವುದರ ಪ್ರಯೋಜನವೇನು ಎಂಬ ಪ್ರಶ್ನೆಗೆ ಉತ್ತರವಾಗಿ 'ತಥಾ' ಎಂದು ಹೇಳಲಾಗಿದೆ. ಗಾನಾದಿಕರ್ತೃತ್ವ ಎಂಬ ಗುಣವಿಶಿಷ್ಟವಾದುದೆಂದು, ಚೇತಸಿ ಅರ್ಪಣಾಯ— ಉಪಾಸನೆಗೋಸ್ಕರ ಎಂದು ಅರ್ಥ. ನಿಗದಾತ್–'ಗಾಯತ್ರೀ ವಾ ಇದಂ ಸರ್ವಂ' ಎಂದು ಹೇಳಿರವುದರಿಂದ ಎಂದು ಅರ್ಥ. 'ಚೇತೋಽರ್ಪಣ' ಎಂದು ಹೇಳಿರುವುದು ಉಪಾಸನೆಯ ಸ್ವರೂಪವನ್ನು ಹೇಳುವುದಕ್ಕಾಗಿ. ಇದೇ ರೀತಿ ಇತರ ಅಧಿಕರಣಗಳಲ್ಲಿ ಅಪ್ರಸಿದ್ಧ ಶಬ್ದವನ್ನು ಹೇಳಿರುವುದರ ಪ್ರಯೋಜನವನ್ನು ತಿಳಿಯಬೇಕು.

**ಸುಧಾ ರೀತ್ಯಾ ಈ ಅಧಿಕರಣದ ಆಕ್ಷೇಪ–ಸಮಾಧಾನಗಳು**

ಸುಧಾದಲ್ಲಾದರೋ— "'ಪರೋ ದಿವೋ ಜ್ಯೋತಿಃ' ಎಂಬಲ್ಲಿ ಹೇಳಿರುವ ಜ್ಯೋತಿಸ್ಸು ಛಂದಸ್ಸೇ ಹೊರತು ವಿಷ್ಣುವಲ್ಲ. 'ಗಾಯತ್ರೀ ವಾ' ಎಂದು ಉಪಕ್ರಮವಾಕ್ಯದಲ್ಲಿ ಗಾಯತ್ರಿಯೆಂಬ ಛಂದಸ್ಸನ್ನು ಹೇಳಿರುವುದರಿಂದ" ಎಂದು ಶಂಕೆಯ ಅಭಿಪ್ರಾಯ. ಗಾನತ್ರಾಣಕರ್ತೃವಾದುದರಿಂದ ಗಾಯತ್ರಿಯು ಬ್ರಹ್ಮವಾಗಿದೆ, ಆದ್ದರಿಂದ ಜ್ಯೋತಿಸ್ಸೂ ಬ್ರಹ್ಮವೇ ಎಂದು ಪರಿಹಾರವು ಅಭಿಮತವಾಗಿದೆ.

इतश्च गायत्री ब्रह्मेत्याह—

॥ ॐ भूतादिपादव्यपदेशोपपत्तेश्चैवम् ॐ ॥

१-१-२६

भूतं विश्वमादिर्यस्यामृतस्यामृताख्यस्वरूपस्य तद्भूतादि । भूतादि चासौ पादश्च। तस्य व्यपदेशः। एवं "पादोऽस्य सर्वा भूतानि त्रिपादस्यामृतं दिवि" इत्येवं भूतामृतरूपपादव्यपदेशोपपत्तेश्चैवं गायत्री ब्रह्मैवेत्यर्थः। एवमित्यस्यावृत्तिः। तत्राद्यं "त्रयाणामेव चैवम्" इत्यत्रेव प्रकारार्थकम्। "चतुष्पदा गायत्री" इत्युक्त्वा तद्विवरणाय

---

ಈ ಮುಂದಿನ ಕಾರಣದಿಂದಲೂ ಗಾಯತ್ರಿಯು ಬ್ರಹ್ಮವೆಂದು ಹೇಳಲು ಸೂತ್ರ—

ಓಂ ಭೂತಾದಿಪಾದವ್ಯಪದೇಶೋಪಪತ್ತೇಶ್ಚೈವಮ್ ಓಂ

(೧-೧-೨೬)

**ಸೂತ್ರದಲ್ಲಿರುವ ಪದಗಳ ಅರ್ಥವಿವರಣೆ**

ಭೂತವೆಮ್ ಎಂದರೆ ವಿಶ್ವವು ಯಾವ ಅಮೃತಕ್ಕೆ ಅಂದರೆ ಅಮೃತಾಖ್ಯ ಸ್ವರೂಪಕ್ಕೆ ಆದಿಯಾಗಿರುವುದೋ ಆ ಅಮೃತಾಖ್ಯಸ್ವರೂಪವು ಭೂತಾದಿ ಭೂತಾದಿಯಾಗಿರುವ ಪಾದ ಭೂತಾದಿಪಾದ. ಅದರ ವ್ಯಪದೇಶವು ಭೂತಾದಿಪಾದವ್ಯಪದೇಶ ಎಂದೆನಿಸುತ್ತದೆ. ಏವಂ–'ಪಾದೋಽಸ್ಯ ವಿಶ್ವಾ ಭೂತಾನಿ ತ್ರಿಪಾದಸ್ಯಾಮೃತಂ ದಿವಿ' ಎಂಬುದಾಗಿ ಭೂತಾಮೃತರೂಪ ಪಾದ ವ್ಯಪದೇಶವು ಉಪಪನ್ನವಾಗುವುದರಿಂದ ಏವಂ–ಈಗ ಹೇಳಿದಂತೆ ಗಾಯತ್ರಿಯು ಬ್ರಹ್ಮವೇ ಆಗಿದೆ. ಸೂತ್ರದಲ್ಲಿ 'ಏವಂ' ಎಂಬ ಪದವನ್ನು ಆವೃತ್ತಿಮಾಡಿಕೊಳ್ಳಬೇಕು. ಮೊದಲನೆಯದು 'ತ್ರಯಾಣಾಮೇವ ಚೈವಮ್' ಎಂಬಲ್ಲಿಯಂತೆ 'ಪ್ರಕಾರ' ಎಂಬ ಅರ್ಥ ಉಳ್ಳದ್ದು.

**ಸೂತ್ರಾರ್ಥ**

'ಚತುಷ್ಪದಾ ಗಾಯತ್ರೀ' ಎಂದು ಹೇಳಿ ಇದರ ವಿವರಣೆಗಾಗಿ ಸಮ್ಮತಿರೂಪವಾಗಿ ಉಪನಿಷತ್ತು ಉದಾಹರಿಸುವ 'ತಾವಾನ್' ಎಂಬ ಮಂತ್ರದಲ್ಲಿ—ಈ ಪುರುಷನಿಗೆ ಎಲ್ಲ ಭೂತಗಳೂ ಒಂದು ಪಾದ. ಅಮೃತವೆಂದು ಕರೆಯಲ್ಪಡುವ ವೈಕುಂಠಾದಿಗಳಲ್ಲಿರುವ ಮೂರು ರೂಪಗಳು ತ್ರಿಪಾತ್–(ಉಳಿದ) ಮೂರು ಪಾದಗಳೆಂದು ಭೂತ ಮೊದಲಾದ ನಾಲ್ಕು ಪಾದಗಳನ್ನು ಹೇಳಲಾಗಿದೆ. ಇದೂ ಕೂಡ ಛಂದಸ್ಸಿನಲ್ಲಿ ಯುಕ್ತವಾಗಲಾರದೆಂದು ಭಾವ. ಅಥವಾ ಪುರುಷಸೂಕ್ತದಲ್ಲಿ ಹೇಳಲ್ಪಟ್ಟಿರುವುದರಿಂದಲೂ, (ಗಾಯತ್ರಿಯು ಬ್ರಹ್ಮವೇ) ಎಂದು ಸೂತ್ರದಲ್ಲಿ ಅನುಕ್ತವಾಗಿರುವ ಯುಕ್ತಿಯ ಸಮುಚ್ಚಯವನ್ನು ಸೂತ್ರದಲ್ಲಿ 'ಚ' ಶಬ್ದವು ಹೇಳುತ್ತದೆ.

सम्मतित्वेनोपनिषदुदाहृते "तावान्" इति मन्त्रेऽस्य पुरुषस्य "सर्वाणि भूतानि" इत्येकः पादः । अमृताख्यं वैकुण्ठादिस्थितरूपत्रयं त्रिपात् पादत्रयमिति भूतादिपादचतुष्टयवत्त्वमुक्तम् । तच्च न छन्दसि युक्तमिति भावः । "पुरुषसूक्तोक्तत्वाच्च" इत्यनुक्तसमुच्चये वा चः । "ङे प्रथमयोः" इत्यत्र प्रथमाद्वितीययोः प्रथमाशब्द इव पादशब्दः अमृताख्यस्वरूपांशे मुख्यो भूतेष्वमुख्य इति बोध्यम् ॥

उक्तमाक्षिप्य समाधत्ते—

## ॥ ॐ उपदेशभेदान्नेति चेन्नोभयस्मिन्नप्यविरोधात् ॐ ॥ १-१-२७

गायत्रीज्योतिषोर्द्युस्थत्वादिवःपरत्वरूपोपदेशभेदात् तद्द्वयं

---

**ಭೂತಗಳಿಗೂ, ಪರಮಾತ್ಮನ ರೂಪಗಳಿಗೂ ಸಮಾನವಾಗಿ ಪಾದಶಬ್ದವನ್ನು ಪ್ರಯೋಗಿಸಿರುವುದರ ವಿವರಣೆ**

1 'ಙೇ ಪ್ರಥಮಯೋಃ' ಎಂಬ ಪಾಣಿನಿಸೂತ್ರ (ಪಾ. ಸೂ. ೭–೧–೨೮)ದಲ್ಲಿ ಪ್ರಥಮಾ ಮತ್ತು ದ್ವಿತೀಯಾ ವಿಭಕ್ತಿಬೋಧಕವಾದ ಪ್ರಥಮಾ ಶಬ್ದವು ಪ್ರಥಮಾ ವಿಭಕ್ತಿಯಲ್ಲಿ ಮುಖ್ಯವಾಗಿಯೂ ದ್ವಿತೀಯಾ ವಿಭಕ್ತಿಯಲ್ಲಿ ಅಮುಖ್ಯವಾಗಿಯೂ ಇರುವಂತೆ ಪ್ರಕೃತಸೂತ್ರದಲ್ಲಿ ಪಾದಶಬ್ದವು ಅಮೃತಾಖ್ಯ ಸ್ವರೂಪದಲ್ಲಿ ಮುಖ್ಯವಾಗಿಯೂ ಭೂತಗಳಲ್ಲಿ ಅಮುಖ್ಯವಾಗಿಯೂ ಇದೆಯೆಂದು ತಿಳಿಯಬೇಕು.

ಹೇಳಿದುದನ್ನು ಆಕ್ಷೇಪಿಸಿ ಸಮಾಧಾನ ನೀಡುವ ಸೂತ್ರ—

## ಓಂ ಉಪದೇಶಭೇದಾನ್ನೇತಿ ಚೇನ್ನೋಭಯಸ್ಮಿನ್ನಪ್ಯವಿರೋಧಾತ್ ಓಂ (೧-೧-೨೭)

**ಸೂತ್ರಾರ್ಥ**

ಗಾಯತ್ರಿಯನ್ನು ದ್ಯುಲೋಕದಲ್ಲಿರುವುದೆಂದೂ ಜ್ಯೋತಿಸ್ಸನ್ನು ದ್ಯುಲೋಕವನ್ನು ಮೀರಿರುವುದೆಂದೂ ವಿಭಿನ್ನರೀತಿಯಲ್ಲಿ ಉಪದೇಶಿಸಿರುವುದರಿಂದ ಅವೆರಡೂ

---

1. ಙೇ ಪ್ರಥಮಯೋರಮ್ ಎಂದು ಸೂತ್ರ. ಯುಷ್ಮತ್ ಮತ್ತು ಅಸ್ಮತ್ ಶಬ್ದಗಳ ಮುಂದಿರುವ 'ಙೇ' ಎಂಬ ಪ್ರತ್ಯಯಕ್ಕೆ ಮತ್ತು ಪ್ರಥಮಾ ಮತ್ತು ದ್ವಿತೀಯಾ ವಿಭಕ್ತಿಗಳಿಗೆ 'ಅಮ್' ಎಂಬ ಆದೇಶವು ಬರುತ್ತದೆ ಎಂದು ಸೂತ್ರಾರ್ಥ. ಇಲ್ಲಿ ಪ್ರಥಮಾ ಶಬ್ದವು ಪ್ರಥಮಾ ವಿಭಕ್ತಿಯಲ್ಲಿ ಮುಖ್ಯವಾಗಿಯೂ, ದ್ವಿತೀಯಾ ವಿಭಕ್ತಿಯಲ್ಲಿ ಅಮುಖ್ಯವಾಗಿಯೂ ಇದ್ದು ಅವೆರಡನ್ನೂ ಬೋಧಿಸುವಂತೆ ಪಾದ ಶಬ್ದವು ಮುಖ್ಯಾರ್ಥವಾದ ಅಮೃತಾಖ್ಯಸ್ವರೂಪ ಮತ್ತು ಅಮುಖ್ಯಾರ್ಥವಾದ ಭೂತಗಳನ್ನು ಬೋಧಿಸುವುದೆಂದು ಭಾವ.

ब्रह्माख्यमेकं वस्त्वित्युक्तं न युक्तमिति चेन्न । उभयस्मिन्नप्युपदेशे विरोधाभावादित्यर्थः । त्रिसप्तलोकापेक्षयोपपत्तेरिति भावः । भूर्भुवः स्वरिति त्रिलोकापेक्षायां भुवर्लोकादूर्ध्वस्य सर्वस्य द्युत्वादनन्तासन-श्वेतद्वीपवैकुण्ठस्थानां द्युस्थत्वात् । भूर्भुवःस्वर्महर्जनस्तपःसत्यमिति सप्तलोकविवक्षायां मेरुसूर्यमण्डलेन्द्रसदनानां "पृथिव्यां द्यौर्महामेरु-राकाशे सूर्यमण्डलम् । दिवीन्द्रसदनं चैव तत्परे तु दिवः परे" इति स्मृत्या द्युत्वात् क्रमात्तत्परानन्तासनादिस्थानां द्युपरत्वादिति भावः । लोकत्रयपक्षेप्युक्तदिशा द्युपरत्वसिद्धावपि वैकुण्ठस्य सर्वद्युपरत्वसिद्ध्यै सप्तलोकपक्षोक्तिः । "द्व्यात्मकेभ्यश्च सर्वेभ्यो वैकुण्ठश्चोच्च उच्यते"

ಬ್ರಹ್ಮವೆಂಬ ಒಂದೇ ವಸ್ತುವೆಂದು ಹೇಳಿರುವುದು ಯುಕ್ತವಲ್ಲ ಎಂದರೆ ಅದು ಸರಿಯಲ್ಲ. ಎರಡೂ ಉಪದೇಶದಲ್ಲಿ ವಿರೋಧವಿಲ್ಲದಿರುವುದರಿಂದ ಎಂದು ಅರ್ಥ. ದ್ಯುಸ್ಥತ್ವ, ದಿವಃ ಪರತ್ವಗಳು ಮೂರು ಲೋಕ ಮತ್ತು ಏಳು ಲೋಕಗಳ ದೃಷ್ಟಿಯಿಂದ ಉಪಪನ್ನ ವಾಗುವವೆಂದು ಭಾವ.

**ದ್ಯುಸ್ಥತ್ವ ಮತ್ತು ದಿವಃ ಪರತ್ವಗಳಲ್ಲಿ ವಿರೋಧವಿಲ್ಲ**

ಭೂಃ, ಭುವಃ ಮತ್ತು ಸ್ವಃ ಎಂಬ ಮೂರು ಲೋಕಗಳ ವಿವಕ್ಷೆಯಿಂದ ಭುವರ್ಲೋಕದ ಮೇಲಿರುವ ಎಲ್ಲ ಲೋಕವೂ ದ್ಯುಲೋಕವೆಂದೆನಿಸುತ್ತದೆ. ಆದ್ದರಿಂದ ಅನಂತಾಸನ, ಶ್ವೇತದ್ವೀಪ ಮತ್ತು ವೈಕುಂಠಗಳಲ್ಲಿ ಇರುವ ರೂಪಗಳು ದ್ಯುಲೋಕದಲ್ಲಿರುವ ರೂಪಗಳಾಗುವುವು. ಭೂಃ, ಭುವಃ, ಸ್ವಃ, ಮಹಃ, ಜನಃ, ತಪಃ ಮತ್ತು ಸತ್ಯ ಎಂಬ ಏಳು ಲೋಕಗಳ ವಿವಕ್ಷೆಯಿಂದ ಹೇಳುವುದಾದರೆ, "ಪೃಥಿವ್ಯಾಂ ದ್ಯೌರ್ಮಹಾಮೇರುಃ ಆಕಾಶೇ ಸೂರ್ಯಮಂಡಲಮ್ ದಿವೀಂದ್ರಸದನಂ ಚೈವ ತತ್ಪರೇ ತು ದಿವಃ ಪರೇ ॥"[1] ಎಂಬ ಸ್ಮೃತಿಯಂತೆ ಮೇರು, ಸೂರ್ಯಮಂಡಲ ಮತ್ತು ಇಂದ್ರಸದನಗಳು ದ್ಯುಲೋಕಗಳಾಗಿರುವುವು. ಕ್ರಮವಾಗಿ ಇವುಗಳ ಮೇಲಿರುವ ಅನಂತಾಸನ ಮೊದಲಾದವುಗಳು ದ್ಯುಲೋಕದಿಂದ ಮೇಲಿರುವುವು ಎಂದೆನಿಸಿಕೊಳ್ಳುತ್ತವೆ ಎಂದು ಭಾವ. ಲೋಕತ್ರಯಪಕ್ಷದಲ್ಲೂ ಈಗ ಹೇಳಿದಂತೆ ಅನಂತಾಸನಾದಿಗಳನ್ನು ದ್ಯುಲೋಕದಿಂದ ಮೇಲಿರುವವೆಂದು ಹೇಳಲು ಸಾಧ್ಯ. ಆದರೆ ವೈಕುಂಠವು ಸರ್ವದ್ಯುಲೋಕಗಳಿಂದ ಮೇಲಿರುವುದು ಎಂದು ತೋರಿಸಲು ಸಪ್ತಲೋಕಪಕ್ಷವನ್ನು

1. 'ಪೃಥಿವಿಯಲ್ಲಿ ಮಹಾಮೇರುವು ದ್ಯುಲೋಕವೆಂದೆನಿಸುವುದು, ಆಕಾಶದಲ್ಲಿ ಸೂರ್ಯ ಮಂಡಲವು ದ್ಯುಲೋಕವು, ಸ್ವರ್ಗದಲ್ಲಿ ಇಂದ್ರಸದನವು ದ್ಯುಲೋಕವು. ಇವುಗಳಿಗಿಂತ ಮೇಲಿರುವುದೆಲ್ಲವೂ ದಿವಃ ಪರವು.'

इत्युक्तेः । चन्द्रिकायां तु—अग्निसूक्तस्थछान्दोग्यस्थज्योतिषोर्नैकार्थत्वं कर्णादिविदूरत्वदृष्टश्रुतत्वाद्युपदेशभेदादिति चेन्न । उभयस्मिन्नप्युपदेशे आकारभेदेनाविरोधादिति वृत्त्यन्तरमुक्तम् ॥ ११ ॥

पादान्त्यप्राणाधिकरणम्—१२

## ॥ ॐ प्राणस्तथाऽनुगमात् ॐ ॥ १-१-२८

अत्र नयेऽन्यप्रापकबहुलिङ्गयुतनामसमन्वय उच्यते । ऐतरेये

---

ಹೇಳಲಾಗಿದೆ. ವೈಕುಂಠವು ಸರ್ವದ್ಯುಲೋಕಗಳಿಂದ ಉಚ್ಚಸ್ಥಾನದಲ್ಲಿರುವುದು ಎನ್ನುವುದು "ದ್ಯಾವ್ಯತ್ರ್ಕೇಭ್ಯಶ್ಚ ಸರ್ವೇಭ್ಯೋ ವೈಕುಂಠಶ್ಚ ಉಚ್ಚ ಉಚ್ಯತೇ" ಎಂಬ ಪ್ರಮಾಣದಿಂದ ಸಿದ್ಧವಾಗುವುದು.

**ಚಂದ್ರಿಕಾ ರೀತ್ಯಾ ವ್ಯಾಖ್ಯಾನಾಂತರ**

ಚಂದ್ರಿಕಾದಲ್ಲಿ—ಅಗ್ನಿಸೂಕ್ತದಲ್ಲಿರುವ ಜ್ಯೋತಿಃಶಬ್ದಕ್ಕೂ ಛಾಂದೋಗ್ಯವಾಕ್ಯದಲ್ಲಿರುವ ಜ್ಯೋತಿಃಶಬ್ದಕ್ಕೂ ಒಂದೇ ಅರ್ಥವಲ್ಲ. ಅಗ್ನಿಸೂಕ್ತಸ್ಥವಾದ ಜ್ಯೋತಿಸ್ಸಿಗೆ ಕರ್ಣಾದಿವಿದೂರತ್ವವನ್ನೂ ಛಾಂದೋಗ್ಯಸ್ಥ ಜ್ಯೋತಿಸ್ಸಿಗೆ ದೃಷ್ಟತ್ವ, ಶ್ರುತತ್ವ ಮೊದಲಾದುವುಗಳನ್ನು ಹೇಳುವುದರ ಮೂಲಕ ಭಿನ್ನರೀತಿಯ ಉಪದೇಶವಿರುವುದರಿಂದ ಎಂದರೆ ಅದು ಸರಿಯಲ್ಲ. ಎರಡು ಉಪದೇಶಗಳಲ್ಲೂ ಆಕಾರಭೇದವಿರುವುದರಿಂದ ವಿರೋಧವಿಲ್ಲ ಎಂಬುದಾಗಿ ಇನ್ನೊಂದು ರೀತಿಯ ವ್ಯಾಖ್ಯಾನವನ್ನು ಮಾಡಲಾಗಿದೆ.

ಅಂತಿಮ ಪ್ರಾಣಾಧಿಕರಣ—೧೨

## ಓಂ ಪ್ರಾಣಸ್ತಥಾಽನುಗಮಾತ್ ಓಂ (೧-೧-೨೮)

**ಅಧಿಕರಣದ ಉದ್ದೇಶ ಮತ್ತು ಸೂತ್ರಾರ್ಥ**

[1]ಈ ಅಧಿಕರಣದಲ್ಲಿ ಬ್ರಹ್ಮಾನ್ಯರಾದ ಪ್ರಾಣಾದಿಗಳಿಗೆ ಸಂಬಂಧಿಸಿದಂತೆ ತೋರುವ

---

1. "ತಾ ವಾ ಏತಾಃ ಶೀರ್ಷನ್ ಶ್ರಿಯಃ ಶ್ರಿತಾಃ ಚಕ್ಷುಃ ಶ್ರೋತ್ರಂ ಮನೋ ವಾಕ್ ಪ್ರಾಣಃ" (ಐ. ಆ. ೨-೧-೪) ಎಂಬ ಶ್ರುತಿ ಇಲ್ಲಿ ವಿಷಯವಾಕ್ಯ. 'ಚಕ್ಷುಸ್ಸು, ಶ್ರೋತ್ರ, ಮನಸ್ಸು, ಪ್ರಾಣ ಈ ಇಂದ್ರಿಯಾಭಿಮಾನಿ ದೇವತೆಗಳು ಚತುರ್ಮುಖನ ಶಿರಸ್ಸನ್ನು ಆಶ್ರಯಿಸಿದ್ದಾರೆ' ಎಂದು ಶ್ರುತ್ಯರ್ಥ. ಇಲ್ಲಿ ಇಂದ್ರಿಯಗಳೊಂದಿಗೆ ಪಠಿತವಾಗಿರುವ ಪ್ರಾಣವೂ ಇಂದ್ರಿಯವೇ, ವಿಷ್ಣುವಲ್ಲ ಎಂದು ಪೂರ್ವಪಕ್ಷ. ದೇವೋಪದೇಶ್ಯತ್ವ, ಸರ್ವದೇವೋಪಾಸ್ಯತ್ವ, ಸರ್ವವೇದೋಕ್ತತ್ವ ಮೊದಲಾದ ಬ್ರಹ್ಮಲಿಂಗಗಳು ಈ ಪ್ರಕರಣದಲ್ಲಿ ಶ್ರುತವಾಗಿರುವುದರಿಂದ ಪ್ರಾಣವು ಬ್ರಹ್ಮವೇ ಎಂದು ಸಿದ್ಧಾಂತ.

बहुकृत्वः "ता वा एता" इत्यारभ्य श्रुतः प्राणो यथा "तद्वै त्वं प्राण" इत्ययं ब्रह्म तथा अयं च तत्तु ब्रह्मैव । न त्विन्द्रजीवमुख्यप्राणाः । कुतः ? ब्रह्मशब्ददेवोपास्यत्वादितच्छ्रुतिलिङ्गानामस्मिन् प्रकरणेऽनुगमादनुवृत्तेरभ्यासादित्यर्थः । तथेत्युक्तिस्तत्रोक्तजीवनहेतुत्वरूपप्राणपदप्रवृत्तिनिमित्तसत्त्वस्मारणार्था । "तथा प्राणाः तथाऽन्यत्प्रतिषेधात्" इत्यादिवत् । यद्वा अस्यान्यत्वे प्राचीनोऽप्यन्य इति न शङ्क्यम् । स चायं च ब्रह्मैवेति वक्तुं तथेत्युक्तिः । अनुगमादित्युक्तिरेतत्प्रकरणस्य वैष्णवत्वोक्त्यर्था ।

---

ಅನೇಕ ಲಿಂಗಗಳಿಂದ ಸಹಿತವಾದ ನಾಮಾತ್ಮಕಶಬ್ದಗಳ ಸಮನ್ವಯವು ಹೇಳಲ್ಪಡುವುದು. 'ತದ್ವೈ ತ್ವಂ ಪ್ರಾಣಃ' ಎಂಬಲ್ಲಿ ಶ್ರುತನಾಗಿರುವ ಪ್ರಾಣನು ಹೇಗೆ ಬ್ರಹ್ಮನೋ ತಥಾ–ಹಾಗೆ, ಐತರೇಯದಲ್ಲಿ 'ತಾ ವಾ ಏತಾಃ' ಎಂದಾರಂಭಿಸಿ ಅನೇಕ ಸಲ ಶ್ರುತನಾಗಿರುವ ಪ್ರಾಣನೂ ತತ್ ತು–ಬ್ರಹ್ಮನೇ ಆಗಿದ್ದಾನೆ ಹೊರತು ಇಂದ್ರ, ಜೀವ ಅಥವಾ ಮುಖ್ಯಪ್ರಾಣನಲ್ಲ. ಏಕೆಂದರೆ, ಈ ಪ್ರಕರಣದಲ್ಲಿ ಬ್ರಹ್ಮಶಬ್ದ, ದೇವೋಪಾಸ್ಯತ್ವ ಮೊದಲಾದ ಬ್ರಹ್ಮನಿಗೆ ಸಂಬಂಧಿಸಿದ ಶ್ರುತಿ-ಲಿಂಗಗಳ ಅನುಗಮಾತ್–ಅನುವೃತ್ತಿ ಎಂದರೆ ಅಭ್ಯಾಸವಿರುವುದರಿಂದ ಎಂದು ಅರ್ಥ.

**ಸೂತ್ರದಲ್ಲಿರುವ 'ತಥಾ' ಮತ್ತು 'ಅನುಗಮಾತ್' ಪದಗಳ ಸಾರ್ಥಕತೆ**

'ತಥಾ ಪ್ರಾಣಾಃ' (ಬ್ರ. ಸೂ. ೨–೪–೧) ತಥಾಽನ್ಯತ್ಪ್ರತಿಷೇಧಾತ್ (ಬ್ರ. ಸೂ. ೩–೨–೩೭) ಇತ್ಯಾದಿ ಬ್ರಹ್ಮಸೂತ್ರಗಳಲ್ಲಿ ತಥಾಶಬ್ದವು ಹೇಗೆ ಹಿಂದಿನ ಸೂತ್ರಗಳಲ್ಲಿ ಹೇಳಿರುವ ಯುಕ್ತಿಗಳ ಸ್ಮರಣೆಯನ್ನು ತಂದುಕೊಡುವುದೋ ಹಾಗೆ ಪ್ರಕೃತ ಸೂತ್ರದಲ್ಲೂ ತಥಾ ಶಬ್ದವು ಹಿಂದಿನ ಪ್ರಾಣಾಧಿಕರಣದಲ್ಲಿ ಹೇಳಿರುವ ಪ್ರಾಣಪದಪ್ರವೃತ್ತಿನಿಮಿತ್ತವಾದ ಜೀವನಹೇತುತ್ವ ಎಂಬ ಯುಕ್ತಿಯು ಇಲ್ಲೂ ಇದೆ ಎಂದು ಸ್ಮರಣೆಯನ್ನುಂಟುಮಾಡುವುದು. ಅಥವಾ ಇಲ್ಲಿ ಪ್ರಸಕ್ತನಾಗಿರುವ ಪ್ರಾಣನು ಬ್ರಹ್ಮನಲ್ಲದಿದ್ದಲ್ಲಿ ಹಿಂದೆ ಹೇಳಿದ ಪ್ರಾಣನೂ ಬ್ರಹ್ಮನಲ್ಲ ಎಂದು ಶಂಕಿಸಬಾರದು. ಆ ಪ್ರಾಣನೂ ಮತ್ತು ಇಲ್ಲಿ ಪ್ರಸಕ್ತನಾಗಿರುವ ಪ್ರಾಣನೂ ಬ್ರಹ್ಮನೇ ಎಂದು ಹೇಳಲು 'ತಥಾ' ಎಂದು ಹೇಳಲಾಗಿದೆ. ಈ ಪ್ರಕರಣವು ವಿಷ್ಣುಸಂಬಂಧಿಯಾದ ಪ್ರಕರಣವೆಂದು ಸೂಚಿಸಲು 'ಅನುಗಮಾತ್' ಎಂದು ಹೇಳಲಾಗಿದೆ.

उक्तमाक्षिप्य समाधत्ते—

॥ ॐ न वक्तुरात्मोपदेशादिति चेदध्यात्मसम्बन्ध-भूमा ह्यस्मिन् ॐ ॥ १-१-२९

वक्तुर्बृहतीसहस्रं वक्तुर्विश्वामित्रस्येन्द्रेण "प्राणो वा अहमस्म्यृषे" इत्यात्मन एव प्राणतयोपदेशान्न प्राणो ब्रह्मेति चेन्नेति शेषः । कुतः ? हि यस्मात् अस्मिन् प्रकरणेऽध्यात्मं देहेषु विष्णुदेहभूतेष्विन्द्रविश्वामित्रादिषु सम्बन्धभूमा सम्बन्धबाहुल्यम्, "प्राणोऽहं प्राणस्त्वं प्राणस्सर्वाणि भूतानि" इत्युक्तबह्वध्यात्मसम्बन्ध इति यावत्, व्यपदिश्यते यतोऽतः प्राणो विष्णुरित्यर्थः । इन्द्रेण प्राणाख्यब्रह्मणः सर्वगतत्वमेवोच्यते

---

ಈಗ ಹೇಳಿರುವುದನ್ನು ಆಕ್ಷೇಪಿಸಿ ಸಮಾಧಾನವನ್ನು ನೀಡುವ ಸೂತ್ರ —

ಓಂ ನ ವಕ್ತುರಾತ್ಮೋಪದೇಶಾದಿತಿ ಚೇದಧ್ಯಾತ್ಮಸಂಬಂಧ-ಭೂಮಾ ಹ್ಯಸ್ಮಿನ್ ಓಂ (೧--೧--೨೯)

**ಸೂತ್ರಾರ್ಥ**

ವಕ್ತುಃ–ಬೃಹತೀಸಹಸ್ರವನ್ನು ಹೇಳಿದ ವಿಶ್ವಾಮಿತ್ರನನ್ನು ಕುರಿತು 'ಪ್ರಾಣೋ ವಾ ಅಹಮಸ್ಮಿ ಋಷೇ' ಎಂಬುದಾಗಿ ಇಂದ್ರನು ತನ್ನನ್ನೇ ಪ್ರಾಣನೆಂದು ಉಪದೇಶಿಸಿರುವುದರಿಂದ ಪ್ರಾಣನು ಬ್ರಹ್ಮನಲ್ಲ ಎಂದರೆ ಅದು ಸರಿಯಲ್ಲ. ಇಲ್ಲಿ 'ಸರಿಯಲ್ಲ' ಎಂದು ಶೇಷವನ್ನು ಸೇರಿಸಿಕೊಳ್ಳಬೇಕು. ಏಕೆಂದರೆ, ಹಿ–ಯಾವ ಕಾರಣದಿಂದ, ಅಸ್ಮಿನ್–ಈ ಪ್ರಕರಣದಲ್ಲಿ, ಅಧ್ಯಾತ್ಮಂ ದೇಹಗಳಲ್ಲಿ ಎಂದರೆ ವಿಷ್ಣುದೇಹವಾಗಿರುವ ಇಂದ್ರ, ವಿಶ್ವಾಮಿತ್ರ ಮೊದಲಾದವರಲ್ಲಿ ಸಂಬಂಧಭೂಮಾ-ಸಂಬಂಧಬಾಹುಲ್ಯವು ಅಂದರೆ 'ಪ್ರಾಣೋಽಹಂ ಪ್ರಾಣಸ್ತ್ವಂ ಪ್ರಾಣಃ ಸರ್ವಾಣಿ ಭೂತಾನಿ' ಎಂಬುದಾಗಿ ಬಹಳವಾದ ಅಧ್ಯಾತ್ಮಸಂಬಂಧವು ಹೇಳಲ್ಪಡುವುದೋ ಆ ಕಾರಣದಿಂದ ಪ್ರಾಣನು ವಿಷ್ಣುವೆಂದು ಅರ್ಥ. ಇಂದ್ರನು ಪ್ರಾಣನಾಮಕನಾದ ಬ್ರಹ್ಮನ ಸರ್ವಗತತ್ವವನ್ನು ಹೇಳುತ್ತಿದ್ದಾನೆ ಹೊರತು ತನ್ನನ್ನೇ ಪ್ರಾಣನೆಂದು ಉಪದೇಶಿಸುತ್ತಿಲ್ಲವೆಂದು ಭಾವ.

**'ಅಧ್ಯಾತ್ಮಸಂಬಂಧ ಭೂಮಾ' ಪದಕ್ಕೆ ವ್ಯಾಖ್ಯಾನಾಂತರ ಮತ್ತು 'ವಕ್ತುಃ' ಪದಪ್ರಯೋಗದ ವೈಶಿಷ್ಟ್ಯ**

ಅಥವಾ, ಅಸ್ಮಿನ್–ಈ ಇಂದ್ರನಲ್ಲಿ ಅಧಿಕನಾದ ಆತ್ಮನ, ಸಂಬಂಧಭೂಮಾ ಎಂದರೆ ಬಹುಲವಾದ ಆವೇಶವು ಇರುವುದು. ಈ ದೃಷ್ಟಿಯಿಂದ 'ಪ್ರಾಣೋ ವಾ

न तु प्राणत्वेनात्मोपदिश्यत इति भावः । यद्वा अस्मिन्निन्द्रेऽधिकात्मनः सम्बन्धभूमा आवेशबाहुल्यं हि यस्मादस्त्यतस्तदपेक्षया "प्राणो वा अहम्" इत्युक्तिरित्यर्थः । आत्मोपदेशादित्येव पूर्तौ वक्तुरित्युक्तिः शास्त्रवक्तारं प्रतीन्द्रस्य न विप्रलम्भ इति पूर्वपक्षे युक्तिसूचनार्था । सम्बन्धेत्युक्तिरैक्यनिवृत्त्यर्था ॥

तर्हि प्राणो मय्यस्त्यृषे इत्यादि स्यादित्यत आह—

॥ ॐ शास्त्रदृष्ट्या तूपदेशो वामदेववत् ॐ ॥
१-१-३०

तुरेव । शास्तीति शास्त्रमन्तर्यामी । "संविच्छास्त्रं परं पदम्" इत्यादेः । तद्दृष्ट्यैव "प्राणो वा अहम्" इत्युपदेशो न तु तादात्म्येन ।

---

ಅಹಂ' ಎಂದು ಹೇಳಲಾಗಿದೆ ಎಂದು ಅರ್ಥ. 'ಆತ್ಮೋಪದೇಶಾತ್' ಎಂದಿಷ್ಟೇ ಹೇಳಿದ್ದರೂ ಸಾಕಾಗಿತ್ತು. ಆದರೂ 'ವಕ್ತುಃ' ಎಂದು ಹೇಳಿರುವುದು ಶಾಸ್ತ್ರವಕ್ತಾರನನ್ನು ಇಂದ್ರ ವಂಚಿಸಲಾರ ಎಂದು ಪೂರ್ವಪಕ್ಷಯುಕ್ತಿಯನ್ನು ಸೂಚಿಸಲು. 'ಸಂಬಂಧ' ಎಂದು ಹೇಳಿರುವುದು ಐಕ್ಯವನ್ನು ನಿವಾರಿಸುವುದಕ್ಕಾಗಿ.

ತನ್ನಲ್ಲಿರುವ ಪರಮಾತ್ಮನ ಸಂಬಂಧಬಾಹುಳ್ಯವನ್ನು ಹೇಳುವ ಉದ್ದೇಶವಿರುವುದಾದಲ್ಲಿ ಇಂದ್ರನು 'ಪ್ರಾಣೋ ಮಯಿ ಅಸ್ತಿ ಋಷೇ'—ಎಲೈ ಋಷಿಯೇ, ನನ್ನಲ್ಲಿ ಬ್ರಹ್ಮನಿದ್ದಾನೆ—ಎಂದು ಹೇಳಬೇಕಾಗಿತ್ತು ಎಂಬ ಆಕ್ಷೇಪಕ್ಕೆ ಉತ್ತರವನ್ನು ಹೇಳುವ ಸೂತ್ರ—

ಓಂ ಶಾಸ್ತ್ರದೃಷ್ಟ್ಯಾ ತೂಪದೇಶೋ ವಾಮದೇವವತ್ ಓಂ
(೧-೧-೩೦)

**ಸೂತ್ರಾರ್ಥ ಮತ್ತು 'ಶಾಸ್ತ್ರ' ಪದಪ್ರಯೋಗದ ಉದ್ದೇಶ**

'ತು' ಶಬ್ದಕ್ಕೆ ಏವ ಎಂದರ್ಥ. [1] 'ಸಂವಿತ್ ಶಾಸ್ತ್ರಂ ಪರಂ ಪದಮ್' ಎಂಬ ಪ್ರಮಾಣಾನುಸಾರ 'ಶಾಸ್ತಿ ಇತಿ ಶಾಸ್ತ್ರಂ' ಎಂಬ ವ್ಯುತ್ಪತ್ತಿಯಿಂದ ಶಾಸ್ತ್ರವೆಂದರೆ

1. ಭಾಗವತ ಪ್ರಥಮಸ್ಕಂಧದ ವಾಕ್ಯ. ಇಲ್ಲಿ ಭಗವಂತನನ್ನು ಸಂವಿತ್, ಶಾಸ್ತ್ರ ಮೊದಲಾದ ಪದಗಳಿಂದ ನಿರ್ದೇಶಿಸಲಾಗಿದೆ.

वामदेववत् वामदेवोपदेशवत् । यथा वामदेवोऽन्तर्यामिदृष्ट्या "अहं मनुरभवम्" इत्याद्याह तद्वदित्यर्थः । अन्तर्यामिदृष्ट्येति वाच्ये शास्त्रेत्युक्तिः सर्वशास्तृत्वात् तत्तच्छब्दवाच्यतेति ज्ञापनार्था । "तत्तन्नाम्नोच्यते विष्णुस्सर्वशास्तृत्वहेतुतः" इत्यादेः ।

## ॥ ॐ जीवमुख्यप्राणलिङ्गान्नेति चेन्नोपासात्रैविध्या-दाश्रितत्वादिह तद्योगात् ॐ ॥ १-१-३१

प्राणो ब्रह्मेति वर्तते । नेत्यनन्तरं शास्त्रदृष्ट्या तूपदेश इति च । "तं शतं वर्षाण्यभ्यार्चत्" इति शतायुष्ट्वादिरूपजीवलिङ्गात् प्राण-

---

ಅಂತರ್ಯಾಮಿ ಅಂತರ್ಯಾಮಿಯ ದೃಷ್ಟಿಯಿಂದಲೇ 'ಪ್ರಾಣೋ ವಾ ಅಹಮ್' ಎಂದು ಉಪದೇಶಿಸಿದ್ದು ಹೊರತು ಅಭೇದವಿರುವುದರಿಂದಲ್ಲ. ವಾಮದೇವವತ್–ವಾಮದೇವನ ಉಪದೇಶದಂತೆ. ಹೇಗೆ ವಾಮದೇವನು ಅಂತರ್ಯಾಮಿದೃಷ್ಟಿಯಿಂದಲೇ 'ಅಹಂ ಮನುರಭವಂ' ಎಂದು ಮೊದಲಾಗಿ ಹೇಳಿದನೋ ಅದರಂತೆ ಎಂದು ಅರ್ಥ. ಅಂತರ್ಯಾಮಿದೃಷ್ಟ್ಯಾ ಎಂದು ಹೇಳುವ ಬದಲು ಶಾಸ್ತ್ರದೃಷ್ಟ್ಯಾ ಎಂದು ಹೇಳಿರುವುದು 'ತತ್ತನ್ನಾಮ್ನೋಚ್ಯತೇ ವಿಷ್ಣುಃ ಸರ್ವಶಾಸ್ತೃತ್ವಹೇತುತಃ' ಎಂಬ ಪ್ರಮಾಣದಂತೆ ಪರಮಾತ್ಮನು ಎಲ್ಲರಿಗೂ ನಿಯಾಮಕನಾಗಿರುವುದರಿಂದ ಆಯಾ ಶಬ್ದದಿಂದ ವಾಚ್ಯನಾಗಿದ್ದಾನೆ ಎಂಬುದನ್ನು ಜ್ಞಾಪಿಸುವುದಕ್ಕಾಗಿ.

## ಓಂ ಜೀವಮುಖ್ಯಪ್ರಾಣಲಿಂಗಾನ್ನೇತಿ ಚೇನ್ನೋಪಾಸಾತ್ರೈವಿಧ್ಯಾದಾಶ್ರಿತತ್ವಾದಿಹ ತದ್ಯೋಗಾತ್ ಓಂ (೧-೧-೩೧)

**ಸೂತ್ರದ ಆಕ್ಷೇಪಾಂಶ ಮತ್ತು ಸಮಾಧಾನಾಂಶಗಳ ವಿವರಣೆ**

ಪ್ರಾಣೋ ಬ್ರಹ್ಮ ಎಂಬ ಪದಗಳನ್ನು ಇಲ್ಲಿ ಸೇರಿಸಿಕೊಳ್ಳಬೇಕು. 'ನ' ಎಂಬುದರ ಅನಂತರ 'ಶಾಸ್ತ್ರದೃಷ್ಟ್ಯಾ ತೂಪದೇಶಃ' ಎಂಬ ವಾಕ್ಯವನ್ನೂ ಅನುವೃತ್ತಿಮಾಡಿಕೊಳ್ಳಬೇಕು. 'ತಂ ಶತಂ ವರ್ಷಾಣಿ ಅಭ್ಯಾರ್ಚತ್' ಎಂಬುದಾಗಿ ಶತಾಯುಷ್ಟ್ವರೂಪವಾದ ಜೀವಲಿಂಗ ಮತ್ತು ಇಂದ್ರಿಯಗಳೊಡನೆ ಸಂವಾದರೂಪವಾದ ಮುಖ್ಯಪ್ರಾಣನ ಲಿಂಗಗಳಿರುವುದರಿಂದ ಪ್ರಾಣನು ಬ್ರಹ್ಮನಲ್ಲವೆಂದರೆ ಅದು ಸರಿಯಲ್ಲ. 'ತಂ ಶತಂ' ಇತ್ಯಾದಿಯಾಗಿ ಜೀವ ಮತ್ತು ಮುಖ್ಯಪ್ರಾಣರ ಲಿಂಗಗಳನ್ನು ಉಪದೇಶಿಸಿರುವುದು ಅಂತರ್ಯಾಮಿದೃಷ್ಟಿಯಿಂದ ಎಂದು ಹೇಳುವುದೇ ಯುಕ್ತವಾದುದು.

संवादादिमुख्यप्राणलिङ्गान्न प्राणो ब्रह्मेति चेन्न । "तं शतम्" इत्यादि-जीवप्राणलिङ्गोपदेशः तदन्तर्यामिदृष्ट्यैव युक्तः । "उदासीनवदास्तां तौ" इत्यौदासीन्यं तु बाह्यरूपेणेत्यविरोधः । किमर्थोऽन्तर्याम्युक्ति-रित्यत उक्तमुपासेत्यादि । अन्तर्व्याप्तत्वबहिष्ठत्वभेदेन ब्रह्मोपासायाः त्रैविध्यादिह प्रकरणे "स एतमेव सीमानं विदार्यैतया द्वारा प्रापद्यत" इति "स एतमेव पुरुषं ब्रह्मततममपश्यत्" इति "एतद्ध स्म वै तद्विद्वानाह महिदास ऐतरेयः" इति च तत्त्रैविध्यस्याश्रितत्वादुक्तत्वा-दित्यर्थः । एकयैवोपासयाऽलं किं त्रैविध्येनेत्यत उक्तं–तद्योगात् ।

---

'ಉದಾಸೀನವದಾಸ್ತಾಂ ತೌ' ಎಂಬುದಾಗಿ ಅಂತರ್ಯಾಮಿಯು ಉದಾಸೀನನಾಗಿದ್ದಾನೆಂದು ಹೇಳಿರುವುದು ಬಾಹ್ಯರೂಪದ ದೃಷ್ಟಿಯಿಂದಾದುದರಿಂದ ವಿರೋಧವಿಲ್ಲ.

### ಅಂತರ್ಯಾಮಿದೃಷ್ಟಿಯ ಉದ್ದೇಶ

ಅಂತರ್ಯಾಮಿಯನ್ನು ಹೇಳುವುದರ ಪ್ರಯೋಜನವೇನು ಎಂಬ ಪ್ರಶ್ನೆಗೆ ಉತ್ತರವಾಗಿ 'ಉಪಾಸಾ' ಇತ್ಯಾದಿ ಹೇಳಲ್ಪಟ್ಟಿದೆ. ಅಂತಃ, ವ್ಯಾಪ್ತತ್ವ ಮತ್ತು ಬಹಿಷ್ಠತ್ವ ಎಂಬುದಾಗಿ ಬ್ರಹ್ಮೋಪಾಸನೆಯು ಮೂರು ವಿಧವಾಗಿರುವುದರಿಂದ, ಈ ಪ್ರಕರಣದಲ್ಲಿ 'ಸ ಏತಮೇವ ಸೀಮಾನಂ ವಿದಾರ್ಯ ಏತಯಾ ದ್ವಾರಾ ಪ್ರಾಪದ್ಯತ', 'ಸ ಏತಮೇವ ಪುರುಷಂ ಬ್ರಹ್ಮತತಮಂ ಅಪಶ್ಯತ್' ಮತ್ತು 'ಏತದ್ಧ ಸ್ಮ ವೈ ತದ್ವಿದ್ವಾನಾಹ ಮಹಿದಾಸ ಐತರೇಯಃ' ಎಂಬುದಾಗಿ ಆ ತ್ರೈವಿಧ್ಯವನ್ನು ಆಶ್ರಯಿಸಿರುವುದರಿಂದ ಅಂದರೆ ಹೇಳಿರುವುದರಿಂದ ಎಂದು ಅರ್ಥ. ಒಂದು ಬಗೆಯ ಉಪಾಸನೆಯೇ ಸಾಕು, ತ್ರಿವಿಧೋಪಾಸನೆ ಏಕೆ ಎಂಬ ಪ್ರಶ್ನೆಗೆ ಉತ್ತರ—'ತದ್ಯೋಗಾತ್'. ತಸ್ಯ—ಆ ಉಪಾಸನಾತ್ರೈವಿಧ್ಯಕ್ಕೆ ಅಧಿಕಾರಭೇದದಿಂದ, ಯೋಗಾತ್–ಯುಕ್ತತೆ ಇರುವುದರಿಂದ ಎಂದು ಅರ್ಥ.

### 'ಉಪಾಸಾತ್ರೈವಿಧ್ಯಾತ್' ಎಂಬ ಸಮಾಸದ ಮತ್ತು 'ಉಪಾಸಾ' ಶಬ್ದದ ಸಾಧುತ್ವಸಮರ್ಥನೆ

'ಪೂರಣಗುಣ' (ಪಾ. ಸೂ. ೨-೨-೧೧) ಇತ್ಯಾದಿ ಪಾಣಿನಿಸೂತ್ರದಿಂದ ಗುಣವಾಚಕಶಬ್ದದೊಡನೆ ಷಷ್ಠೀಸಮಾಸವು ನಿಷೇಧಿಸಲ್ಪಟ್ಟಿದ್ದರೂ, ಆ ನಿಷೇಧ ಅನಿತ್ಯವೆಂದು ಹೇಳಿರುವುದರಿಂದ 'ಸಂಜ್ಞಾಪ್ರಮಾಣತ್ವಾತ್' ಎಂಬ ಸಮಾಸದಂತೆ 'ಉಪಾಸಾತ್ರೈವಿಧ್ಯಾತ್' ಎಂಬ ಸಮಾಸವು ಸಾಧುವಾಗಿದೆ. ಇದೇ ರೀತಿಯಾಗಿ ಮುಂದೆಯೂ

तस्योपासात्रैविध्यस्याधिकारिभेदेन योगाद्युक्तत्वादित्यर्थः । "पूरण-गुण" इति गुणेन समासनिषेधस्यानित्यत्वोक्तेरुपासात्रैविध्यादिति साधु । संज्ञाप्रमाणत्वादित्यादिवत् । एवमग्रेऽपि । "ण्यासश्रन्थो युच्" इति विशेषमनाश्रित्य "गुरोश्च हलः" इत्युत्सर्गस्यैवाश्रयणाद्वा, "रोगाख्यायां ण्वुल् बहुलम्" इति बहुलग्रहणाद्वा, "वाऽसरूपोऽस्त्रियाम्" इति सरूपप्रत्ययस्य विकल्पेन बाधोक्तेर्घञन्तत्वेन वा उपासेति साधु ॥ "घञन्तः पुंसि" इति पाणिनीयलिङ्गानुशासनस्य तृतीये "नौ वृ धान्ये" इत्यत्र मञ्जर्यां प्रायिकत्वोक्तेः ॥ १२ ॥

---

ಸಮಾಧಾನವನ್ನು ತಿಳಿಯಬೇಕು. [1]'ಣ್ಯಾಸಶ್ರಂಥೋ ಯುಚ್'(ಪಾ.ಸೂ. ೩-೩-೧೦೭) ಎಂಬ ವಿಶೇಷಸೂತ್ರವನ್ನು ಆಶ್ರಯಿಸದೇ, 'ಗುರೋಶ್ಚ ಹಲಃ'(ಪಾ.ಸೂ. ೩-೩-೧೦೩) ಎಂಬ ಸಾಮಾನ್ಯಸೂತ್ರವನ್ನೇ ಆಶ್ರಯಿಸಿರುವುದರಿಂದ ಅಥವಾ 'ರೋಗಾಖ್ಯಾಯಾಂ ಣ್ವುಲ್ ಬಹುಲಮ್' (ಪಾ. ಸೂ. ೩-೩-೧೦೮) ಎಂಬ ಸೂತ್ರದಲ್ಲಿ 'ಬಹುಲ' ಗ್ರಹಣಮಾಡಿರುವುದರಿಂದ 'ವಾಽಸರೂಪೋಽಸ್ತ್ರಿಯಾಮ್' (ಪಾ.ಸೂ. ೩-೧-೯೪) ಎಂಬುದಾಗಿ ಸರೂಪಪ್ರತ್ಯಯಕ್ಕೆ ವಿಕಲ್ಪದಿಂದ ಬಾಧವನ್ನು ಹೇಳುವುದರಿಂದ 'ಘಞ್' ಪ್ರತ್ಯಯಾಂತವಾದ 'ಉಪಾಸಾ' ಎಂಬ ಪದವು ಸಾಧುವಾಗಿದೆ. 'ಘಞಂತಃ ಪುಂಸಿ' —ಘಞ್ ಪ್ರತ್ಯಯಾಂತ ಶಬ್ದವು ಪುಲ್ಲಿಂಗದಲ್ಲಿರಬೇಕು ಎಂಬ ಪಾಣಿನೀಯ ಲಿಂಗಾನುಶಾಸನವನ್ನು ಪ್ರಾಯಿಕವೆಂದು ಮಂಜರೀಗ್ರಂಥದಲ್ಲಿ ತೃತೀಯಾಧ್ಯಾಯದ 'ನೌ

---

1. ಆಸ್ ಧಾತುವಿಗೆ ಯುಚ್ ಪ್ರತ್ಯಯವು ಎಂದು ಈ ಸೂತ್ರ ಹೇಳುತ್ತದೆ. ಯುಚ್ ಪ್ರತ್ಯಯ ಬಂದಿದ್ದಲ್ಲಿ 'ಉಪಾಸನಾ' ಎಂಬ ರೂಪವಾಗಬೇಕಾಗಿತ್ತು. ಆದರೆ, ಗುರುವರ್ಣವುಳ್ಳ ಹಲಂತಧಾತುವಿಗೆ ಸ್ತ್ರೀಲಿಂಗದಲ್ಲಿ ಅಕಾರ ಪ್ರತ್ಯಯವು ಬರುವುದೆಂದು ಹೇಳುವ ಗುರೋಶ್ಚ ಹಲಃ ಎಂಬ ಸೂತ್ರದ ಪ್ರಕಾರ 'ಉಪ' ಎಂಬ ಉಪಸರ್ಗಸಹಿತವಾದ ಆಸ್ ಧಾತುವಿಗೆ ಅಕಾರಪ್ರತ್ಯಯವನ್ನು ಸೇರಿಸಿದಾಗ 'ಉಪಾಸಾ' ಎಂದು ರೂಪವಾಗುವುದು. ಅಥವಾ 'ಉಪಾಸಾ' ಎಂಬ ಪದ ಘಞ್ ಪ್ರತ್ಯಯಾಂತವಾದ ಪದ. 'ರೋಗಾಖ್ಯಾಯಾಂ ಣ್ವುಲ್ ಬಹುಲಮ್' ಎಂಬ ಸೂತ್ರದಲ್ಲಿ 'ಬಹುಲ' ಗ್ರಹಣದಿಂದ ಣ್ವುಲ್ ಪ್ರತ್ಯಯಭಿನ್ನವಾದ ಪ್ರತ್ಯಯವೂ ಬರಬಹುದೆಂದು ಸೂಚಿತವಾಗಿರುವುದರಿಂದ ಹೀಗೆ ಹೇಳಬಹುದು. ಸಮಾನರೂಪವಿಲ್ಲದ ಅಪವಾದ ಪ್ರತ್ಯಯವು ಉತ್ಸರ್ಗ ಪ್ರತ್ಯಯಕ್ಕೆ ವಿಕಲ್ಪದಿಂದ ಬಾಧಕವಾಗುವುದು ಎಂದು ಹೇಳುವ 'ವಾಽಸರೂಪೋಽಸ್ತ್ರಿಯಾಮ್' ಎಂಬ ಸೂತ್ರದ ಪ್ರಕಾರ ವಿಭಿನ್ನರೂಪವುಳ್ಳ ಯುಚ್ ಪ್ರತ್ಯಯವು ಘಞ್ ಪ್ರತ್ಯಯಕ್ಕೆ ವಿಕಲ್ಪದಿಂದ ಬಾಧಕವಾಗುವುದು. ಆದ್ದರಿಂದ ಘಞಂತವಾದ 'ಉಪಾಸಾ' ಪದ ಮತ್ತು ಯುಜಂತವಾದ 'ಉಪಾಸನಾ' ಪದ—ಇವೆರಡೂ ಸಾಧುವೆಂದು ಭಾವ.

अत्रानन्दमयनये विष्णोः स्वावयवैक्यं, अन्तर्नये इन्द्रादिदेवगतैश्वर्यादेः आकाशनये सर्वस्वभावस्य चेशायत्तत्वं, प्राणनये सर्वजीवनहेतुत्वं, ज्योतिर्नये सर्वसूक्तानामवैष्णवत्वप्रसिद्धेरज्ञानमूलत्वं, छन्दोनये अनादिनित्यस्यापीशाधीनत्वं, अन्त्यनये सर्वतत्तच्छ्रुतिलिङ्गानां तत्तदन्तर्यामिस्थत्वं सिद्धमित्यादि बोध्यम् ॥

इति श्रीमद्राघवेन्द्रयतिकृतायां तन्त्रदीपिकायां प्रथमाध्यायस्य प्रथमः पादः ॥ श्रीकृष्णार्पणमस्तु ॥

---

ವೃ ಧಾನ್ಯೇ' (ಪಾ. ಸೂ. ೩-೩-೪೮) ಎಂಬ ಸೂತ್ರವ್ಯಾಖ್ಯಾ ಸಂದರ್ಭದಲ್ಲಿ ಹೇಳಿರುವುದರಿಂದ 'ಉಪಾಸಾ' ಎಂದು ಸ್ತ್ರೀಲಿಂಗವು ಸಾಧುವಾಗಿದೆ.

**ಈ ಪಾದದ ಆನಂದಮಯಾದ್ಯಧಿಕರಣಗಳಿಂದ ಸಿದ್ಧವಾಗುವ ಕೆಲವು ಮುಖ್ಯ ಪ್ರಮೇಯಗಳು**

ಈ ಪಾದದಲ್ಲಿ—ಆನಂದಮಯಾಧಿಕರಣದಲ್ಲಿ ವಿಷ್ಣುವಿಗೆ ತನ್ನ ಅವಯವಗಳಿಂದ ಐಕ್ಯ, ಅಂತರಧಿಕರಣದಲ್ಲಿ ಇಂದ್ರಾದಿದೇವತೆಗಳ ಐಶ್ವರ್ಯಕ್ಕೆ, ಆಕಾಶಾಧಿಕರಣದಲ್ಲಿ ಸರ್ವವಸ್ತುಗಳ ಸ್ವಭಾವ—ಇವುಗಳಿಗೆ ಈಶಾಧೀನತ್ವ, ಪ್ರಾಣಾಧಿಕರಣದಲ್ಲಿ ಸರ್ವ ಜೀವನಹೇತುತ್ವ, ಜ್ಯೋತಿರಧಿಕರಣದಲ್ಲಿ ಸರ್ವಸೂಕ್ತಗಳೂ ಅವೈಷ್ಣವ ಎಂಬ ಪ್ರಸಿದ್ಧಿಗೆ ಅಜ್ಞಾನಮೂಲತ್ವ, ಛಂದೋಧಿಕರಣದಲ್ಲಿ ಅನಾದಿನಿತ್ಯವಾದದ್ದಕ್ಕೂ ಈಶಾಧೀನತ್ವ, ಕೊನೆಯ ಅಧಿಕರಣದಲ್ಲಿ ಸಮಸ್ತವಾದ, ಆಯಾ ದೇವತೆಗಳ, ಶ್ರುತಿ-ಲಿಂಗಗಳಿಗೆ ಅಂತರ್ಯಾಮಿಸ್ಥತ್ವ—ಇವುಗಳು ಸಿದ್ಧವಾಗುತ್ತವೆ ಇತ್ಯಾದಿ ವಿಷಯಗಳನ್ನು ತಿಳಿಯಬೇಕು.

ಶ್ರೀಮದ್ರಾಘವೇಂದ್ರಯತಿಗಳು ರಚಿಸಿರುವ **ತಂತ್ರದೀಪಿಕೆಯಲ್ಲಿ** ಪ್ರಥಮಾಧ್ಯಾಯದ ಪ್ರಥಮಪಾದವು ಸಮಾಪ್ತವಾಯಿತು.

*

# प्रथमाध्यायस्य द्वितीयः पादः

## सर्वगतत्वाधिकरणम्—१

एवमन्यत्रप्रसिद्धाशेषनामसमन्वयमुक्त्वा अत्रपादे तादृशलिङ्गसमन्वय उच्यते—

**॥ ॐ सर्वत्र प्रसिद्धोपदेशात् ॐ ॥ १-२-१**

अत्र नये सर्वत्रावस्थितत्वरूपतादृशभावाख्यलिङ्गसमन्वयः क्रियते । तत्त्विति वर्तते । उच्यमानमिति शेषः । सर्वत्र "एतमस्यामेतं दिवि" इत्यादिना "सर्वेषु भूतेषु" इत्यन्तेन पृथिव्यादिषूच्यमानं

---

# ಪ್ರಥಮಾಧ್ಯಾಯ—ದ್ವಿತೀಯಪಾದ

## ಸರ್ವಗತತ್ವಾಧಿಕರಣ—೧

**ಈ ಪಾದದ ಪ್ರತಿಪಾದ್ಯ ವಿಷಯ**

ಹೀಗೆ ಅನ್ಯತ್ರ ಪ್ರಸಿದ್ಧವಾದ ಅಶೇಷ ನಾಮಾತ್ಮಕ ಶಬ್ದಗಳ ಸಮನ್ವಯವನ್ನು ಹೇಳಿದ ನಂತರ ಈ ಪಾದದಲ್ಲಿ ಅನ್ಯತ್ರ ಪ್ರಸಿದ್ಧ ಅಶೇಷ ಲಿಂಗಾತ್ಮಕ ಶಬ್ದಗಳ ಸಮನ್ವಯವು ಹೇಳಲ್ಪಡುತ್ತದೆ.

**ಓಂ ಸರ್ವತ್ರ ಪ್ರಸಿದ್ಧೋಪದೇಶಾತ್ ಓಂ (೧-೨-೧)**

**ಅಧಿಕರಣ ಪ್ರತಿಪಾದ್ಯ ವಿಷಯ ಮತ್ತು ಸೂತ್ರಾರ್ಥ**

[1]ಈ ಅಧಿಕರಣದಲ್ಲಿ ಸರ್ವತ್ರ ಅವಸ್ಥಿತತ್ವವೆಂಬ ಅನ್ಯತ್ರ ಪ್ರಸಿದ್ಧ ಭಾವರೂಪವಾದ ಲಿಂಗದ ಸಮನ್ವಯವು ಮಾಡಲ್ಪಡುತ್ತದೆ. 'ತತ್ ತು' ಎಂಬ ಪದಗಳನ್ನು

---

1. ಈ 'ತಸ್ಯೈತಸ್ಯಾಸಾವಾದಿತ್ಯೋ ರಸಃ ..... ಏತಂ ಸರ್ವೇಷು ಭೂತೇಷು' (ಐ. ೩–೨–೩) ಇತ್ಯಾದಿ ಶ್ರುತಿಯು ಇಲ್ಲಿ ವಿಷಯವಾಕ್ಯ. 'ಪ್ರಕೃತನಾದ ಸಂವತ್ಸರನಾಮಕ ಚತುರ್ಮುಖನಿಗೆ ಆದಿತ್ಯನಾಮಕನಾದ ಪ್ರದ್ಯುಮ್ನನು ಅಧಿಪತಿಯು. ಇವನನ್ನು ವಿದ್ವಾಂಸರು ಸರ್ವಗತನೆಂದು ಹೇಳುವರು ಎಂದು ಸಿದ್ಧಾಂತದಲ್ಲಿ ಶ್ರುತ್ಯರ್ಥ. ಇಲ್ಲಿ ಶ್ರುತವಾಗಿರುವ ಸರ್ವಗತತ್ವವು ಪ್ರಸಿದ್ಧ ಆದಿತ್ಯನಿಗೆ ಅಂದರೆ ಸೂರ್ಯನಿಗೆ ಸಂಬಂಧಿಸಿದ್ದೆಂದು ಪೂರ್ವಪಕ್ಷ. 'ಏತಮೇವ ಬ್ರಹ್ಮೇತ್ಯಾಚಕ್ಷತೇ' ಎಂಬುದಾಗಿ ಈ ಪ್ರಕರಣದಲ್ಲಿ ಸರ್ವಗತದಲ್ಲಿ ಬ್ರಹ್ಮಶಬ್ದವು ಶ್ರುತವಾಗಿರುವುದರಿಂದ ಸರ್ವಗತನು ಬ್ರಹ್ಮನೆಂದು ಸಿದ್ಧಾಂತ.

तत्तु ब्रह्मैव । न त्वादित्यो जीवो वा । कुतः? प्रसिद्धस्य ब्रह्मण्येव श्रुत्यादौ प्रसिद्धस्य ब्रह्मशब्दस्य "एतमेव ब्रह्मेत्याचक्षते" इत्युपदेशादित्यर्थः । ब्रह्मशब्दादिति वाच्ये प्रसिद्धेत्युक्तिर्जीवादिग्रहणे प्रसिद्धिबाधसूचनाय ।

इतश्चैवमित्याह—

## ॥ ॐ विवक्षितगुणोपपत्तेश्च ॐ ॥ १-२-२

सर्वत्र तत्त्विति वर्तते । विवक्षितानां वक्तुं योग्यानां वक्ष्यमाणानामिति वा, उपसंहारस्थानामिति यावत्, तात्पर्यविषयाणामिति वा, गुणानां "स योऽतोऽश्रुत" इत्याद्युक्ताश्रुतत्वादिधर्माणा-

---

ಅನುವೃತ್ತಿ ಮಾಡಿಕೊಳ್ಳಬೇಕು. 'ಉಚ್ಯಮಾನಂ' ಎಂಬ ಶೇಷವನ್ನು ಸೇರಿಸಿಕೊಳ್ಳಬೇಕು. ಸರ್ವತ್ರ—'ಏತಮಸ್ಯಾಂ ಏತಂ ದಿವಿ' ಎಂದು ಆರಂಭಿಸಿ 'ಸರ್ವೇಷು ಭೂತೇಷು' ಎಂಬಲ್ಲಿಯವರೆಗೆ ಪೃಥಿವೀ ಮೊದಲಾದವುಗಳಲ್ಲಿ, ಉಚ್ಯಮಾನಂ—ಹೇಳಲ್ಪಟ್ಟಿರುವುದು, ತತ್ತು-ಬ್ರಹ್ಮವೇ ಹೊರತು ಆದಿತ್ಯನಾಗಲಿ, ಜೀವನಾಗಲಿ ಅಲ್ಲ. ಏಕೆಂದರೆ, ಪ್ರಸಿದ್ಧಸ್ಯ—ಬ್ರಹ್ಮನಲ್ಲಿಯೇ ಶ್ರುತ್ಯಾದಿಗಳಲ್ಲಿ ಪ್ರಸಿದ್ಧವಾಗಿರುವ ಬ್ರಹ್ಮಶಬ್ದದ, ಉಪದೇಶಾತ್—'ಏತಮೇವ ಬ್ರಹ್ಮೇತ್ಯಾಚಕ್ಷತೇ' ಎಂದು ಉಪದೇಶವಿರುವುದರಿಂದ ಎಂದು ಅರ್ಥ. (ಸೂತ್ರದಲ್ಲಿ) ಬ್ರಹ್ಮಶಬ್ದಾತ್ ಎಂದು ಹೇಳಬೇಕಾಗಿದ್ದರೂ 'ಪ್ರಸಿದ್ಧ' ಎಂದು ಹೇಳಿರುವುದು ಜೀವಾದಿಗಳನ್ನು ಗ್ರಹಿಸಿದಲ್ಲಿ ಪ್ರಸಿದ್ಧಿಯಿಂದ ಬಾಧ ಬರುವುದು ಎಂದು ಸೂಚಿಸಲು.

ಮುಂದೆ ಹೇಳುವ ಕಾರಣದಿಂದಲೂ ಸರ್ವಗತನು ಬ್ರಹ್ಮನೇ ಎಂದು ಹೇಳಲು ಸೂತ್ರ—

## ಓಂ ವಿವಕ್ಷಿತಗುಣೋಪಪತ್ತೇಶ್ಚ ಓಂ (೧-೨-೨)

### ಸೂತ್ರಾರ್ಥ ಮತ್ತು ಸೂತ್ರದಲ್ಲಿ 'ವಿವಕ್ಷಿತ' ಪದದ ಸ್ವಾರಸ್ಯ

'ಸರ್ವತ್ರ', 'ತತ್ತು' ಎಂಬ ಪದಗಳು ಅನುವೃತ್ತಿಗೊಳ್ಳುತ್ತವೆ. ವಿವಕ್ಷಿತಾನಾಂ—ಹೇಳಲು ಯೋಗ್ಯವಾದ ಅಥವಾ ಮುಂದೆ ಹೇಳಲ್ಪಡುವ, ಉಪಸಂಹಾರದಲ್ಲಿರುವ ಎಂದು ಅಭಿಪ್ರಾಯ. ಅಥವಾ ಶ್ರುತಿತಾತ್ಪರ್ಯ ವಿಷಯಗಳಾಗಿರುವ, ಗುಣಾನಾಂ—'ಸ ಯೋಽತೋಽಶ್ರುತಃ' ಇತ್ಯಾದಿಶ್ರುತಿಯಲ್ಲಿ ಹೇಳಲ್ಪಟ್ಟಿರುವ ಅಶ್ರುತತ್ವ ಮೊದಲಾದ

मुपपत्तेश्च पृथिव्यादौ ब्रह्मैव । जीवादावनुपपत्तेरित्यर्थः । विवक्षितेत्युक्तिर्गुणानामुपसंहारस्थत्वादिना प्राबल्यसूचनाय । अनुव्याख्याने तु विवक्षित एतच्छ्रुत्यादावभिमतो दूरे शक्तस्यापि तत्तच्छक्तिप्रबोधनार्थं तत्र तत्रावस्थानरूपो यो गुणस्तस्य लीलयोपपत्तेर्दूरस्थस्यापि शक्तस्य तत्र तत्रावस्थानं व्यर्थमिति न चोद्यमिति वृत्त्यन्तरमभिप्रेतम् ॥

आदित्यश्रुतेरादित्यश्चक्षुर्मयत्वादिलिङ्गाच्च जीवो वा किं न स्यादित्यत आह—

---

ಧರ್ಮಗಳು, ಉಪಪತ್ತೇಶ್ಚ – ಉಪಪನ್ನವಾಗುವುದರಿಂದಲೂ ಪೃಥಿವ್ಯಾದಿಗಳಲ್ಲಿರುವವನು ಬ್ರಹ್ಮನೇ. ಜೀವ ಮೊದಲಾದವರಲ್ಲಿ ಆ ಧರ್ಮಗಳು ಅನುಪಪನ್ನವೆಂದು ಅರ್ಥ. [1]'ವಿವಕ್ಷಿತ' ಎಂದು ಹೇಳಿರುವುದು ಗುಣಗಳು ಉಪಸಂಹಾರದಲ್ಲಿರುವುದರಿಂದ ಪ್ರಬಲಗಳೆಂದು ಸೂಚಿಸಲು.

**ಈ ಸೂತ್ರಕ್ಕೆ ಅನುವ್ಯಾಖ್ಯಾನದಲ್ಲಿ ವ್ಯಾಖ್ಯಾನಾಂತರವನ್ನು ಮಾಡಲಾಗಿದೆ**

ಅನುವ್ಯಾಖ್ಯಾನದಲ್ಲಿ—ವಿವಕ್ಷಿತಃ–ಪ್ರಸಕ್ತವಾದ ಶ್ರುತಿ ಮೊದಲಾದವುಗಳಲ್ಲಿ ಅಭಿಮತವಾದ, ಗುಣಃ–ದೂರದಲ್ಲಿದ್ದೇ ಆಯಾಯಾ ವಸ್ತುಗಳ ಶಕ್ತಿಯನ್ನು ಜಾಗೃತಗೊಳಿಸಲು ಸಮರ್ಥನಾಗಿದ್ದರೂ ಆಯಾಯಾ ವಸ್ತುಗಳ ಶಕ್ತಿಯನ್ನು ಜಾಗೃತಗೊಳಿಸಲು ಆಯಾಯಾ ವಸ್ತುವಿನಲ್ಲೇ ಇರುವಿಕೆಯೆಂಬ ಯಾವ ಗುಣವಿದೆಯೋ ಅದು, ಉಪಪತ್ತೇಃ–ಲೀಲೆಯಿಂದ ಉಪಪನ್ನವಾಗುವುದರಿಂದ ದೂರದಲ್ಲಿದ್ದೇ ಶಕ್ತಿಪ್ರಬೋಧಕನಾಗುವ ಸಾಮರ್ಥ್ಯ ಪಡೆದಿದ್ದರೂ ಆಯಾಯಾ ವಸ್ತುವಿನಲ್ಲಿರುವಿಕೆಯು ವ್ಯರ್ಥವೆಂಬ ಪ್ರಶ್ನೆಗೆ ಅವಕಾಶವಿಲ್ಲೆಂದು ಇನ್ನೊಂದು ರೀತಿಯ ವ್ಯಾಖ್ಯಾನವು ಅಭಿಪ್ರೇತವಾಗಿದೆ.

ಆದಿತ್ಯಶ್ರುತಿಯಿರುವುದರಿಂದ ಆದಿತ್ಯನಾಗಲೀ, ಚಕ್ಷುರ್ಮಯತ್ವಾದಿಲಿಂಗವಿರುವುದರಿಂದ ಜೀವನಾಗಲೀ ಸರ್ವಗತನು ಏಕಾಗಬಾರದೆಂಬ ಆಕ್ಷೇಪಕ್ಕೆ ಉತ್ತರವನ್ನು ನೀಡುವ ಸೂತ್ರ—

---

1. ವಿವಕ್ಷಿತ ಎಂದರೆ ವಕ್ಷ್ಯಮಾಣ—ಉಪಸಂಹಾರದಲ್ಲಿ ಹೇಳಲ್ಪಡುವ ಎಂದು ಅರ್ಥ. ಉಪಕ್ರಮ ಮತ್ತು ಉಪಸಂಹಾರ–ಇವೆರಡರಲ್ಲಿ ಉಪಸಂಹಾರಕ್ಕೆ ಪ್ರಾಬಲ್ಯವೆಂದು ಸಿದ್ಧಾಂತ. ಆದ್ದರಿಂದ ಉಪಸಂಹಾರವಾಕ್ಯದಲ್ಲಿರುವ ಅಶ್ರುತತ್ವ ಮೊದಲಾದ ಬ್ರಹ್ಮಧರ್ಮಗಳೂ ಪ್ರಬಲವಾಗಿದ್ದು ಬ್ರಹ್ಮನೇ ಸರ್ವಗತನೆಂದು ತಿಳಿಸುತ್ತವೆ ಎಂದು ಭಾವ.

## ॥ ॐ अनुपपत्तेस्तु न शारीरः ॐ ॥ १-२-३

सर्वत्रोच्यमानमिति वर्तते । तुरेव । शारीरः शरीरसम्बन्धी आदित्यो जीवो वा न तथा । सर्वगतत्वानुपपत्तेरेवेत्यर्थः । अणुत्वस्य वक्ष्यमाणत्वात्तयोः सर्वगतत्वे कर्मणामपि सर्वसम्बन्धितापत्त्याऽभिमानस्याप्यापातेन सुखदुःखादिव्यवस्थायोगाच्चेति भावः । एवेत्यनुपपत्तेर्दार्ढ्यं किं तत्र साधकोक्त्येति वा सूचयति । नेतर इति वाच्ये शारीर इत्युक्तिः "स यश्चायमशरीरः" इति श्रुतावशरीरत्वानुपपत्तिं च जीवे सूचयितुम् ।

---

## ಓಂ ಅನುಪಪತ್ತೇಸ್ತು ನ ಶಾರೀರಃ ಓಂ (೧-೨-೩)

**ಸೂತ್ರಾರ್ಥ**

'ಸರ್ವತ್ರ ಉಚ್ಯಮಾನಂ' ಎಂಬ ಪದಗಳನ್ನು ಸೇರಿಸಿಕೊಳ್ಳಬೇಕು. 'ತು' ಶಬ್ದಕ್ಕೆ 'ಏವ' ಎಂದರ್ಥ. ಶಾರೀರಃ-ಶರೀರಸಂಬಂಧಿಯಾದ ಆದಿತ್ಯನಾಗಲೀ, ಜೀವನಾಗಲೀ, ಸರ್ವಗತನಲ್ಲ. ಸರ್ವಗತತ್ವವು ಅನುಪಪನ್ನವಾಗುವುದೇ ಇದಕ್ಕೆ ಕಾರಣವೆಂದು ಅರ್ಥ. ಜೀವರಿಗೆ ಅಣುತ್ವವನ್ನು ಮುಂದೆ[1] ಹೇಳುವರು.

**'ಅನುಪಪತ್ತಿ'ಯ ವಿವರಣೆ**

ಆದಿತ್ಯ ಮತ್ತು ಜೀವರು ಸರ್ವಗತರಾದರೆ ಅವರ ಕರ್ಮಗಳೂ ಸರ್ವರಿಗೂ ಸಂಬಂಧಪಟ್ಟದ್ದು ಎಂದಾಗುವುದು. ಆದ್ದರಿಂದ ಅಭಿಮಾನವೂ ಇರುವುದೆಂದು ಒಪ್ಪಬೇಕಾಗುವುದು. ಇದರಿಂದಾಗಿ ಜೀವರಲ್ಲಿ ಕೆಲವರಿಗೆ ಸುಖ ಕೆಲವರಿಗೆ ದುಃಖ ಎಂಬ ವ್ಯವಸ್ಥೆಯು ಹೊಂದಲಾರದು ಎಂದು ಭಾವ.

**'ತು' ಮತ್ತು 'ಶಾರೀರ' ಪದಗಳ ಸ್ವಾರಸ್ಯ**

'ಏವ' ಎಂಬ ಅರ್ಥವುಳ್ಳ 'ತು' ಶಬ್ದವು ಅನುಪಪತ್ತಿಯ ದಾರ್ಢ್ಯವನ್ನಾಗಲೀ, (ಅನುಪಪತ್ತಿಗಳೇ ಇರುವಾಗ) ಆ ವಿಷಯದಲ್ಲಿ ಸಾಧಕಗಳನ್ನು ಹೇಳುವುದರಿಂದ ಉಪಯೋಗವೇನು ? ಎಂಬುದನ್ನಾಗಲೀ ಸೂಚಿಸುತ್ತದೆ. 'ನೇತರಃ' ಎಂದು ಹೇಳುವ ಬದಲು 'ಶಾರೀರಃ' ಎಂದು ಹೇಳಿರುವುದು 'ಸ ಯಶ್ಚಾಯಂ ಅಶರೀರಃ' ಎಂಬ ಶ್ರುತಿಯಲ್ಲಿ ಹೇಳಿರುವ ಅಶರೀರತ್ವದ ಅನುಪಪತ್ತಿಯನ್ನೂ ಜೀವನಲ್ಲಿ ಸೂಚಿಸಲು.

---

1 'ಉತ್ಕ್ರಾಂತಿಗತ್ಯಾಗತೀನಾಂ' (ಬ್ರ. ಸೂ. ೨-೩-೨೦) ಎಂಬ ಸೂತ್ರದಲ್ಲಿ.

इतश्च न शारीरस्तथेत्याह—

॥ ॐ कर्मकर्तृव्यपदेशाच्च ॐ ॥ १-२-४

भावप्रधानोऽयम् । सर्वत्रोच्यमानस्येति शारीरस्येति च विपरिणम्यानुवर्तते । एतस्यामिति पृथिव्यादौ सर्वत्रोच्यमानस्य "आत्मानं परस्मै" इति कर्मत्वेन शारीरस्य शंसतीति कर्तृत्वेन व्यपदेशाच्च न शारीरस्तथेत्यर्थः । तथात्वे शारीरस्यैव शंसनक्रियायां कर्मत्वं कर्तृत्वं च स्यात् । तच्च विरुद्धमेकस्येति भावः ॥

---

ಈ ಮುಂದೆ ಹೇಳುವ ಕಾರಣದಿಂದಲೂ ಶಾರೀರನು ಸರ್ವಗತನಲ್ಲ ಎಂದು ಹೇಳಲು ಸೂತ್ರ—

ಓಂ ಕರ್ಮಕರ್ತೃವ್ಯಪದೇಶಾಚ್ಚ ಓಂ (೧-೨-೪)

**ಸೂತ್ರಾರ್ಥ**

ಈ ಸೂತ್ರವು [1]ಭಾವಪ್ರಧಾನವಾದ ಶಬ್ದಗಳನ್ನೊಳಗೊಂಡಿದೆ. 'ಸರ್ವತ್ರ ಉಚ್ಯಮಾನಸ್ಯ' ಎಂದು 'ಶಾರೀರಸ್ಯ' ಎಂದು ವಿಭಕ್ತಿಯನ್ನು ಬದಲಾಯಿಸಿ ಅನುವೃತ್ತಿಮಾಡಿಕೊಳ್ಳಬೇಕು. 'ಏತಮಸ್ಯಾಂ' ಎಂಬುದಾಗಿ ಪೃಥಿವೀ ಮೊದಲಾದ ಸರ್ವಪದಾರ್ಥಗಳಲ್ಲೂ ಇರುವನೆಂದು ಹೇಳಲ್ಪಡುವವನಿಗೆ 'ಆತ್ಮಾನಂ ಪರಸ್ಮೈ' ಎಂಬುದಾಗಿ ಕರ್ಮತ್ವೇನ, ಮತ್ತು ಶಾರೀರನಿಗೆ 'ಶಂಸತಿ' ಎಂದು ಕರ್ತೃತ್ವೇನ ವ್ಯಪದೇಶವಿರುವುದರಿಂದಲೂ ಶಾರೀರನು ಸರ್ವಗತನಲ್ಲವೆಂದು ಅರ್ಥ. ಶಾರೀರನೇ ಸರ್ವಗತನಾಗಿದ್ದಲ್ಲಿ ಶಂಸನವೆಂಬ ಕ್ರಿಯೆಯಲ್ಲಿ ಶಾರೀರನೇ ಕರ್ಮ ಮತ್ತು ಕರ್ತೃವೆಂದು ಹೇಳಿದಂತಾಗುವುದು. ಆದರೆ ಒಬ್ಬನೇ ವ್ಯಕ್ತಿಗೆ ಕರ್ಮತ್ವ, ಕರ್ತೃತ್ವಗಳು ವಿರುದ್ಧವಾಗಿವೆ ಎಂದು ಭಾವ.[2]

---

1. ಭಾವ ಎಂದರೆ ಧರ್ಮ. ಅದನ್ನೇ ಪ್ರಧಾನವಾಗಿ ಹೇಳುವ ಶಬ್ದಗಳು ಭಾವಪ್ರಧಾನ ಶಬ್ದಗಳು. ಕರ್ಮ ಮತ್ತು ಕರ್ತೃ ಎಂಬ ಶಬ್ದಗಳು ಪ್ರಕೃತದಲ್ಲಿ ಕರ್ಮತ್ವ ಮತ್ತು ಕರ್ತೃತ್ವ ಎಂಬ ಧರ್ಮಗಳನ್ನು ಪ್ರಧಾನವಾಗಿ ಹೇಳುವವೆಂದು ತಾತ್ಪರ್ಯ.

2. ಒಂದು ಕ್ರಿಯೆಗೆ ಒಂದೇ ವಸ್ತು ಕರ್ಮ, ಕರ್ತೃ ಎರಡೂ ಆಗಲಾರದು ಎಂಬುದು ಸಾಮಾನ್ಯ ನಿಯಮ. 'ಆತ್ಮಾನಂ ಪರಸ್ಮೈ ಶಂಸತಿ' ಎಂಬ ಐತರೇಯ ಶ್ರುತಿಯಲ್ಲಿ ಪ್ರಸ್ತುತವಾದ ಸರ್ವಗತನನ್ನು ಆತ್ಮಶಬ್ದದಿಂದ ಹೇಳಿದೆ. ಆದ್ದರಿಂದ ಶಂಸನ ಅಥವಾ ಉಪದೇಶಿಸುವಿಕೆ ಎಂಬ ಕ್ರಿಯೆಗೆ ಸರ್ವಗತನು ಕರ್ಮವಾಗುತ್ತಾನೆ. ಉಪದೇಶಿಸುವವನು ಶಾರೀರ. ಆದ್ದರಿಂದ ಜೀವನು ಶಂಸನಕ್ರಿಯೆಗೆ ಕರ್ತೃ. ಜೀವನೇ ಸರ್ವಗತನೆಂದು ಶ್ರುತಿಪ್ರತಿಪಾದ್ಯನಾಗಿದ್ದಲ್ಲಿ ಕರ್ಮ, ಕರ್ತೃ ಎರಡೂ ಒಂದೇ ಆದಂತಾಯಿತು ಎಂದು ಭಾವ.

चक्षुर्मयत्वादिप्रबलजीवलिङ्गात् प्रागुक्तं ब्रह्मशब्दादिकं सर्वमन्यथयितव्यमित्यत आह—

॥ ॐ शब्दविशेषात् ॐ ॥ १-२-५

शब्दस्य ब्रह्मशब्दस्य । विशेषात् सावधारणत्वरूपविशेषाद् ब्रह्मशब्दो न शारीरपर इत्यर्थः । "एतमेव ब्रह्मेत्याचक्षते" इति सावधारणब्रह्मशब्दत्वे मुख्यब्रह्मत्वं स्यात्तच्च जीवे न युक्तमिति भावः ॥

इतश्च सर्वत्रोच्यमानं ब्रह्मेत्याह—

॥ ॐ स्मृतेश्च ॐ ॥ १-२-६

"अहमात्मा गुडाकेश सर्वभूताशयस्थितः" इति स्मृतेश्च सर्वत्र

---

ಚಕ್ಷುರ್ಮಯತ್ವ ಮೊದಲಾದ ಪ್ರಬಲ ಜೀವಲಿಂಗವಿರುವುದರಿಂದ ಹಿಂದೆ ಹೇಳಿದ ಬ್ರಹ್ಮಶಬ್ದ ಮೊದಲಾದವೆಲ್ಲವನ್ನೂ ಜೀವನ ಪರವಾಗಿ ನಿರೂಪಿಸಬೇಕೆಂಬ ಆಕ್ಷೇಪಕ್ಕೆ ಉತ್ತರವನ್ನು ನೀಡುವ ಸೂತ್ರ—

ಓಂ ಶಬ್ದವಿಶೇಷಾತ್ ಓಂ (೧-೨-೫)

**ಸೂತ್ರಾರ್ಥ**

ಶಬ್ದಸ್ಯ–ಬ್ರಹ್ಮಶಬ್ದಕ್ಕೆ, ವಿಶೇಷಾತ್–ಸಾವಧಾರಣತ್ವವೆಂಬ ವಿಶೇಷವಿರುವುದರಿಂದ ಬ್ರಹ್ಮಶಬ್ದವು ಜೀವಪರವಲ್ಲವೆಂದು ಅರ್ಥ. 'ಏತಮೇವ ಬ್ರಹ್ಮೇತ್ಯಾಚಕ್ಷತೇ' ಎಂಬುದಾಗಿ ಅವಧಾರಣಸಹಿತವಾದ ಬ್ರಹ್ಮಶಬ್ದವಾಚ್ಯನಾಗಿದ್ದಲ್ಲಿ ಮುಖ್ಯಬ್ರಹ್ಮತ್ವವು ಇರಬೇಕಾಗುವದು. ಆದರೆ ಆ ಮುಖ್ಯಬ್ರಹ್ಮತ್ವವು ಜೀವನಲ್ಲಿ ಯುಕ್ತವಲ್ಲವೆಂದು ಭಾವ.

ಈ ಮುಂದಿನ ಕಾರಣದಿಂದಲೂ ಸರ್ವಗತನೆಂದು ಹೇಳಲ್ಪಡುವವನು ಬ್ರಹ್ಮನೇ ಎಂದು ಹೇಳುವ ಸೂತ್ರ—

ಓಂ ಸ್ಮೃತೇಶ್ಚ ಓಂ (೧-೨-೬)

**ಸೂತ್ರಾರ್ಥ ಮತ್ತು ಸೂತ್ರಕಾರರು ಸ್ಮೃತಿಯನ್ನು ಉಲ್ಲೇಖಿಸುವುದರ ಸಮರ್ಥನೆ**

'ಅಹಮಾತ್ಮಾ ಗುಡಾಕೇಶ ಸರ್ವಭೂತಾಶಯಸ್ಥಿತಃ' ಎಂಬ ಸ್ಮೃತಿಯಿಂದಲೂ

तदेवेत्यर्थः। स्मृतेः स्ववचनत्वेऽपि परोक्तार्थानुवादरूपत्वात्तदुक्तिः। एवमग्रेऽपि ॥

उक्तमाक्षिप्य समाधत्ते—

॥ ॐ अर्भकौकस्त्वात्तद्व्यपदेशाच्च नेति चेन्न निचाय्यत्वादेवं व्योमवच्च ॐ ॥ १-२-७

सर्वत्र तत्त्विति वर्तते । अर्भकमल्पमोकः स्थानं यस्य तस्य भावस्तत्त्वं तस्मात् । व्यपदेशादित्येतदत्राप्यन्वेति । "सर्वेषु भूतेषु" इति सर्वप्राणिहृदयगुहास्थत्वरूपार्भकौकस्त्वव्यपदेशात् तद्व्यपदेशाच्च तस्य शारीरस्यादित्यश्रुत्या चक्षुर्मयत्वादिलिङ्गेन च व्यपदेशाच्च न

---

ಸರ್ವಗತವು ಬ್ರಹ್ಮನೇ ಎಂದು ಅರ್ಥ. ಈ [1]ಸ್ಮೃತಿಯು ಯದ್ಯಪಿ ಸೂತ್ರಕಾರರ ವಾಕ್ಯವೇ ಆಗಿದೆ. ಆದರೂ ಸ್ಮೃತಿಗಳು ಪರೋಕ್ತ ವಿಷಯದ ಅನುವಾದರೂಪ ವಾದ್ದರಿಂದ ಇಲ್ಲಿ ಅದನ್ನು ಉದಾಹರಿಸಲಾಗಿದೆ. ಮುಂದೆಯೂ ಸ್ಮೃತಿಗಳನ್ನು ಉದಾಹರಿಸಿದ ಸಂದರ್ಭಗಳಲ್ಲಿ ಇದೇ ರೀತಿ ತಿಳಿಯಬೇಕು.

ಹೇಳಿದ್ದನ್ನು ಆಕ್ಷೇಪಿಸಿ ಸಮಾಧಾನ ನೀಡುವ ಸೂತ್ರ—

ಓಂ ಅರ್ಭಕೌಕಸ್ತ್ವಾತ್ ತದ್ವ್ಯಪದೇಶಾಚ್ಚ ನೇತಿ ಚೇನ್ನ ನಿಚಾಯ್ಯತ್ವಾದೇವಂ ವ್ಯೋಮವಚ್ಚ ಓಂ (೧-೨-೭)

**ಸೂತ್ರದ ಆಕ್ಷೇಪಾಂಶದ ವಿವರಣೆ**

'ಸರ್ವತ್ರ', 'ತತ್ ತು' ಎಂಬ ಪದಗಳನ್ನು ಈ ಸೂತ್ರಕ್ಕೆ ಅನುವೃತ್ತಿಮಾಡಿ ಕೊಳ್ಳಬೇಕು. ಅರ್ಭಕಂ-ಅಲ್ಪವಾದ, ಓಕಃ-ಸ್ಥಾನವು ಯಾವುದಕ್ಕಿದೆಯೋ ಅದು ಅರ್ಭಕೌಕಃ ಎಂದೆನಿಸುವುದು. ಅದರ ಧರ್ಮ ಅರ್ಭಕೌಕಸ್ತ್ವ. ಅರ್ಭಕೌಕಸ್ತ್ವಾತ್ ಎಂದರೆ ಇಂತಹ ಅರ್ಭಕೌಕಸ್ತ್ವದಿಂದ. 'ವ್ಯಪದೇಶಾತ್' ಎಂಬುದನ್ನು ಈ ಪದಕ್ಕೂ ಅನ್ವಯಿಸಿಕೊಳ್ಳಬೇಕು. 'ಸರ್ವೇಷು ಭೂತೇಷು' ಎಂಬುದಾಗಿ ಸರ್ವಪ್ರಾಣಿ ಹೃದಯಗುಹಾಸ್ಥತ್ವರೂಪವಾದ ಅರ್ಭಕೌಕಸ್ತ್ವವನ್ನು ಉಪದೇಶಿಸಿರುವುದರಿಂದ,

---

1. ಸೂತ್ರಕಾರರೇ ಮಹಾಭಾರತಕಾರರಾದ್ದರಿಂದ 'ಅಹಮಾತ್ಮಾ' ಎಂಬ ವಚನವು ಸ್ವವಚನವೇ ಆಗುತ್ತದೆ ಎಂದು ಪೂರ್ವಪಕ್ಷ. ಶ್ರೀಕೃಷ್ಣ ಹೇಳಿದ್ದನ್ನು ಬಾದರಾಯಣರು ಮಹಾ ಭಾರತದಲ್ಲಿ ಅನುವಾದ ಮಾತ್ರ ಮಾಡಿದ್ದಾರೆ. ಅದು ಅವರ ಸ್ವವಚನವಲ್ಲ ಎಂದು ಸಮಾಧಾನ.

सर्वत्र ब्रह्मैवेति युक्तम् । शास्तुरपि व्याप्तत्वेन शास्त्रदृष्ट्यापि नयनायोगादिति चेन्न । किं ब्रह्मणोऽल्पौकस्त्वाद्युक्तिर्व्यर्था अयुक्ता वा । नाद्य इत्याह—निचाय्यत्वादेवम् । अर्भकौकस्त्वचक्षुर्मयत्वादिनोपास्यत्वान्न व्यर्थेत्यर्थः । अन्त्ये आह—व्योमवत् । यथा व्याप्तस्यापि व्योम्न एकैकदेशेऽवस्थितिस्तथा ब्रह्मणोऽपि भूताशयादौ स्थितिर्युक्तेत्यर्थः । अत्र व्योमवैषम्यमल्पश्रुतेरित्यत्र समाधास्यते । उपासा-

---

ತದ್ವ್ಯಪದೇಶಾಚ್ಚ—ತಸ್ಯ—ಆ ಶಾರೀರನ, ವ್ಯಪದೇಶಾಚ್ಚ—ಆದಿತ್ಯಶ್ರುತಿ, ಚಕ್ಷುರ್ಮಯತ್ವ ಮೊದಲಾದ ಲಿಂಗ ಇವುಗಳ ಮೂಲಕ ಉಪದೇಶವಿರುವುದರಿಂದಲೂ ಕೂಡ ಸರ್ವಗತನು ಬ್ರಹ್ಮನೇ ಎನ್ನುವುದು ಸರಿಯಲ್ಲ. ಅಂತರ್ಯಾಮಿಯು ವ್ಯಾಪ್ತನಾಗಿರುವುದರಿಂದ ಅಂತರ್ಯಾಮಿಯ ದೃಷ್ಟಿಯಿಂದಲೂ ಅರ್ಭಕೌಕಸ್ತ್ವವನ್ನು ಹೊಂದಿಸಲು ಸಾಧ್ಯವಿಲ್ಲವೆಂದು ಶಂಕಿಸಿದರೆ,

**ಆಕ್ಷೇಪದ ನಿರಾಕರಣೆ**

ಅದು ಸರಿಯಲ್ಲ. ಬ್ರಹ್ಮನಿಗೆ ಅಲ್ಪೌಕಸ್ತ್ವ ಮೊದಲಾದವುಗಳನ್ನು ಹೇಳಿರುವುದು ವ್ಯರ್ಥವೋ ಅಥವಾ ಅಯುಕ್ತವೋ? ವ್ಯರ್ಥವೆಂದು ಹೇಳಲಾಗದು ಎನ್ನುತ್ತಾರೆ 'ನಿಚಾಯ್ಯತ್ವಾದೇವಂ' ಎಂಬುದಾಗಿ. ಅರ್ಭಕೌಕಸ್ತ್ವ, ಚಕ್ಷುರ್ಮಯತ್ವ ಮೊದಲಾದವುಗಳ ಮೂಲಕ (ಬ್ರಹ್ಮನು) ಉಪಾಸ್ಯನಾಗಿರುವುದರಿಂದ ವ್ಯರ್ಥವಲ್ಲವೆಂದು ಅರ್ಥ. ಎರಡನೆಯದಕ್ಕೆ ಉತ್ತರ—'ವ್ಯೋಮವತ್'. ವ್ಯಾಪ್ತವಾಗಿದ್ದರೂ ಆಕಾಶವು ಒಂದೊಂದು ದೇಶದಲ್ಲೂ ಹೇಗಿರುವುದೋ ಹಾಗೆ ಬ್ರಹ್ಮನಿಗೂ ಭೂತಗಳ ಹೃದಯದಲ್ಲಿ ಸ್ಥಿತಿಯು ಯುಕ್ತವೆಂದು ಅರ್ಥ. ಆಕಾಶಕ್ಕೂ ಬ್ರಹ್ಮನಿಗೂ ಇರುವ ವೈಲಕ್ಷಣ್ಯಪ್ರಯುಕ್ತವಾದ ಆಕ್ಷೇಪಕ್ಕೆ 'ಅಲ್ಪಶ್ರುತೇಃ' (ಬ್ರ. ಸೂ. ೧–೩–೨೧) ಎಂಬಲ್ಲಿ ಸಮಾಧಾನವನ್ನು[1] ಹೇಳಲಾಗುತ್ತದೆ.

**'ನಿಚಾಯ್ಯತ್ವಾತ್' ಎಂದು ಹೇಳಿರುವುದು ಪುನರುಕ್ತವಲ್ಲ**

'ಉಪಾಸಾತ್ರೈವಿಧ್ಯಾತ್' ಎಂದು ಹಿಂದೆಯೇ ಅಲ್ಪಸ್ಥಾನಸ್ಥಿತತ್ವವನ್ನು ಉಪಾಸನೆಗಾಗಿ ಹೇಳಿರುವುದೆಂದು ಹೇಳಿದ್ದರೂ 'ನಿಚಾಯ್ಯತ್ವಾತ್' ಎಂದು ಪುನಃ

---

1. ಸರ್ವಗತವಾದ ಆಕಾಶದ ಅಂಶಗಳು ಸರ್ವಗತವಲ್ಲ. ಆದ್ದರಿಂದ ಅಂಶಗಳ ದೃಷ್ಟಿಯಿಂದ ಆಕಾಶವನ್ನು ಅಲ್ಪಸ್ಥಾನಸ್ಥಿತವೆಂದು ಹೇಳಬಹುದು. ಆದರೆ ಬ್ರಹ್ಮನ ಅಂಶಗಳೂ ಪೂರ್ಣಗಳೇ ಆಗಿರುವುದರಿಂದ ಅಂಶಗಳ ದೃಷ್ಟಿಯಿಂದಲೂ ಬ್ರಹ್ಮನನ್ನು ಅಲ್ಪಸ್ಥಾನಸ್ಥಿತನೆಂದು ಹೇಳಲಾಗದು ಎಂಬ ಆಕ್ಷೇಪಕ್ಕೆ ಅಚಿಂತ್ಯಶಕ್ತಿಯುಳ್ಳ ಬ್ರಹ್ಮನು ಸರ್ವಗತನೂ, ಅಲ್ಪಸ್ಥಾನಸ್ಥಿತನೂ ಆಗಬಲ್ಲನೆಂದು ಸಮಾಧಾನ ಹೇಳಲಾಗುವುದೆಂದು ತಾತ್ಪರ್ಯ.

त्रैविध्यादित्युक्तावपि निचाय्यत्वादिति पुनरुक्तिरुपासाया ज्ञानस्वरूपत्वप्रदर्शनाय । "चायृ दर्शने" इति धातोः । तेनोपासा मानसक्रियाऽर्थहीनापि युक्तेति तच्छ्रुतिरमानमिति न शङ्क्यम् ॥

पुनरुक्तमाक्षिप्याह—

॥ ॐ सम्भोगप्राप्तिरिति चेन्न वैशेष्यात् ॐ ॥

१-२-८

समानो भोगः सम्भोगः । व्योमवत् सर्वजीवशरीरस्थत्वे तत्समानभोगप्राप्तिर्ब्रह्मण इति चेन्न । कुतः ? वैशेष्यात् सामर्थ्याति-

---

ಹೇಳಿರುವುದು ಉಪಾಸನೆಯು ಜ್ಞಾನಸ್ವರೂಪವಾದುದೆಂದು ತೋರಿಸಲು. ಚಾಯೃ ದರ್ಶನೇ ಎಂದು ಧಾತುವಿರುವುದು [1] ಆದ್ದರಿಂದ—"ಉಪಾಸನೆಯು ಒಂದು ಮಾನಸಿಕ ಕ್ರಿಯೆ. ವಿಷಯುವೇ ಇಲ್ಲದಿದ್ದರೂ ಅಂತಹ ಒಂದು ಕ್ರಿಯೆಯಿರುವುದು ಸಾಧ್ಯ. ಆದ್ದರಿಂದ ಸರ್ವಪ್ರಾಣಿಹೃದಯಗುಹಾಸ್ಥಿತತ್ವವನ್ನು ಬ್ರಹ್ಮನಿಗೆ ಹೇಳುವ 'ಸರ್ವೇಷು ಭೂತೇಷು ಏತಂ' ಇತ್ಯಾದಿ ಶ್ರುತಿಯು ಪ್ರಮಾಣವಲ್ಲ" ಎಂದು ಶಂಕಿಸಬಾರದು.[2]

ಉಕ್ತವಾದದ್ದನ್ನು ಪುನಃ ಆಕ್ಷೇಪಿಸಿ ಸಮಾಧಾನ ಹೇಳುವ ಸೂತ್ರ—

ಓಂ ಸಂಭೋಗಪ್ರಾಪ್ತಿರಿತಿ ಚೇನ್ನ ವೈಶೇಷ್ಯಾತ್ ಓಂ

(೧-೨-೮)

**ಸೂತ್ರಾರ್ಥ**

ಸಂಭೋಗವೆಂದರೆ ಸಮಾನವಾದ ಭೋಗ. ಆಕಾಶದಂತೆ ಬ್ರಹ್ಮನು ಸರ್ವ ಜೀವರ ಶರೀರದಲ್ಲಿರುವುದಾದರೆ ಜೀವನಂತೆ ಬ್ರಹ್ಮನಿಗೂ ಸುಖದುಃಖಾನುಭವರೂಪವಾದ ಭೋಗವು ಉಂಟಾಗಬೇಕಾಗುವುದು ಎಂದರೆ ಅದು ಸರಿಯಲ್ಲ. ಏಕೆಂದರೆ, ವೈಶೇಷ್ಯಾತ್–ಸಾಮರ್ಥ್ಯಾತಿಶಯವಿರುವುದರಿಂದ ಎಂದು ಅರ್ಥ.

---

1. ದರ್ಶನವೆಂದರೆ ಜ್ಞಾನ. ಜ್ಞಾನಾರ್ಥಕವಾದ ಚಾಯ್ ಧಾತುವಿನಿಂದ ನಿಷ್ಪನ್ನವಾಗುವ ಉಪಾಸನಾರ್ಥಕವಾದ ನಿಚಾಯ್ಯಶಬ್ದವು ಉಪಾಸನೆಯು ಜ್ಞಾನಸ್ವರೂಪವಾದುದೆಂದು ಸೂಚಿಸುತ್ತದೆ ಎಂದು ಭಾವ.

2. ಜ್ಞಾನರೂಪವಾದ ಉಪಾಸನೆಯ ವಿಷಯವು ಸತ್ಯವಾದುದು. ಆದ್ದರಿಂದ ಉಪಾಸ್ಯವಾದ ಅಲ ಸಾ ನಸಿ ತತ ವೂ ಸತ್ಯವೇ. ಅದನು, ಹೇಳುವ ಶು,ತಿಯು ಪ,ಮಾಣವೇ ಎಂದು ಬಾವ.

शयादित्यर्थः । अन्तर्नये कतिपयान्तःस्थत्वमुक्तम् । अत्र तु सर्वान्तःस्थत्वम् । व्याप्ते हरौ व्योमवदिति तस्योपपन्नता चोच्यत इति भेदः ॥ १ ॥

अत्तृत्वाधिकरणम्—२

## ॥ ॐ अत्ता चराचरग्रहणात् ॐ ॥ १-२-९

अत्र नये संहाररूपक्रियात्मकलिङ्गसमन्वय उच्यते । "सर्वं वा अत्ति" इत्युक्तात्ता तत्तु ब्रह्मैव । न त्वदितिः । सर्वमिति चराचरस्याद्यतया ग्रहणादित्यर्थः । तदित्यनुवृत्तेरत्त्रिति वाच्ये पुंनिर्देशः

---

**ಈ ಅಧಿಕರಣವು ಅಂತರಧಿಕರಣದಿಂದ ಗತಾರ್ಥವಲ್ಲ**

ಅಂತರಧಿಕರಣದಲ್ಲಿ ಬ್ರಹ್ಮನು ಕೆಲವರಲ್ಲಿ ಅಂತಃಸ್ಥ ಎಂದು ಮಾತ್ರ ಹೇಳಲಾಗಿದೆ. ಆದರೆ ಈ ಅಧಿಕರಣದಲ್ಲಿ ಸರ್ವಾಂತಃಸ್ಥತ್ವವನ್ನು ಹೇಳಲಾಗಿದೆ. ಅಲ್ಲದೆ, 'ವ್ಯೋಮವತ್' ಎಂಬುದರಿಂದ ವ್ಯಾಪ್ತನಾದ ಹರಿಗೆ ಅಂತಃಸ್ಥತ್ವವು ಯುಕ್ತವೂ ಆಗಿದೆ ಎಂಬುದನ್ನು ಹೇಳಲಾಗಿದೆ. ಹೀಗೆ ಅಂತರಧಿಕರಣಕ್ಕೂ ಈ ಅಧಿಕರಣಕ್ಕೂ ಭೇದವಿದೆ.

**ಅತ್ತೃತ್ವಾಧಿಕರಣ—೨**

## ಓಂ ಅತ್ತಾ ಚರಾಚರಗ್ರಹಣಾತ್ ಓಂ (೧-೨-೯)

**ಅಧಿಕರಣಪ್ರತಿಪಾದ್ಯ ವಿಷಯ ಮತ್ತು ಸೂತ್ರಾರ್ಥ**

[1] ಈ ಅಧಿಕರಣದಲ್ಲಿ ಸಂಹಾರವೆಂಬ ಕ್ರಿಯಾತ್ಮಕ ಲಿಂಗದ ಸಮನ್ವಯವು ಹೇಳಲ್ಪಡುತ್ತದೆ. 'ಸರ್ವಂ ವಾ ಅತ್ತಿ' (ಬೃ. ೩-೨-೫) ಎಂಬಲ್ಲಿ ಹೇಳಲ್ಪಟ್ಟಿರುವ ಸಂಹಾರಕನು, ತತ್ತು—ಬ್ರಹ್ಮವೇ, ಅದಿತಿಯಲ್ಲ. 'ಸರ್ವಂ' ಎಂಬುದಾಗಿ ಚರಾಚರ ಜಗತ್ತನ್ನೇ ಸಂಹಾರ್ಯವನ್ನಾಗಿ ಗ್ರಹಿಸಿರುವುದರಿಂದ ಎಂದು ಅರ್ಥ.

---

1. ಬೃಹದಾರಣ್ಯಕದ ೩ನೇ ಅಧ್ಯಾಯದ ೨ನೇ ಬ್ರಾಹ್ಮಣದಲ್ಲಿ ಬರುವ 'ಸರ್ವಂ ವಾ ಅತ್ತೀತಿ ತದದಿತೇಃ ಅದಿತಿತ್ವಂ' ಎಂಬ ಶ್ರುತ್ಯರ್ಥವು ಈ ಅಧಿಕರಣದಲ್ಲಿ ನಿರ್ಣಯಿಸಲ್ಪಡುತ್ತದೆ. ಅದಿತಿಶಬ್ದವಿರುವುದರಿಂದ ದೇವಮಾತೆಯಾದ ಅದಿತಿಯೇ ಸರ್ವಾತ್ತ್ರೀ ಅಥವಾ ಸರ್ವಸಂಹಾರಕಳು ಎಂದು ಪೂರ್ವಪಕ್ಷ. ಚರಾಚರಾತ್ಮಕ ಸರ್ವಜಗತ್‌ಸಂಹಾರಕತ್ವವು ಪರಬ್ರಹ್ಮನಿಗೇ ಸಂಬಂಧಪಟ್ಟ ಧರ್ಮ ಎಂದು ಸಿದ್ಧಾಂತ.

"स तया वाचा तेनाऽत्मना" इत्यादौ स इति पुल्लिङ्गतच्छब्देन प्रकृतमृत्युरेव निर्णयश्रुतावुच्यत इति तदनुरोधेन। श्रुत्यनुगमात् सर्वेति वाच्ये चराचरेति तद्व्याख्यानेनोक्तिः सङ्कोचशङ्कानिरासाय ॥

इतश्चैवमित्याह—

॥ ॐ प्रकरणात् ॐ ॥ १-२-१०

"नैवेह किञ्चन" इत्यादि ब्रह्मप्रकरणाच्चात्ता ब्रह्मैवेत्यर्थः ॥ २ ॥

---

**'ಅತ್ತಾ' ಎಂದು ಪುಲ್ಲಿಂಗಪ್ರಯೋಗದ ಮತ್ತು 'ಚರಾಚರ' ಶಬ್ದ ಪ್ರಯೋಗದ ಸಮರ್ಥನೆ**

'ತತ್' ಎಂಬ ಅನುವೃತ್ತಿಯಿರುವುದರಿಂದ 'ಅತ್ತೃ' ಎಂದು ಹೇಳಬೇಕಾಗಿದ್ದರೂ [1] 'ಸ ತಯಾ ವಾಚಾ ತೇನ ಆತ್ಮನಾ' ಇತ್ಯಾದಿ ವಾಕ್ಯದಲ್ಲಿ ಪುಲ್ಲಿಂಗ ತತ್ ಶಬ್ದ ದಿಂದ ಹೇಳಲ್ಪಟ್ಟಿರುವ ಮೃತ್ಯುವೇ ನಿರ್ಣಯವಾದ ('ಸರ್ವಂ ವಾ ಅತ್ತಿ' ಎಂಬ) ಶ್ರುತಿಯಲ್ಲಿ ಹೇಳಲ್ಪಟ್ಟಿದ್ದಾನಾದ್ದರಿಂದ ಅದನ್ನನುಸರಿಸಿ 'ಅತ್ತಾ' ಎಂದು ಪುಲ್ಲಿಂಗದಿಂದ ನಿರ್ದೇಶಿಸಲಾಗಿದೆ. ಶ್ರುತಿಯ ಅನುಗಮ ಉಂಟಾಗುವುದರಿಂದ 'ಸರ್ವ' ಎಂದು ಹೇಳಬೇಕಾಗಿದ್ದರೂ 'ಚರಾಚರ' ಎಂದು ಅದನ್ನು ವ್ಯಾಖ್ಯಾನಮಾಡಿ ಹೇಳಿರುವುದು ಸರ್ವಶಬ್ದಕ್ಕೆ ಸಂಕೋಚಮಾಡಬೇಕೆಂಬ ಶಂಕೆಯನ್ನು ನಿವಾರಿಸುವುದಕ್ಕಾಗಿ.

ಈ ಮುಂದೆ ಹೇಳುವ ಕಾರಣದಿಂದಲೂ ಸರ್ವಾತ್ತೃವು ಪರಬ್ರಹ್ಮನೇ ಎಂದು ಹೇಳುವ ಸೂತ್ರ—

ಓಂ ಪ್ರಕರಣಾಚ್ಚ ಓಂ (೧-೨-೧೦)

**ಸೂತ್ರಾರ್ಥ**

'ನೈವೇಹ ಕಿಂಚನ' ಮುಂತಾದ ಬ್ರಹ್ಮಪ್ರಕರಣದಿಂದಲೂ ಅತ್ತೃವು ಬ್ರಹ್ಮನೇ ಆಗಿದ್ದಾನೆಂದು ಅರ್ಥ.

---

1. 'ಸರ್ವಂ ವಾ ಅತ್ತಿ' ಎಂಬ ಶ್ರುತಿಗೆ ಒಂದೆರಡು ವಾಕ್ಯಗಳ ಹಿಂದೆ 'ಸ ತಯಾ ವಾಚಾ ತೇನ ಆತ್ಮನಾ ಇದಂ ಸರ್ವಂ ಅಸೃಜತ' ಎಂಬ ವಾಕ್ಯವಿದೆ. ಮೃತ್ಯುರೂಪಿಯಾದ ಪರಬ್ರಹ್ಮನು ಚತುರ್ಮುಖ ಮತ್ತು ಸರಸ್ವತಿಯರ ಮೂಲಕ ಈ ಎಲ್ಲ ಜಗತ್ತನ್ನು ಸೃಷ್ಟಿಸಿದನು ಎಂದು ಈ ಶ್ರುತಿಯ ಅರ್ಥ. ಈ ವಾಕ್ಯದಲ್ಲಿ ಪುಲ್ಲಿಂಗದಲ್ಲಿರುವ 'ಸಃ' ಎಂಬ ಪದದಿಂದ ಹೇಳಲ್ಪಡುವ ಮೃತ್ಯುವೇ 'ಸರ್ವಂ ವಾ ಅತ್ತಿ' ಎಂಬಲ್ಲಿ ಅತ್ತೃವೆಂದು ಹೇಳಲ್ಪಟ್ಟಿರುವುದರಿಂದ ಅದನ್ನನುಸರಿಸಿ ಸೂತ್ರದಲ್ಲಿ 'ಅತ್ತಾ' ಎಂದು ಪುಲ್ಲಿಂಗಪ್ರಯೋಗವೆಂದು ಭಾವ.

गुहाधिकरणम्—३

## ॥ ॐ गुहां प्रविष्टावात्मानौ हि तद्दर्शनात् ॐ ॥ १-२-११

अत्र नये कर्मफलभोगरूपक्रियालिङ्गं समन्वीयते । ऋतं पिबन्ताविति योग्यतयान्वेति । "ऋतं पिबन्तौ सुकृतस्य लोके गुहां प्रविष्टौ" इति श्रुत्युक्तौ ऋतं पिबन्तावात्मानावेव आत्मान्तरात्माख्यब्रह्मरूपविशेषावेव । न तु जीवेश्वरौ । कुतः ? गुहां प्रविष्टौ ।

---

ಗುಹಾಧಿಕರಣ—೩

## ಓಂ ಗುಹಾಂ ಪ್ರವಿಷ್ಟಾವಾತ್ಮಾನೌ ಹಿ ತದ್ದರ್ಶನಾತ್ ಓಂ (೧-೨-೧೧)

**ಅಧಿಕರಣಪ್ರತಿಪಾದ್ಯ ವಿಷಯ ಮತ್ತು ಸೂತ್ರಾರ್ಥ**

ಈ ಅಧಿಕರಣದಲ್ಲಿ ಕರ್ಮಫಲಭೋಗರೂಪವಾದ ಕ್ರಿಯಾರೂಪವಾದ ಲಿಂಗವು ಸಮನ್ವಯಗೊಳಿಸಲ್ಪಡುತ್ತದೆ. ಅನ್ವಯಯೋಗ್ಯವಾದುದರಿಂದ 'ಋತಂ ಪಿಬಂತೌ' ಎಂಬ ಪದಗಳು ಅನ್ವಯವನ್ನು ಪಡೆಯುತ್ತವೆ. [1] 'ಋತಂ ಪಿಬಂತೌ ಸುಕೃತಸ್ಯ ಲೋಕೇ ಗುಹಾಂ ಪ್ರವಿಷ್ಟೌ' (ಕಠ ೧-೩-೧) ಎಂಬ ಶ್ರುತಿಯಲ್ಲಿ ಹೇಳಲ್ಪಟ್ಟ ಋತಂ ಪಿಬಂತೌ–ಋತಪಾನಮಾಡತಕ್ಕವರು, ಆತ್ಮಾನಾವೇವ–ಆತ್ಮಾ, ಅಂತರಾತ್ಮಾ ಎಂಬ ಬ್ರಹ್ಮನ ರೂಪವಿಶೇಷಗಳೇ ಹೊರತು ಜೀವೇಶ್ವರರಲ್ಲ. ಏಕೆಂದರೆ, ಗುಹಾಂ ಪ್ರವಿಷ್ಟೌ –ಇದು ಹೇತುಗರ್ಭವಾದುದು. ಹೃದಯಗುಹಾಪ್ರವಿಷ್ಟತ್ವವೆಂಬ ಲಿಂಗದಿಂದ ಎಂದು

---

1. ಋತಂ ಪಿಬಂತೌ ಸುಕೃತಸ್ಯ ಲೋಕೇ ಗುಹಾಂ ಪ್ರವಿಷ್ಟೌ ಪರಮೇ ಪರಾರ್ಧೇ ।
ಛಾಯಾತಪೌ ಬ್ರಹ್ಮವಿದೋ ವದಂತಿ ಪಂಚಾಗ್ನಯೋ ಯೇ ಚ ತ್ರಿಣಾಚಿಕೇತಾಃ ॥

ಸುಕೃತನಿರ್ಮಿತವಾದ ಶರೀರದಲ್ಲಿ ಹೃದಯಗುಹಾಶ್ರಿತರಾದ, ತತ್ರಾಪಿ ಸರ್ವಜೀವೋತ್ತಮನೂ, ಅತಿಪೂರ್ಣನೂ ಆದ ವಾಯುವಿನಲ್ಲಿ ಅಧಿಷ್ಠಿತರಾದ ಶಾಸ್ತ್ರವಿಹಿತ ಕರ್ಮಾನುಷ್ಠಾನದ ಫಲವನ್ನು ಭುಜಿಸುವ ಆತ್ಮಾ, ಅಂತರಾತ್ಮಾ ಎಂಬ ಭಗವದ್ರೂಪಗಳು ಜ್ಞಾನಿಗಳಿಗೆ ಸುಖವನ್ನೂ ಪಾಪಿಗಳಿಗೆ ದುಃಖವನ್ನೂ ಕೊಡತಕ್ಕವೆಂದು ದೇವ, ಪಿತೃ, ಭೂತ, ಮನುಷ್ಯ, ಬ್ರಹ್ಮ ಎಂಬ ಪಂಚಮಹಾಯಜ್ಞವನ್ನು ಅನುಷ್ಠಿಸುವವರೂ ಮೂರು ಸಲ ನಾಚಿಕೇತ ಎಂಬ ಅಗ್ನಿಚಯನವನ್ನು ಮಾಡಿದವರೂ ಆದ ಬ್ರಹ್ಮಜ್ಞಾನಿಗಳು ಹೇಳುತ್ತಾರೆಂದು ಸಿದ್ಧಾಂತಪರವಾದ ಶ್ರುತ್ಯರ್ಥ.

हेतुगर्भमिदम् । हृदयगुहाप्रविष्टत्वलिङ्गादित्यर्थः । हिशब्देन ब्रह्मण्येव "यो वेद निहितं गुहायां" इत्यादौ तस्य प्रसिद्धिमाह । रूपद्वयस्य गुहास्थत्वं कुत इत्यत उक्तं—तद्दर्शनात् । तस्य आत्मनोर्गुहास्थत्वस्य "घर्मा समन्तात्त्रिवृतं व्यापतुः" इत्यादिश्रुत्युक्तेरित्यर्थः । ऋतं पिबन्ताविति वाच्ये गुहाप्रविष्टत्वोक्तिद्वारा तदुक्तिर्गुहाप्रविष्टत्वरूप-हेतुसूचनार्था । तत्त्वित्यनुवृत्तावप्यात्मानाविति द्विवचनान्तात्म-पदोक्तिरादेयं मातीत्यात्मेति शुभभोक्तृत्वमस्य सूचयितुं, श्रौत-द्विवचनस्य गत्युक्त्यै आत्मान्तरात्माख्यरूपद्वयं वक्तुं चेति ॥

---

ಅರ್ಥ. 'ಹಿ' ಶಬ್ದದಿಂದ ಹೃದಯಗುಹಾಪ್ರವಿಷ್ಟತ್ವವು 'ಯೋ ವೇದ ನಿಹಿತಂ ಗುಹಾಯಾಂ' ಇತ್ಯಾದಿ ಶ್ರುತಿಯಲ್ಲಿ ಬ್ರಹ್ಮನಲ್ಲಿಯೇ ಪ್ರಸಿದ್ಧವೆಂದು ಸೂತ್ರಕಾರರು ಹೇಳುತ್ತಾರೆ. ಬ್ರಹ್ಮನ ಎರಡು ರೂಪಗಳಿಗೆ ಹೃದಯಗುಹಾಪ್ರವಿಷ್ಟತ್ವವಿದೆ ಎನ್ನುವುದು ಯಾವ ಪ್ರಮಾಣದಿಂದ ಸಿದ್ಧವಾಗಿದೆ ಎಂಬ ಪ್ರಶ್ನೆಗೆ ಉತ್ತರ–'ತದ್ದರ್ಶನಾತ್'. ಆತ್ಮ ಮತ್ತು ಅಂತರಾತ್ಮರಿಗೆ ಹೃದಯಗುಹಾಸ್ಥತ್ವವು [1] 'ಘರ್ಮಾ ಸಮಂತಾತ್ ತ್ರಿವೃತಂ ವ್ಯಾಪತುಃ' (ಋ. ೧೦-೧೧೪-೧) ಇತ್ಯಾದಿ ಶ್ರುತಿಯಲ್ಲಿ ಹೇಳಲ್ಪಟ್ಟಿರುವುದರಿಂದ ಎಂದು ಅರ್ಥ.

### ಸೂತ್ರಗತ ಪದಗಳ ಸ್ವಾರಸ್ಯ ವಿವರಣೆ

'ಋತಂ ಪಿಬಂತೌ' ಎಂದು ಹೇಳಬೇಕಿದ್ದಾಗ ಗುಹಾಪ್ರವಿಷ್ಟತ್ವವನ್ನು ಹೇಳುವ ಮೂಲಕ ಋತಪಾನಕರ್ತರನ್ನು ಹೇಳಿರುವುದು ಗುಹಾಪ್ರವಿಷ್ಟತ್ವವೆಂಬ ಹೇತುವನ್ನು ಸೂಚಿಸುವುದಕ್ಕಾಗಿ 'ತತ್ತು' ಎಂಬ ಪದಗಳ ಅನುವೃತ್ತಿಯಿದ್ದರೂ 'ಆತ್ಮಾನೌ' ಎಂದು ದ್ವಿವಚನಾಂತವಾದ ಆತ್ಮಪದವನ್ನು ಹೇಳಿರುವುದು 'ಆದೇಯಂ ಮಾತಿ ಇತಿ ಆತ್ಮಾ' ಎಂಬ ವಿವರಣೆಯಂತೆ ಶುಭಭೋಕ್ತೃತ್ವವು ಪರಬ್ರಹ್ಮನಿಗಿದೆ ಎಂದು ಸೂಚಿಸುವುದಕ್ಕಾಗಿ ಮತ್ತು ಶ್ರುತಿಯಲ್ಲಿರುವ ದ್ವಿವಚನದ ಪ್ರಯೋಜನವನ್ನು ಹೇಳಲು ಆತ್ಮಾ, ಅಂತರಾತ್ಮಾ ಎಂಬ ರೂಪದ್ವಯವನ್ನು ಹೇಳುವುದಕ್ಕಾಗಿ.

---

1. ಘರ್ಮಾ ಸಮಂತಾತ್ ತ್ರಿವೃತಂ ವ್ಯಾಪತುಃ ತಯೋರ್ಜುಷ್ಟಿಂ ಮಾತರಿಶ್ವಾ ಜಗಾಮ– ಕಾಂತಿಯುಕ್ತವೂ ಸರ್ವತ್ರ ವ್ಯಾಪ್ತವೂ ಆದ ಭಗವಂತನ ಎರಡು ರೂಪಗಳು ತೇಜೋಬನ್ನಾತ್ಮಕವಾದ ಶರೀರದ ಹೃದಯಗುಹಾಸ್ಥಾನದಲ್ಲಿ ನೆಲೆಸಿವೆ. ಅವರ ಸೇವೆಯನ್ನು ಮಾಡಲು ಮುಖ್ಯಪ್ರಾಣನೂ ಶರೀರವನ್ನು ಪ್ರವೇಶಿಸಿದ್ದಾನೆ.

इतश्चैवमित्याह—

॥ ॐ विशेषणाच्च ॐ ॥ १-२ १२

"यः सेतुरीजानानामक्षरं ब्रह्म यत्परम्" इत्येकवचनेन सेतुत्वब्रह्मत्वादिना च विशेषणाच्च पिबन्तावात्मानावेव न जीवेशावित्यर्थः ॥ ३ ॥

अन्तराधिकरणम्—४

॥ ॐ अन्तर उपपत्तेः ॐ ॥ १-२-१३

अत्र नये चक्षुरन्तःस्थितिरूपभावयुक्तरमणरूपक्रियालिङ्गं

---

ಈ ಮುಂದೆ ಹೇಳುವ ಕಾರಣದಿಂದಲೂ ಕರ್ಮಫಲಭೋಕ್ತಾರರು ಪರಮಾತ್ಮನ ಎರಡು ರೂಪಗಳು ಎಂದು ಹೇಳಲು ಸೂತ್ರ—

ಓಂ ವಿಶೇಷಣಾಚ್ಚ ಓಂ (೧--೨--೧೨)

1 'ಯಃ ಸೇತುರೀಜಾನಾನಾಂ ಅಕ್ಷರಂ ಬ್ರಹ್ಮ ತತ್ಪರಂ' ಎಂಬುದಾಗಿ ಏಕವಚನ ವಿರುವುದರಿಂದ ಮತ್ತು ಸೇತುತ್ವ, ಬ್ರಹ್ಮತ್ವ ಮೊದಲಾದ ವಿಶೇಷಣದಿಂದ ಕರ್ಮಫಲ ಭೋಕ್ತಾರರು ಪರಮಾತ್ಮನ ರೂಪವಿಶೇಷಗಳೇ ಹೊರತು ಜೀವೇಶ್ವರರಲ್ಲ.

ಅಂತರಾಧಿಕರಣ—೪

ಓಂ ಅಂತರ ಉಪಪತ್ತೇಃ ಓಂ (೧-೨-೧೩)

**ಅಧಿಕರಣದ ಉದ್ದೇಶ**

ಈ ಅಧಿಕರಣದಲ್ಲಿ 'ಚಕ್ಷುರಂತಃಸ್ಥತ್ವ' ಎಂಬ ಭಾವಧರ್ಮಸಹಿತವಾದ 'ರಮಣ' ಎಂಬ ಕ್ರಿಯಾತ್ಮಕಲಿಂಗವು ಸಮನ್ವಯಗೊಳಿಸಲ್ಪಡುತ್ತದೆ. 'ತತ್' 'ತು' ಎಂಬ ಪದಗಳು ಅನುವೃತ್ತಿಗೊಳ್ಳುತ್ತವೆ.

---

1. ಆತ್ಮಾ ಮತ್ತು ಅಂತರಾತ್ಮಾ ಎಂದು ದ್ವಿರೂಪನಾದ ಭಗವಂತನು ವಿಷ್ಣುವನ್ನುದ್ದೇಶಿಸಿ ಯಾಗಮಾಡುವವರಿಗೆ ಆಶ್ರಯನಾಗಿದ್ದಾನೆ. ಅವನು ಅಕ್ಷರನೂ ಪರಬ್ರಹ್ಮನೂ ಆಗಿದ್ದಾನೆ ಎಂದು ಶ್ರುತಿಯ ಭಾವ. ಹಿಂದಿನ ಮಂತ್ರದಲ್ಲಿ ಹೇಳಲ್ಪಟ್ಟ ಕರ್ಮಫಲಭೋಕ್ತಾರರು ಜೀವ-ಪರಮಾತ್ಮರಾಗಿದ್ದಲ್ಲಿ 'ಯಃ ಸೇತುಃ' ಇತ್ಯಾದಿ ಪದಗಳಲ್ಲಿನ ಏಕವಚನದ ಅರ್ಥವಾದ ಏಕತ್ವವಾಗಲೀ, ಸೇತುತ್ವ, ಬ್ರಹ್ಮತ್ವ ಮೊದಲಾದವುಗಳಾಗಲೀ ಯುಕ್ತವಾಗಲಾರವೆಂದು ಸೂತ್ರದ ಅಭಿಪ್ರಾಯ.

समन्वीयते । तत्त्वित्यस्ति । "य एषोऽन्तरक्षिणि पुरुषो दृश्यते एष आत्मा" इत्युक्तोऽन्तरश्चक्षुरन्तःस्थित्वा रममाणो ब्रह्मैव न त्वग्निः । "एतदमृतमभयमेतद्ब्रह्म" इत्युक्तामृतत्वाभयत्वलिङ्गब्रह्मशब्दानां तत्रैवोपपत्तेरित्यर्थः । "अन्तरक्षिणि" इति श्रुतावन्तःस्थत्वोक्तावपि "एष आत्मा" इत्यात्मपदेनाऽदेयं मातीति रमणस्याप्युक्तेः अन्तरुपपदाद्रमतेर्जमन्ताड्डप्रत्ययेनान्तर इति निरदिक्षत् । अत एव तदित्यनुवृत्तावपि पुंनिर्देशः ॥

---

**ಸೂತ್ರಾರ್ಥ**

[1] 'ಯ ಏಷೋಽಂತರಕ್ಷಿಣಿ ಪುರುಷೋ ದೃಶ್ಯತೇ' (ಛಾಂ. ೪–೧೫) ಎಂಬಲ್ಲಿ ಹೇಳಲ್ಪಟ್ಟಿರುವ ಅಂತರಃ—ಚಕ್ಷುವಿನ ಒಳಗಿದ್ದು ಕ್ರೀಡಿಸುವವನು ಬ್ರಹ್ಮನೇ, ಅಗ್ನಿಯಲ್ಲ. 'ಏತದಮೃತಮಭಯಂ ಏತದ್ ಬ್ರಹ್ಮ' (ಛಾಂ. ೪–೧೫) ಎಂಬಲ್ಲಿ ಹೇಳಿರುವ ಅಮೃತತ್ವ, ಅಭಯತ್ವವೆಂಬ ಲಿಂಗಗಳು ಮತ್ತು ಬ್ರಹ್ಮಶಬ್ದ—ಇವುಗಳು ಬ್ರಹ್ಮನಲ್ಲಿಯೇ ಉಪಪನ್ನವಾಗುವುದರಿಂದ ಎಂದು ಅರ್ಥ.

**ಈ ಅಧಿಕರಣದಲ್ಲಿ 'ರಮಣ'ರೂಪ ಕ್ರಿಯಾಲಿಂಗದ ಸಮನ್ವಯವೂ ಹೇಳಲ್ಪಟ್ಟಿದೆ**

'ಅಂತರಕ್ಷಿಣಿ' ಎಂಬ ಶ್ರುತಿಯಲ್ಲಿ ಚಕ್ಷುರಂತಃಸ್ಥತ್ವವನ್ನು ಮಾತ್ರ ಹೇಳಿದ್ದರೂ 'ಏಷ ಆತ್ಮಾ' ಎಂದು ಆತ್ಮಪದದಿಂದ '[2]ಆದೇಯಂ ಮಾತಿ' ಎಂಬ ವಿವರಣೆಗನುಸಾರವಾಗಿ ರಮಣವನ್ನೂ ಹೇಳಿರುವುದರಿಂದ, 'ಅಂತರ್' ಎಂಬ ಉಪಪದದಿಂದ ಕೂಡಿದ ಞಮಂತವಾದ 'ರಮ್' ಧಾತುವಿಗೆ 'ಡ' ಪ್ರತ್ಯಯವನ್ನು ಸೇರಿಸಿದಾಗ ಉಂಟಾಗುವ 'ಅಂತರಃ' ಎಂಬ ಪದವನ್ನು ಸೂತ್ರಕಾರರು ನಿರ್ದೇಶಿಸಿದ್ದಾರೆ ಆದ್ದರಿಂದಲೇ 'ತತ್' ಎಂದು ಅನುವೃತ್ತಿ ಇದ್ದರೂ 'ಅಂತರಃ' ಎಂದು ಪುಲ್ಲಿಂಗದಿಂದ ನಿರ್ದೇಶಿಸಲಾಗಿದೆ.

---

1. ಛಾಂದೋಗ್ಯೋಪನಿಷತ್ತಿನ ಈ ಪ್ರಕರಣದ ಆರಂಭದಲ್ಲಿ 'ಯ ಏಷ ಆದಿತ್ಯೇ ಪುರುಷೋ ದೃಶ್ಯತೇ ಸೋಽಹಮಸ್ಮಿ' ಎಂಬಲ್ಲಿ ಗಾರ್ಹಪತ್ಯಾಗ್ನಿಯು ಆದಿತ್ಯನಲ್ಲಿರುವವನು ನಾನೇ ಎಂದು ಹೇಳಿಕೊಂಡಿದ್ದಾನೆ. 'ಆದಿತ್ಯಃ ಚಕ್ಷುರ್ಭೂತ್ವಾ ಅಕ್ಷಿಣೀ ಪ್ರಾವಿಶತ್' ಎಂಬ ಐತರೇಯ ಶ್ರುತಿಯಿಂದ ಆದಿತ್ಯಮಂಡಲದಲ್ಲಿರುವವನೂ ಅಕ್ಷಿಯಲ್ಲಿರುವವನೂ ಒಬ್ಬನೇ ಎಂದು ತಿಳಿದುಬರುತ್ತದೆ. ಆದ್ದರಿಂದ ಚಕ್ಷುರಂತಸ್ಥನು ಅಗ್ನಿಯೇ ಎಂದು ಈ ಅಧಿಕರಣದ ಪೂರ್ವಪಕ್ಷ.

2. ಆದೇಯಂ—ಉಪಾದೇಯವಾದ ಸುಖವನ್ನು, ಮಾತಿ—ಅನುಭವಿಸುತ್ತಾನೆ.

इतश्चैवमित्याह—

## ॥ ॐ स्थानादिव्यपदेशाच्च ॐ ॥ १-२-१४

स्थानमक्षि । आदिपदात् तदधिष्ठातृ गृह्यते । स्थानादिशब्दात् स्थानादिशक्तिरुपलक्ष्यते । स्थानरूपाक्षिशक्तेरधिष्ठातृशक्तेश्च व्यपदेशाच्चान्तरो ब्रह्मैवेत्यर्थः । "तद्यदस्मिन् सर्पिर्वोदकं वा सिञ्चति" इत्यादिनाऽक्ष्णोऽसङ्गत्वशक्तिरुच्यते । एवं "एतं संयद्वाम इत्याचक्षते" इत्यादिनाऽक्ष्यन्तःस्थस्य संयद्वामत्वशक्तिश्चोच्यते। तद्द्वयमक्ष्यन्तःस्थस्य ब्रह्मत्व एव युक्तमिति भावः ॥

---

ಈ ಮುಂದೆ ಹೇಳುವ ಕಾರಣದಿಂದಲೂ ಅಂತರನು ಬ್ರಹ್ಮನೇ ಎಂದು ಹೇಳಲು ಸೂತ್ರ—

## ಓಂ ಸ್ಥಾನಾದಿವ್ಯಪದೇಶಾಚ್ಚ ಓಂ (೧-೨-೧೪)

**ಸೂತ್ರಾರ್ಥ**

ಇಲ್ಲಿ ಸ್ಥಾನವೆಂದರೆ ಅಕ್ಷಿ. ಆದಿಪದದಿಂದ ನೇತ್ರದ ಅಧಿಷ್ಠಾತೃವಾದ ಪರಮಾತ್ಮನನ್ನು ತೆಗೆದುಕೊಳ್ಳಬೇಕು. 'ಸ್ಥಾನಾದಿ' ಶಬ್ದದಿಂದ ಸ್ಥಾನಾದಿಗಳ ಶಕ್ತಿಯನ್ನು ಉಪಲಕ್ಷಣಯಾ ತೆಗೆದುಕೊಳ್ಳಬೇಕು. ಸ್ಥಾನವಾಗಿರುವ ಅಕ್ಷಿಯ ಮತ್ತು ಅದರ ಅಧಿಷ್ಠಾತೃವಾದ ಪರಮಾತ್ಮನ ಶಕ್ತಿಯ ಉಲ್ಲೇಖವಿರುವುದರಿಂದ ಅಂತರನು ಬ್ರಹ್ಮನೇ ಎಂದು ಅರ್ಥ.

**ಸ್ಥಾನಶಕ್ತಿ ಮತ್ತು ಅಧಿಷ್ಠಾತೃಶಕ್ತಿಗಳ ವಿವರಣೆ**

1 'ತದ್ಯದಸ್ಮಿನ್ ಸರ್ಪಿರ್ವೋದಕಂ ವಾ ಸಿಂಚತಿ' ಇತ್ಯಾದಿ ಶ್ರುತಿಯಿಂದ

---

1. 'ತದ್ಯದಸ್ಮಿನ್ ಸರ್ಪಿರ್ವೋದಕಂ ವಾ ಸಿಂಚತಿ ವರ್ತ್ಮನೀ ಏವ ಗಚ್ಛತಿ' (ಛಾಂ. ೪–೧೫) ಎಂದು ಶ್ರುತಿ. ಯತ್ ಯಾವ ಕಾರಣದಿಂದ ಅಸಂಗನಾದ ಈ ಪುರುಷನು ಅಕ್ಷಿಯಲ್ಲಿ ನಿಯಾಮಕನಾಗಿ ನೆಲೆಸಿದ್ದಾನೋ, ತತ್–ಆ ಕಾರಣದಿಂದ, ಅಸ್ಮಿನ್–ಈ ಚಕ್ಷುವಿನಲ್ಲಿ, ಸರ್ಪಿಃ–ಘೃತವನ್ನಾಗಲೀ, ಉದಕಂ ವಾ–ನೀರನ್ನಾಗಲೀ, ಸಿಂಚತಿ–ಯಾರಾದರೂ ಹಾಕಿದಲ್ಲಿ ಅದು, ವರ್ತ್ಮನೀ ಏವ–ಎರಡು ಬದಿಗಳಲ್ಲೇ, ಗಚ್ಛತಿ–ಹೋಗುತ್ತದೆ ಎಂದು ಶ್ರುತ್ಯರ್ಥ. ಅಸಂಗನಾದ ಪರಮಾತ್ಮನ ಮಹಿಮೆಯಿಂದಲೇ ಅವನಿರುವ ಚಕ್ಷುಗಳಿಗೂ ಅಸಂಗತ್ವಶಕ್ತಿ ಇರುವುದೆಂದು ಭಾವ.

*

प्रकरणबलाच्चैवमित्याह—

## ॥ ॐ सुखविशिष्टाभिधानादेव च ॐ ॥ १-२-१५

विशिष्टं च तत्सुखं च सुखविशिष्टं "कडाराः कर्मधारये" इति परनिपातः। सुखेन विशिष्टमिति वा, सुखेषु विशिष्टमिति वा

---

ಅಕ್ಷಿಗೆ ಅಸಂಗತ್ವಶಕ್ತಿಯು ಹೇಳಲ್ಪಟ್ಟಿದೆ ಇದೇ ರೀತಿ [1] 'ಏತಂ ಸಂಯದ್ವಾಮ ಇತ್ಯಾಚಕ್ಷತೇ' ಇತ್ಯಾದಿ ಶ್ರುತಿಯಿಂದ ಅಕ್ಷ್ಯಂತಃಸ್ಥನಿಗೆ ಸಂಯದ್ವಾಮತ್ವಶಕ್ತಿಯನ್ನು ಹೇಳಲಾಗಿದೆ. ಇವೆರಡೂ ಅಕ್ಷ್ಯಂತಃಸ್ಥನು ಬ್ರಹ್ಮನೇ ಎಂದಾದಲ್ಲಿ ಮಾತ್ರ ಯುಕ್ತವೆಂದು ಭಾವ.

ಪ್ರಕರಣಬಲದಿಂದಲೂ ಚಕ್ಷುರಂತಃಸ್ಥನು ಪರಬ್ರಹ್ಮನೇ ಎಂದು ಹೇಳಲು ಸೂತ್ರ—

## ಓಂ ಸುಖವಿಶಿಷ್ಟಾಭಿಧಾನಾದೇವ ಚ ಓಂ (೧-೨-೧೫)

**ಸೂತ್ರಾರ್ಥ**

ವಿಶಿಷ್ಟಂ ಚ ತತ್ ಸುಖಂ ಚ ಸುಖವಿಶಿಷ್ಟಂ ಎಂದು ವಿಗ್ರಹ 'ಕಡಾರಾಃ ಕರ್ಮಧಾರಯೇ' ಎಂಬ ಸೂತ್ರದಿಂದ ವಿಶಿಷ್ಟಪದವು ಸಮಾಸದಲ್ಲಿ ಪರನಿಪಾತವನ್ನು

---

1. 'ಏತಂ ಸಂಯದ್ವಾಮ ಇತ್ಯಾಚಕ್ಷತೇ, ಏತಂ ಹಿ ಸರ್ವಾಣಿ ವಾಮಾನ್ಯಭಿಸಂಯಂತಿ... ಏಷ ಉ ಏವ ವಾಮನೀರೇಷ ಹಿ ಸರ್ವಾಣಿ ವಾಮಾನಿ ನಯತಿ ... ಏಷ ಉ ಏವ ಭಾಮನೀರೇಷ ಹಿ ಸರ್ವೇಷು ಲೋಕೇಷು ಭಾತಿ' (ಛಾಂ. ೪–೧೫) ಎಂದು ಶ್ರುತಿ. ಏತಂ ಚಕ್ಷುರಂತಸ್ಥನಾದ ವಾಮನಾಖ್ಯನಾದ ವಿಷ್ಣುವನ್ನು ವಿದ್ವಾಂಸರು, ಸಂಯದ್ವಾಮ ಇತಿ—ಸಂಯದ್ವಾಮನೆಂದು, ಆಚಕ್ಷತೇ—ಹೇಳುತ್ತಾರೆ. ಹಿ—ಏಕೆಂದರೆ, ಏತಂ—ಈ ಪರಮಾತ್ಮನನ್ನೇ, ಸರ್ವಾಣಿ ವಾಮಾನಿ—ಎಲ್ಲ ಸ್ತ್ರೀರೂಪಗಳೂ, ಅಭಿಸಂಯಂತಿ—ಹೊಂದುತ್ತವೆ. ಏಷ ಉ ಏವ—ಈ ಪರಮಾತ್ಮನೇ, ವಾಮನೀಃ—ವಾಮನಿಯೆಂದು ಕರೆಯಲ್ಪಡುತ್ತಾನೆ. ಹಿ—ಏಕೆಂದರೆ, ಏಷಃ—ಇವನು, ವಾಮಾನಿ—ರಮಾದಿ ಸಕಲ ಸುಂದರ ಸ್ತ್ರೀಯರನ್ನೂ, ನಯತಿ—ಪ್ರೇರಿಸುತ್ತಾನೆ. ಏಷ ಉ ಏವ—ಚಾಕ್ಷುಷನಾದ ಪುರುಷನೇ, ಭಾಮನೀ—ಭಾಮನಿಯು. ಹಿ—ಏಕೆಂದರೆ, ಏಷಃ—ಇವನು, ಸರ್ವೇಷು ಲೋಕೇಷು—ಎಲ್ಲ ಪುರುಷರಲ್ಲೂ, ಭಾತಿ—ಆ ಪುರುಷರ ತೇಜಃಪ್ರಕಾಶನಾಗಿ ಪ್ರಕಾಶಿಸುತ್ತಿದ್ದಾನೆ ಎಂದು ಶ್ರುತ್ಯರ್ಥ. ಅಕ್ಷಿಗಳಿಗೆ ಅಸಂಗತ್ವವನ್ನು ಕೊಡುವುದು ಮತ್ತು ಸರ್ವಸೌಂದರ್ಯಕ್ಕೆ ಆಶ್ರಯರಾದ ಸ್ತ್ರೀಯರನ್ನು ಪ್ರೇರಿಸುವುದು—ಇವುಗಳು ವಿಷ್ಣುವಿನ ಅಸಾಧಾರಣ ಧರ್ಮಗಳೆಂದು ಪ್ರಸಿದ್ಧವಾಗಿವೆ. ಛಾಂದೋಗ್ಯಶ್ರುತಿಯಲ್ಲಿ ಚಕ್ಷುರಂತಸ್ಥನಿಗೆ ಆ ಧರ್ಮಗಳನ್ನು ಹೇಳಿರುವುದರಿಂದ ಚಕ್ಷುರಂತಸ್ಥನು ಪರಬ್ರಹ್ಮನೆಂದು ಭಾವ.

सुखविशिष्टम् । "कं ब्रह्म खं ब्रह्म" इत्युपक्रमे कं सुखं ब्रह्म पूर्णमिति पूर्णत्वविशिष्टसुखरूपत्वाभिधानाच्चान्तरो ब्रह्मैवेत्यर्थः । एवेत्यनेन तिष्ठतु तावत् खं ब्रह्मेति पूर्णज्ञानाभिधानमित्याह । विशिष्टेति जीवे व्यभिचारनिरासाय ॥

अस्तु कं ब्रह्मेत्युक्ता ब्रह्मविद्या । अक्षिविद्या त्वग्निपराऽस्त्वित्यत आह—

## ॥ ॐ श्रुतोपनिषत्कगत्यभिधानाच्च ॐ ॥ १-२-१६

ಪಡೆದಿದೆ. ಅಥವಾ ಸುಖೇನ ವಿಶಿಷ್ಟಂ ಸುಖವಿಶಿಷ್ಟಂ ಎಂದಾಗಲೀ ಸುಖೇಷು ವಿಶಿಷ್ಟಂ ಸುಖವಿಶಿಷ್ಟಂ ಎಂದಾಗಲೀ ವಿಗ್ರಹವನ್ನು ಹೇಳಬಹುದು. 'ಕಂ ಬ್ರಹ್ಮ ಖಂ ಬ್ರಹ್ಮ' (ಛಾಂ. ೪–೧೦) ಎಂದು ಉಪಕ್ರಮದಲ್ಲಿ ಕಂ–ಸುಖನು, ಬ್ರಹ್ಮ–ಪೂರ್ಣನು ಎಂದು ಪೂರ್ಣತ್ವವಿಶಿಷ್ಟಸುಖರೂಪತ್ವವನ್ನು ಹೇಳಿರುವುದರಿಂದಲೂ ಅಂತರನು ಬ್ರಹ್ಮನೇ ಎಂದು ಅರ್ಥ.

### ಸೂತ್ರದ 'ಏವ' ಮತ್ತು 'ವಿಶಿಷ್ಟ' ಪದಗಳ ಪ್ರಯೋಜನ

[1] 'ಖಂ ಬ್ರಹ್ಮ' ಎಂದು ಪೂರ್ಣಜ್ಞಾನವನ್ನು ಹೇಳಿರುವುದು ಹಾಗಿರಲಿ' ಎಂದು ಏವ ಶಬ್ದದಿಂದ ಹೇಳಲಾಗಿದೆ. [2]ಜೀವನಲ್ಲಿ ವ್ಯಭಿಚಾರವನ್ನು ನಿರಾಕರಿಸಲು 'ವಿಶಿಷ್ಟ' ಎಂದು ಹೇಳಿದೆ.

'ಕಂ ಬ್ರಹ್ಮ' ಎಂದು ಹೇಳಿರುವುದು ಬ್ರಹ್ಮವಿದ್ಯೆಯಾಗಿರಲಿ, ಆದರೆ ಅಕ್ಷಿವಿದ್ಯೆ ಮಾತ್ರ ಅಗ್ನಿಪರವಾಗಿರಲಿ ಎಂಬ ಆಕ್ಷೇಪಕ್ಕೆ ಸಮಾಧಾನ—

## ಓಂ ಶ್ರುತೋಪನಿಷತ್ಕಗತ್ಯಭಿಧಾನಾಚ್ಚ ಓಂ (೧-೨-೧೬)

1. 'ಕ' ಮತ್ತು 'ಖ' ಪದಗಳಿಂದ ಕ್ರಮವಾಗಿ ಪೂರ್ಣಸುಖರೂಪತ್ವ ಮತ್ತು ಪೂರ್ಣಜ್ಞಾನರೂಪತ್ವ ಇವೆರಡನ್ನೂ ಅಂತರನಲ್ಲಿ ಶ್ರುತಿಯು ಹೇಳುತ್ತಿದೆ. ಅಂತರನು ಬ್ರಹ್ಮನೆಂದು ಸಾಧಿಸಲು ಪೂರ್ಣಸುಖರೂಪತ್ವವೊಂದೇ ಸಾಕು ಎಂದು ಏವ ಶಬ್ದವು ಸೂಚಿಸುತ್ತದೆಂದು ಭಾವ.

2. ಜೀವನೂ ಸುಖರೂಪನೇ. ಆದ್ದರಿಂದ 'ಸುಖಾಭಿಧಾನ' ಮಾತ್ರದಿಂದ ಅಂತರನು ಬ್ರಹ್ಮನೆಂದು ಸಾಧಿಸಲಾಗದು. ಪೂರ್ಣತ್ವವಿಶಿಷ್ಟಸುಖರೂಪತ್ವವು ಜೀವನಲಿಲವೆ ಬ್ರಹ [illegible] ಮಾತ್ರ ಸಂಬಂಧಿಸಿದೆ. ಆದ್ದರಿಂದ ಜೀವನಲ್ಲಿ ವ್ಯಭಿಚಾರವಿಲ್ಲ.

श्रुतेत्युपलक्षणम् । केति ब्रह्मवायू तन्त्रेणोक्तौ । "प्राणो ब्रह्म कं ब्रह्म" इति तयोः प्रकृतत्वात् । श्रुतोपनिषदां श्रुतमतध्यातैतद्विद्यानां पुंसां केन वायुना कस्य ब्रह्मणो गतेः प्राप्तेः "स एनान् ब्रह्म गमयति" इत्यभिधानाच्चान्तरो ब्रह्मैवेत्यर्थः । अन्यविद्याश्रवणादिनाऽन्यप्राप्ते-रयोगादिति भावः ॥

विपक्षे बाधकेनाप्येवमित्याह—

॥ ॐ अनवस्थितेरसम्भवाच्च नेतरः ॐ ॥

१ २-१७

अन्तर इतरोऽग्निर्न । किन्तु ब्रह्मैव । कुतः ? अनवस्थितेः ।

**ಸೂತ್ರಾರ್ಥ**

1 'ಶ್ರುತ' ಎನ್ನುವುದು ಉಪಲಕ್ಷಣ. 'ಪ್ರಾಣೋ ಬ್ರಹ್ಮ ಕಂ ಬ್ರಹ್ಮ' ಎಂಬುದಾಗಿ ಬ್ರಹ್ಮವಾಯುಗಳಿಬ್ಬರೂ ಪ್ರಕೃತರಾಗಿರುವುದರಿಂದ 'ಕ' ಶಬ್ದದಿಂದ 2ತಂತ್ರದಿಂದ ಬ್ರಹ್ಮವಾಯುಗಳಿಬ್ಬರೂ ಹೇಳಲ್ಪಟ್ಟಿದ್ದಾರೆ. ಶ್ರುತೋಪನಿಷದಾಂ— ಈ ಅಕ್ಷಿವಿದ್ಯೆಯ ಶ್ರವಣ, ಮನನ, ಧ್ಯಾನಗಳನ್ನು ಮಾಡಿದ ಪುರುಷರಿಗೆ, ಕೇನ— ವಾಯುವಿನಿಂದ, ಕಸ್ಯ—ಬ್ರಹ್ಮನ, ಗತೇಃ—ಪ್ರಾಪ್ತಿಯು, ಅಭಿಧಾನಾತ್—'ಸ ಏನಾನ್ ಬ್ರಹ್ಮ ಗಮಯತಿ' ಎಂದು ಉಲ್ಲೇಖವಿರುವುದರಿಂದಲೂ ಅಂತರನು ಬ್ರಹ್ಮನೇ ಎಂದು ಅರ್ಥ. ಒಬ್ಬರಿಗೆ ಸಂಬಂಧಿಸಿದ ವಿದ್ಯೆಯಿಂದ ಮತ್ತೊಬ್ಬರನ್ನು ಹೊಂದುವುದು ಸಾಧ್ಯವಿಲ್ಲವೆಂದು ಭಾವ.

ಅಂತರನು ಬ್ರಹ್ಮನೆಂದು ಒಪ್ಪದಿದ್ದಲ್ಲಿ ಬಾಧಕವಿರುವುದರಿಂದಲೂ ಅಂತರನು ಬ್ರಹ್ಮನೇ ಎಂದು ಹೇಳಲು ಸೂತ್ರ—

ಓಂ ಅನವಸ್ಥಿತೇರಸಂಭವಾಚ್ಚ ನೇತರಃ ಓಂ (೧-೨-೧೭)

**ಸೂತ್ರಾರ್ಥ**

ಅಂತರನು ಇತರಃ ನ—ಬ್ರಹ್ಮಭಿನ್ನನಾದ ಅಗ್ನಿಯಲ್ಲ, ಅದರ ಬದಲು ಬ್ರಹ್ಮನೇ. ಏಕೆಂದರೆ, ಅನವಸ್ಥಿತೇಃ—ಜೀವನಾದ ಅಗ್ನಿಗೆ ಜೀವಾಂತರಪ್ರೇರಕತ್ವವನ್ನು ಹೇಳಿದರೆ

1. ಶ್ರವಣಮಾತ್ರವಲ್ಲದೇ ಮನನ, ಧ್ಯಾನಗಳನ್ನೂ ಶ್ರುತಪದವು ಹೇಳುತ್ತದೆಂದು ಭಾವ.

2. ಸಕೃದುಚ್ಚರಿತಸ್ಯ ದ್ವಿರನುಸಂಧಾನಂ ತಂತ್ರಮ್—ಒಂದು ಸಲ ಉಚ್ಚರಿಸಿದ ಶಬ್ದವನ್ನು ಎರಡು ಸಲ ಅನುಸಂಧಾನ ಮಾಡಿಕೊಳ್ಳುವುದು ತಂತ್ರ. ಹೀಗೆ ಅನುಸಂಧಾನಮಾಡಲ್ಪಟ್ಟ ಕಶಬ್ದಗಳಲ್ಲಿ ಒಂದಕ್ಕೆ ಬ್ರಹ್ಮನೂ ಇನ್ನೊಂದಕ್ಕೆ ವಾಯುವೂ ಅರ್ಥವೆಂದು ಭಾವ.

जीवस्याग्नेर्जीवान्तरप्रेरकत्वे तस्यापि प्रेरकान्तरेण भाव्यम् । तस्यापि तथेत्यनवस्थानात् । अङ्गीकृत्य चेदमुदितम् । अग्नेरपि प्रेर्येण जीवत्वसाम्येन प्रेरणासम्भवाच्चेत्यर्थः ॥ ४ ॥

अन्तर्याम्यधिकरणम्—५

## ॥ ॐ अन्तर्याम्यधिदैवादिषु तद्धर्मव्यपदेशात् ॐ ॥ १-२-१८

अत्र नयेऽन्तः स्थितिरूपभावयुक्तं नियमनाख्यं क्रियात्मकं लिङ्गं समन्वीयते । अधिदैवादिपदेन तत्तत्प्रकरणं लक्ष्यते । तदिति तन्त्रम् ।

---

ಆ ಅಗ್ನಿಗೂ ಮತ್ತೊಬ್ಬ ಪ್ರೇರಕನಿರಬೇಕಾಗುವುದು. ಆ ಪ್ರೇರಕನಿಗೂ ಹಾಗೆಯೇ ಮತ್ತೊಬ್ಬ ಪ್ರೇರಕನಿರಬೇಕಾಗುವುದು ಎಂದು ಅನವಸ್ಥೆಯುಂಟಾಗುವುದು. ಅಗ್ನಿಗೆ ಪ್ರೇರಕತ್ವವನ್ನು ಅಂಗೀಕರಿಸಿ ಇದನ್ನು ಹೇಳಲಾಗಿದೆ. ಪ್ರೇರಿಸಲ್ಪಡುವ ಜೀವನಿಂದ ಜೀವತ್ವವಿಷಯದಲ್ಲಿ ಅಗ್ನಿಗೂ ಸಮಾನತೆ ಇರುವುದರಿಂದಲೂ ಪ್ರೇರಣೆಯು ಅಸಂಭಾವಿತವಾಗಿರುವುದರಿಂದಲೂ ಅಂತರನು ಅಗ್ನಿಯಲ್ಲವೆಂದು ಅರ್ಥ.

ಅಂತರ್ಯಾಮ್ಯಧಿಕರಣ—೫

## ಓಂ ಅಂತರ್ಯಾಮ್ಯಧಿದೈವಾದಿಷು ತದ್ಧರ್ಮ-ವ್ಯಪದೇಶಾತ್ ಓಂ (೧-೨-೧೮)

**ಅಧಿಕರಣದ ಉದ್ದೇಶ**

[1]ಈ ಅಧಿಕರಣದಲ್ಲಿ ಅಂತಃಸ್ಥಿತಿ ಎಂಬ ಭಾವಧರ್ಮಸಹಿತವಾದ ನಿಯಮನವೆಂಬ ಕ್ರಿಯಾರೂಪವಾದ ಲಿಂಗದ ಸಮನ್ವಯವು ಮಾಡಲ್ಪಡುತ್ತದೆ.

---

1. ಯಃ ಪೃಥಿವ್ಯಾಂ ತಿಷ್ಠನ್ ಪೃಥಿವ್ಯಾ ಅಂತರೋ ಯಂ ಪೃಥಿವೀ ನ ವೇದ ಯಸ್ಯ ಪೃಥಿವೀ ಶರೀರಂ ಯಃ ಪೃಥಿವೀಂ ಅಂತರೋ ಯಮಯತ್ಯೇಷ ತ ಆತ್ಮಾ ಅಂತರ್ಯಾಮ್ಯಮೃತಃ (ಬೃ. ೫–೭–೩) ಇತ್ಯಾದಿ ಬೃಹದಾರಣ್ಯಕ ಶ್ರುತಿಯು ಇಲ್ಲಿ ವಿಷಯವಾಕ್ಯ. ಇಲ್ಲಿ ಶ್ರುತವಾಗಿರುವ ಅಂತರ್ಯಾಮಿತ್ವವು ಪ್ರಕೃತಿಗಾಗಲೀ, ಅಭಿಮಾನಿ ಜೀವನಿಗಾಗಲೀ ಸಂಬಂಧಪಟ್ಟಿದ್ದು ಎಂದು ಈ ಅಧಿಕರಣದ ಪೂರ್ವಪಕ್ಷ. ಬೃಹದಾರಣ್ಯಕದ ಈ ಭಾಗದಲ್ಲಿರುವ ಅಧಿದೈವಾದಿ ಪ್ರಕರಣಗಳಲ್ಲಿ ಪೃಥಿವ್ಯಾದ್ಯವಿದಿತತ್ವ, ಅಂತರತ್ವ ಮೊದಲಾದ ಅನೇಕ ಪರಬ್ರಹ್ಮನ ಧರ್ಮಗಳನ್ನು ಹೇಳಿರುವುದರಿಂದ ಅಂತರ್ಯಾಮಿಯು ವಿಷ್ಣುವೇ ಎಂದು ಸಿದ್ಧಾಂತ.

तत्त्वित्यस्ति। "एष त आत्माऽन्तर्याम्यमृत" इति श्रुतोऽन्तर्यामी ब्रह्मैव न तु प्रकृतिस्तत्तदभिमानी जीवो वा। कुतः? अधिदैवाधिभूतादि-प्रकरणेषु तस्यान्तर्यामिणः सम्बन्धितया तस्य ब्रह्मणो धर्मस्य "यं पृथिवी न वेद यः पृथिवीमन्तरो यमयति" इत्यादिना पृथिव्या-द्यविदितत्वान्तरत्वादेर्व्यपदेशादित्यर्थः। तत्त्वित्यनुवृत्तावपि पुंनिर्देशो निर्णयश्रुत्यनुसारात्। तद्धर्मव्यपदेशादित्येव पूर्तावधिदैवेत्युक्तिः पृथिव्यादेश्चेतनत्वसूचनार्था। तेन जडावेद्यत्वं प्रकृत्यादावपि युक्तमिति न शङ्क्यम्।

---

**ಸೂತ್ರಾರ್ಥ**

[1]'ಅಧಿದೈವಾದಿ'ಪದದಿಂದ ಆಯಾ ಪ್ರಕರಣವು ಇಲ್ಲಿ ಲಕ್ಷಿತವಾಗಿದೆ. [2]'ತತ್' ಪದವನ್ನು ಆವೃತ್ತಿಮಾಡಿಕೊಳ್ಳಬೇಕು 'ತತ್ತು' ಎಂಬ ಪದಗಳೂ ಅನುವೃತ್ತಿಗೊಳ್ಳುತ್ತವೆ. 'ಏಷ ತ ಆತ್ಮಾ ಅಂತರ್ಯಾಮ್ಯಮೃತಃ' ಎಂಬಲ್ಲಿ ಶ್ರುತನಾಗಿರುವ ಅಂತರ್ಯಾಮಿಯು ಬ್ರಹ್ಮನೇ, ಪ್ರಕೃತಿಯಾಗಲೀ ಪೃಥಿವ್ಯಾದಿಗಳ ಅಭಿಮಾನಿಗಳಾದ ಆಯಾಯಾ ಜೀವರಾಗಲೀ ಅಲ್ಲ. ಏಕೆಂದರೆ, ಅಧಿದೈವ, ಅಧಿಭೂತ ಮೊದಲಾದ ಪ್ರಕರಣಗಳಲ್ಲಿ, [3]ತಸ್ಯ–ಆ ಅಂತರ್ಯಾಮಿಗೆ ಸಂಬಂಧಿಸಿರುವಂತೆ, ತಸ್ಯ–ಆ ಬ್ರಹ್ಮನ, ಧರ್ಮಸ್ಯ–'ಯಂ ಪೃಥಿವೀ ನ ವೇದ', 'ಯಃ ಪೃಥಿವೀಂ ಅಂತರೋ ಯಮಯತಿ' ಇತ್ಯಾದಿ ವಾಕ್ಯಗಳಿಂದ [4]ಪೃಥಿವ್ಯಾದ್ಯವಿದಿತತ್ವ, ಅಂತರತ್ವ ಮೊದಲಾದ ಧರ್ಮಗಳ, ವ್ಯಪದೇಶಾತ್–ಉಲ್ಲೇಖವಿರುವುದರಿಂದ, ಎಂದು ಅರ್ಥ.

**'ಅಂತರ್ಯಾಮೀ' ಎಂದು ಪುಲ್ಲಿಂಗ ಪ್ರಯೋಗದ ಮತ್ತು 'ಅಧಿದೈವ' ಪದದ ಔಚಿತ್ಯ**

'ತತ್ತು' ಎಂದು ಅನುವೃತ್ತಿ ಇದ್ದರೂ, [5]ನಿರ್ಣಯ ಶ್ರುತಿಗೆ ಅನುಸಾರವಾಗಿ ಪುಲ್ಲಿಂಗ ನಿರ್ದೇಶವನ್ನು ಮಾಡಲಾಗಿದೆ. 'ತದ್ಧರ್ಮವ್ಯಪದೇಶಾತ್' ಎಂಬುದರಿಂದಲೇ

---

1. ಬೃಹದಾರಣ್ಯಕದ ಈ ಭಾಗದಲ್ಲಿ ಬರುವ 'ಯಃ ಪೃಥಿವ್ಯಾಂ ತಿಷ್ಠನ್' ಇತ್ಯಾದಿ ವಾಕ್ಯಗಳ ಸಮೂಹ ಅಧಿದೈವಪ್ರಕರಣ. 'ಯಃ ಸರ್ವೇಷು ಭೂತೇಷು' ಇತ್ಯಾದಿ ವಾಕ್ಯಗಳು ಅಧಿಭೂತಪ್ರಕರಣ. 'ಯಃ ಪ್ರಾಣೇ ತಿಷ್ಠನ್' ಇತ್ಯಾದಿ ವಾಕ್ಯಗಳು ಅಧ್ಯಾತ್ಮ ಪ್ರಕರಣ.

2. 'ತದ್ಧರ್ಮವ್ಯಪದೇಶಾತ್' ಎಂಬಲ್ಲಿನ ತತ್ ಪದವನ್ನು.

3. ತಸ್ಯ, ತಸ್ಯ ಧರ್ಮಸ್ಯ ವ್ಯಪದೇಶಾತ್ ಎಂದು 'ತದ್ಧರ್ಮವ್ಯಪದೇಶಾತ್' ಎಂಬ ಪದದ ಅರ್ಥವಿವರಣೆ.

4. ಪೃಥಿವ್ಯಾದಿ ದೇವತೆಗಳಿಂದ ಸಾಕಲ್ಯೇನ ತಿಳಿಯಲ್ಪಡದಿರುವುದು ಪೃಥಿವ್ಯಾದ್ಯವಿದಿತತ್ವ.

5. 'ಏಷ ತ ಆತ್ಮಾ ಅಂತರ್ಯಾಮ್ಯಮೃತಃ' ಎಂದು ನಿರ್ಣಯ ಶ್ರುತಿ.

ननु पृथिव्यादिशरीरत्वलिङ्गात् प्रकृतिजीवौ किं न स्याताम् इत्यत आह—

॥ ॐ न च स्मार्तमतद्धर्माभिलापात् ॐ ॥

१-२ १९

चस्त्वर्थे । शारीरश्चेत्यनुकृष्यते । स्मार्तं साङ्ख्यस्मृत्युक्तं प्रधानम् । अन्तर्यामी तदेव न तु स्मार्तं शारीरो जीवश्च । कुतः ?

---

ಸೂತ್ರವು ಪೂರ್ಣಗೊಳ್ಳುತ್ತಿದ್ದರೂ 'ಅಧಿದೈವ' ಎಂದು ಹೇಳಿರುವುದು ಪೃಥಿವ್ಯಾದಿಗಳು ಚೇತನರೆಂದು ಸೂಚಿಸಲು. ಇದರಿಂದ ಜಡದಿಂದ ತಿಳಿಯಲ್ಪಡದಿರುವುದು ಪ್ರಕೃತಿ ಮೊದಲಾದವುಗಳಲ್ಲೂ ಯುಕ್ತವೆಂಬ ಶಂಕೆಗೆ ಅವಕಾಶವಿಲ್ಲ.

[1]ಪೃಥಿವ್ಯಾದಿಶರೀರತ್ವವೆಂಬ ಲಿಂಗದಿಂದ ಪ್ರಕೃತಿ ಅಥವಾ ಜೀವರೇ ಅಂತರ್ಯಾಮಿಗಳು ಏಕಾಗಬಾರದು ಎಂಬ ಆಕ್ಷೇಪಕ್ಕೆ ಉತ್ತರವನ್ನು ಹೇಳುವ ಸೂತ್ರ—

ಓಂ ನ ಚ ಸ್ಮಾರ್ತಮತದ್ಧರ್ಮಾಭಿಲಾಪಾತ್ ಓಂ

(೧-೨-೧೯)

**ಸೂತ್ರಾರ್ಥ**

'ಚ' ಶಬ್ದವನ್ನು 'ತು' ಎಂಬ ಪದದ ಅರ್ಥದಲ್ಲಿ ತೆಗೆದುಕೊಳ್ಳಬೇಕು. 'ಶಾರೀರಶ್ಚ' ಎಂದು ಮುಂದಿನ ಸೂತ್ರದ ಪದವನ್ನು ತೆಗೆದುಕೊಳ್ಳಬೇಕು. 'ಸ್ಮಾರ್ತ' ಎಂದರೆ ಸಾಂಖ್ಯಸ್ಮೃತಿಯಲ್ಲಿ ಹೇಳಿರುವ ಪ್ರಕೃತಿ. ಅಂತರ್ಯಾಮಿಯು ಬ್ರಹ್ಮನೇ. ಸ್ಮಾರ್ತವಾದ ಪ್ರಕೃತಿಯಾಗಲೀ ಶಾರೀರನಾದ ಜೀವನಾಗಲೀ ಅಲ್ಲ ಏಕೆಂದರೆ, [2]ಅತದ್ಧರ್ಮಾಭಿಲಾಪಾತ್—ತಯೋಃ—ಸ್ಮಾರ್ತ ಮತ್ತು ಜೀವರ, ಧರ್ಮಾಣಾಂ—ಧರ್ಮಗಳಾದ ತ್ರಿಗುಣತ್ವ, ಸಂಸಾರಿತ್ವ ಮೊದಲಾದವುಗಳ, ಅಭಿಲಾಪ ಅಥವಾ

---

1. 'ಯಸ್ಯ ಪೃಥಿವೀ ಶರೀರಂ' ಎಂದು ಶ್ರುತಿಯು ಪೃಥಿವ್ಯಾದಿಗಳನ್ನು ಶರೀರವೆಂದು ಹೇಳುತ್ತದೆ. ಶರೀರಶಬ್ದಕ್ಕೆ ಸ್ವರೂಪ ಎಂಬ ಅರ್ಥವೂ ಇದೆ. ಆದ್ದರಿಂದ ಉಪಾದಾನಕಾರಣವಾದ ಪ್ರಕೃತಿಗೆ ಪೃಥಿವ್ಯಾದಿಗಳು ಶರೀರ ಅಥವಾ ಸ್ವರೂಪಭೂತವಾದುವು. ಅಭಿಮಾನಿ ಜೀವನಿಗಂತೂ ಪೃಥಿವ್ಯಾದಿಗಳು ಪ್ರಸಿದ್ಧಾರ್ಥದಲ್ಲಿಯೇ ಶರೀರವಾಗುತ್ತವೆ. ಬ್ರಹ್ಮನಿಗೆ ಪೃಥಿವ್ಯಾದಿಗಳು ಯಾವ ರೀತಿಯಿಂದಲೂ ಶರೀರವಾಗಲಾರವು ಎಂದು ಪೂರ್ವಪಕ್ಷಿಯ ಅಭಿಪ್ರಾಯ.

2. ತಯೋಃ ಧರ್ಮಾಣಾಂ ಅಭಿಲಾಪಾಭಾವಾತ್ ಎಂದು ಅತದ್ಧರ್ಮಾಭಿಲಾಪಾತ್ ಎಂಬುದರ ವಿವರಣೆ.

अतद्धर्माभिलापात् । तयोः स्मार्तजीवयोर्धर्माणां त्रिगुणत्वसंसारित्वादीनामभिलापाभावादित्यर्थः । शारीरत्वं तु "शीर्यते नित्यमेवास्मात्" इत्यादिना सावकाशमिति भावः । स्मार्तेत्युक्तिः स्मृत्युक्तदिशा सर्वस्य तदुपादानकतया तदभेदेन तत्स्वरूपत्वाभिप्रायेण पृथिव्यादिशरीरत्वमिति पूर्वपक्षे युक्तिं सूचयितुम् । शारीरेत्युक्तिरपि शारीरत्वात्तत्तच्छरीरत्वं तत्तदभिमानिजीवस्य युक्तमिति सूचयितुमित्याहुः । तत्त्वप्रदीपे तु कापिलस्मृतिमात्रकल्पितं, न तु श्रुत्युक्तमिति स्मार्तमित्युक्तम् ।

ಉಲ್ಲೇಖವಿಲ್ಲದಿರುವುದರಿಂದ ಎಂದು ಅರ್ಥ. [1] 'ಶೀರ್ಯತೇ ನಿತ್ಯಮೇವಾಸ್ಮಾತ್' ಇತ್ಯಾದಿ ಪ್ರಮಾಣಾನುಸಾರ ಪೃಥಿವ್ಯಾದಿ ಶರೀರತ್ವವು ಬ್ರಹ್ಮನಲ್ಲಿ ಸಾವಕಾಶವೆಂದು ಭಾವ.

**'ಸ್ಮಾರ್ತ' ಮತ್ತು 'ಶಾರೀರ' ಪದಗಳನ್ನು ಪ್ರಯೋಗಿಸಿರುವುದರ ಸ್ವಾರಸ್ಯ**

ಸಾಂಖ್ಯಸ್ಮೃತಿಯಲ್ಲಿ ಹೇಳಿರುವಂತೆ ಎಲ್ಲ ಜಡಪದಾರ್ಥಗಳೂ ಪ್ರಕೃತಿಯನ್ನು ಉಪಾದಾನಕಾರಣವಾಗಿ ಹೊಂದಿರುವುದರಿಂದ ಪ್ರಕೃತಿಯಿಂದ ಅಭಿನ್ನವಾಗಿವೆ; ಆದ್ದರಿಂದ ಪೃಥಿವ್ಯಾದಿಸ್ವರೂಪವಾಗಿದೆ ಎಂಬ ಅಭಿಪ್ರಾಯದಲ್ಲಿ ಪ್ರಕೃತಿಗೆ ಪೃಥಿವ್ಯಾದಿ ಶರೀರತ್ವವಿದೆ ಎಂದು ಪೂರ್ವಪಕ್ಷದಲ್ಲಿ ಯುಕ್ತಿಯನ್ನು ಸೂಚಿಸಲು 'ಸ್ಮಾರ್ತ' ಎಂಬ ಪದವನ್ನು ಸೂತ್ರದಲ್ಲಿ ಪ್ರಯೋಗಿಸಲಾಗಿದೆ. ಹಾಗೆಯೇ ಶಾರೀರರಾದ್ದರಿಂದ ಆಯಾಯಾ ಅಭಿಮಾನಿ ಜೀವರಿಗೆ ಪೃಥಿವ್ಯಾದಿ ಶರೀರತ್ವವು ಯುಕ್ತವೆಂದು ಸೂಚಿಸಲು 'ಶಾರೀರ' ಎಂಬ ಪದವನ್ನು ಪ್ರಯೋಗಿಸಲಾಗಿದೆ ಎಂದು ಹೇಳುವರು. ತತ್ತ್ವಪ್ರದೀಪದಲ್ಲಾದರೋ ಸಾಂಖ್ಯರ ಪ್ರಕೃತಿಯು ಕಾಪಿಲಸ್ಮೃತಿಯಿಂದ ಮಾತ್ರ ಕಲ್ಪಿತವಾದದ್ದು, ಶ್ರುತಿಸಿದ್ಧವಾದದ್ದಲ್ಲ ಎಂದು ಸೂಚಿಸಲು 'ಸ್ಮಾರ್ತಂ' ಎಂದು ಪ್ರಯೋಗಿಸಿದೆ ಎಂದು ಹೇಳಿದೆ.

**ಅತದ್ಧರ್ಮಾಭಿಲಾಪಾತ್ ಎಂಬ ಸಮಾಸದ ಸಮರ್ಥನೆ**

[2]ಪ್ರಸಜ್ಯ ಪ್ರತಿಷೇಧಾರ್ಥಕವಾದ ನಞ್ ಪದವು ಕ್ರಿಯಾಸಾಪೇಕ್ಷವಾದ್ದರಿಂದ

1. ಅಸ್ಮಾತ್-ವಿಷ್ಣುವಿನಿಂದ, ನಿತ್ಯಮೇವ-ನಿಯತವಾಗಿ, ಪ್ರತಿಕಲ್ಪದಲ್ಲಿಯೂ, ಶೀರ್ಯತೇ–ನಾಶಹೊಂದುತ್ತದೆ. ಆದ್ದರಿಂದ, ಪೃಥಿವ್ಯಾದಿಗಳು ಬ್ರಹ್ಮನಿಗೂ ಶರೀರವೆಂದೆನಿಸಿಕೊಳ್ಳುತ್ತವೆ.

2. ನಞ್ ಪದಕ್ಕೆ ಪ್ರಸಜ್ಯ ಪ್ರತಿಷೇಧ ಮತ್ತು ಪರ್ಯುದಾಸ ಎಂಬ ಎರಡು ಅರ್ಥಗಳಿವೆ. ಪ್ರಸಜ್ಯಪ್ರತಿಷೇಧವು ಸಂಸರ್ಗನಿಷೇಧರೂಪವಾದದ್ದು. ಭೂತದಲ್ಲಿ ಘಟದ ಸಂಸರ್ಗವನ್ನು ನಿಷೇಧಿಸುವ 'ಭೂತಲೇ ಘಟೋ ನಾಸ್ತಿ' ಎಂಬ ವಾಕ್ಯ ಉದಾಹರಣೆ. ತಾದಾತ್ಮ್ಯದ ನಿಷೇಧ ಪರ್ಯುದಾಸ. ಘಟಕ್ಕೆ ಪಟತಾದಾತ್ಮ್ಯವನ್ನು ನಿಷೇಧಿಸುವ ಘಟಃ ಪಟೋ ನ ಎಂಬ ವಾಕ್ಯ ಇದಕ್ಕೆ ಉದಾಹರಣೆ.

प्रसज्यप्रतिषेधार्थकनञः क्रियासापेक्षत्वेनाऽसामर्थ्येऽपि "असूर्यंपश्याः" इत्यादाविवाकर्तरि चेति ज्ञापनात् समासः ॥

जीवपक्षे साधकं नेत्युक्त्वा बाधकं चाह—

## ॥ ॐ शारीरश्चोभयेपि हि भेदेनैनमधीयते ॐ ॥ १-२-२०

नेति वर्तते । आत्मनोऽन्तर इति माध्यन्दिनायनाः विज्ञानादन्तरो विविक्त इति काण्वाश्चैनं जीवं प्रकृतादन्तर्यामिणो

---

[1]ಅಸಮರ್ಥವಾಗಿದ್ದರೂ [2]'ಅಕರ್ತರಿ ಚ' ಎಂದು ಜ್ಞಾಪಿಸಿರುವುದರಿಂದ 'ಅಸೂರ್ಯಂಪಶ್ಯಾಃ' ಎಂಬಲ್ಲಿ ಸಮಾಸವಾಗಿರುವಂತೆ ಅತದ್ಧರ್ಮಾಭಿಲಾಪಾತ್ ಎಂಬ ಸಮಾಸವೂ ಆಗಬಹುದು.

ಜೀವಪಕ್ಷಕ್ಕೆ ಸಾಧಕವಿಲ್ಲವೆಂದು ಹೇಳಿದ ನಂತರ ಬಾಧಕವನ್ನೂ ಹೇಳಲು ಸೂತ್ರ—

## ಓಂ ಶಾರೀರಶ್ಚೋಭಯೇಽಪಿ ಹಿ ಭೇದೇನೈನಮಧೀಯತೇ ಓಂ (೧-೨-೨೦)

**ಸೂತ್ರಾರ್ಥ**

'ನ' ಎಂದು ಹಿಂದಿನ ಸೂತ್ರದಿಂದ ಅನುವೃತ್ತವಾಗುತ್ತದೆ. ಹಿ—ಯಾವ

---

1. ಸಮರ್ಥವೆಂದರೆ ಸಮಾಸದಲ್ಲಿಲ್ಲದ ಪದನಿರಪೇಕ್ಷವಾದದ್ದು. ಅಂತಹ ಪದಸಾಪೇಕ್ಷವಾದದ್ದು ಅಸಮರ್ಥ. ಅತದ್ಧರ್ಮಾಭಿಲಾಪ ಎಂಬಲ್ಲಿ ನಞ ಪದಕ್ಕೆ ಪ್ರಸಜ್ಯಪ್ರತಿಷೇಧವು ಅರ್ಥವಾದ್ದರಿಂದ ತದ್ಧರ್ಮಾಭಿಲಾಪಃ ನಾಸ್ತಿ ಎಂದು ವಿವರಣೆ ನೀಡಬೇಕಾಗುವುದು. ಇಲ್ಲಿ ನಞ್ ಪದವು ಸಮಾಸಘಟಕವಲ್ಲದ 'ಅಸ್ತಿ' ಎಂಬ ಕ್ರಿಯಾಸಾಪೇಕ್ಷವಾದ್ದರಿಂದ ಅಸಮರ್ಥವಾಗಿದೆ. ಅಸಮರ್ಥ ಪದಗಳಿಗೆ ಸಮಾಸವಿಲ್ಲವೆಂದು ವ್ಯಾಕರಣನಿಯಮ. ಹೀಗಿರುವಾಗ ಅತದ್ಧರ್ಮಾಭಿಲಾಪ ಎಂಬ ಸಮಾಸ ಹೇಗೆ ಸರಿ ? ಎಂದು ಆಕ್ಷೇಪ.

2. ಅಕರ್ತರಿ ಚ ಕಾರಕೇ ಸಂಜ್ಞಾಯಾಮ್ (ಪಾ. ಸೂ. ೩-೩-೧೯) ಎಂದು ಸೂತ್ರ. ಧಾತುವಿಗೆ ಕರ್ತೃಭಿನ್ನ ಕಾರಕಾರ್ಥಕವಾದ ಘಞ್ ಪ್ರತ್ಯಯವು ಬರುವುದೆಂದು ಸೂತ್ರಾರ್ಥ. ಇಲ್ಲಿ 'ಅಕರ್ತರಿ' ಎಂಬ ಸಮಾಸದಲ್ಲಿ ನಞ್‌ಗೆ ಪರ್ಯುದಾಸ ಅರ್ಥವಾದಲ್ಲಿ ಕರ್ತೃಭಿನ್ನ ಕರ್ತೃಸದೃಶ ಎಂದು ಅರ್ಥವಾಗುವುದರಿಂದ 'ಕಾರಕೇ' ಎಂಬ ಪದವು ವ್ಯರ್ಥವಾಗುವುದು. ಆದ್ದರಿಂದ 'ಕರ್ತಾ ನ ಭವತಿ' ಎಂದು ಪ್ರಸಜ್ಯಪ್ರತಿಷೇಧಾರ್ಥದಲ್ಲಿ ನಞ್ ಪ್ರಯುಕ್ತವಾಗಿದೆ. ಆದರೂ ಸಮಾಸವಾಗುವುದೆಂದು 'ಅಕರ್ತರಿ' ಎಂಬ ಪಾಣಿನಿಪ್ರಯೋಗವು ಸೂಚಿಸುತ್ತದೆಂದು ಭಾವ.

भेदेनाधीयते हि यस्मादतो न शारीरश्चान्तर्यामीत्यर्थः । आत्मविज्ञानशब्दयोर्जीवार्थत्वादिति भावः । चकारो "यस्तेजसि तिष्ठन्" इत्यादिभेदाध्ययनात् चित्प्रकृतिर्नान्तर्यामीति समुच्चयार्थ इति तत्त्वप्रदीपकोक्तिः । नञोऽनुकर्षणार्थ इति टीकोक्तिः । आद्यसूत्रेऽनुवृत्तावधारणव्यावर्त्यं सयुक्तिकं दर्शयितुमिमौ योगौ ॥ ५ ॥

---

ಕಾರಣದಿಂದ, [1]'ಆತ್ಮನೋಽಂತರಃ' ಎಂಬುದಾಗಿ ಮಾಧ್ಯಂದಿನಾಯನರೂ 'ವಿಜ್ಞಾನಾದಂತರಃ' ಎಂಬುದಾಗಿ ಕಾಣ್ವರೂ ಜೀವನನ್ನು ಪ್ರಕೃತನಾದ ಅಂತರ್ಯಾಮಿಯಿಂದ ಭಿನ್ನನೆಂದು ಅಧ್ಯಯನ ಮಾಡುತ್ತಾರೋ ಆ ಕಾರಣದಿಂದ ಜೀವನೂ ಅಂತರ್ಯಾಮಿಯಲ್ಲ ಎಂದು ಅರ್ಥ. ಆತ್ಮ ಮತ್ತು ವಿಜ್ಞಾನ ಶಬ್ದಗಳು ಜೀವಾರ್ಥಕವಾದ್ದರಿಂದ ಎಂದು ಭಾವ.

## ಈ ಸೂತ್ರದ 'ಚ'ಕಾರದ ವ್ಯಾಖ್ಯಾನಭೇದ

'ಯಸ್ತೇಜಸಿ ತಿಷ್ಠನ್' ಎಂಬುದಾಗಿ ಚಿತ್-ಪ್ರಕೃತಿಯನ್ನೂ ಅಂತರ್ಯಾಮಿಯಿಂದ ಭಿನ್ನವೆಂದು ಅಧ್ಯಯನಮಾಡಿರುವುದರಿಂದ ಚಿತ್‌ಪ್ರಕೃತಿಯೂ ಅಂತರ್ಯಾಮಿಯಲ್ಲ ಎಂದು ಚಕಾರವು ಸಮುಚ್ಚಯಾರ್ಥಕವಾದದ್ದು ಎಂದು ತತ್ತ್ವಪ್ರದೀಪದಲ್ಲಿ ಹೇಳಿದೆ ಹಿಂದಿನ ಸೂತ್ರದಿಂದ ನಞ್ ಪದವನ್ನು ಅನುಕರ್ಷಮಾಡಿಕೊಳ್ಳಬೇಕೆಂದು ಸೂಚಿಸಲು ಚಕಾರವೆಂದು ಟೀಕಾದಲ್ಲಿ ಹೇಳಿದೆ.

## ಈ ಅಧಿಕರಣದ ಕೊನೆಯ ಎರಡು ಸೂತ್ರಗಳ ಪ್ರಯೋಜನ

ಈ ಅಧಿಕರಣದ ಮೊದಲನೆಯ ಸೂತ್ರದಲ್ಲಿ [2]ಅನುವೃತ್ತಿಗೊಂಡಿರುವ ಏವಕಾರದಿಂದ ವ್ಯಾವರ್ತ್ಯವಾದ ವಿಷಯವನ್ನು ಸಯುಕ್ತಿಕವಾಗಿ ಪ್ರದರ್ಶಿಸಲು ಈ ಎರಡು ಸೂತ್ರಗಳನ್ನು ರಚಿಸಲಾಗಿದೆ.

---

1. 'ಯ ಆತ್ಮನಿ ತಿಷ್ಠನ್ ಆತ್ಮನೋಽಂತಃ ಯಮಾತ್ಮಾ ನ ವೇದ ಯಸ್ಯಾತ್ಮಾ ಶರೀರಂ ಯಮಾತ್ಮಾನಮಂತರೋ ಯಮಯತ್ಯೇಷ ತ ಆತ್ಮಾ ಅಂತರ್ಯಾಮ್ಯಮೃತಃ' ಎಂದು ಮಾಧ್ಯಂದಿನಾಯರ ಬೃಹದಾರಣ್ಯಕದ ಪಾಠ. 'ಯೋ ವಿಜ್ಞಾನೇ ತಿಷ್ಠನ್ ವಿಜ್ಞಾನಾದಂತರೋ ಯಂ ವಿಜ್ಞಾನಂ ನ ವೇದ ಯಸ್ಯ ವಿಜ್ಞಾನಂ ಶರೀರಂ' ಇತ್ಯಾದಿ ಕಾಣ್ವರ ಬೃಹದಾರಣ್ಯಕ ಪಾಠ.

2 'ತತ್ತು' ಎಂಬ ಪದಗಳು ಈ ಅಧಿಕರಣದ ಮೊದಲನೆಯ ಸೂತ್ರದಲ್ಲಿ ಅನುವೃತ್ತಿಗೊಂಡಿವೆ. ಇಲ್ಲಿ ತು ಶಬ್ದವು ಅವಧಾರಣಾರ್ಥಕವಾದದ್ದು. ಅಂತರ್ಯಾಮಿಯು ಬ್ರಹ್ಮನೇ, ಪ್ರಕೃತಿಯಾಗಲೀ ಜೀವರಾಗಲೀ ಅಲ್ಲ ಎಂದು ಅವಧಾರಣವು ಪ್ರಕೃತಿ-ಜೀವರನ್ನು ವ್ಯಾವೃತ್ತಿಗೊಳಿಸಿದೆ. ಪ್ರಕೃತಿ ಜೀವರು ಅಂತರ್ಯಾಮಿಗಳು ಏಕಲ್ಲವೆಂಬುದನ್ನು ಈ ಸೂತ್ರಗಳು ಸಯುಕ್ತಿಕವಾಗಿ ಹೇಳುತ್ತವೆಂದು ಭಾವ.

अदृश्यत्वाधिकरणम्—६

## ॥ ॐ अदृश्यत्वादिगुणको धर्मोक्तेः ॐ ॥ १ २-२१

अत्र नये अभावात्मकलिङ्गं समन्वीयते । अदृश्यत्वादयो गुणा यस्य "अक्षरात्परतः पर" इत्युक्तपरस्य स तथा । "शेषाद्विभाषा" इति कः । "यत्तदद्रेश्यमग्राह्यम्" इत्युक्तादृश्यत्वादिगुणकमक्षरं ब्रह्मैव । न तु चिदचित्प्रकृतिविरिञ्चिरुद्राः । "अथ परा यया तदक्षरमधिगम्यते" इति ऋगादिपरविद्याविषयत्वरूपधर्मोक्तेरित्यर्थः ।

---

[1]ಅದೃಶ್ಯತ್ವಾಧಿಕರಣ—೬

## ಓಂ ಅದೃಶ್ಯತ್ವಾದಿಗುಣಕೋ ಧರ್ಮೋಕ್ತೇಃ ಓಂ (೧-೨-೨೧)

### ಅಧಿಕರಣದ ಉದ್ದೇಶ ಮತ್ತು 'ಅದೃಶ್ಯತ್ವಾದಿಗುಣಕ' ಪದದ ವಿವರಣೆ

ಈ ನಯದಲ್ಲಿ ಅಭಾವಾತ್ಮಕವಾದ ಲಿಂಗವು ಸಮನ್ವಯಗೊಳಿಸಲ್ಪಡುತ್ತದೆ. 'ಅಕ್ಷರಾತ್ ಪರತಃ ಪರಃ' ಎಂದು ಹೇಳಲ್ಪಟ್ಟ ಯಾವ ಪರನಿಗೆ ಅದೃಶ್ಯತ್ವಾದಿಗಳು ಗುಣಗಳಾಗಿವೆಯೋ ಅವನು ಅದೃಶ್ಯತ್ವಾದಿಗುಣಕನು. ಇಲ್ಲಿ 'ಶೇಷಾದ್ವಿಭಾಷಾ' (ಪಾ. ಸೂ. ೫-೪-೧೫೪) ಎಂಬ ಸೂತ್ರದಿಂದ 'ಕ' ಪ್ರತ್ಯಯ ಬಂದಿದೆ.

### ಸೂತ್ರಾರ್ಥ

'ಯತ್ತದದ್ರೇಶ್ಯಮಗ್ರಾಹ್ಯಮ್' ಇತ್ಯಾದಿ ಹೇಳಲ್ಪಟ್ಟಿರುವ ಅದೃಶ್ಯತ್ವಾದಿ ಗುಣವುಳ್ಳ ಅಕ್ಷರನು ಬ್ರಹ್ಮನೇ. ಚಿತ್-ಪ್ರಕೃತಿ, ಅಚಿತ್-ಪ್ರಕೃತಿ, ಚತುರ್ಮುಖ

---

1. ಈ ಅಧಿಕರಣದಲ್ಲಿ 'ಯತ್ತದದ್ರೇಶ್ಯಮಗ್ರಾಹ್ಯಮಗೋತ್ರ ' ಇತ್ಯಾದಿ ಶ್ರುತಿಯು (ಮುಂ. ೧-೧-೬) ವಿಷಯವಾಕ್ಯ. ಇಲ್ಲಿ ಶ್ರುತವಾಗಿರುವ ಅದೃಶ್ಯತ್ವಾದಿಗಳು ಪ್ರಕೃತಿ ಅಥವಾ ಚತುರ್ಮುಖಾದಿಗಳಿಗೆ ಸಂಬಂಧಪಟ್ಟುದುದೆಂದು ಪೂರ್ವಪಕ್ಷ. ಈ ವಾಕ್ಯದ ಮುಂದಿನ ವಾಕ್ಯವಾದ 'ಯಥೋರ್ಣನಾಭಿಃ' ಇತ್ಯಾದಿ ವಾಕ್ಯದಲ್ಲಿ ಊರ್ಣನಾಭಿ, ಪೃಥಿವೀ ಮೊದಲಾದ ದೃಷ್ಟಾಂತವನ್ನು ಕೊಟ್ಟು ಅದರಂತೆ ಅಕ್ಷರಾತ್ ಸಂಭವತೀಹ ವಿಶ್ವಂ' ಎಂದು ಅಕ್ಷರಕ್ಕೂ ಜಗತ್ಕಾರಣತ್ವವನ್ನು ಹೇಳಿದೆ. ಆದರೆ, ಅದೃಶ್ಯತ್ವಾದಿಗುಣಕವೂ, ಜಗತ್ಕಾರಣವೂ ಆದ ಈ ಅಕ್ಷರಕ್ಕಿಂತ ಶ್ರೇಷ್ಠವಾದ ವಸ್ತು ಮತ್ತೊಂದಿದೆಯೆಂದು 'ಅಕ್ಷರಾತ್ ಪರತಃ ಪರಃ' ಎಂಬ ವಾಕ್ಯದಿಂದ ಗೊತ್ತಾಗುವುದರಿಂದ ಈ ಅಕ್ಷರವು ವಿಷ್ಣುವಲ್ಲ, ಆದ್ದರಿಂದಲೇ ಅದೃಶ್ಯತ್ವಾದಿಗಳೂ ವಿಷ್ಣುವಿಗಲ್ಲ ಎಂದು ಪೂರ್ವಪಕ್ಷದ ಅಭಿಪ್ರಾಯ. ಸಿದ್ಧಾಂತ ತಂತ್ರದೀಪಿಕೆಯಲ್ಲಿ ಸ್ಪಷ್ಟ.

"परतः परः" इति श्रुत्यनुसारात्पुंनिर्देशः । तेनादृश्यत्वादिगुणकमक्षरं परतः पर इत्युक्तपरवस्तु चैकमित्युक्त्या परत्वावध्यक्षरमन्यदिति प्राप्तेन सिद्धान्तेऽक्षरात् परत्वं बाधकमिति ज्ञापितम् । अदृश्यत्वादिरिति वाच्ये गुणेत्युक्तिः दृश्यादन्यददृश्यमिति विग्रहेण दृश्याद्यन्योन्याभावश्च गुण इति विधिरूपत्वादीशाख्यधर्मिस्वरूपत्वं न विरुद्धमिति द्योतयितुम् । तथापि विशेषाद्धर्मधर्मित्वमिति सूचयितुं बहुव्रीह्यर्थः कः ।

---

ಬ್ರಹ್ಮ ಮತ್ತು ರುದ್ರ ಇವರುಗಳಲ್ಲ. 'ಅಥ ಪರಾ ಯಯಾ ತದಕ್ಷರಮಧಿಗಮ್ಯತೇ' ಎಂಬುದಾಗಿ ಋಗಾದಿಪರವಿದ್ಯಾವಿಷಯತ್ವರೂಪಧರ್ಮವನ್ನು ಹೇಳಿರುವುದರಿಂದ ಎಂದು ಅರ್ಥ.

**'ಅದೃಶ್ಯತ್ವಾದಿಗುಣಕಃ' ಎಂಬಲ್ಲಿ ಪುಲ್ಲಿಂಗದ ಮತ್ತು ಗುಣಪದದ ಔಚಿತ್ಯ**

'ಪರತಃ ಪರಃ' ಎಂಬ ಶ್ರುತಿಗೆ ಅನುಸಾರವಾಗಿ 'ಅದೃಶ್ಯತ್ವಾದಿಗುಣಕಃ' ಎಂದು ಪುಲ್ಲಿಂಗನಿರ್ದೇಶವಿದೆ. ಇದರಿಂದ ಅದೃಶ್ಯತ್ವಾದಿಗುಣಕವಾದ ಅಕ್ಷರವೂ 'ಪರತಃ ಪರಃ' ಎಂದು ಹೇಳಲ್ಪಟ್ಟ ಪರವಸ್ತುವೂ ಒಂದೇ ಎಂದು ಹೇಳಿದಂತಾಗಿ ಪರತ್ವಕ್ಕೆ ಅವಧಿಯಾದ ಅಕ್ಷರವೇ ಬೇರೆ ಎಂದು ಪ್ರಾಪ್ತವಾಗುವುದು ಆದ್ದರಿಂದ [1]ಅಕ್ಷರದಿಂದ ಪರತ್ವವು ಸಿದ್ಧಾಂತದಲ್ಲಿ ಬಾಧಕವಲ್ಲವೆಂದು ಸೂಚಿತವಾಗುವುದು.

'ಅದೃಶ್ಯತ್ವಾದಿ' ಎಂದು ಮಾತ್ರ ಹೇಳಬಹುದಾಗಿದ್ದರೂ ಗುಣವೆಂದು ಹೇಳಿರುವುದು 'ದೃಶ್ಯಾತ್ ಅನ್ಯತ್ ಅದೃಶ್ಯಂ' ಎಂಬ ವಿಗ್ರಹದಿಂದ ಲಬ್ಧವಾಗುವ ದೃಶ್ಯಾದಿಗಳ ಅನ್ಯೋನ್ಯಾಭಾವವೂ ಗುಣವಾದ್ದರಿಂದ ವಿಧಿರೂಪವಾಗಿದೆ. ಆದ್ದರಿಂದ ಈಶರೂಪ ಧರ್ಮಿಸ್ವರೂಪತ್ವವು ವಿರುದ್ಧವಲ್ಲವೆಂದು ಸೂಚಿಸಲು. ಹೀಗೆ ಈಶಾಭಿನ್ನವಾಗಿದ್ದರೂ ವಿಶೇಷಬಲದಿಂದ ಧರ್ಮಧರ್ಮಿಭಾವವಿದೆ ಎಂದು ಸೂಚಿಸಲು ಬಹುವ್ರೀಹಿಯ ಅರ್ಥವನ್ನು ಕೊಡುವ 'ಕ' ಪ್ರತ್ಯಯವನ್ನು ಸೇರಿಸಲಾಗಿದೆ.

---

1. ಅದೃಶ್ಯತ್ವಾದಿಗುಣಕನೂ, ಜಗತ್ಕಾರಣನೂ, ಋಗಾದಿ ಪರವಿದ್ಯಾವಿಷಯನೂ ಆದ ಅಕ್ಷರನು ಅಕ್ಷರಾತ್ ಪರತಃ ಪರನು. 'ಅಕ್ಷರಾತ್' ಎಂದು ಪಂಚಮ್ಯಂತ ಅಕ್ಷರಪ್ರತಿಪಾದ್ಯವಾದದ್ದು ಜಡಪ್ರಕೃತಿ ಅಥವಾ ಚಿತ್-ಪ್ರಕೃತಿ. ಆದ್ದರಿಂದ 'ಅಕ್ಷರಕ್ಕಿಂತ ಶ್ರೇಷ್ಠವಾದ ವಸ್ತುವೊಂದಿದೆ' ಎಂದು ಹೇಳಿದ ಮಾತ್ರದಿಂದ ಅದೃಶ್ಯತ್ವಾದಿಗುಣಕ ಅಕ್ಷರನು ವಿಷ್ಣುವು ಎಂಬ ಸಿದ್ಧಾಂತಕ್ಕೆ ಬಾಧಕವಿಲ್ಲವೆಂದು ಭಾವ.

अवधारणव्यावर्त्यौ विशेषयुक्त्या निरस्यति—

## ॥ ॐ विशेषणभेदव्यपदेशाभ्यां च नेतरौ ॐ ॥
## १-२-२२

विरिञ्चरुद्रयोः चेतनत्वेनैकीकारेण जडप्रकृतिविरिञ्चिरुद्राणामितराविति द्विवचनेनात्र ग्रहणम् । इतरौ नादृश्यत्वादिगुणकौ । कुतः? "यः सर्वज्ञः" इति सार्वज्ञविशेषणात् । परतः परत्वविशेषणाच्च जडप्रकृतिर्न । "तस्मादेतद्ब्रह्म" इति "अन्यमीशम्" इति च

---

ವಿಶೇಷಯುಕ್ತಿಯಿಂದ [1]ಅವಧಾರಣದಿಂದ ವ್ಯಾವರ್ತ್ಯರನ್ನು ನಿರಾಕರಿಸಲು ಸೂತ್ರ—

## ಓಂ ವಿಶೇಷಣಭೇದವ್ಯಪದೇಶಾಭ್ಯಾಂ ಚ ನೇತರೌ ಓಂ
## (೧-೨-೨೨)

**'ಇತರೌ' ಎಂಬಲ್ಲಿ ದ್ವಿವಚನದಿಂದ ಅನೇಕರನ್ನು ಗ್ರಹಿಸಲಾಗಿದೆ**

ಚತುರ್ಮುಖ ಬ್ರಹ್ಮ ಮತ್ತು ರುದ್ರರನ್ನು ಚೇತನತ್ವೇನ ವರ್ಗೀಕರಿಸಿರುವುದರಿಂದ ಜಡಪ್ರಕೃತಿ, ವಿರಿಂಚ ಮತ್ತು ರುದ್ರರನ್ನು ಇತರೌ ಎಂಬ ದ್ವಿವಚನದಿಂದ ಇಲ್ಲಿ ಗ್ರಹಿಸಲಾಗಿದೆ.

**ಸೂತ್ರಾರ್ಥ**

ಇತರರು ಅದೃಶ್ಯತ್ವಾದಿಗುಣಕರಲ್ಲ. ಏಕೆಂದರೆ, 'ಯಃ ಸರ್ವಜ್ಞಃ' ಎಂಬುದಾಗಿ ಸರ್ವಜ್ಞತ್ವವಿಶೇಷಣದಿಂದ ಮತ್ತು ಪರತಃ ಪರತ್ವ ವಿಶೇಷಣದಿಂದ ಜಡಪ್ರಕೃತಿಯಲ್ಲ. [2]'ತಸ್ಮಾದೇತದ್ ಬ್ರಹ್ಮ' ಎಂಬುದಾಗಿ ಮತ್ತು [3]'ಅನ್ಯಮೀಶಂ' ಎಂಬುದಾಗಿ ವಿರಿಂಚ-

---

1. ಅನುವೃತ್ತಿ ಮಾಡಿಕೊಂಡಿರುವ ಅವಧಾರಣಾರ್ಥಕ 'ತು' ಶಬ್ದದಿಂದ ವ್ಯಾವರ್ತ್ಯರಾದ ಪ್ರಕೃತಿ, ವಿರಿಂಚ, ರುದ್ರರನ್ನು ಅದೃಶ್ಯತ್ವಾದಿ ಗುಣಕರಲ್ಲವೆಂದು ನಿರಾಕರಿಸಲು.

2. 'ತಸ್ಮಾದೇತದ್ ಬ್ರಹ್ಮ ನಾಮರೂಪಮನ್ನಂ ಚ ಜಾಯತೇ' (ಮುಂ. ೧-೧-೧೦) ಈ ವಾಕ್ಯದಲ್ಲಿ ಬ್ರಹ್ಮ ಎಂದರೆ ಚತುರ್ಮುಖನು ಅಕ್ಷರನಿಂದ ಹುಟ್ಟುವನೆಂದು ಹೇಳಿರುವುದರಿಂದ ಅದೃಶ್ಯತ್ವಾದಿಗುಣಕನಾದ ಅಕ್ಷರನಿಗೂ ವಿರಿಂಚನಿಗೂ ಭೇದವ್ಯಪದೇಶವಿದೆ.

3. 'ಜುಷ್ಟಂ ಯದಾ ಪಶ್ಯತಿ ಅನ್ಯಮೀಶಂ' (ಮುಂ. ३-೧-೨). ಇಲ್ಲಿ ಅದೃಶ್ಯತ್ವಾದಿ ಗುಣಕನಾದ ಅಕ್ಷರನನ್ನು ಪ್ರಸಿದ್ಧ ಈಶನಿಗಿಂತ ಭಿನ್ನನಾದ ಈಶ—ಅನ್ಯಮೀಶಂ—ಎಂಬುದಾಗಿ ವರ್ಣಿಸಲಾಗಿದೆ.

विरिञ्चरुद्रयोरदृश्यत्वादिगुणकाक्षरात् भेदव्यपदेशाच्च न विरिञ्चरुद्राविति यथाक्रमं हेतू । चशब्दस्य न केवलं धर्मोक्तेः किन्त्वाभ्यां हेतुभ्यां चेत्यर्थः । तेनान्यत्रापि सिद्धान्तहेतोः परपक्षनिरासेऽपि व्यापार इति सूचितम् । चिदचितोः प्रकृतित्वेनैक्यं जीवत्वेन च ब्रह्मरुद्रयोरिति इतराविति चत्वारोऽपि गृह्यन्त इत्यप्याहुः ॥

इतश्चैवमित्याह—

॥ ॐ रूपोपन्यासाच्च ॐ ॥ १-२-२३

---

ರುದ್ರರನ್ನು ಅದೃಶ್ಯತ್ವಾದಿಗುಣಕನಾದ ಅಕ್ಷರನಿಂದ ಭಿನ್ನರೆಂದು ಹೇಳಿರುವುದರಿಂದ ವಿರಿಂಚರುದ್ರರೂ ಅದೃಶ್ಯತ್ವಾದಿಗುಣಕರಲ್ಲ. ಹೀಗೆ ಇಲ್ಲಿ ವಿಶೇಷಣ, ಭೇದವ್ಯಪದೇಶಗಳು[1] ಕ್ರಮವನ್ನನುಸರಿಸಿ ಹೇತುಗಳಾಗಿವೆ.

**ಸೂತ್ರದ 'ಚ' ಶಬ್ದದ ಸ್ವಾರಸ್ಯ**

'ಧರ್ಮೋಕ್ತಿಯಿಂದ ಮಾತ್ರವಲ್ಲದೇ ಈ ಹೇತುಗಳಿಂದಲೂ ಕೂಡ' ಎಂದು 'ಚ' ಶಬ್ದದ ಅರ್ಥ. ಇದರಿಂದ ಇತರ ಸ್ಥಳಗಳಲ್ಲಿಯೂ ಸಿದ್ಧಾಂತಸಮರ್ಥಕವಾದ ಹೇತುವು ಪರಪಕ್ಷನಿರಾಕರಣೆಗೂ ಸಾಧನವಾಗಬಲ್ಲುದು ಎಂದು ಸೂಚಿತವಾಗುವುದು.

**ಚಿತ್-ಪ್ರಕೃತಿಯೂ ಇಲ್ಲಿ ನಿರಾಕರಿಸಲ್ಪಟ್ಟಿದೆ ಎಂಬ ಪಕ್ಷವೂ ಇದೆ**

[2]ಚಿತ್-ಪ್ರಕೃತಿ ಮತ್ತು ಜಡಪ್ರಕೃತಿಗಳನ್ನು ಪ್ರಕೃತಿತ್ವೇನ ಏಕೀಕರಿಸಿ, ಹಾಗೆಯೇ ವಿರಿಂಚ ರುದ್ರರನ್ನು ಜೀವತ್ವೇನ ಏಕೀಕರಿಸಿ 'ಇತರೌ' ಎಂಬ ಪದದಿಂದ ನಾಲ್ಕೂ ಗ್ರಹಿಸಲ್ಪಟ್ಟಿವೆ ಎಂದೂ ಹೇಳುವರು.

ಈ ಮುಂದಿನ ಕಾರಣದಿಂದಲೂ ಅದೃಶ್ಯತ್ವಾದಿಗುಣಕನು ಬ್ರಹ್ಮನೇ ಎಂದು ಹೇಳಲು ಸೂತ್ರ—

ಓಂ ರೂಪೋಪನ್ಯಾಸಾಚ್ಚ ಓಂ (೧-೨-೨೩)

---

1. ಜಡಪ್ರಕೃತಿ ಅದೃಶ್ಯತ್ವಾದಿಗುಣಕವಲ್ಲವೆಂದು ಸಾಧಿಸಲು ವಿಶೇಷಣವು ಹೇತು. ವಿರಿಂಚ ರುದ್ರರು ಅದೃಶ್ಯತ್ವಾದಿಗುಣಕರಲ್ಲವೆಂದು ಸಾಧಿಸಲು ಭೇದವ್ಯಪದೇಶವು ಹೇತು.

2. ಇತರೌ ಎಂದರೆ ಪ್ರಕೃತಿ, ಜೀವರಿಬ್ಬರು. ಪ್ರಕೃತಿ ಎಂದರೆ ಚಿದಚಿತ್ ಪ್ರಕೃತಿಗಳು. ಜೀವರು ವಿರಿಂಚರುದ್ರರು. ಹೀಗೆ ಒಟ್ಟು ನಾಲ್ವರೂ 'ಇತರೌ' ಪದ ಗ್ರಾಹ್ಯರು.

"यदा पश्यः पश्यते रुग्मवर्णम्" इति रुग्मवर्णोपन्यासाच्च अदृश्यत्वादिगुणको ब्रह्मैवेत्यर्थः । अन्येषां मिश्ररूपत्वेन विष्णोरेव शुद्धरूपतया तस्यैवात्र ग्रहणादिति भावः ॥ ६ ॥

वैश्वानराधिकरणम्—७

## ॥ ॐ वैश्वानरः साधारणशब्दविशेषात् ॐ ॥
## १-२-२४

अत्र नये पाचकत्वाद्यनेकलिङ्गयुतं वैश्वानरनाम समन्वीयते । तत्त्वित्यस्ति । "आत्मानं वैश्वानरमुपास्ते", "अयमग्निर्वैश्वानरः"

---

**ಸೂತ್ರಾರ್ಥ**

'ಯದಾ ಪಶ್ಯಃ ಪಶ್ಯತೇ ರುಗ್ಮವರ್ಣಂ' ಎಂದು [1]ರುಗ್ಮವರ್ಣವನ್ನು ಹೇಳಿರುವುದರಿಂದಲೂ ಅದೃಶ್ಯತ್ವಾದಿಗುಣಕನು ಬ್ರಹ್ಮನೇ ಎಂದು ಅರ್ಥ. ಇತರರಿಗೆ ಮಿಶ್ರರೂಪವಿರುವುದರಿಂದ ವಿಷ್ಣುವಿಗೆ ಮಾತ್ರ ಶುದ್ಧರೂಪವಿರುವುದರಿಂದ ವಿಷ್ಣುವನ್ನೇ ಇಲ್ಲಿ ಗ್ರಹಿಸಲಾಗಿದೆ ಎಂದು ಭಾವ.

### ವೈಶ್ವಾನರಾಧಿಕರಣ—೭

## ಓಂ ವೈಶ್ವಾನರಃ ಸಾಧಾರಣಶಬ್ದವಿಶೇಷಾತ್ ಓಂ
## (೧-೨-೨೪)

**ಅಧಿಕರಣದ ಉದ್ದೇಶ**

ಈ ಅಧಿಕರಣದಲ್ಲಿ ಪಾಚಕತ್ವ ಮೊದಲಾದ ಅನೇಕ ಲಿಂಗಗಳಿಂದ ಸಹಿತವಾದ ವೈಶ್ವಾನರ ಎಂಬ ನಾಮದ ಸಮನ್ವಯವು ಮಾಡಲ್ಪಡುತ್ತದೆ.

**ಸೂತ್ರಾರ್ಥ**

'ತತ್ತು' ಎಂಬ ಪದಗಳು ಅನುವೃತ್ತಿಗೊಂಡಿವೆ. [2]'ಆತ್ಮಾನಂ ವೈಶ್ವಾನರಮುಪಾಸ್ತೇ', 'ಅಯಮಗ್ನಿರ್ವೈಶ್ವಾನರಃ' ಇತ್ಯಾದಿ ವಾಕ್ಯಗಳಲ್ಲಿ ಶ್ರುತನಾಗಿರುವ

---

1. ರುಗ್ಮವರ್ಣ—ಶುದ್ಧ ಹೇಮವರ್ಣ. ಭಗವಂತನಿಗೆ ಮಾತ್ರ ಶುಕ್ಲ, ರಕ್ತ, ರೌಕ್ಮ, ಕೃಷ್ಣ ಎಂಬುದಾಗಿ ಶುದ್ಧವಾದ ನಾಲ್ಕು ವರ್ಣಗಳು. ಉಳಿದೆಲ್ಲ ದೇವತೆಗಳಿಗೆ ಮಿಶ್ರಿತವಾದ ರೂಪಗಳು.

2. 'ಯಸ್ತ್ವೇತಮೇವಂ ಪ್ರಾದೇಶಮಾತ್ರಮಭಿವಿಮಾನಂ ಆತ್ಮಾನಂ ವೈಶ್ವಾನರಮುಪಾಸ್ತೇ' (ಛಾಂ. ೫—೧೮—೧) ಎಂಬ ಶ್ರುತಿಯು ಇಲ್ಲಿ ವಿಷಯವಾಕ್ಯ. ಈ ವೈಶ್ವಾನರನು ಅಗ್ನಿಯೆಂದು ಪೂರ್ವಪಕ್ಷ. ವಿಷ್ಣುವೆಂದು ಸಿದ್ಧಾಂತ.

इत्यादौ श्रुतो वैश्वानरो ब्रह्मैव न त्वग्निः । कुतः ? साधारण-शब्दस्य अग्नाविष्णुसाधारणस्यापि वैश्वानरशब्दस्य विशेषादात्मपदेन विशेषणादित्यर्थः ।

आत्मशब्दः अग्नावमुख्योऽपि युज्यत इत्यतः समाख्यामाह—

॥ ॐ स्मर्यमाणमनुमानं स्यादिति ॐ ॥ १-२-२५

वैश्वानरो ब्रह्मेत्यस्ति । तेन इतिशब्दान्वयः । अनुमीयतेऽनेने-त्यनुमानम् । "अहं वैश्वानर" इति गीतायां स्मर्यमाणं विष्णो-र्वैश्वानरत्वमत्रापि स एव वैश्वानर इत्यस्यानुमापकं स्यादित्यर्थः । "अहं वैश्वानरः" इति श्रुतिसमाख्यानादिति भावः ।

---

ವೈಶ್ವಾನರನು ಬ್ರಹ್ಮನೇ, ಅಗ್ನಿಯಲ್ಲ. ಏಕೆಂದರೆ, ಸಾಧಾರಣಶಬ್ದಸ್ಯ- ಅಗ್ನಿ ಮತ್ತು ವಿಷ್ಣು ಇಬ್ಬರಲ್ಲೂ ವೈಶ್ವಾನರ ಶಬ್ದವು ಸಮಾನವಾಗಿದ್ದರೂ ಆ ವೈಶ್ವಾನರ ಶಬ್ದಕ್ಕೆ, ವಿಶೇಷಾತ್–ಆತ್ಮಪದದ ವಿಶೇಷಣವಿರುವುದರಿಂದ ಎಂದು ಅರ್ಥ.

ಆತ್ಮಶಬ್ದವು ಅಗ್ನಿಯಲ್ಲಿ ಅಮುಖ್ಯವಾಗಿಯಾದರೂ ಹೊಂದುವುದು ಎಂಬ ಆಕ್ಷೇಪಕ್ಕೆ ಸಮಾಧಾನವಾಗಿ ಸಮಾಖ್ಯೆಯನ್ನು ಹೇಳಲು ಸೂತ್ರ—

ಓಂ ಸ್ಮರ್ಯಮಾಣಮನುಮಾನಂ ಸ್ಯಾದಿತಿ ಓಂ
(೧–೨–೨೫)

**ಸೂತ್ರಾರ್ಥ**

'ವೈಶ್ವಾನರಃ ಬ್ರಹ್ಮ' ಎಂಬ ಪದಗಳು ಅನುವೃತ್ತವಾಗುತ್ತವೆ. ಈ ಪದಗಳೊಂದಿಗೆ 'ಇತಿ' ಶಬ್ದವು ಅನ್ವಯುವನ್ನು ಪಡೆಯುತ್ತದೆ. ಯಾವುದರಿಂದ ಅನುಮಾನ ಮಾಡಲ್ಪಡುತ್ತದೆಯೋ ಅದು ಅನುಮಾನ. 'ಅಹಂ ವೈಶ್ವಾನರಃ' ಎಂದು ಗೀತೆಯಲ್ಲಿ ಸ್ಮರಿಸಲ್ಪಡುವ ವಿಷ್ಣುವಿನ ವೈಶ್ವಾನರತ್ವವು ವೈಶ್ವಾನರವಿದ್ಯೆಯಲ್ಲೂ ವಿಷ್ಣುವೇ ವೈಶ್ವಾನರ ಎಂಬುದಕ್ಕೆ ಅನುಮಾಪಕವಾಗುತ್ತದೆಂದು ಅರ್ಥ. 'ಅಹಂ ವೈಶ್ವಾನರಃ' ಎಂದು ಸ್ಮೃತಿಯು ಸಮಾಖ್ಯೆ ಇರುವುದರಿಂದ ವೈಶ್ವಾನರವಿದ್ಯೆಯಲ್ಲಿ ವಿಷ್ಣುವೇ ವೈಶ್ವಾನರನೆಂದು ಭಾವ.

उक्तमाक्षिप्याह—

**॥ ॐ शब्दादिभ्योऽन्तः प्रतिष्ठानान्नेति चेन्न तथा दृष्ट्युपदेशादसम्भवात् पुरुषविधमपि चैनमधीयते ॐ ॥ १-२-२६**

आदिपदाल्लिङ्गानि । अन्तः प्रतिष्ठानेन तत्कर्मोपलक्ष्यते । "अयमग्निः" इत्याद्यग्निशब्दात् "वैश्वानरे तद् हुतम्" इति "हृदयं गार्हपत्यम्" इत्यादिना होमाद्याधारत्वगार्हपत्याद्यङ्गत्वलिङ्गेभ्यो "योऽयमन्तः पुरुषे", "येनेदमन्नं पच्यते" इत्यन्तः प्रतिष्ठानेन पचनव्यापारात् पाचकत्वेनान्तःप्रतिष्ठानादिति वा वैश्वानरो न ब्रह्मेति चेत् ।

---

ಹೇಳಿದ್ದನ್ನು ಆಕ್ಷೇಪಿಸಿ ಸಮಾಧಾನವನ್ನು ನೀಡುವ ಸೂತ್ರ—

**ಓಂ ಶಬ್ದಾದಿಭ್ಯಃ ಅಂತಃ ಪ್ರತಿಷ್ಠಾನಾನ್ನೇತಿ ಚೇನ್ನ ತಥಾ ದೃಷ್ಟ್ಯುಪದೇಶಾತ್ ಅಸಂಭವಾತ್ ಪುರುಷವಿಧಮಪಿ ಚೈನಮಧೀಯತೇ ಓಂ (೧--೨--೨೬)**

**ಆಕ್ಷೇಪಾಂಶವನ್ನು ಹೇಳುವ ಸೂತ್ರಭಾಗದ ವಿವರಣೆ**

[1] ಆದಿಪದದಿಂದ ಲಿಂಗಗಳನ್ನು ಗ್ರಹಿಸಬೇಕು. [2] ಅಂತಃ ಪ್ರತಿಷ್ಠಾನದಿಂದ ಅಗ್ನಿಯ ಕಾರ್ಯವನ್ನು ಉಪಲಕ್ಷಣಯಾ ತೆಗೆದುಕೊಳ್ಳಬೇಕು. 'ಅಯಮಗ್ನಿಃ' ಇತ್ಯಾದಿ ವಾಕ್ಯಗಳಲ್ಲಿ ಅಗ್ನಿಶಬ್ದದಿಂದ, 'ವೈಶ್ವಾನರೇ ತದ್ ಹುತಂ' ಎಂಬುದಾಗಿ ಮತ್ತು [3] 'ಹೃದಯಂ ಗಾರ್ಹಪತ್ಯೇ' ಇತ್ಯಾದಿಯಾಗಿ ಹೋಮಾದ್ಯಾಧಾರತ್ವ, ಗಾರ್ಹಪತ್ಯಾದ್ಯಂಗಕತ್ವಲಿಂಗಗಳಿಂದ, 'ಯೋಽಯಮಂತಃ ಪುರುಷೇ ಯೇನೇದಮನ್ನಂ ಪಚ್ಯತೇ' ಎಂಬುದಾಗಿ ಅಂತಃಪ್ರತಿಷ್ಠಿತನಾಗಿ ಮಾಡುವ ಪಚನಕ್ರಿಯೆಯಿಂದ ಅಥವಾ ಪಾಚಕನಾಗಿ ಅಂತಃಪ್ರತಿಷ್ಠಿತನಾಗಿರುವುದರಿಂದ ವೈಶ್ವಾನರನು ಬ್ರಹ್ಮನಲ್ಲವೆಂದರೆ,

---

1. 'ಶಬ್ದಾದಿಭ್ಯಃ' ಎಂಬಲ್ಲಿರುವ ಆದಿಪದದಿಂದ.

2. 'ಅಯಮಗ್ನಿರ್ವೈಶ್ವಾನರಃ ಯೋಽಯಮಂತಃ ಪುರುಷೇ (ಬೃ. ೭–೯) ಎಂಬಲ್ಲಿ ಹೇಳಿರುವ ಅಗ್ನಿಯ ಅಂತಃಪ್ರತಿಷ್ಠಾನ ಮಾತ್ರವಲ್ಲದೆ, ಅಂತಃಪ್ರತಿಷ್ಠಿತನಾಗಿ ಅಗ್ನಿಯು ಮಾಡುವ 'ಯೇನೇದಂ ಪಚ್ಯತೇ' ಇತ್ಯಾದಿ ಶ್ರುತ್ಯುಕ್ತವಾದ ಪಚನವ್ಯಾಪಾರವನ್ನೂ ಗ್ರಹಿಸಬೇಕು.

3. ಗಾರ್ಹಪತ್ಯವು ವೈಶ್ವಾನರಾಗ್ನಿಯ ಹೃದಯಸ್ಥಾನೀಯವೆಂದು ಭಾವ.

*

न । कुतः ? तथा अग्न्यादिनामलिङ्गकर्मवत्त्वेन दृष्ट्युपदेशात् उपासनोपदेशात् तेषां सावकाशत्वादिति भावः । दृष्टिपदात् नाविद्यमानध्यानमिति सूचितम् । किञ्च "को न आत्मा किं ब्रह्म" इत्युपक्रमोक्तात्मत्वाद्यसम्भवात् । ब्रह्मप्रकरणाच्चेति यावत् । अपि किञ्चेत्यर्थः । एनं वैश्वानरं पुरुषविधं पुरुषो यद्विधस्तद्विधमधीयते छन्दोगा यतोऽतोऽपीति योज्यम् । "शीर्ष्णो द्यौः समवर्तत" इत्यादिना पुरुषसूक्तोक्तपुरुषविधमेवैनं "मूर्धैव सुतेजा" इत्यादिना अधीयत इति तत्समाख्यानादपीत्यर्थः । चशब्दः पुरुषसूक्तस्य वैष्णवत्वप्रसिद्धिद्योतकः ।

**ಸಮಾಧಾನವನ್ನು ನೀಡುವ ಸೂತ್ರಭಾಗದ ವಿವರಣೆ**

ಅದು ಸರಿಯಲ್ಲ. ಏಕೆಂದರೆ, ತಥಾ–ಅಗ್ನ್ಯಾದಿನಾಮ, ಲಿಂಗ ಮತ್ತು ಕ್ರಿಯೆಗಳನ್ನು ಹೊಂದಿರುವಂತೆ, ದೃಷ್ಟ್ಯುಪದೇಶಾತ್–ಉಪಾಸನೆಯನ್ನು ಉಪದೇಶಿಸಿರುವುದರಿಂದ; [1]ಅಗ್ನ್ಯಾದಿನಾಮ, ಲಿಂಗಗಳು ಮತ್ತು ಕ್ರಿಯೆಗಳು ಸಾವಕಾಶವಾಗಿರುವುದರಿಂದ ಎಂದು ಭಾವ. 'ದೃಷ್ಟಿ' ಪದದಿಂದ ಉಪಾಸನೆಯು ಇಲ್ಲದಿರುವ ವಿಷಯಗಳ ಧ್ಯಾನವಲ್ಲವೆಂದು ಸೂಚಿತವಾಗಿದೆ. ಮತ್ತು 'ಕೋ ನ ಆತ್ಮಾ ಕಿಂ ಬ್ರಹ್ಮ' ಎಂದು ಉಪಕ್ರಮದಲ್ಲಿ ಹೇಳಿರುವ ಆತ್ಮತ್ವಾದಿಗಳು ಕೂಡುವುದಿಲ್ಲವಾದ್ದರಿಂದ, ಬ್ರಹ್ಮಪ್ರಕರಣವೂ ಆಗಿರುವುದರಿಂದ ಎಂದು ಸಾರಾಂಶ. ಅಪಿ–ಅಷ್ಟೇ ಅಲ್ಲದೆ ಎಂದು ಅರ್ಥ. ಏನಂ–ಈ ವೈಶ್ವಾನರನನ್ನು, ಪುರುಷವಿಧಂ-ಪುರುಷನು ಯಾವ ವಿಧವಾಗಿದ್ದಾನೋ ಆ ವಿಧವಾಗಿ, ಅಧೀಯತೇ–ಛಂದೋಗರು ಯಾವ ಕಾರಣದಿಂದ ಅಧ್ಯಯನ ಮಾಡುತ್ತಾರೋ ಆ ಕಾರಣದಿಂದಲೂ ಕೂಡ ಎಂದು ಯೋಜಿಸಿಕೊಳ್ಳಬೇಕು. [2]ಶೀರ್ಷ್ಣೋ ದ್ಯೌಃ ಸಮವರ್ತತ' ಇತ್ಯಾದಿಯಾಗಿ ಪುರುಷಸೂಕ್ತದಲ್ಲಿ ಹೇಳಲ್ಪಟ್ಟಿರುವ ಪುರುಷನಂತೆಯೇ ಈ ವೈಶ್ವಾನರನನ್ನು 'ಮೂರ್ಧೈವ ಸುತೇಜಾಃ' ಇತ್ಯಾದಿಯಾಗಿ ಅಧ್ಯಯನ ಮಾಡುತ್ತಾರಾದ್ದರಿಂದ ಪುರುಷಸೂಕ್ತದ ಸಮಾಖ್ಯಾನದಿಂದಲೂ ಕೂಡ ಎಂದು ಅರ್ಥ. ಚಶಬ್ದವು ಪುರುಷಸೂಕ್ತದ ವೈಷ್ಣವತ್ವಪ್ರಸಿದ್ಧಿಯನ್ನು ಸೂಚಿಸುತ್ತದೆ.

1. 'ಸರ್ವನಾಮಾ ಸರ್ವಕರ್ಮಾ ಸರ್ವಲಿಂಗಃ ಸರ್ವಗುಣಃ ಸರ್ವಕಾಮಃ ಸರ್ವಧರ್ಮಾಃ ಸರ್ವರೂಪಃ' ಇತ್ಯಾದಿ ಶ್ರುತಿಯು ಸಮಸ್ತ ನಾಮ, ಲಿಂಗ, ಕ್ರಿಯಾವಿಶಿಷ್ಟನನ್ನಾಗಿ ಹರಿಯ ಉಪಾಸನೆಯನ್ನು ವಿಧಿಸುತ್ತದೆ.

2. ವಿಷ್ಣುಪರವೆಂದು ಪ್ರಸಿದ್ಧವಾದ ಪುರುಷಸೂಕ್ತವು ದ್ಯುಭ್ವಾದಿಜನಕ ಶೀರ್ಷಾದ್ಯಂಗಗಳುಳ್ಳವನೆಂದು ಹೇಗೆ ಪುರುಷನನ್ನು ವರ್ಣಿಸುತ್ತದೋ ಅದೇ ರೀತಿ ಛಂದೋಗರು 'ಮೂರ್ಧೈವ ಸುತೇಜಾಃ' ಇತ್ಯಾದಿ ವಾಕ್ಯಗಳಿಂದ ವೈಶ್ವಾನರನನ್ನು ವರ್ಣಿಸುತ್ತಾರಾದ್ದರಿಂದ ವೈಶ್ವಾನರನು ವಿಷ್ಣುವೆಂದು ಸಿದ್ಧವಾಗುತ್ತದೆಂದು ಭಾವ.

अन्तः प्रतिष्ठानस्य कर्मत्वात् पृथगुक्तिः । तत्त्वप्रदीपे तु प्रधानलिङ्गत्वात् पृथगुक्तमित्युक्तम् । तथा चेतोर्पणेत्यत्र प्रसिद्धशब्दत्यागे प्रयोजनोक्तिः । इह तु शब्दादेः सावकाशत्वोक्तिरिति भेदः ॥

प्रसिद्धेर्देवता भूतं च किं न स्यादित्यत आह—

## ॥ ॐ अत एव न देवता भूतं च ॐ ॥ १-२-२७

आत्मशब्दादिति हेतोरेवाग्निर्देवता तेजोभूतं च वैश्वानरो न भवतीत्यर्थः ।

---

**ಆದಿಪದಗ್ರಾಹ್ಯವಾಗಬಹುದಾಗಿದ್ದ ಅಂತಃಪ್ರತಿಷ್ಠಾನವನ್ನು ಪ್ರತ್ಯೇಕವಾಗಿ ಉಲ್ಲೇಖಿಸಿರುವುದರ ಕಾರಣ**

[1]ಅಂತಃಪ್ರತಿಷ್ಠಾನವು ಒಂದು ಕ್ರಿಯೆಯಾದ್ದರಿಂದ ಪ್ರತ್ಯೇಕವಾಗಿ ಹೇಳಲಾಗಿದೆ. ತತ್ತ್ವಪ್ರದೀಪದಲ್ಲಾದರೋ[2] ಪ್ರಧಾನಲಿಂಗವಾದ್ದರಿಂದ ಪ್ರತ್ಯೇಕವಾಗಿ ಉಲ್ಲೇಖಿಸಲ್ಪಟ್ಟಿದೆಯೆಂದು ಹೇಳಿದೆ.

**'ತಥಾ ಚೇತೋಽರ್ಪಣನಿಗದಾತ್ ....' (1-1-25) ಇತ್ಯಾದಿ ಸೂತ್ರದಿಂದ ಪ್ರಕೃತ ಸೂತ್ರಕ್ಕೆ ಭೇದ**

[3]'ತಥಾ ಚೇತೋಽರ್ಪಣ' ಎಂಬಲ್ಲಿ ಪ್ರಸಿದ್ಧಶಬ್ದವನ್ನು ಪರಿತ್ಯಾಗಮಾಡಿದುದಕ್ಕೆ ಪ್ರಯೋಜನವನ್ನು ಹೇಳಲಾಗಿದೆ. ಇಲ್ಲಾದರೋ ಶಬ್ದ ಮೊದಲಾದವುಗಳಿಗೆ ಸಾವಕಾಶತ್ವವನ್ನು ಹೇಳಲಾಗಿದೆ ಎಂದು ಎರಡು ಸೂತ್ರಗಳಿಗೂ ಭೇದವಿದೆ.

[4]ಪ್ರಸಿದ್ಧಿಯ ಕಾರಣದಿಂದ ಅಗ್ನಿದೇವತೆಯಾಗಲೀ ಭೂತಾಗ್ನಿಯಾಗಲೀ ವೈಶ್ವಾನರನೇಕಾಗಬಾರದು ಎಂಬ ಆಕ್ಷೇಪಕ್ಕೆ ಸಮಾಧಾನ—

## ಓಂ ಅತ ಏವ ನ ದೇವತಾ ಭೂತಂ ಚ ಓಂ (೧-೨-೨೭)

**ಸೂತ್ರಾರ್ಥ**

ಆತ್ಮಶಬ್ದ ಮೊದಲಾದ ಹೇತುವಿನಿಂದಲೇ ಅಗ್ನಿದೇವತೆಯಾಗಲೀ ತೇಜೋರೂಪವಾದ ಭೂತವಾಗಲೀ ವೈಶ್ವಾನರವಲ್ಲ ಎಂದು ಅರ್ಥ.

---

1. ಆದಿಪದವು ಲಿಂಗಗಳನ್ನು ಗ್ರಹಿಸುತ್ತದೆಂದು ಭಾವ.

2. ಅಗ್ನಿಯ ಅಪ್ರಧಾನ ಲಿಂಗಗಳನ್ನು ಆದಿಪದದಿಂದ ಗ್ರಹಿಸಿ ಪ್ರಧಾನಲಿಂಗವನ್ನು ಉಲ್ಲೇಖಿಸಲಾಗಿದೆ ಎಂದು ಭಾವ.

3. ಛಂದಸ್ಸಿನಲ್ಲಿ ಪ್ರಸಿದ್ಧವಾದ ಗಾಯತ್ರೀ ಶಬ್ದದಿಂದ ವಿಷ್ಣುವನ್ನು ಹೇಳುವುದು ಉಪಾಸನೆಗಾಗಿ ಎಂದು ಹೇಳಿದಂತೆಯೇ ಪ್ರಕೃತ ಸೂತ್ರದಲ್ಲೂ ಹೇಳಿರುವುದರಿಂದ ಈ ಅಂಶದಲ್ಲಿ ಎರಡೂ ಸೂತ್ರಗಳಲ್ಲಿ ಭೇದವಿಲ್ಲ ಎಂಬ ಆಕ್ಷೇಪಕ್ಕೆ ಇದು ಸಮಾಧಾನ.

4. ಅಗ್ನಿಯೆಂದರೆ ಅಗ್ನಿದೇವತೆ ಅಥವಾ ಪಂಚಭೂತಗಳಲ್ಲೊಂದಾದ ತೇಜಸ್ಸು ಎಂದು ಸಾಮಾನ್ಯ ಲೋಕಪ್ರಸಿದ್ಧಿ.

अग्न्यादिशब्दानां ब्रह्मैकवाचित्वेऽग्न्यादौ व्यवहारविरोधः फलाभावादित्यत आह—

॥ ॐ साक्षादप्यविरोधं जैमिनिः ॐ ॥ १-२ २८

वाच्यार्थधीव्यवहितं लक्षणादिकं विना साक्षात् मुख्यवृत्त्या ब्रह्मणः अग्न्यादिशब्दार्थत्वेऽप्यन्यत्र व्यवहाराविरोधं जैमिनिराहेत्यर्थः । हानाद्यर्थत्वादिति भावः ।

अग्न्यादिशब्दानां ब्रह्मणि मुख्यत्वे सूक्तादिव्यवस्था न स्यादित्यत आह—

॥ ॐ अभिव्यक्तेरित्याश्मरथ्यः ॐ ॥ १-२ २९

---

ಅಗ್ನ್ಯಾದಿ ಶಬ್ದಗಳು ಬ್ರಹ್ಮಮಾತ್ರವಾಚಕಗಳಾದರೆ ನಿಷ್ಫಲವಾದುದರಿಂದ ಅಗ್ನ್ಯಾದಿಗಳಲ್ಲಿ ವ್ಯವಹಾರ ಮಾಡುವುದರ ವಿರೋಧವಿದೆ ಎಂಬ ಆಕ್ಷೇಪಕ್ಕೆ ಸಮಾಧಾನ—

ಓಂ ಸಾಕ್ಷಾದಪ್ಯವಿರೋಧಂ ಜೈಮಿನಿಃ ಓಂ (೧-೨-೨೮)

**ಸೂತ್ರಾರ್ಥ**

[1] ವಾಚ್ಯಾರ್ಥದ ಜ್ಞಾನದಿಂದ ವ್ಯವಹಿತವಾದ ಲಕ್ಷಣಾ ಮೊದಲಾದವುಗಳಿಲ್ಲದೇ ಸಾಕ್ಷಾತ್–ಮುಖ್ಯವೃತ್ತಿಯಿಂದ ಬ್ರಹ್ಮನು ಅಗ್ನಿ ಮೊದಲಾದ ಪದಗಳ ಅರ್ಥವೆಂದೊಪ್ಪಿದರೂ ಬೇರೆಡೆಯಲ್ಲಿ ವ್ಯವಹಾರ ಮಾಡುವುದರ ವಿರೋಧವಿಲ್ಲವೆಂದು ಜೈಮಿನಿಗಳು ಹೇಳುತ್ತಾರೆಂದು ಅರ್ಥ. [2] ಹಾನ ಮೊದಲಾದ ಪ್ರಯೋಜನಗಳಿರುವುದರಿಂದ ಎಂದು ಭಾವ.

ಅಗ್ನ್ಯಾದಿ ಶಬ್ದಗಳು ಬ್ರಹ್ಮನಲ್ಲಿ ಮುಖ್ಯವೆನ್ನುವುದಾದರೆ ಸೂಕ್ತ ಮೊದಲಾದವುಗಳ ವ್ಯವಸ್ಥೆ ಇಲ್ಲದೇ ಹೋದೀತು ಎಂಬ ಪೂರ್ವಪಕ್ಷಕ್ಕೆ ಉತ್ತರ—

ಓಂ ಅಭಿವ್ಯಕ್ತೇರಿತ್ಯಾಶ್ಮರಥ್ಯಃ ಓಂ (೧–೨–೨೯)

---

1. ಮೊದಲು ವಾಚ್ಯಾರ್ಥಜ್ಞಾನ, ಅದು ಬಾಧಿತವೆಂದು ತಿಳಿದ ನಂತರ ಅಮುಖ್ಯವೃತ್ತಿಯಾದ ಲಕ್ಷಣಾದ ಉಪಯೋಗ. ಹೀಗೆ ಲಕ್ಷಣಾ ಮೊದಲಾದ ಅಮುಖ್ಯವೃತ್ತಿಗಳು ವಾಚ್ಯಾರ್ಥಜ್ಞಾನದಿಂದ ವ್ಯವಹಿತವಾದುವು.

2. ಹಾನ–ತ್ಯಜಿಸುವುದು, ಉಪಾದಾನ–ಸ್ವೀಕರಿಸುವುದು ಇವೇ ಮೊದಲಾದ ಪ್ರಯೋಜನಗಳಿರುವುದರಿಂದ ವ್ಯವಹಾರ ನಿಷ್ಫಲವಲ್ಲವೆಂದು ಭಾವ.

अग्न्यादिसूक्तादिनियम इति शेषः । अग्न्यादिसूक्तादिभिर्ब्रह्मोपास्तावग्न्यादिष्वेव तस्याभिव्यक्तेरिति भावेनाग्न्यादिसूक्तादिनियम इत्याश्मरथ्यो मन्यत इत्यर्थः ।

प्रकारान्तरेण व्यवस्थामाह—

॥ ॐ अनुस्मृतेर्बादरिः ॐ ॥ १-२-३०

तत्तत्सूक्ताद्युपासकैरग्न्यादिष्वेव ब्रह्मणोऽनुस्मृतेर्हेतोः सूक्तादिव्यवस्थेति बादरिर्मन्यते । अनुस्मृतेः पूर्वत्वेऽप्यभिव्यक्त्यनन्तरमपि सा कार्येति द्योतयितुं तदनन्तरमुक्तिः ।

---

**ಸೂತ್ರಾರ್ಥ**

' ಅಗ್ನ್ಯಾದಿ ಸೂಕ್ತ ಇತ್ಯಾದಿ ನಿಯಮ ' ಎಂದು ಶೇಷಪೂರಣ ಮಾಡಿಕೊಳ್ಳಬೇಕು ಅಗ್ನ್ಯಾದಿ ಸೂಕ್ತಾದಿಗಳಿಂದ ಬ್ರಹ್ಮನನ್ನು ಉಪಾಸನೆ ಮಾಡಿದಲ್ಲಿ ಅಗ್ನ್ಯಾದಿಗಳಲ್ಲೇ ಬ್ರಹ್ಮನ ಅಭಿವ್ಯಕ್ತಿಯಾಗುವುದು ಎಂಬ ಅಭಿಪ್ರಾಯದಿಂದ ಅಗ್ನ್ಯಾದಿಸೂಕ್ತ ಮೊದಲಾದ ನಿಯಮವೆಂದು ಆಶ್ಮರಥ್ಯರು ಭಾವಿಸುತ್ತಾರೆ ಎಂದು ಅರ್ಥ.

ಪ್ರಕಾರಾಂತರದಿಂದ ವ್ಯವಸ್ಥೆಯನ್ನು ಹೇಳಲು ಸೂತ್ರ—

ಓಂ ಅನುಸ್ಮೃತೇಃ ಬಾದರಿಃ ಓಂ (೧-೨-೩೦)

**ಸೂತ್ರಾರ್ಥ**

ಆಯಾ ಸೂಕ್ತಾದಿಗಳ ಉಪಾಸಕರಿಂದ ಅಗ್ನ್ಯಾದಿಗಳಲ್ಲೇ ಬ್ರಹ್ಮನನ್ನು ಧ್ಯಾನ ಮಾಡಲ್ಪಡತಕ್ಕದ್ದು ಎಂಬ ಕಾರಣದಿಂದ ಸೂಕ್ತಾದಿಗಳ ವ್ಯವಸ್ಥೆ ಎಂದು ಬಾದರಿಗಳು ತಿಳಿಯುತ್ತಾರೆ.

**ಅಭಿವ್ಯಕ್ತಿಯ ಅನಂತರ ಅನುಸ್ಮೃತಿಯನ್ನು ಹೇಳಿರುವುದರ ಉದ್ದೇಶ**

ಅನುಸ್ಮೃತಿಯೇ ಪ್ರಾಥಮಿಕವಾಗಿದ್ದರೂ ಅಭಿವ್ಯಕ್ತಿಯ ಅನಂತರವೂ ಅನುಸ್ಮೃತಿಯು ಮಾಡಲ್ಪಡತಕ್ಕದ್ದು ಎಂದು ಸೂಚಿಸಲು ಅಭಿವ್ಯಕ್ತಿಯ ಅನಂತರ ಅನುಸ್ಮೃತಿಯನ್ನು ಹೇಳಲಾಗಿದೆ.

निमित्तान्तरमाह—

॥ ॐ सम्पत्तेरिति जैमिनिस्तथा हि दर्शयति ॐ ॥
१-२-३१

अग्न्यादिसूक्ताद्युपासकानामग्न्यादिप्राप्तेर्निमित्तादिति भावेन सूक्तादिनियम इति जैमिनिर्मन्यते । तदुपास्तौ तत्प्राप्तिः कुतः ? तथा हि दर्शयति । "तं यथा यथोपासते तदेव भवति" इति हि प्रसिद्धा श्रुतिः जैमिनिमतं यथा तथा दर्शयतीत्यर्थः भवतीत्यस्य प्राप्नुवन्तीत्यर्थात् ।

ब्रह्मोपास्तावग्न्यादिप्राप्तिः कथमित्यत आह—

॥ ॐ आमनन्ति चैनमस्मिन् ॐ ॥ १ २ ३२

---

ನಿಮಿತ್ತಾಂತರವನ್ನು ಹೇಳುವ ಸೂತ್ರ—

ಓಂ ಸಂಪತ್ತೇರಿತಿ ಜೈಮಿನಿಸ್ತಥಾ ಹಿ ದರ್ಶಯತಿ ಓಂ
(೧-೨-೩೧)

**ಸೂತ್ರಾರ್ಥ**

ಅಗ್ನ್ಯಾದಿ ಸೂಕ್ತಗಳಿಂದ ಉಪಾಸನೆ ಮಾಡತಕ್ಕವರಿಗೆ ಅಗ್ನ್ಯಾದಿಗಳ ಪ್ರಾಪ್ತಿಯಾಗುವುದೆಂಬ ನಿಮಿತ್ತದಿಂದ ಸೂಕ್ತಾದಿಗಳ ನಿಯಮ ಎಂದು ಜೈಮಿನಿಗಳು ತಿಳಿಯುತ್ತಾರೆ. ಅಗ್ನ್ಯಾದಿ ಸೂಕ್ತಗಳಿಂದ ಉಪಾಸನೆಮಾಡಿದಲ್ಲಿ ಅಗ್ನ್ಯಾದಿಪ್ರಾಪ್ತಿಯಾಗುವುದು. ಏಕೆಂದರೆ, ತಥಾ ಹಿ ದರ್ಶಯತಿ — 'ತಂ ಯಥಾ ಯಥೋಪಾಸತೇ ತದೇವ ಭವತಿ' ಎಂದು, ಹಿ-ಪ್ರಸಿದ್ಧವಾದ ಶ್ರುತಿಯು ಜೈಮಿನಿಮತವನ್ನು ಇದೇ ರೀತಿಯಾಗಿ ತಿಳಿಸುತ್ತದೆ. ಭವತಿ ಎನ್ನುವುದಕ್ಕೆ ಪಡೆಯುವರು ಎನ್ನುವುದು ಅರ್ಥಾತ್ ಸಿದ್ಧವಾಗುವ ಅರ್ಥ.

ಬ್ರಹ್ಮನನ್ನು ಉಪಾಸನೆ ಮಾಡಿದರೆ ಅಗ್ನ್ಯಾದಿ ಪ್ರಾಪ್ತಿಯಾಗುವುದೆನ್ನುವುದು ಹೇಗೆ ? ಎಂಬ ಆಕ್ಷೇಪಕ್ಕೆ ಸಮಾಧಾನ ಹೇಳಲು ಸೂತ್ರ—

ಓಂ ಆಮನಂತಿ ಚೈನಮಸ್ಮಿನ್ ಓಂ (೧-೨-೩೨)

चशब्दः शङ्काव्यावर्तकः । एनं विष्णुमस्मिन्नग्न्यादौ । तस्य देवता भूतश्चेति प्रकृतत्वात् । "योऽग्नौ तिष्ठन्" इत्यादिना आमनन्ति श्रुतय इत्यर्थः । अग्न्यादिप्राप्तिपदेन तत्स्थब्रह्मप्राप्तेर्विवक्षितत्वादिति भावः । श्रुत्यनुसारादेनमिति पुंनिर्देशः । जैमिन्याद्युक्तिस्तेषां प्रसिद्ध्यर्था । शब्दानां लोकव्यवहाराविरोधं वदन् सूक्तादिनियमं चाहेति जैमिनेर्द्विरुपादानम् ॥ ७ ॥

अत्राद्यनये विष्णोस्सर्वशक्तिप्रबोधकत्वं सर्वगतस्याप्यल्पस्थान-स्थितत्वं च । अत्तेति नयेऽदनक्रिया । गुहानये सारभोक्तृत्वमेकस्या-

---

**ಸೂತ್ರಾರ್ಥ**

'ಚ' ಶಬ್ದವು ಶಂಕೆಯನ್ನು ವ್ಯಾವೃತ್ತಿಗೊಳಿಸುತ್ತದೆ. ಏನಂ–ಈ ವಿಷ್ಣುವನ್ನು, ಅಸ್ಮಿನ್–ಅಗ್ನ್ಯಾದಿಗಳಲ್ಲಿ—[1]ಅಗ್ನ್ಯಾದಿಗಳು 'ದೇವತಾ ಭೂತಂ ಚ' ಎಂಬುದಾಗಿ ಪ್ರಸಕ್ತರಾಗಿರುವುದರಿಂದ — 'ಯೋಽಗ್ನೌ ತಿಷ್ಠನ್' ಇತ್ಯಾದಿಯಾಗಿ ಶ್ರುತಿಗಳು, ಆಮನಂತಿ-ಹೇಳುತ್ತವೆ ಎಂದು ಅರ್ಥ. 'ಅಗ್ನ್ಯಾದಿಪ್ರಾಪ್ತಿ' ಎಂಬ ಪದದಿಂದ ಅಗ್ನ್ಯಾದಿಸ್ಥನಾದ ಬ್ರಹ್ಮನ ಪ್ರಾಪ್ತಿಯೇ ವಿವಕ್ಷಿತವಾಗಿದೆಯೆಂದು ಭಾವ [2]ಶ್ರುತಿಯನ್ನು ಅನುಸರಿಸಿ 'ಏನಂ' ಎಂದು ಪುಲ್ಲಿಂಗದಿಂದ ನಿರ್ದೇಶಮಾಡಲಾಗಿದೆ.

**ಜೈಮಿನ್ಯಾದಿಗಳ ಉಲ್ಲೇಖ ಮಾಡಿರುವುದರ, ಅದರಲ್ಲೂ ಎರಡು ಸಲ ಜೈಮಿನಿಮತವನ್ನು ಉಲ್ಲೇಖಿಸಿರುವುದರ ಉದ್ದೇಶ**

ಜೈಮಿನ್ಯಾದಿಗಳನ್ನು ಉಲ್ಲೇಖಿಸಿರುವುದು ಅವರ ಪ್ರಸಿದ್ಧಿಗೋಸ್ಕರವಾಗಿ. ಶಬ್ದಗಳಿಗೆ ಲೋಕವ್ಯವಹಾರದ ವಿರೋಧವಿಲ್ಲವೆನ್ನುವುದನ್ನು ಹೇಳುತ್ತ ಸೂಕ್ತಾದಿಗಳ ನಿಯಮವನ್ನೂ ಹೇಳುತ್ತಾರೆಂಬ ಕಾರಣದಿಂದ ಜೈಮಿನಿಗಳನ್ನು ಎರಡು ಬಾರಿ ಉಲ್ಲೇಖಿಸಲಾಗಿದೆ.

**ಈ ಪಾದದ ಅಧಿಕರಣಗಳ ಉದ್ದೇಶದ ಸಂಗ್ರಹ**

ಈ ಪಾದದ ಮೊದಲನೆಯ ಅಧಿಕರಣದಲ್ಲಿ ವಿಷ್ಣುವಿಗೆ ಸರ್ವಶಕ್ತಿಪ್ರಬೋಧಕತ್ವವನ್ನೂ ಮತ್ತು ಸರ್ವಗತನಿಗೂ ಅಲ್ಪಸ್ಥಾನಸ್ಥಿತಿಯನ್ನೂ ಹೇಳಲಾಗಿದೆ. ಅತ್ತೇತ್ಯಾದ್ಯಧಿಕರಣದಲ್ಲಿ ಆದನ ಕ್ರಿಯೆಯನ್ನು ಸಮನ್ವಯಗೊಳಿಸಲಾಗಿದೆ. ಗುಹಾನಯದಲ್ಲಿ

---

1. ಅಪ್ರಸಕ್ತರಾದ ಅಗ್ನ್ಯಾದಿಗಳನ್ನು ಅಸ್ಮಚ್ಛಬ್ದದಿಂದ ಪರಾಮರ್ಶಿಸುವುದು ಹೇಗೆಂಬ ಆಕ್ಷೇಪಕ್ಕೆ ಇದು ಸಮಾಧಾನ.

2. ಈ ಅಧಿಕರಣದಲ್ಲಿ ಅನುವೃತ್ತವಾಗಿರುವ ಬ್ರಹ್ಮವಾಚಕ 'ತತ್' ಶಬ್ದವು ನಪುಂಸಕದಲ್ಲಿರುವಂತೆ 'ಏತತ್' ಶಬ್ದವೂ ನಪುಂಸಕಲಿಂಗದಲ್ಲಿರಬೇಕಾಗಿತ್ತು ಎಂಬ ಶಂಕೆಗೆ ಇದು ಉತ್ತರ.

प्यनेकत्वं च । अन्तरनये ब्रह्मादेरीशं विना स्वावरनेतृत्वायोगः । अन्तर्यामिनये सर्वस्य तच्छीर्यत्वात् तत्तन्त्रत्वाद्वा तच्छरीरत्वम् । अदृश्यत्वनये गोत्राद्यभावस्येशाख्यधर्मितो भेदेऽपि दृश्याद्यन्योन्याभावस्य तत्स्वरूपत्वं सिद्धम् । अन्त्यनये सूक्तादिव्यवस्थेत्यादि ध्येयम् ॥

इति श्रीमद्राघवेन्द्रयतिकृतायां तन्त्रदीपिकायां प्रथमाध्यायस्य
द्वितीय· पादः ॥ श्रीकृष्णार्पणमस्तु ॥

---

ಸಾರಭೋಕ್ತೃತ್ವವನ್ನೂ, ಒಬ್ಬನಿಗೇ ಅನೇಕತ್ವವನ್ನೂ ಹೇಳಿದೆ. ಅಂತರಾಧಿಕರಣದಲ್ಲಿ ಬ್ರಹ್ಮಾದಿಗಳಿಗೆ, ಪರಮಾತ್ಮನನ್ನು ಬಿಟ್ಟು, ತಮ್ಮ ಅವರರನ್ನು ಪ್ರೇರಿಸುವ ಶಕ್ತಿ ಇಲ್ಲ ವೆಂಬುದನ್ನು ನಿರೂಪಿಸಿದೆ. ಅಂತರ್ಯಾಮಿನಯದಲ್ಲಿ ಸರ್ವವೂ ಭಗವಂತನಿಂದ ವಿನಾಶ್ಯವಾದುದರಿಂದ ಅಥವಾ ಅವನ ಅಧೀನವಾದುದರಿಂದ ಅವನ ಶರೀರವೆಂಬುದನ್ನು ಪ್ರತಿಪಾದಿಸಲಾಗಿದೆ. ಅದೃಶ್ಯತ್ವನಯದಲ್ಲಿ [1]ಗೋತ್ರಾದ್ಯಭಾವವು ಈಶನೆಂಬ ಧರ್ಮಿಯಿಂದ ಭಿನ್ನವಾಗಿದ್ದರೂ ದೃಶ್ಯಾದಿಗಳ ಭೇದವು ಪರಮಾತ್ಮನ ಸ್ವರೂಪವೆಂದು ಸಿದ್ಧವಾಗಿದೆ. ಕೊನೆಯ ಅಧಿಕರಣದಲ್ಲಿ ಸೂಕ್ತಾದಿ ವ್ಯವಸ್ಥೆಯನ್ನು ಮಾಡಲಾಗಿದೆ ಎಂದು ತಿಳಿಯಬೇಕು.

ಶ್ರೀಮದ್ರಾಘವೇಂದ್ರಯತಿಗಳು ರಚಿಸಿರುವ ತಂತ್ರದೀಪಿಕೆಯಲ್ಲಿ
ಪ್ರಥಮಾಧ್ಯಾಯದ ದ್ವಿತೀಯಪಾದವು ಸಮಾಪ್ತವಾಯಿತು.

ಶ್ರೀಕೃಷ್ಣಾರ್ಪಣಮಸ್ತು

---

1. 'ಯತ್ತದದ್ರೇಶ್ಯಮಗ್ರಾಹ್ಯಮಗೋತ್ರಮವರ್ಣ...' ಎಂಬ ವಿಷಯವಾಕ್ಯದಲ್ಲಿರುವ ಅಗೋತ್ರಪದಕ್ಕೆ ಗೋತ್ರವಿಲ್ಲದಿರುವವನು ಅಂದರೆ ಗೋತ್ರಾತ್ಯಂತಾಭಾವವುಳ್ಳವನು ಎಂದು ಅರ್ಥ. ಈ ಅಭಾವಕ್ಕೆ ಧರ್ಮಿ ಈಶ. ಅತ್ಯಂತಾಭಾವವೂ ಅದರ ಧರ್ಮಿಯೂ ಭಿನ್ನಗಳೆಂದು ಸಿದ್ಧಾಂತವಾದುದರಿಂದ ಗೋತ್ರಾಭಾವವು ಈಶಭಿನ್ನವಾದುದು. ಅದರೆ ಅದ್ರೇಶ್ಯಶಬ್ದಕ್ಕೆ ದೃಶ್ಯಭಿನ್ನ ಎಂದು ಅರ್ಥ. ಭೇದವು ಧರ್ಮಿಸ್ವರೂಪವಾದುದರಿಂದ ದೃಶ್ಯಭೇದವು ಈಶಸ್ವರೂಪ ವೆಂದು ಸಿದ್ಧವಾಗುವುದೆಂದು ಭಾವ.

# अथ प्रथमाध्यायस्य तृतीयः पादः

द्युभ्वाद्यधिकरणम्—१

अत्र पादे उभयत्र प्रसिद्धनामलिङ्गात्मकद्विविधशब्दसमन्वय उच्यते—

## ॥ ॐ द्युभ्वाद्यायतनं स्वशब्दात् ॐ ॥ १-३-१

अत्र नये तादृशं सर्वाधारत्वलिङ्गं समन्वीयते । तच्चित्यस्ति । "यस्मिन् द्यौः पृथिवी चान्तरिक्षम्" इत्यादिनोक्तं द्युभ्वाद्यायतनं तत्तु ब्रह्मैव । न तु प्रधानं वायुरुद्रजीवा वा । स्वशब्दात् स्वेति शब्दः

---

# ಪ್ರಥಮಾಧ್ಯಾಯ—ತೃತೀಯಪಾದ

**ಪಾದಪ್ರತಿಪಾದ್ಯ ವಿಷಯ**

ಈ ಪಾದದಲ್ಲಿ ಉಭಯತ್ರಪ್ರಸಿದ್ಧವಾದ ನಾಮಾತ್ಮಕ ಮತ್ತು ಲಿಂಗಾತ್ಮಕ, ಹೀಗೆ ಎರಡು ವಿಧವಾದ ಶಬ್ದಗಳ ಸಮನ್ವಯವು ಹೇಳಲ್ಪಡುತ್ತದೆ.

[1]ದ್ಯುಭ್ವಾದ್ಯಧಿಕರಣ—೧

## ಓಂ ದ್ಯುಭ್ವಾದ್ಯಾಯತನಂ ಸ್ವಶಬ್ದಾತ್ ಓಂ (೧-೩-೧)

**ಅಧಿಕರಣದ ಉದ್ದೇಶ**

ಈ ಅಧಿಕರಣದಲ್ಲಿ ಉಭಯತ್ರ ಪ್ರಸಿದ್ಧವಾದ ಸರ್ವಾಧಾರತ್ವ ಲಿಂಗದ ಸಮನ್ವಯವು ಮಾಡಲ್ಪಡುತ್ತದೆ.

**ಸೂತ್ರಾರ್ಥ**

'ತತ್ತು' ಎಂದು ಅನುವೃತ್ತವಾಗಿದೆ. 'ಯಸ್ಮಿನ್ ದ್ಯೌಃ ಪೃಥಿವೀ ಚಾಂತರಿಕ್ಷಂ' ಇತ್ಯಾದಿ ಶ್ರುತಿಯಿಂದ ಹೇಳಲ್ಪಟ್ಟ ದ್ಯುಭ್ವಾದ್ಯಾಯತನವು, ತತ್ತು—ಬ್ರಹ್ಮವೇ,

---

1. 'ಯಸ್ಮಿನ್ ದ್ಯೌಃ ಪೃಥಿವೀ ಚಾಂತರಿಕ್ಷಮೋತಂ ಮನಃ ಸಹ ಪ್ರಾಣೈಶ್ಚ ಸರ್ವೈಃ । ತಮೇವೈಕಂ ಜಾನಥ ಆತ್ಮಾನಂ ಅನ್ಯಾ ವಾಚೋ ವಿಮುಂಚಥ ॥' (ಮುಂ. ೨—೨—೫) ಎಂಬ ಶ್ರುತಿ ಇಲ್ಲಿ ವಿಷಯವಾಕ್ಯ. ಇಲ್ಲಿ ಪ್ರತಿಪಾದಿತವಾಗಿರುವ ದ್ಯು, ಭೂ, ಅಂತರಿಕ್ಷ ಮೊದಲಾದವುಗಳ ಆಶ್ರಯವು ಪ್ರಧಾನಾದಿಗಳೆಂದು ಪೂರ್ವಪಕ್ಷ. ದ್ಯುಭ್ವಾದ್ಯಾಯತನದಲ್ಲಿ ಶ್ರುತವಾಗಿರುವ ಆತ್ಮ ಶಬ್ದವು ಬ್ರಹ್ಮನಿಗೆ ಮಾತ್ರ ವಾಚಕವಾಗಿರುವುದರಿಂದ ಬ್ರಹ್ಮನೇ ದ್ಯುಭ್ವಾದ್ಯಾಯತನನೆಂದು ಸಿದ್ಧಾಂತ.

स्वशब्दस्तस्मात् । श्रुतौ स्वशब्दाभावात् तत्पर्यायात्मशब्दो ग्राह्यः । सभाराजेत्यत्र पाणिनीये राजशब्दवत् । तमेवैकं जानथात्मानमित्यात्मशब्दादित्यर्थः । आत्मशब्दादिति वाच्ये स्वेत्युक्तिः स्वस्य ब्रह्मण एव शब्द इत्यपि विग्रहेणासाधारण्यं ज्ञापयितुम् । तच्छब्दादित्युक्तावपि शब्दविशेषो न ज्ञापितः स्यादिति ।

जायमानत्वरूपजीवलिङ्गादात्मशब्दः अमुख्यः किं न स्यादित्यत आह—

---

ಪ್ರಧಾನವಾಗಲೀ ವಾಯುರುದ್ರಜೀವರಾಗಲೀ ಅಲ್ಲ. ಸ್ವಶಬ್ದಾತ್–'ಸ್ವ' ಎಂಬ ಶಬ್ದ ಸ್ವಶಬ್ದ ಅದರಿಂದ, ಶ್ರುತಿಯಲ್ಲಿ 'ಸ್ವ' ಎಂಬ ಶಬ್ದ ಇಲ್ಲದಿರುವುದರಿಂದ ಅದಕ್ಕೆ ಪರ್ಯಾಯವಾದ ಆತ್ಮಶಬ್ದವನ್ನು ಗ್ರಹಿಸಬೇಕು. [1]'ಸಭಾ ರಾಜ' ಎಂಬ ಪಾಣಿನೀಯ ಸೂತ್ರದಲ್ಲಿ ರಾಜಶಬ್ದದಂತೆ. 'ತಮೇವೈಕಂ ಜಾನಥ ಆತ್ಮಾನಂ' ಎಂಬುದಾಗಿ ಆತ್ಮಶಬ್ದದಿಂದ ಎಂದು ಅರ್ಥ.

**'ಆತ್ಮಶಬ್ದಾತ್' ಎಂದು ಹೇಳದಿರಲು ಕಾರಣ**

'ಆತ್ಮಶಬ್ದಾತ್' ಎಂದು ಹೇಳಬೇಕಿದ್ದಾಗ 'ಸ್ವಶಬ್ದಾತ್' ಎಂದು ಹೇಳಿರುವುದು, ಸ್ವಸ್ಯ–ತನಗೇ ಅಂದರೆ ಬ್ರಹ್ಮನಿಗೇ ಸಂಬಂಧಪಟ್ಟ ಶಬ್ದ ಎಂಬುದಾಗಿಯೂ ವಿಗ್ರಹದಿಂದ ಆತ್ಮಶಬ್ದದ ಅಸಾಧಾರಣ್ಯವನ್ನು ಸೂಚಿಸಲು [2]'ತಚ್ಛಬ್ದಾತ್' ಎಂದು ಹೇಳಿದರೂ ಶಬ್ದವಿಶೇಷವು ಸೂಚಿತವಾಗದೇ ಹೋಗಬಹುದು ಎಂಬ ಕಾರಣದಿಂದ 'ಸ್ವಶಬ್ದಾತ್' ಎಂದೇ ಹೇಳಲಾಗಿದೆ.

[3]'ಜಾಯಮಾನತ್ವ' ಎಂಬ ಜೀವಲಿಂಗವಿರುವುದರಿಂದ ಆತ್ಮಶಬ್ದವು ಅಮುಖ್ಯವೇಕಾಗಬಾರದು ಎಂಬ ಆಕ್ಷೇಪಕ್ಕೆ ಉತ್ತರ—

---

1. 'ಸಭಾ ರಾಜಾಮನುಷ್ಯಪೂರ್ವಾ' (ಪಾ.ಸೂ. ೨–೪–೨೩) ಎಂದು ಸೂತ್ರ. ರಾಜಪರ್ಯಾಯಶಬ್ದವಾಗಲೀ ಅಮನುಷ್ಯಶಬ್ದವಾಗಲೀ ಪೂರ್ವಪದವನ್ನಾಗುಳ್ಳ ಸಭಾಂತವಾದ ತತ್ಪುರುಷ ಸಮಾಸವು ನಪುಂಸಕಲಿಂಗದಲ್ಲಿರುತ್ತದೆಂದು ಸೂತ್ರಾರ್ಥ. 'ರಾಜಸಭಾ' ಎಂದು ಪ್ರಯೋಗಗಳಿರುವುದರಿಂದ ರಾಜಪರ್ಯಾಯಪದವನ್ನು ರಾಜಪದದಿಂದ ಗ್ರಹಿಸಲಾಗಿದೆ. ನೃಪಸಭಮ್ ಮೊದಲಾದುವುಗಳು ಉದಾಹರಣೆ. ಪ್ರಕೃತ, ಶ್ರುತಿಯಲ್ಲಿ 'ಸ್ವ'ಶಬ್ದವಿಲ್ಲದಿರುವುದರಿಂದ ಸ್ವಶಬ್ದಪರ್ಯಾಯವಾದ ಆತ್ಮಶಬ್ದವನ್ನು ತೆಗೆದುಕೊಳ್ಳಬೇಕೆಂದು ಭಾವ.

2. ತಚ್ಛಬ್ದಾತ್–ಆ ಬ್ರಹ್ಮನ ಶಬ್ದದಿಂದ ಎಂದು ಹೇಳಿದರೆ ಅದು ಆತ್ಮಶಬ್ದವೇ ಆಗಬೇಕಾಗಿಲ್ಲ. ಆದರೆ ಸ್ವಶಬ್ದ ಎಂದು ಹೇಳಿದಾಗ ಸ್ವಶಬ್ದಪರ್ಯಾಯವೂ, ಬ್ರಹ್ಮನಿಗೆ ಅಸಾಧಾರಣವೂ ಆದ ಆತ್ಮಶಬ್ದವೇ ಸೂಚಿತವಾಗುತ್ತದೆ.

3. 'ಸ ಏಷೋಽಂತಶ್ಚರತೇ ಬಹುಧಾ ಜಾಯಮಾನಃ' (ಮುಂ. ೨–೨–೬) ಎಂಬಲ್ಲಿ ದ್ಯುಭ್ವಾದ್ಯಾಯತನನಿಗೆ ಜಾಯಮಾನತ್ವವನ್ನು ಹೇಳಿದೆ. ಅದು ಜೀವಲಿಂಗವೆಂದು ಭಾವ.

## ॥ ॐ मुक्तोपसृप्यव्यपदेशात् ॐ ॥ १-३-२

द्व्येकयोरित्यादाविव भावप्रधानोऽयम् । उपसृप्यत्वं प्राप्यान्तरशून्यत्वे सति प्राप्यत्वम् । तेनान्तरा प्राप्ये न व्यभिचारः । अमृतस्यैष सेतुः" इत्यमृतशब्दितमुक्तोपसृप्यत्वव्यपदेशात् नात्मशब्दोऽमुख्य इति योज्यम् । अमृतसेत्विति वाच्ये मुक्तेत्याद्युक्तिः तदर्थोक्त्यर्था । एवमन्यत्रापि ॥

---

## ಓಂ ಮುಕ್ತೋಪಸೃಪ್ಯವ್ಯಪದೇಶಾತ್ ಓಂ (೧-೩-೨)

**'ಉಪಸೃಪ್ಯ' ಪದದ ವಿವರಣೆ**

1 'ದ್ವ್ಯೇಕಯೋಃ' ಇತ್ಯಾದಿಗಳಲ್ಲಿ ಹೇಗೋ ಹಾಗೆ ಇದು ಭಾವಪ್ರಧಾನವಾದ ಶಬ್ದ. 2 'ಉಪಸೃಪ್ಯತ್ವ' ಎಂದರೆ ಪ್ರಾಪ್ಯವಾದ ಇನ್ನೊಂದಿಲ್ಲದೆ ತಾನು ಪ್ರಾಪ್ಯವಾಗಿರುವುದು. ಆದ್ದರಿಂದ ಮಧ್ಯದಲ್ಲಿ ಪ್ರಾಪ್ಯವಾದದ್ದರಲ್ಲಿ ವ್ಯಭಿಚಾರವಿಲ್ಲ.

**ಸೂತ್ರಾರ್ಥ**

'ಅಮೃತಸ್ಯೈಷ ಸೇತುಃ' ಎಂಬುದಾಗಿ ಅಮೃತಶಬ್ದದಿಂದ ಹೇಳಲ್ಪಟ್ಟ ಮುಕ್ತರಿಂದ ಪ್ರಾಪ್ಯತ್ವವನ್ನು ಹೇಳಿರುವುದರಿಂದ ಆತ್ಮಶಬ್ದವು ಅಮುಖ್ಯವಲ್ಲ ಎಂದು ಯೋಜಿಸಿಕೊಳ್ಳಬೇಕು. 'ಅಮೃತಸೇತುವ್ಯಪದೇಶಾಚ್ಚ' ಎಂದು ಹೇಳುವ ಬದಲು 'ಮುಕ್ತ' ಇತ್ಯಾದಿ ಹೇಳಿರುವುದು ಅಮೃತಸೇತು ಪದದ ಅರ್ಥವನ್ನು ಹೇಳುವುದಕ್ಕಾಗಿ. ಹೀಗೆಯೇ ಇತರ ಕಡೆಗಳಲ್ಲೂ ತಿಳಿಯಬೇಕು.

---

1. 'ದ್ವ್ಯೇಕಯೋಃ ದ್ವಿವಚನೈಕವಚನೇ' (ಪಾ. ಸೂ. ೧-೪-೨೨) ಎಂಬ ಸೂತ್ರಕ್ಕೆ ದ್ವಿವಚನ ಮತ್ತು ಏಕವಚನಗಳು ದ್ವಿತ್ವ ಮತ್ತು ಏಕತ್ವ ಎಂಬ ಅರ್ಥವನ್ನು ಹೊಂದಿವೆ ಎಂದು ಅರ್ಥ. ಇಲ್ಲಿ ದ್ವಿಶಬ್ದ ಮತ್ತು ಏಕ ಶಬ್ದಗಳು ದ್ವಿತ್ವ ಮತ್ತು ಏಕತ್ವ ಎಂಬ ಅರ್ಥವುಳ್ಳದ್ದಾಗಿ ಭಾವಪ್ರಧಾನವಾಗಿರುವಂತೆ ಉಪಸೃಪ್ಯ ಶಬ್ದವೂ ಭಾವಪ್ರಧಾನವಾಗಿ ಉಪಸೃಪ್ಯತ್ವ ಎಂಬ ಅರ್ಥವನ್ನು ಕೊಡುತ್ತದೆ.

2 ಉಪಸೃಪ್ಯ ಪದಕ್ಕೆ ಪ್ರಾಪ್ಯ ಎಂದಿಷ್ಟೇ ಅರ್ಥ ಹೇಳಿದರೆ 'ಮುಕ್ತರಿಂದ ಪ್ರಾಪ್ಯ ಎಂದು ಹೇಳಿರುವುದರಿಂದ ದ್ಯುಭ್ವಾದ್ಯಾಯತನನು ಬ್ರಹ್ಮ' ಎಂದು ಸೂತ್ರಾರ್ಥವಾಗುವುದು. ಆದರೆ ಮುಕ್ತರಿಂದ ಪ್ರಾಪ್ಯವಾದ ಅರ್ಚಿರಾದಿ ಮಾರ್ಗಗಳು ಬ್ರಹ್ಮವಲ್ಲ. ಆದ್ದರಿಂದ ಉಪಸೃಪ್ಯ ಎಂಬ ಪದಕ್ಕೆ ಮೇಲಿನ ಅರ್ಥವನ್ನು ಹೇಳಬೇಕು. ಅರ್ಚಿರಾದಿ ಮಾರ್ಗಗಳನ್ನು ಪಡೆದ ಮೇಲೂ ಪ್ರಾಪ್ಯವಾದ ಬ್ರಹ್ಮ ಇರುವುದರಿಂದ ಅವು ಪ್ರಾಪ್ಯಾಂತರ ಶೂನ್ಯವಲ್ಲ. ಬ್ರಹ್ಮಪ್ರಾಪ್ತಿಯಾದ ನಂತರ ಪ್ರಾಪ್ಯವಾದ ಇನ್ನೊಂದಿಲ್ಲವಾದ್ದರಿಂದ ಬ್ರಹ್ಮವೊಂದೇ ಮೇಲಿನ ಅರ್ಥದಲ್ಲಿ ಉಪಸೃಪ್ಯವೆಂದು ಭಾವ.

रुद्रप्रकृती किं न स्याताम् । "रुद्रो वा व लोकाधारः भूतं च भवच्च भविष्यच्च" इत्यदेः । अत आह—

॥ ॐ नानुमानमतच्छब्दात् ॐ ॥ १-३-३

द्युभ्वाद्यायतनमित्यस्ति । अनुमीयत इत्यनुमानशब्देन वा अनुमानशब्दाच्छैषिकेऽणि कृते अनुमानशब्देन वा अनुमानप्रधान-पाशुपतसांख्यसिद्धरुद्रप्रधाने ग्राह्ये। रुद्रः प्रधानं च न द्युभ्वाद्यायतनम्।

---

'ರುದ್ರೋ ವಾ ವ ಲೋಕಾಧಾರಃ' 'ಭೂತಂ ಚ ಭವಚ್ಚ ಭವಿಷ್ಯಚ್ಚ' ಇತ್ಯಾದಿ ಪ್ರಮಾಣಗಳಿಂದ ರುದ್ರ ಮತ್ತು ಪ್ರಕೃತಿಗಳು ದ್ಯುಭ್ವಾತ್ಯಾಯತನರು ಏಕಾಗಬಾರದೆಂಬ ಆಕ್ಷೇಪಕ್ಕೆ ಉತ್ತರ—

ಓಂ ನಾನುಮಾನಮತಚ್ಛಬ್ದಾತ್ ಓಂ (೧-೩-೩)

'ದ್ಯುಭ್ವಾದ್ಯಾಯತನಂ' ಎಂಬ ಪದವನ್ನು ಅನುವೃತ್ತಿಮಾಡಿಕೊಳ್ಳಬೇಕು.

**'ಅನುಮಾನ' ಪದದ ಅರ್ಥ**

'ಅನುಮಾನದಿಂದ ಸಾಧಿಸಲ್ಪಡುವುದು' ಎಂಬ ಅರ್ಥವುಳ್ಳ 'ಅನುಮಾನ' ಶಬ್ದದಿಂದಾಗಲೀ, ಅಥವಾ [1]ಅನುಮಾನ ಶಬ್ದದ ಮುಂದೆ ಶೈಷಿಕ ಅಣ್ ಪ್ರತ್ಯಯ ವನ್ನು ಸೇರಿಸಿದಾಗ ನಿಷ್ಪನ್ನವಾಗುವ 'ಆನುಮಾನ' ಶಬ್ದದಿಂದಾಗಲೀ ಅನುಮಾನ ವನ್ನೇ ಪ್ರಧಾನವನ್ನಾಗಿ ಭಾವಿಸುವ ಪಾಶುಪತ ಮತ್ತು ಸಾಂಖ್ಯ ಮತಗಳಿಂದ ಸಿದ್ಧ ವಾಗುವ ರುದ್ರ-ಪ್ರಧಾನರನ್ನು ಗ್ರಹಿಸಬೇಕು.

**ಸೂತ್ರಾರ್ಥ**

ರುದ್ರ-ಪ್ರಧಾನರು ದ್ಯುಭ್ವಾದ್ಯಾಯತನರಲ್ಲ. [2]ಅತಚ್ಛಬ್ದಾತ್- ತಯೋಃ— ರುದ್ರ-ಪ್ರಕೃತಿಗಳಿಗೆ ಸಂಬಂಧಿಸಿದ [3]'ಭಸ್ಮಧರ', 'ಉಗ್ರತ್ವ', 'ತ್ರಿಗುಣತ್ವ'

---

1 ತಸ್ಯೇದಂ (ಪಾ.ಸೂ. ೪-೩-೧೨೦) ಎಂಬ ಸೂತ್ರದಿಂದ ಅನುಮಾನ ಶಬ್ದಕ್ಕೆ ಅಣ್ ಪ್ರತ್ಯಯ ಸೇರಿಸಿದಾಗ 'ಆನುಮಾನ' ಎಂದು ರೂಪವಾಗುತ್ತದೆ. 'ಅನುಮಾನಸಂಬಂಧಿ' ಎಂಬ ಅರ್ಥ ದೊರಕುತ್ತದೆ. ಅನುಮಾನಪ್ರಧಾನವಾದ ಪಾಶುಪತ-ಸಾಂಖ್ಯಮತಸಿದ್ಧತ್ವವೇ ರುದ್ರ ಪ್ರಕೃತಿಗಳಿಗೆ ಅನುಮಾನದ ಸಂಬಂಧವೆಂದು ಭಾವ.

2. ತಯೋಃ ಶಬ್ದಾನಾಂ ಅಭಾವಾತ್ ಎಂಬ ವಿಗ್ರಹ ಇಲ್ಲಿ ವಿವಕ್ಷಿತ.

3 ಭಸ್ಮಧರ ಎನ್ನುವುದು ನಾಮಾತ್ಮಕ ಶಬ್ದ. ಉಗ್ರತ್ವ ಇತ್ಯಾದಿಗಳು ಲಿಂಗಾತ್ಮಕ ಶಬ್ದಗಳು.

अतच्छब्दात् । तयोः रुद्रप्रकृत्योर्भस्मधरोग्रत्वत्रिगुणत्वादिशब्दानामभावादित्यर्थः । रुद्रपिनाक्यादिशब्दानां "अन्यनाम्नां गतिर्विष्णुः" इत्यादेर्न तच्छब्दत्वमिति भावः । अतद्धर्मेतिवदयं निर्देशो बोध्यः । रुद्रप्रकृत्योर्द्वयोरुपादानाय वा टीकोक्तरीत्या पूर्वपक्षयुक्तिसूचनाय वा तदागमानाममानत्वसूचनाय वा वक्ष्यमाणदिशा वृत्त्यन्तरसूचनाय वा नानुमानमित्युक्तिः ।

---

ಮೊದಲಾದ ಶಬ್ದಗಳು ಇಲ್ಲದಿರುವುದರಿಂದ ಎಂದು ಅರ್ಥ. [1]'ರುದ್ರ', 'ಪಿನಾಕೀ' ಮೊದಲಾದ ಶಬ್ದಗಳು 'ಅನ್ಯನಾಮ್ನಾಂ ಗತಿರ್ವಿಷ್ಣುಃ' ಇತ್ಯಾದಿ ಪ್ರಮಾಣಾನುಸಾರ ರುದ್ರನ ಶಬ್ದಗಳಲ್ಲವೆಂದು ಭಾವ. [2]'ಅತದ್ಧರ್ಮ' ಎಂಬಂತೆ ಈ ಶಬ್ದದ ಪ್ರಯೋಗವೆಂದು ತಿಳಿಯಬೇಕು.

### 'ನ ರುದ್ರಪ್ರಧಾನೇ' ಎಂದು ಹೇಳುವ ಬದಲು 'ನಾನುಮಾನಮ್' ಎಂದು ಸೂತ್ರದಲ್ಲಿ ಹೇಳಿರುವುದರ ಉದ್ದೇಶ

[3]ರುದ್ರಪ್ರಧಾನರಿಬ್ಬರನ್ನೂ ಸಂಗ್ರಹಿಸುವುದಕ್ಕಾಗಿ ಅಥವಾ [4]ತತ್ತ್ವಪ್ರಕಾಶಿಕೆಯಲ್ಲಿ ಹೇಳಿದಂತೆ ಪೂರ್ವಪಕ್ಷ ಯುಕ್ತಿಯನ್ನು ಸೂಚಿಸುವುದಕ್ಕಾಗಿ ಅಥವಾ

---

1. 'ನ ತು ನಾರಾಯಣಾದೀನಾಂ ನಾಮ್ನಾಮನ್ಯತ್ರ ಸಂಭವಃ |
ಅನ್ಯನಾಮ್ನಾಂ ಗತಿರ್ವಿಷ್ಣುಃ ಏಕ ಏವ ಪ್ರಕೀರ್ತಿತಃ ||'

ಎಂಬ ವಾಮನಪುರಾಣದ ವಾಕ್ಯದಂತೆ ನಾರಾಯಣ ಮೊದಲಾದ ಶಬ್ದಗಳು ಇತರ ವಾಚಕಗಳಲ್ಲ. ಆದರೆ ರುದ್ರ ಪಿನಾಕೀ ಮೊದಲಾದ ಇತರ ದೇವತಾವಾಚಕಗಳೆಂದು ಪ್ರಸಿದ್ಧವಾದ ಶಬ್ದಗಳಿಗೆ ವಿಷ್ಣುವೇ ಮುಖ್ಯಾರ್ಥನಾಗಿದ್ದಾನೆ.

2. ಅತದ್ಧರ್ಮಾಭಿಲಾಪಾತ್ (ಬ್ರ. ಸೂ. ೧-೨-೧೯) ಎಂಬ ಸಮಾಸವನ್ನು ಸಮರ್ಥಿಸಿದಂತೆ 'ಅತಚ್ಛಬ್ದಾತ್' ಎಂಬ ಸಮಾಸವನ್ನೂ ಸಮರ್ಥಿಸಬಹುದೆಂದು ಅಭಿಪ್ರಾಯ.

3. ಅನುಮಾನ ಶಬ್ದಕ್ಕೆ 'ಯುಕ್ತಿಗೆ ಮಾತ್ರ ಪ್ರಾಧಾನ್ಯವನ್ನು ನೀಡುವ ಪಾಶುಪತ, ಸಾಂಖ್ಯ ಮೊದಲಾದ ಆಗಮಗಳಲ್ಲಿ ಸರ್ವಾಶ್ರಯನೆಂದು ಹೇಳಲ್ಪಟ್ಟಿರುವ ರುದ್ರ ಅಥವಾ ಪ್ರಕೃತಿ' ಎಂದು ಅರ್ಥ. ಹೀಗೆ ಒಂದೇ ಪದದಿಂದ ಇಬ್ಬರನ್ನು ಸಂಗ್ರಹಿಸುವುದಕ್ಕಾಗಿ ರುದ್ರ ಅಥವಾ ಪ್ರಧಾನ ಎಂಬ ಪದಗಳ ಬದಲಾಗಿ 'ಅನುಮಾನ' ಪದವನ್ನು ಪ್ರಯೋಗಿಸಲಾಗಿದೆ ಎಂದು ಭಾವ.

4. 'ರುದ್ರ ಅಥವಾ ಪ್ರಧಾನವು ಸರ್ವಾಶ್ರಯವಾಗಿದೆ ಎಂದು ಹೇಳುವ ವಾಕ್ಯಗಳು ಪ್ರಮಾಣಗಳು, ವಾಕ್ಯವಾದ್ದರಿಂದ, ದೃಷ್ಟಫಲವಿಧಾಯಕವಾದ ಪಾಶುಪತಾದ್ಯಾಗಮದ ಇತರ ವಾಕ್ಯಗಳಂತೆ' ಎಂಬುದೂ ಪೂರ್ವಪಕ್ಷಿಯು ಹೇಳುವ ಯುಕ್ತಿಗಳಲ್ಲಿ ಒಂದು. 'ಅನುಮಾನಕ್ಕೆ ಪ್ರಾಧಾನ್ಯ ಕೊಡುವ ಪಾಶುಪತಾದ್ಯಾಗಮಸಿದ್ಧ ರುದ್ರ-ಪ್ರಕೃತಿಗಳು' ಎಂಬರ್ಥದ 'ಅನುಮಾನ' ಶಬ್ದವು ಮೇಲಿನ ಯುಕ್ತಿಯನ್ನು ಸೂಚಿಸುತ್ತದೆಂದು ಭಾವ.

जीववायू किमत्र वाच्यौ न स्यातां जायमान इति लिङ्गात् "वायुना वै गौतम" इत्यादेः। अत आह—

## ॥ ॐ प्राणभृच्च ॐ ॥ १-३-४

चशब्दान्नेति स्वशब्दादिहेतवश्चानुकृष्यन्ते। वायुश्च समुच्चीयते। आत्मशब्दमुक्तोपसृप्यत्वातच्छब्देभ्यो जीववायू न द्युभ्वाद्यायतनमित्यर्थः। जायमानादिशब्दोऽभिव्यक्त्यादिना विष्णौ युक्त इति

---

[1]ಪಾಶುಪತಾದ್ಯಾಗಮಗಳ ಅಪ್ರಾಮಾಣ್ಯವನ್ನು ಸೂಚಿಸುವುದಕ್ಕಾಗಿ ಅಥವಾ ಮುಂದೆ ಹೇಳುವಂತೆ ವ್ಯಾಖ್ಯಾನಾಂತರವನ್ನು[2] ಸೂಚಿಸುವುದಕ್ಕಾಗಿ 'ನಾನುಮಾನಮ್' ಎಂದು ಹೇಳಲಾಗಿದೆ.

[3]'ಜಾಯಮಾನತ್ವ' ಲಿಂಗವಿರುವುದರಿಂದ ಮತ್ತು 'ವಾಯುನಾ[4] ವೈ ಗೌತಮ' ಇತ್ಯಾದಿ ಶ್ರುತಿಯಿರುವುದರಿಂದ ಜೀವ-ವಾಯುಗಳು ಇಲ್ಲಿ ದ್ಯುಭ್ವಾದ್ಯಾಯತನರೆಂದು ಹೇಳಲ್ಪಟ್ಟಿದ್ದಾರೆ ಎಂದೇಕಾಗಬಾರದು ಎಂಬ ಆಕ್ಷೇಪಕ್ಕೆ ಸಮಾಧಾನ—

## ಓಂ ಪ್ರಾಣಭೃಚ್ಚ ಓಂ (೧-೩-೪)

**ಸೂತ್ರಾರ್ಥ**

'ಚ' ಶಬ್ದದಿಂದ, 'ನ' ಎಂಬ ಪದ ಮತ್ತು 'ಸ್ವಶಬ್ದ' ಮೊದಲಾದ ಹೇತುಗಳು ಅನುವೃತ್ತಿಗೊಳ್ಳುತ್ತವೆ. ಮತ್ತು ವಾಯುವನ್ನೂ ಸೇರಿಸಿಕೊಳ್ಳಬೇಕು ಆತ್ಮಶಬ್ದ, ಮುಕ್ತೋಪಸೃಪ್ಯತ್ವ ಮತ್ತು ಜೀವ, ವಾಯುಗಳಲ್ಲಿ ಪ್ರಸಿದ್ಧವಾದ ಶಬ್ದವಿಲ್ಲದಿರುವುದು ಈ ಕಾರಣಗಳಿಂದ ಜೀವ ಮತ್ತು ವಾಯುಗಳು ದ್ಯುಭ್ವಾದ್ಯಾಯತನರಲ್ಲ ಎಂದು

---

1. ಅನುಮಾನಮಾತ್ರಮೂಲವಾದ ಪಾಶುಪತಾದ್ಯಾಗಮಗಳು ಅಪೌರುಷೇಯ ವೇದಮೂಲವಾದ ಪಾಂಚರಾತ್ರಾದ್ಯಾಗಮಗಳಂತೆ ಪ್ರಮಾಣವಲ್ಲವೆಂದು ಸೂಚಿಸಲೆಂದು ಭಾವ.

2. 'ನಾನುಮಾನಮತಚ್ಛಬ್ದಾತ್' ಇತ್ಯನುವೃತ್ತ್ಯಾ ಅನುಮಾನಂ ಭೇದಮಿಥ್ಯಾತ್ವೇ ನ ಮಾನಂ' ಎಂದು ಈ ಅಧಿಕರಣದ ಅಂತ್ಯದಲ್ಲಿ ಹೇಳುವ ವ್ಯಾಖ್ಯಾನಾಂತರ.

3. 'ಸ ಏಷೋಽಂತಶ್ಚರತೇ ಬಹುಧಾ ಜಾಯಮಾನಃ' (ಮುಂ. ೩—೩—೬) ಎಂಬಲ್ಲಿ ದ್ಯುಭ್ವಾದ್ಯಾಯತನನಿಗೆ ಜಾಯಮಾನತ್ವವನ್ನು ಹೇಳಿದೆ. ಜಾಯಮಾನತ್ವವು ಜೀವಲಿಂಗವೆಂದು ಪ್ರಸಿದ್ಧವೆಂದು ಪೂರ್ವಪಕ್ಷಿಯ ಅಭಿಪ್ರಾಯ.

4. 'ವಾಯುನಾ ವೈ ಗೌತಮ ಸೂತ್ರೇಣಾಯಂ ಲೋಕಃ ಪರಶ್ಚ ಲೋಕಃ ಸರ್ವಾಣಿ ಭೂತಾನಿ ಸಂದೃಬ್ಧಾನಿ ಭವಂತಿ' (ಬೃ. ೫—೭—೨) ಎಂದು ಶ್ರುತ್ಯಂತರದಲ್ಲಿ ವಾಯುವೇ ದ್ಯುಭ್ವಾದ್ಯಾಯತನನೆಂದು ಹೇಳಿದೆ. ಆದ್ದರಿಂದ ಮುಂಡಕದಲ್ಲಿ ಹೇಳಿರುವ ದ್ಯುಭ್ವಾದ್ಯಾಯತನನೂ ವಾಯುವೆಂದು ಪೂರ್ವಪಕ್ಷ.

भावः । जीव इति वाच्ये प्राणभृदित्युक्तिः सह प्राणैरित्युक्तप्राणभृत्त्वं तस्य युक्तमिति पूर्वपक्षयुक्तिसूचनाय । योगविभाग उत्तरार्थः । व्याकरणे रञ्जेश्चेत्यादिवत् । अत्र श्रुतौ जीवमात्रलिङ्गसत्त्वेन तदैक्यस्यैवाग्रे निरासात् । अत एवास्य स्वशब्देनोक्तिः ।

---

ಅರ್ಥ. [1]'ಜಾಯಮಾನ' ಮೊದಲಾದ ಶಬ್ದಗಳು ಅಭಿವ್ಯಕ್ತಿ ಮೊದಲಾದವುಗಳನ್ನು ಹೇಳುವುದರಿಂದ ವಿಷ್ಣುವಿನಲ್ಲಿ ಯುಕ್ತವೆಂದು ಭಾವ.

## ಜೀವಶಬ್ದದ ಬದಲಾಗಿ 'ಪ್ರಾಣಭೃತ್' ಶಬ್ದಪ್ರಯೋಗದ ಮತ್ತು ಪ್ರತ್ಯೇಕ ಸೂತ್ರರಚನೆಯ ಉದ್ದೇಶ

'ಜೀವಃ' ಎಂದು ಹೇಳಬಹುದಾಗಿದ್ದಾಗ 'ಪ್ರಾಣಭೃತ್' ಎಂದು ಹೇಳಿರುವುದು 'ಸಹ ಪ್ರಾಣೈಶ್ಚ ಸರ್ವೈಃ' ಎಂಬಲ್ಲಿ ಹೇಳಿರುವ ಪ್ರಾಣಾಧಾರತ್ವವು ಜೀವನಿಗೇ ಯುಕ್ತವಾಗಿದೆ ಎಂಬ ಪೂರ್ವಪಕ್ಷಯುಕ್ತಿಯನ್ನು ಸೂಚಿಸುವುದಕ್ಕಾಗಿ. ವ್ಯಾಕರಣದಲ್ಲಿ 'ರಂಜೇಶ್ಚ' ಎಂಬ ಸೂತ್ರವನ್ನು ಉತ್ತರಸೂತ್ರದಲ್ಲಿ ಅನುವೃತ್ತಿಗಾಗಿ ಪ್ರತ್ಯೇಕಗೊಳಿಸಿರುವಂತೆ ಇಲ್ಲೂ 'ಪ್ರಾಣಭೃಚ್ಚ' ಎಂಬ ಸೂತ್ರವನ್ನು ಉತ್ತರಸೂತ್ರಕ್ಕೆ ಅನುವೃತ್ತಿಮಾಡಿಕೊಳ್ಳುವ ಸಲುವಾಗಿ ಪ್ರತ್ಯೇಕಗೊಳಿಸಲಾಗಿದೆ.[2] ಏಕೆಂದರೆ, 'ಯಸ್ಮಿನ್ ದ್ಯೌಃ' ಎಂಬ ಶ್ರುತಿಯಲ್ಲಿ ಕೇವಲ ಜೀವನ ಲಿಂಗವಿರುವುದರಿಂದ ಅವನ ಐಕ್ಯವನ್ನೇ ಮುಂದೆ ನಿರಾಕರಿಸಲಾಗುವುದು. ಆದ್ದರಿಂದಲೇ ಜೀವನಲ್ಲಿ ಪ್ರಸಿದ್ಧವಾಗಿರುವ 'ಪ್ರಾಣಭೃತ್' ಶಬ್ದವನ್ನು ಇಲ್ಲಿ ಹೇಳಲಾಗಿದೆ.

---

1. ಜನೀ ಪ್ರಾದುರ್ಭಾವೇ ಎಂಬ ಧಾತುವಿನಿಂದ ನಿಷ್ಪನ್ನವಾಗುವ ಜಾಯಮಾನ ಶಬ್ದಕ್ಕೆ ಪ್ರಾದುರ್ಭಾವವನ್ನು ಪಡೆಯುವವನು ಎಂಬ ಅರ್ಥವು ಮುಖ್ಯವೇ ಆಗಿದೆ.

2. ದಂಶಸಂಜಸ್ವಂಜಾಂ ಶಪಿ (ಪಾ.ಸೂ. ೬—೪—೨೫) ರಂಜೇಶ್ಚ (ಪಾ.ಸೂ. ೬—೪—೨೬) ಮತ್ತು ಘಞಿ ಚ ಭಾವಕರಣಯೋಃ (ಪಾ.ಸೂ. ೬—೪—೨೭) ಈ ಮೂರು ವ್ಯಾಕರಣ ಸೂತ್ರಗಳಲ್ಲಿ ರಂಜೇಶ್ಚ ಎಂಬ ಸೂತ್ರವನ್ನು ಹಿಂದಿನ ಸೂತ್ರಕ್ಕೇ ಸೇರಿಸಬಹುದಾಗಿತ್ತು. ಆದರೆ ಘಞಿ ಚ ಭಾವಕರಣಯೋಃ ಎಂಬ ಮುಂದಿನ ಸೂತ್ರಕ್ಕೆ ರಂಜೇಃ ಎಂಬ ಪದ ಮಾತ್ರ ಅನುವೃತ್ತಿಗೊಳ್ಳಬೇಕಾದ್ದರಿಂದ ಹಿಂದಿನ ಸೂತ್ರಕ್ಕೆ ಸೇರಿಸದೆ ರಂಜೇಃ ಎಂದು ಪ್ರತ್ಯೇಕ ಸೂತ್ರವನ್ನು ರಚಿಸಲಾಗಿದೆ. ಅದರಂತೆ 'ನಾನುಮಾನಮತಚ್ಛಬ್ದಾತ್ ಪ್ರಾಣಭೃಚ್ಚ' ಎಂದು ಒಂದೇ ಸೂತ್ರವನ್ನು ರಚಿಸಲು ಸಾಧ್ಯವಿದ್ದರೂ 'ಭೇದವ್ಯಪದೇಶಾತ್' ಎಂಬ ಮುಂದಿನ ಸೂತ್ರಕ್ಕೆ 'ಪ್ರಾಣಭೃತ್' ಶಬ್ದವನ್ನು ಅನುವೃತ್ತಿಮಾಡಿಕೊಳ್ಳುವುದಕ್ಕಾಗಿ ಪ್ರತ್ಯೇಕ ಸೂತ್ರವನ್ನಾಗಿ ರಚಿಸಲಾಗಿದೆ. ಒಂದೇ ಸೂತ್ರವಾಗಿದ್ದಲ್ಲಿ ಪ್ರಾಣಭೃತ್ ಶಬ್ದದಂತೆ ಅನುಮಾನ ಶಬ್ದಕ್ಕೂ ಅನುವೃತ್ತಿ ಇದೆ ಎಂಬ ಭಾವನೆಗೆ ಅವಕಾಶವಾಗುತ್ತಿತ್ತು. ಪ್ರಕೃತ ಶ್ರುತಿಯಲ್ಲಿ ಜೀವಲಿಂಗ ಮಾತ್ರ ಇರುವುದರಿಂದ ದ್ಯುಭ್ವಾದ್ಯಾಯತನನು ಜೀವಾಭಿನ್ನನಾಗಿದ್ದಾನೆ ಎಂಬ ಶಂಕೆಗೆ ಮಾತ್ರ ಅವಕಾಶವಿರುವುದರಿಂದ ಪ್ರಾಣಭೃತ್ ಶಬ್ದದ ಅನುವೃತ್ತಿ ಮಾತ್ರ ಮಾಡಿಕೊಂಡು ಜೀವಾಭೇದವನ್ನು ನಿರಾಕರಿಸಿದರೆ ಸಾಕು.

ननूभयज्ञापकाबाधेन जीवब्रह्माभेदोऽस्त्वित्यत आह—

॥ ॐ भेदव्यपदेशात् ॐ ॥ १-३-५

"जुष्टं यदा पश्यत्यन्यमीशम्" इतीहैव जीवब्रह्मभेदव्यपदेशान्नैक्यमित्यर्थः ।

ईशशब्दं ब्रह्मेति कुतः ? येन जीवब्रह्मभेदोक्तिः स्यादित्यत आह—

॥ ॐ प्रकरणात् ॐ ॥ १-३-६

"द्वे विद्ये वेदितव्ये" इति परविद्याविषयवस्तुन आरभ्याधीतत्वेन ब्रह्मप्रकरणादीशशब्दार्थो ब्रह्मेत्यर्थः ॥

---

ಜೀವಜ್ಞಾಪಕವಾದ ಲಿಂಗಗಳು ಮತ್ತು ಬ್ರಹ್ಮಜ್ಞಾಪಕಲಿಂಗಗಳು—ಇವೆರಡೂ (ಪ್ರಕೃತ ಶ್ರುತಿಯಲ್ಲಿ) ಅಬಾಧಿತವಾಗಿರುವುದರಿಂದ ಜೀವಬ್ರಹ್ಮಾಭೇದವನ್ನು ಅಂಗೀಕರಿಸೋಣ ಎಂಬ ಆಶಂಕೆಗೆ ಉತ್ತರವನ್ನು ನೀಡುವ ಸೂತ್ರ—

ಓಂ ಭೇದವ್ಯಪದೇಶಾತ್ ಓಂ (೧--೩--೫)

**ಸೂತ್ರಾರ್ಥ**

[1] 'ಜುಷ್ಟಂ ಯದಾ ಪಶ್ಯತ್ಯನ್ಯಮೀಶಮ್' (ಮುಂ. ೩-೧ ೨) ಎಂದು ಇದೇ ಉಪನಿಷತ್ತಿನಲ್ಲಿ ಜೀವಬ್ರಹ್ಮಭೇದವನ್ನು ಹೇಳಿರುವುದರಿಂದ ಜೀವಬ್ರಹ್ಮೈಕ್ಯವಿಲ್ಲವೆಂದು ಅರ್ಥ.

(ಪ್ರಕೃತ ಶ್ರುತಿಯಲ್ಲಿ) ಈಶಶಬ್ದವಾಚ್ಯನು ಬ್ರಹ್ಮನೇ ಎನ್ನಲು ಆಧಾರವೇನು ? ಬ್ರಹ್ಮನು ಈಶಶಬ್ದವಾಚ್ಯನೆಂದಾದಲ್ಲಿ ಮಾತ್ರ ಜೀವಬ್ರಹ್ಮಭೇದವನ್ನು ಹೇಳಿದಂತಾದೀತು ಎಂಬ ಪ್ರಶ್ನೆಗೆ ಸಮಾಧಾನವನ್ನು ಹೇಳುವ ಸೂತ್ರ—

ಓಂ ಪ್ರಕರಣಾತ್ ಓಂ (೧-೩-೬)

---

1. ಜುಷ್ಟಂ ಯದಾ ಪಶ್ಯತ್ಯನ್ಯಮೀಶಮಸ್ಯ ಮಹಿಮಾನಮಿತಿ ವೀತಶೋಕಃ—ಸರ್ವಸೇವ್ಯನಾದ ಭಗವಂತನನ್ನು ಜೀವಭಿನ್ನನೆಂದೂ, ಸಕಲಕರ್ಮಾರಾಧ್ಯತ್ವ, ಜಗತ್ಸೃಷ್ಟ್ಯಾದಿ ಮೊದಲಾದ ಮಹಿಮೋಪೇತನೆಂದೂ ತಿಳಿಯುವ ಜೀವನು ಶೋಕಮುಕ್ತನಾಗುತ್ತಾನೆಂದು ಶ್ರುತ್ಯರ್ಥ.

न केवलं श्रुतिबलाद्भेदः, लिङ्गादपीत्याह—

॥ ॐ स्थित्यदनाभ्यां च ॐ ॥१-३-७

नैक्यमित्यस्ति । स्थितिः कर्मफलोपजीवनं विनाऽवस्थानम् । अदनं तदुपजीवनम् । ताभ्यां च जीवब्रह्मणोर्नैक्यमित्यर्थः । "अन्यः

---

**ಸೂತ್ರಾರ್ಥ**

[1] 'ದ್ವೇ ವಿದ್ಯೇ ವೇದಿತವ್ಯೇ' (ಮುಂ. ೧-೧-೪) ಎಂಬುದಾಗಿ ಪರವಿದ್ಯೆಗೆ ವಿಷಯವಾದ ವಸ್ತುವನ್ನೇ ಉಪಕ್ರಮದಲ್ಲಿ ಹೇಳಿ ಮುಂದೆ ವಿಷಯನಿರೂಪಣೆ ಇರುವುದರಿಂದ ಬ್ರಹ್ಮಪ್ರಕರಣವೆಂದಾಗುವುದು. ಆದ್ದರಿಂದ ಈಶಶಬ್ದವಾಚ್ಯನು ಬ್ರಹ್ಮನೆಂದರ್ಥ.

ಶ್ರುತಿಬಲದಿಂದ ಮಾತ್ರವಲ್ಲದೇ ಲಿಂಗದಿಂದಲೂ ಭೇದವು ಸಿದ್ಧಿಸುವುದೆಂದು ಹೇಳುತ್ತಾರೆ—

ಓಂ ಸ್ಥಿತ್ಯದನಾಭ್ಯಾಂ ಚ ಓಂ (೧-೩-೭)

**ಸೂತ್ರಾರ್ಥ**

'ನ ಐಕ್ಯಂ' ಎಂಬ ಪದಗಳು ಅಧ್ಯಾಹಾರಗೊಳ್ಳುತ್ತವೆ. ಸ್ಥಿತಿ ಎಂದರೆ ಕರ್ಮಫಲವನ್ನು ಉಪಜೀವಿಸದೇ ಇರುವುದು. ಅದನ ಎಂದರೆ ಅದನ್ನು ಉಪಜೀವಿಸಿ ಕೊಂಡಿರುವುದು. ಅವುಗಳಿಂದಾಗಿ ಜೀವಬ್ರಹ್ಮರಿಗೆ ಅಭೇದವಿಲ್ಲವೆಂದರ್ಥ. [2] 'ಅನ್ಯಃ

---

1. ಮುಂಡಕೋಪನಿಷತ್ತಿನ ಆರಂಭದಲ್ಲಿ 'ದ್ವೇ ವಿದ್ಯೇ ವೇದಿತವ್ಯೇ' ಇತ್ಯಾದಿ ವಾಕ್ಯದಲ್ಲಿ ಪರವಿದ್ಯಾವಿಷಯನಾದ ಪರಬ್ರಹ್ಮನ ಪ್ರಸ್ತಾಪವಿದೆ. ಇದರಿಂದ ಇಡೀ ಉಪನಿಷತ್ತಿಗೆ ಪರಬ್ರಹ್ಮನಲ್ಲಿ ತಾತ್ಪರ್ಯವೆಂದು ನಿಶ್ಚಿತವಾಗುವುದು. ಹೀಗೆ ಬ್ರಹ್ಮಪ್ರಕರಣದಲ್ಲಿರುವ 'ಜುಷ್ಟಂ ಯದಾ ಪಶ್ಯತ್ಯನ್ಯಮೀಶಮ್' ಎಂಬ ವಾಕ್ಯದಲ್ಲಿ ಪ್ರಸಕ್ತನಾಗಿರುವ ಈಶನು ಬ್ರಹ್ಮನೇ ಎಂದು ಸಿದ್ಧವಾಗುವುದೆಂದು ಭಾವ.

2 ದ್ವಾ ಸುಪರ್ಣಾ ಸಯುಜಾ ಸಖಾಯಾ ಸಮಾನಂ ವೃಕ್ಷಂ ಪರಿಷಸ್ವಜಾತೇ ।
ತಯೋರನ್ಯಃ ಪಿಪ್ಪಲಂ ಸ್ವಾದ್ವತ್ತ್ಯನಶ್ನನ್ನನ್ಯೋ ಅಭಿಚಾಕಶೀತಿ ॥

ಎಂದು ಶ್ರುತಿ. ಸದಾ ವಿಯೋಗರಹಿತರೂ, ಸಖರೂ ಆದ ಜೀವೇಶರೆಂಬ ಎರಡು ಪಕ್ಷಿಗಳು ದೇಹಾಖ್ಯ ಅಶ್ವತ್ಥವೃಕ್ಷವನ್ನು ಆಲಿಂಗಿಸಿಕೊಂಡಿವೆ. ಆ ಪಕ್ಷಿಗಳಲ್ಲಿ ಒಂದಾದ ಜೀವನು ದೇಹಜನಿತವಾದ ಕರ್ಮಫಲವನ್ನು ಸ್ವಾದುವಲ್ಲದಿದ್ದರೂ ಸ್ವಾದುವೆಂದು ಭ್ರಮಿಸಿ ಭುಜಿಸುತ್ತಾನೆ. ಇನ್ನೊಂದು ಪಕ್ಷಿಯಾದ ಈಶನು ಕರ್ಮಫಲವನ್ನು ಭುಜಿಸದೆ ಸರ್ವತ್ರ ಪ್ರಕಾಶಮಾನನಾಗಿದ್ದಾನೆ ಎಂದು ಭಾವ.

पिप्पलं स्वाद्वत्त्यनश्नन्नन्यो अभिचाकशीति" इति जीवेशयोरदन-तद्रहितस्थित्युक्तेरिति भावः। श्रुतावदनस्यादित्वेन अदनस्थितिभ्यामिति वाच्ये स्थितेरीशसम्बन्धित्वेनाभ्यर्हितत्वादल्पाक्षरत्वाच्च व्यत्यासः। अत्र नानुमानमतच्छब्दादित्यनुवृत्त्या अनुमानं भेदमिथ्यात्वे न मानम्। तद्विरुद्धमतत् भेदसत्यत्वम्। अतच्छब्दात् भेदसत्यत्वबोधकशब्दात्। अनुमानमूलभूतशब्दाभावाच्चेति वृत्त्यन्तरमुक्त्वा भेदमिथ्यात्वं निरसनीयमिति वदन्ति ॥ १ ॥

---

ಪಿಪ್ಪಲಂ ಸ್ವಾದ್ವತ್ತ್ಯನಶ್ನನ್ನನ್ಯೋ ಅಭಿಚಾಕಶೀತಿ' (ಮುಂ ೩-೧-೧) ಎಂಬುದಾಗಿ ಜೀವೇಶರಿಗೆ ಅದನ ಮತ್ತು ಅದನರಹಿತವಾದ ಸ್ಥಿತಿಯನ್ನು ಹೇಳಿರುವುದರಿಂದ ಎಂದು ಭಾವ.

## ಸೂತ್ರವು ಶ್ರುತಿಕ್ರಮವನ್ನು ಅನುಸರಿಸದಿರುವುದರ ಕಾರಣ

ಶ್ರುತಿಯಲ್ಲಿ ಅದನವನ್ನು ಮೊದಲು ಹೇಳಿರುವುದರಿಂದ 'ಅದನಸ್ಥಿತಿಭ್ಯಾಂ' ಎಂದು ಹೇಳಬೇಕಾಗಿದ್ದರೂ ಸ್ಥಿತಿಯು ಈಶನಿಗೆ ಸಂಬಂಧಿಸಿದ್ದು [1]ಶ್ರೇಷ್ಠವಾಗಿರುವುದರಿಂದ ಮತ್ತು ಸ್ಥಿತಿಶಬ್ದವು ಅಲ್ಪಾಕ್ಷರವಾಗಿರುವುದರಿಂದ ವ್ಯತ್ಯಾಸವಾಗಿ ಹೇಳಲಾಗಿದೆ.

## ಈ ಸೂತ್ರಕ್ಕೆ ವ್ಯಾಖ್ಯಾನಾಂತರ

'ನಾನುಮಾನಮತಚ್ಛಬ್ದಾತ್' ಎಂಬ ಸೂತ್ರವನ್ನು ಅನುವೃತ್ತಿಮಾಡಿ ಕೊಂಡು "ಅನುಮಾನವು ಭೇದಮಿಥ್ಯಾತ್ವದಲ್ಲಿ ಪ್ರಮಾಣವಲ್ಲ. 'ಅತತ್' ಎಂದರೆ ಭೇದಮಿಥ್ಯಾತ್ವಕ್ಕೆ ವಿರುದ್ಧವಾದ ಭೇದಸತ್ಯತ್ವ. 'ಅತಚ್ಛಬ್ದಾತ್'-ಭೇದಸತ್ಯತ್ವ ಬೋಧಕ ಶ್ರುತಿಯಿರುವುದರಿಂದ ಮತ್ತು ಅನುಮಾನಕ್ಕೆ ಮೂಲವಾದ ಶ್ರುತಿ ಇಲ್ಲದಿರುವುದರಿಂದ" ಎಂದು ವ್ಯಾಖ್ಯಾನಾಂತರವನ್ನು ಹೇಳಿ ಭೇದಮಿಥ್ಯಾತ್ವವನ್ನು ನಿರಾಕರಿಸಬೇಕು ಎಂದು ಹೇಳುತ್ತಾರೆ.

---

1. 'ಅಭ್ಯರ್ಹಿತಂ ಚ' ಎಂಬ ವಾರ್ತಿಕವು ಶ್ರೇಷ್ಠವಸ್ತುವಾಚಕವಾದ ಪದವು ದ್ವಂದ್ವಸಮಾಸದಲ್ಲಿ ಆದಿಯಲ್ಲಿರುತ್ತದೆ ಎಂದು ಹೇಳುತ್ತದೆ. ಅಲ್ಪಾಚ್‌ತರಂ ಪೂರ್ವಮ್ (ಪಾ.ಸೂ. ೨-೨-೩೪) ಎಂಬ ಸೂತ್ರವು ಅಲ್ಪಸ್ವರಾಕ್ಷರಗಳುಳ್ಳ ಪದವು ದ್ವಂದ್ವಸಮಾಸದಲ್ಲಿ ಪೂರ್ವಪದವಾಗಿರುತ್ತದೆಂದು ಹೇಳುತ್ತದೆ. ಈ ಎರಡೂ ನಿಯಮಗಳಿಗೆ ಅನುಸಾರವಾಗಿ 'ಸ್ಥಿತ್ಯದನಾಭ್ಯಾಂ' ಎಂಬ ದ್ವಂದ್ವದಲ್ಲಿ ಸ್ಥಿತಿಪದವು ಪೂರ್ವಪದವಾಗಿದೆಯೆಂದು ಭಾವ.

भूमाधिकरणम्—२

## ॥ ॐ भूमा सम्प्रसादादध्युपदेशात् ॐ ॥

१-३-८

अत्र तादृशभूमनाम समन्वीयते । "यो वै भूमा तत्सुखम्" इत्युक्तो भूमा तत्तु ब्रह्मैव । न तु प्राणः । कुतः? सम्प्रसादात् सम्यक् प्रसीदत्यनेनेति सम्प्रसादः पूर्णसुखम् । "तत्सुखम्" इति पूर्णसुखत्वाभिधानात् । अध्युपदेशात्, अधि अधिकत्वेन नामादीनां सर्वेषामुपरि तदुत्तमत्वेन व्यपदेशाच्चेत्यग्रेतनश्चकारोऽत्रानुकृष्यते ।

---

ಭೂಮಾಧಿಕರಣ—೨

## ಓಂ ಭೂಮಾ ಸಂಪ್ರಸಾದಾದಧ್ಯುಪದೇಶಾತ್ ಓಂ

(೧-೩-೮)

**ಅಧಿಕರಣದ ಉದ್ದೇಶ ಮತ್ತು ಸೂತ್ರಾರ್ಥ**

ಈ ಅಧಿಕರಣದಲ್ಲಿ ಉಭಯತ್ರ ಪ್ರಸಿದ್ಧವಾದ ಭೂಮ ಎಂಬ ನಾಮಾತ್ಮಕ ಶಬ್ದದ ಸಮನ್ವಯವು ಮಾಡಲ್ಪಡುತ್ತದೆ. [1] 'ಯೋ ವೈ ಭೂಮಾ ತತ್ಸುಖಂ' (ಛಾಂ. ೭-೨೩) ಎಂಬಲ್ಲಿ ಹೇಳಲ್ಪಟ್ಟಿರುವ ಭೂಮನು, ತತ್ತು-ಬ್ರಹ್ಮನೇ, ಪ್ರಾಣನಲ್ಲ. ಏಕೆಂದರೆ, ಸಂಪ್ರಸಾದಾತ್-ಯಾವುದರಿಂದ ಸಮ್ಯಕ್ ಪ್ರಸನ್ನನಾಗುತ್ತಾನೋ ಅದು ಅಂದರೆ ಪೂರ್ಣಸುಖವು ಸಂಪ್ರಸಾದ. 'ತತ್ ಸುಖಂ' ಎಂದು ಪೂರ್ಣಸುಖತ್ವವನ್ನು ಹೇಳಿರುವುದರಿಂದ ಮತ್ತು ಅಧ್ಯುಪದೇಶಾತ್—ಅಧಿ-ಅಧಿಕವಾಗಿ, ನಾಮ ಮೊದಲಾದವರೆಲ್ಲರಿಗಿಂತಲೂ ಮುಂದೆ ಎಂದರೆ ಅವರೆಲ್ಲರಿಗಿಂತ ಉತ್ತಮನೆಂದು ಉಪದೇಶಿಸಿರುವುದರಿಂದಲೂ ಎಂದು ಅರ್ಥ. ಮುಂದಿನ ಸೂತ್ರದ ಚಕಾರವನ್ನು ಇಲ್ಲಿ ಸೇರಿಸಿಕೊಳ್ಳಬೇಕು.

---

1. ಛಾಂದೋಗ್ಯದ ಏಳನೆಯ ಅಧ್ಯಾಯದಲ್ಲಿ ನಾರದರ ಪ್ರಶ್ನೆಗೆ ಉತ್ತರವಾಗಿ ಸನತ್ಕುಮಾರರು ನಾಮ, ವಾಕ್, ಮನಸ್ ಇತ್ಯಾದಿ ಶಬ್ದವಾಚ್ಯರಾದ ಉಷಾ, ಸ್ವಾಹಾ, ಪರ್ಜನ್ಯ ಮೊದಲಾದ ದೇವತೆಗಳಲ್ಲಿ ಹಿಂದಿನವರಿಗಿಂತ ಮುಂದಿನವರು ಶ್ರೇಷ್ಠರೆಂದು ಹೇಳಿ ಕೊನೆಗೆ 'ಪ್ರಾಣೋ ವಾ ಆಶಾಯಾ ಭೂಯಾನ್' ಎಂದು ಹೇಳಿದ್ದಾರೆ. ಭಾರತೀಗಿಂತ ಮುಖ್ಯಪ್ರಾಣರು ಶ್ರೇಷ್ಠರೆಂದು ಈ ವಾಕ್ಯದ ಅರ್ಥ. ಅನಂತರ ಬರುವ 'ಯೋ ವೈ ಭೂಮಾ ತತ್ಸುಖಂ' ಎಂಬ ವಾಕ್ಯದಲ್ಲಿ ಉಕ್ತನಾಗಿರುವ ಭೂಮನು ಹಿಂದೆ ಹೇಳಲ್ಪಟ್ಟಿರುವ ಮುಖ್ಯಪ್ರಾಣನೇ ಎಂದು ಈ ಅಧಿಕರಣದ ಪೂರ್ವಪಕ್ಷ. ಪೂರ್ಣಸುಖತ್ವ ಮತ್ತು ನಾಮಾದಿಸರ್ವದೇವೋತ್ತಮತ್ವಗಳು ಪರಬ್ರಹ್ಮನ ಅಸಾಧಾರಣಧರ್ಮಗಳಾದ್ದರಿಂದ ಬ್ರಹ್ಮನೇ ಭೂಮನೆಂದು ಸಿದ್ಧಾಂತ.

अत्र भूमेति पुंनिर्देशः प्राग्वत् । सम्बन्धभूमेत्यस्य भावार्थत्वेऽपीह भावभवित्रोरभेदात्पूर्णरूपभवित्रर्थत्वं बोध्यम् । पूर्णसुखत्वादिति वाच्ये सम्प्रसादादिति यौगिकोक्तिरीशस्य सुखित्वे दुःखित्वं स्यादिति न शङ्क्यम् । पूर्णसुखकार्येण प्रसादेन दुःखाभावनिश्चयादिति सूचयितुम् ।

इतश्चैवमित्याह—

॥ ॐ धर्मोपपत्तेश्च ॐ ॥ १-३-९

---

**'ಭೂಮಾ' ಎಂದು ಪುಲ್ಲಿಂಗನಿರ್ದೇಶದ ಔಚಿತ್ಯ ಮತ್ತು 'ಭೂಮಾ' ಪದದ ಅರ್ಥ**

[1] ಇಲ್ಲಿ 'ಭೂಮಾ' ಎಂದು ಪುಲ್ಲಿಂಗನಿರ್ದೇಶವು ಹಿಂದಿನಂತೆ [2] 'ಸಂಬಂಧ ಭೂಮಾ' (ಬ್ರ. ಸೂ. ೧–೧–೨೯) ಎಂಬುದು ಧರ್ಮಾರ್ಥಕವಾಗಿದ್ದರೂ ಧರ್ಮ ಧರ್ಮಿಗಳಿಗೆ ಅಭೇದವಿರುವುದರಿಂದ ಇಲ್ಲಿ (ಭೂಮಶಬ್ದವು) ಪೂರ್ಣರೂಪ ಧರ್ಮ್ಯರ್ಥಕ ವೆಂದು ತಿಳಿಯಬೇಕು.

**'ಸಂಪ್ರಸಾದಾತ್' ಎಂದು ಯೌಗಿಕಶಬ್ದಪ್ರಯೋಗದ ಸ್ವಾರಸ್ಯ**

'ಪೂರ್ಣಸುಖತ್ವಾತ್' ಎಂದು ಹೇಳುವ ಬದಲು 'ಸಂಪ್ರಸಾದಾತ್' ಎಂದು ಯೌಗಿಕಶಬ್ದವನ್ನು ಹೇಳಿರುವುದು ಪೂರ್ಣಸುಖದ ಕಾರ್ಯವಾದ ಪ್ರಸನ್ನತೆಯು ಬ್ರಹ್ಮನಲ್ಲಿರುವುದರಿಂದ ಅವನಿಗೆ ದುಃಖವಿಲ್ಲವೆಂದು ನಿಶ್ಚಯವಿರುವುದು. ಆದ್ದರಿಂದ 'ಬ್ರಹ್ಮನು ಸುಖಿಯಾಗಿದ್ದಲ್ಲಿ ದುಃಖಿಯೂ ಆಗಲಿ' ಎಂದು ಶಂಕಿಸಬಾರದು ಎಂಬು ದನ್ನು ಸೂಚಿಸಲು.

ಈ ಮುಂದಿನ ಕಾರಣದಿಂದಲೂ ಭೂಮನು ಬ್ರಹ್ಮನೇ ಎಂದು ಹೇಳಲು ಸೂತ್ರ—

**ಓಂ ಧರ್ಮೋಪಪತ್ತೇಶ್ಚ ಓಂ (೧-೩-೯)**

1. 'ಅದೃಶ್ಯತ್ವಾದಿಗುಣಕೋ ಧರ್ಮೋಕ್ತೇಃ' (ಬ್ರ. ಸೂ. ೧-೨-೨೧) ಮೊದಲಾದ ಸೂತ್ರಗಳಲ್ಲಿ ಅನುವೃತ್ತಿಗೊಂಡಿರುವ ತತ್ ಪದವನ್ನನುಸರಿಸಿ 'ಅದೃಶ್ಯತ್ವಾದಿಗುಣಕಂ' ಎಂದು ನಪುಂಸಕಲಿಂಗ ಪ್ರಯೋಗವಿರಬೇಕಾಗಿದ್ದರೂ ನಿರ್ಣಯಶ್ರುತಿಯನ್ನನುಸರಿಸಿ ಪುಲ್ಲಿಂಗಪ್ರಯೋಗ ಮಾಡಿರುವಂತೆ ಪ್ರಕೃತ ಸೂತ್ರದಲ್ಲೂ 'ಯೋ ವೈ ಭೂಮಾ' ಇತ್ಯಾದಿ ನಿರ್ಣಯಶ್ರುತಿಯನ್ನನು ಸರಿಸಿ ಭೂಮಾ ಎಂದು ಪುಲ್ಲಿಂಗಪ್ರಯೋಗವಿದೆಯೆಂದು ಭಾವ.

2. ಸಂಬಂಧಭೂಮಾ ಎಂಬಲ್ಲಿ ಭೂಮಶಬ್ದಕ್ಕೆ ಬಾಹುಲ್ಯರೂಪವಾದ ಧರ್ಮ ಅರ್ಥ. ಆದರೆ ಈ ಸೂತ್ರದಲ್ಲಿ, ಭಾವ-ಭವಿತೃಗಳಿಗೆ ಅಂದರೆ ಧರ್ಮಧರ್ಮಿಗಳಿಗೆ ಅಭೇದವಿವಕ್ಷೆಯಿಂದ ಪೂರ್ಣತ್ವ ಎಂಬ ಧರ್ಮದ ಬದಲಾಗಿ ಪೂರ್ಣ ಎಂಬ ಧರ್ಮಿಯನ್ನು ಭೂಮಶಬ್ದದ ಅರ್ಥವೆಂದು ವಿವಕ್ಷಿಸಲಾಗಿದೆ.

"स एवाधस्तात् स उपरिष्टात्" इत्युक्तसर्वगतत्वादिधर्माणामुपपत्तेश्च भूमा ब्रह्मैवेत्यर्थः। श्रुतौ सत्यस्यादित्वेऽपि सत्यादेः प्रणाड्या भूमायत्तत्वोक्तेः सर्वस्य ब्रह्मताप्तये भूम्न उक्तिरित्येके। सम्प्रसादादिहेतुयुतत्वाच्च। सैव हीत्यतो गतत्वं चान्यतोऽवसेयम् ॥ २ ॥

**ಸೂತ್ರಾರ್ಥ**

'ಸ ಏವಾಧಸ್ತಾತ್ ಸ ಉಪರಿಷ್ಟಾತ್' (ಛಾಂ. ೭-೨೫) ಎಂಬಲ್ಲಿ ಹೇಳಿರುವ ಸರ್ವಗತತ್ವ ಮೊದಲಾದ ಧರ್ಮಗಳು ಉಪಪನ್ನವಾಗುವುದರಿಂದಲೂ ಭೂಮನು ಬ್ರಹ್ಮನೇ ಎಂದು ಅರ್ಥ.

**'ಸತ್ಯ'ನಿಗೆ ಬ್ರಹ್ಮತ್ವವನ್ನು ಹೇಳದೆ 'ಭೂಮ'ನಿಗೆ ಬ್ರಹ್ಮತ್ವವನ್ನು ಹೇಳಿರುವುದರ ಉದ್ದೇಶ**

[1] ಶ್ರುತಿಯಲ್ಲಿ 'ಸತ್ಯ'ನನ್ನು ಮೊದಲು ಹೇಳಿದ್ದರೂ, ಸತ್ಯ ಮೊದಲಾದವುಗಳಿಗೆ ಕ್ರಮದಿಂದ ಭೂಮಾಧೀನತ್ವವನ್ನು ಹೇಳಿರುವುದರಿಂದ ಸತ್ಯ ಮೊದಲಾದ ಎಲ್ಲರಿಗೂ ಬ್ರಹ್ಮತ್ವಸಿದ್ಧಿಗಾಗಿ ಭೂಮನನ್ನು ಸೂತ್ರದಲ್ಲಿ ಹೇಳಿದೆ ಎಂದು ಕೆಲವರು ಹೇಳುವರು. ಸಂಪ್ರಸಾದ ಮೊದಲಾದ ಬ್ರಹ್ಮಲಿಂಗಯುಕ್ತವಾಗಿರುವುದರಿಂದಲೂ ಭೂಮನನ್ನೇ ಬ್ರಹ್ಮನೆಂದು ಸಾಧಿಸಲಾಗಿದೆ.

**'ಸೈವ ಹಿ ಸತ್ಯಾದಯಃ' ಎಂಬ ಅಧಿಕರಣದಿಂದ ಈ ಅಧಿಕರಣವು ಗತಾರ್ಥವಲ್ಲ**

'ಸೈವ ಹಿ ಸತ್ಯಾದಯಃ' ಎಂಬುದರಿಂದ ಈ ಅಧಿಕರಣಗತಾರ್ಥವಲ್ಲವೆನ್ನುವುದನ್ನು ಬೇರೆ ಗ್ರಂಥದಿಂದ ತಿಳಿಯಬೇಕು.

---

1. ಛಾಂದೋಗ್ಯದ ಏಳನೆಯ ಅಧ್ಯಾಯದಲ್ಲಿ 'ಸತ್ಯವು ವಿಜ್ಞಾನಾಯತ್ತ ಎಂದರೆ ವಿಜ್ಞಾನವನ್ನಾಶ್ರಯಿಸಿರುವುದು—ವಿಜ್ಞಾನವು ಮತಿಗೆ ಆಯತ್ತ. ಮತಿಯು ಶ್ರದ್ಧೆಗೆ ಆಯತ್ತ. ಶ್ರದ್ಧೆಯು ಸ್ಥಿರತಾಯತ್ತ. ಸ್ಥಿರತೆಯು ಕೃತ್ಯಾಯತ್ತ. ಕೃತಿಯು ಸುಖಾಯತ್ತ. ಸುಖವು ಭೂಮಾಯತ್ತ' ಎಂದು ಹೇಳಿದೆ. ಅಂದರೆ, ಪರಮಾತ್ಮನು ಭೂಮಾ ಎಂದರೆ ಗುಣಪೂರ್ಣನಾದ್ದರಿಂದ ಪೂರ್ಣಸುಖರೂಪನು. ಆದುದರಿಂದಲೇ ಅವನು ಸರ್ವಕರ್ತಾ. ಸರ್ವಕರ್ತನಾದುದರಿಂದಲೇ ಅವನು ಚಂಚಲನಲ್ಲ, ಸ್ಥಿರ. ಸ್ಥಿರತೆಯಿರುವುದರಿಂದಲೇ ಅವನು ಶ್ರದ್ಧೆಯುಳ್ಳವನು. ಶ್ರದ್ಧಾಗುಣವಿರುವುದರಿಂದಲೇ ಅವನು ಮನನವುಳ್ಳವನೂ ಹೌದು. ಮನನದಿಂದಾಗಿ ಅವನು ವಿಜ್ಞಾನವುಳ್ಳವನು. ವಿಜ್ಞಾನವಿರುವುದರಿಂದಲೇ ಅವನು ಸತ್ಯನು ಎಂದರೆ ನಿರ್ದೋಷನು ಎಂದು ಅಭಿಪ್ರಾಯ. ಭೂಮನು ಪರಮಾತ್ಮನೆಂದು ಸಿದ್ಧವಾದರೆ, ಭೂಮಾಯತ್ತಗಳಾದ ಸುಖ, ಕೃತಿ, ಸ್ಥಿರ, ಶ್ರದ್ಧಾ, ಮತಿ, ವಿಜ್ಞಾನ, ಸತ್ಯಗಳೂ ಕೂಡ ಪರಮಾತ್ಮನೆಂದೇ ಸಿದ್ಧವಾಗುವುವು. ಶ್ರುತಿಯಲ್ಲಿ ಪ್ರಾರಂಭದಲ್ಲಿದೆ ಎಂಬ ಕಾರಣದಿಂದ ಸತ್ಯವನ್ನು ಬ್ರಹ್ಮ ಎಂದು ಸಾಧಿಸಿದರೆ ವಿಜ್ಞಾನಾದಿಗಳು ಬ್ರಹ್ಮನೆಂದು ಸಿದ್ಧವಾಗದೆ ಹೋದೀತು. ಚರಮನಾದ ಭೂಮನನ್ನು ಬ್ರಹ್ಮನೆಂದು ಸಮರ್ಥಿಸಿದರೆ ಭೂಮಾಧೀನವಾದ ಸತ್ಯಾದಿಗಳೆಲ್ಲವೂ ಬ್ರಹ್ಮನೆಂದು ಸಿದ್ಧವಾಗುವುದು. ಆದ್ದರಿಂದಲೇ ಚರಮನಾದರೂ ಭೂಮನನ್ನೇ ಬ್ರಹ್ಮನೆಂದು ಸೂತ್ರಕಾರರು ಸಮರ್ಥಿಸಿದ್ದಾರೆ.

अक्षराधिकरणम्—३

## ॥ ॐ अक्षरमम्बरान्तधृतेः ॐ ॥ १-३-१०

अत्राक्षरनाम समन्वीयते । "एतद्वै तदक्षरं गार्गि" इत्युक्तमक्षरं तत्तु ब्रह्मैव न श्रीतत्त्वम् । अम्बरान्तधृतेः । अम्बरमाकाशशब्दितं श्रीतत्त्वमन्ते यस्य सर्वस्य तदम्बरान्तं तस्य धृतेर्धारणात् । श्रुतावाकाशाख्यचित्प्रकृतेः सर्वाधारत्वमुक्त्वा "एतस्मिन् खल्वक्षरे गार्ग्याकाश ओतश्च प्रोतश्च" इत्यक्षरस्य तदाधारत्वश्रवणादित्यर्थः । अम्बरधृतेरित्येव पूर्तावन्तेत्युक्तिः पृथिव्यादिसर्वस्यापि प्रकृतिद्वारा ब्रह्मैवाश्रय

---

ಅಕ್ಷರಾಧಿಕರಣ—೩

## ಓಂ ಅಕ್ಷರಮಂಬರಾಂತಧೃತೇಃ ಓಂ (೧-೩-೧೦)

**ಅಧಿಕರಣದ ಉದ್ದೇಶ ಮತ್ತು ಸೂತ್ರಾರ್ಥ**

[1] ಈ ಅಧಿಕರಣದಲ್ಲಿ 'ಅಕ್ಷರ' ಎಂಬ ನಾಮಾತ್ಮಕ ಶಬ್ದದ ಸಮನ್ವಯವನ್ನು ಮಾಡಲಾಗಿದೆ. 'ಏತದ್ವೈ ತದಕ್ಷರಂ ಗಾರ್ಗಿ' (ಬೃ. ೫-೮-೧೦) ಎಂಬಲ್ಲಿ ಉಕ್ತವಾಗಿರುವ ಅಕ್ಷರನು ಬ್ರಹ್ಮನೇ, ಶ್ರೀತತ್ತ್ವವಲ್ಲ. ಏಕೆಂದರೆ ಅಂಬರಾಂತಧೃತೇಃ— ಅಂಬರ ಎಂದರೆ ಆಕಾಶಶಬ್ದವಾಚ್ಯವಾದ ಶ್ರೀತತ್ತ್ವ. ಇದೇ ಕೊನೆಯದಾಗುಳ್ಳ ಸರ್ವವೂ ಅಂಬರಾಂತವೆನಿಸುವುದು. ಇದರ, ಧೃತೇಃ—ಧಾರಣದಿಂದ. ಶ್ರುತಿಯಲ್ಲಿ ಆಕಾಶನಾಮಕವಾದ ಚಿತ್‌ಪ್ರಕೃತಿಯು ಸರ್ವಾಧಾರವೆಂದು ಹೇಳಿದ ನಂತರ 'ಏತಸ್ಮಿನ್ ಖಲ್ವಕ್ಷರೇ ಗಾರ್ಗ್ಯಾಕಾಶ ಓತಶ್ಚ ಪ್ರೋತಶ್ಚ' (ಬೃ. ೫-೮-೧೧) ಎಂಬುದಾಗಿ ಚಿತ್ ಪ್ರಕೃತಿಗೂ ಆಧಾರನೆಂದು ಅಕ್ಷರನು ಶ್ರುತನಾಗಿರುವುದರಿಂದ ಎಂದು ಅರ್ಥ.

**'ಅಂಬರಾಂತ' ಎಂಬಲ್ಲಿ 'ಅಂತ' ಪದದ ಪ್ರಯೋಜನ**

'ಅಂಬರಧೃತೇಃ' ಎಂದಿಷ್ಟೇ ಸಾಕಾಗಿದ್ದರೂ 'ಅಂತ' ಎಂದು ಹೇಳಿರುವುದು

---

1. 'ಏತದ್ವೈ ತದಕ್ಷರಂ ಗಾರ್ಗಿ' ಇತ್ಯಾದಿ ಬೃಹದಾರಣ್ಯಕ ಶ್ರುತಿ ಇಲ್ಲಿ ವಿಷಯವಾಕ್ಯ. 'ಯೋ ತ್ವಕ್ಷರಮನಿರ್ದೇಶ್ಯಂ', 'ದ್ವಾವಿಮೌ ಪುರುಷೌ ಲೋಕೇ ಕ್ಷರಶ್ಚಾಕ್ಷರ ಏವ ಚ' ಇತ್ಯಾದಿ ಗೀತಾವಾಕ್ಯಗಳಲ್ಲಿ ಶ್ರೀತತ್ತ್ವವೇ ಅಕ್ಷರಶಬ್ದವಾಚ್ಯವಾಗಿರುವುದರಿಂದ ಪ್ರಕೃತ ಶ್ರುತಿಯಲ್ಲೂ ಶ್ರೀತತ್ತ್ವವೇ ಅಕ್ಷರವೆಂದು ಪೂರ್ವಪಕ್ಷ. ಇದೇ ಶ್ರುತಿಯಲ್ಲಿ ಮುಂದೆ ಆಕಾಶಾಖ್ಯ ಶ್ರೀತತ್ತ್ವಕ್ಕೂ ಅಕ್ಷರನು ಆಧಾರನೆಂದು ಹೇಳಿರುವುದರಿಂದ ಪ್ರಕೃತನಾದ ಅಕ್ಷರನು ಬ್ರಹ್ಮನೇ ಎಂದು ಸಿದ್ಧಾಂತ.

इति सूचयितुम् । "पृथिव्यादिप्रकृत्यन्तम्" इति स्मृतेः । अम्बरस्य श्रीतत्त्वज्ञापनाय चेत्यप्याहुः । सर्वाश्रयत्वे सत्येकाश्रयत्वस्य तल्लिङ्गत्वादिति ॥

इतश्चैवमित्याह—

## ॥ ॐ सा च प्रशासनात् ॐ ॥ १-३-११

उच्यत इति शेषः । सा धृतिश्च प्रशासनादक्षरस्याज्ञामात्रादुच्यते "एतस्य वा अक्षरस्य प्रशासने गार्गि सूर्याचन्द्रमसौ विधृतौ

[1]ಪೃಥಿವ್ಯಾದಿ ಪ್ರಕೃತ್ಯಂತಂ' ಎಂಬ ಸ್ಮೃತಿಯಂತೆ ಪೃಥಿವೀ ಮೊದಲಾದ ಸಮಸ್ತಕ್ಕೂ ಚಿತ್-ಪ್ರಕೃತಿಯ ದ್ವಾರಾ ಬ್ರಹ್ಮನೇ ಆಶ್ರಯನೆಂದು ಸೂಚಿಸಲು. [2]ಸರ್ವಕ್ಕೂ ಆಶ್ರಯವಾಗಿದ್ದರೂ ಬ್ರಹ್ಮನೊಬ್ಬನನ್ನು ಆಶ್ರಯಿಸಿಕೊಂಡಿರುವುದು ಶ್ರೀತತ್ತ್ವದ ಲಕ್ಷಣವಾಗಿರುವುದರಿಂದ ಅಂಬರವು ಶ್ರೀತತ್ತ್ವವೆಂದು ತಿಳಿಸುವುದಕ್ಕೋಸ್ಕರವೂ 'ಅಂತ' ಪದವನ್ನು ಹೇಳಲಾಗಿದೆಯೆಂದು ಕೆಲವರು ಹೇಳುವರು.

ಈ ಮುಂದಿನ ಕಾರಣದಿಂದಲೂ ಅಕ್ಷರನು ಬ್ರಹ್ಮನೇ ಎಂದು ಹೇಳಲು ಸೂತ್ರ—

## ಓಂ ಸಾ ಚ ಪ್ರಶಾಸನಾತ್ ಓಂ (೧-೩-೧೧)

**ಸೂತ್ರಾರ್ಥ**

'ಉಚ್ಯತೇ' ಎಂದು ಸೇರಿಸಿಕೊಳ್ಳಬೇಕು. ಸಾ ಚ–ಆ ಧಾರಣವೂ, [3] 'ಏತಸ್ಯ ವಾ ಅಕ್ಷರಸ್ಯ ಪ್ರಶಾಸನೇ ಗಾರ್ಗಿ ಸೂರ್ಯಾಚಂದ್ರಮಸೌ ವಿಧೃತೌ ತಿಷ್ಠತಃ'

1. ಪೃಥಿವ್ಯಾದಿ ಪ್ರಕೃತ್ಯಂತಂ ಭೂತಂ ಭವ್ಯಂ ಭವಚ್ಚ ಯತ್ ।
ವಿಷ್ಣುರೇಕೋ ಬಿಭರ್ತೀದಂ ನಾನ್ಯಸ್ತಸ್ಮಾತ್ ಕ್ಷಮೋ ಧೃತೌ ॥ (ಸ್ಕಾಂದಪುರಾಣ)

2. ಬ್ರಹ್ಮನನ್ನು ಆಶ್ರಯಿಸಿರುವ ಅಂಬರವು ಸರ್ವಲೋಕಕ್ಕೂ ಆಶ್ರಯವಾಗಿದೆ ಎಂದು ಸೂಚಿಸುವ ಮೂಲಕ 'ಅಂತ' ಪದವು ಅಂಬರವು ಶ್ರೀತತ್ತ್ವವೆಂದು ಸೂಚಿಸುವುದೆಂದು ಭಾವ.

3. ಅಕ್ಷರನ ಪ್ರಶಾಸನಮಾತ್ರದಿಂದ ಸೂರ್ಯಚಂದ್ರಾದಿಗಳು ನಿಂತಿದ್ದಾರೆಂದು ಶ್ರುತಿಯು ಹೇಳುತ್ತದೆ. ಶಾಸನವೆಂದರೆ ಆಜ್ಞೆ. 'ಪ್ರ' ಉಪಸರ್ಗವು ಭಗವಂತನ ಆಜ್ಞೆಯ ಪ್ರಕರ್ಷವನ್ನು ಹೇಳುತ್ತದೆ. ಭಗವದಿತರರ ಶಾಸನದ ವ್ಯಾಪ್ತಿಗೆ ಎಲ್ಲರೂ ಒಳಪಟ್ಟಿಲ್ಲ. ಅಲ್ಲದೇ ಅವರ ಶಾಸನ ಭಗವದಧೀನವಾದುದು. ಆದರೆ ಭಗವಂತನ ಶಾಸನದ ವ್ಯಾಪ್ತಿಗೆ ಎಲ್ಲರೂ ಒಳಪಟ್ಟಿದ್ದಾರೆ ಮತ್ತು ಅದು ಅನನ್ಯಾಧೀನವಾದುದು. ಇಂತಹ ಪ್ರಕರ್ಷವನ್ನು ಪಡೆದ ಶಾಸನಮಾತ್ರದಿಂದಲೇ ಸರ್ವಧಾರಣವು ಭಗವದಿತರರಲ್ಲಿ ಯುಕ್ತವಲ್ಲವೆಂದು ಭಾವ.

तिष्ठतः" इत्यादौ । अतश्चाक्षरं ब्रह्मैवेत्यर्थः । न हि प्रेत्युक्तासङ्कुचितविषयत्वानन्यायत्तत्वरूपप्रकृष्टशासनमात्रेण सर्वधृतिरन्यस्य युज्यत इति भावः ॥

इतश्चैवमित्याह—

॥ ॐ अन्यभावव्यावृत्तेश्च ॐ ॥ १-३-१२

अन्येषां वस्तूनां भावानां स्थौल्यादिधर्माणां व्यावृत्तेः "अस्थूलमनणु" इत्यादिनाऽक्षरे व्यावृत्त्युक्तेश्चाक्षरं ब्रह्मैवेत्यर्थः । स्थौल्यादीति वाच्येऽन्यभावेत्युक्तिः स्थौल्यादिहीनमक्षरं ब्रह्म चेन्निःस्वभावं स्यादिति

(ಬೃ ೫-೮-೯) ಇತ್ಯಾದಿಯಾಗಿ, ಪ್ರಶಾಸನಾತ್ ಉಚ್ಯತೇ–ಅಕ್ಷರನ ಆಜ್ಞಾಮಾತ್ರದಿಂದ ಎಂದು ಹೇಳಲ್ಪಟ್ಟಿದೆ. ಆದ್ದರಿಂದಲೂ ಅಕ್ಷರನು ಬ್ರಹ್ಮನೇ ಎಂದರ್ಥ. 'ಪ್ರ' ಎಂಬ ಉಪಸರ್ಗವು ಹೇಳುವ ಅಸಂಕುಚಿತವಿಷಯತ್ವ, ಅನನ್ಯಾಧೀನತ್ವ ಮೊದಲಾದ ಪ್ರಕರ್ಷವುಳ್ಳ ಶಾಸನದಿಂದ ಮಾತ್ರವೇ ಸರ್ವವನ್ನೂ ಧಾರಣಮಾಡುವುದು ಅನ್ಯರಿಗೆ ಯುಕ್ತವಾಗಲಾರದಷ್ಟೇ ಎಂದು ಭಾವ.

ಈ ಮುಂದಿನ ಕಾರಣದಿಂದಲೂ ಅಕ್ಷರನು ಬ್ರಹ್ಮನೇ ಎಂದು ಹೇಳುವ ಸೂತ್ರ—

ಓಂ ಅನ್ಯಭಾವವ್ಯಾವೃತ್ತೇಶ್ಚ ಓಂ (೧-೩-೧೨)

**ಸೂತ್ರಾರ್ಥ**

[1] ಅನ್ಯೇಷಾಂ–ಇತರ ವಸ್ತುಗಳ, ಭಾವಾನಾಂ–ಸ್ಥೂಲತ್ವ ಮೊದಲಾದ ಧರ್ಮಗಳಿಗೆ, ವ್ಯಾವೃತ್ತೇಃ–'ಅಸ್ಥೂಲಮನಣು' (ಬೃ. ೫-೮-೮) ಇತ್ಯಾದಿ ವಾಕ್ಯದಿಂದ ಅಕ್ಷರನಲ್ಲಿ ರಾಹಿತ್ಯವನ್ನು ಹೇಳಿರುವುದರಿಂದಲೂ ಅಕ್ಷರನು ಬ್ರಹ್ಮನೇ ಎಂದು ಅರ್ಥ.

**'ಸ್ಥೌಲ್ಯಾದಿವ್ಯಾವೃತ್ತೇಃ' ಎಂಬುದರ ಬದಲು 'ಅನ್ಯಭಾವವ್ಯಾವೃತ್ತೇಃ' ಎಂದು ಸೂತ್ರರಚನೆಯ ಉದ್ದೇಶ**

ಅನ್ಯವಸ್ತುಗಳ ಸ್ವಭಾವವಾಗಿರುವ ಪ್ರಾಕೃತ ಸ್ಥೂಲತ್ವಾದಿಗಳು ಮಾತ್ರ ಬ್ರಹ್ಮನಲ್ಲಿ ಇಲ್ಲವೆಂದು ಹೇಳಿರುವುದರಿಂದ 'ಬ್ರಹ್ಮನು ಸ್ಥೂಲತ್ವಾದಿ ಧರ್ಮರಹಿತ

1. ಸ್ಥೂಲತ್ವ, ಅಣುತ್ವ, ಹ್ರಸ್ವತ್ವ, ದೀರ್ಘತ್ವ ಮೊದಲಾದ ಲೌಕಿಕ ವಸ್ತುಗಳಲ್ಲಿರುವ ಧರ್ಮಗಳು ಅಕ್ಷರನಲ್ಲಿಲ್ಲವೆಂದು 'ಅಸ್ಥೂಲಮನಣು...' ಇತ್ಯಾದಿ ಶ್ರುತಿ ಹೇಳುವುದರಿಂದ ಅಕ್ಷರನು ಬ್ರಹ್ಮನೇ ಎಂದು ಸೂತ್ರದ ಭಾವ.

न शङ्क्यं, अन्यवस्तुस्वभावस्य प्राकृतस्यैव स्थौल्यादेर्व्यावृत्त्युक्तेरिति सूचयितुम् । न हि तादृशं निरपेक्षं स्थौल्यादिराहित्यमन्यस्य युज्यत इति भावः । यद्वा सुधारीत्या "अस्थूलमनणु" इत्यादिना स्थौल्यादिविरुद्धाणुत्वमहत्त्वादिमत्त्वाच्चेति चशब्देन समुच्चीयते । बहुपदविषयं व्याख्यानं स्वशब्देन कृत्वा कतिपयपदविषयत्वादिदं व्याख्यानं चशब्देन समुचितम् । न च विरोधः । अन्यभावव्यावृत्तेरन्यवस्तु-

---

ನಾಗಿದ್ದಲ್ಲಿ ನಿಃಸ್ವರೂಪನಾಗಬೇಕಾದೀತು' ಎಂಬ ಶಂಕೆಗೆ ಅವಕಾಶವಿಲ್ಲವೆಂದು[1] ಸೂಚಿಸಲು 'ಸ್ಥೌಲ್ಯಾದಿ' ಎಂದು ಹೇಳಬಹುದಾಗಿದ್ದರೂ 'ಅನ್ಯಭಾವ' ಎಂದು ಹೇಳಲಾಗಿದೆ. ಅಂತಹ ಪ್ರಾಕೃತಸ್ಥೂಲತ್ವಾದಿಗಳ ಅಭಾವವು ಇತರರಿಗೆ ಯುಕ್ತವಲ್ಲವಷ್ಟೇ ಎಂದು ಭಾವ.

### ಸುಧಾರೀತ್ಯಾ ವ್ಯಾಖ್ಯಾನಾಂತರ

ಅಥವಾ ಸುಧಾರೀತ್ಯಾ, ಸೂತ್ರದಲ್ಲಿರುವ 'ಚ' ಶಬ್ದದಿಂದ " 'ಅಸ್ಥೂಲಮನಣು' ಇತ್ಯಾದಿ ಶ್ರುತಿಯಲ್ಲಿ ಹೇಳಿರುವ ಸ್ಥೂಲತ್ವಾದಿವಿರುದ್ಧವಾದ ಅಣುತ್ವ ಮಹತ್ತ್ವಾದಿ ಧರ್ಮಗಳಿರುವುದರಿಂದಲೂ " ಎಂದು ಸಮುಚ್ಚಯಮಾಡಿಕೊಳ್ಳಬೇಕು. [2] 'ಅಸ್ಥೂಲಮನಣು' ಎಂಬ ಶ್ರುತಿಯು ಬಹುಪದಗಳಿಗೆ ಸಂಬಂಧಿಸಿದ ವ್ಯಾಖ್ಯಾನವನ್ನು ಸೂತ್ರವು ತನ್ನ ಶಬ್ದಗಳಿಂದಲೇ ಮಾಡಿ ಕೆಲವು ಪದಗಳಿಗೆ ಸಂಬಂಧಿಸಿದ ವ್ಯಾಖ್ಯಾನವನ್ನು 'ಚ' ಶಬ್ದದಿಂದ ಸಂಗ್ರಹಿಸಿದೆ. [3]ಅಣುತ್ವ ಮಹತ್ತ್ವ ಮೊದಲಾದ ಧರ್ಮಗಳು ಪರಸ್ಪರ

---

1. ಅಪ್ರಾಕೃತವಾದ ಸ್ಥೂಲತ್ವಾದಿ ಧರ್ಮಗಳು ಬ್ರಹ್ಮನಲ್ಲಿರುವುದರಿಂದ ಬ್ರಹ್ಮ ನಿಃಸ್ವರೂಪನಲ್ಲ ಎಂದು ಭಾವ.

2. 'ಅಸ್ಥೂಲಮನಣ್ವಹ್ರಸ್ವಮದೀರ್ಘಮಲೋಹಿತಮಸ್ನೇಹಮಚ್ಛಾಯಮತಮೋಽವಾಯ್ವನಾಕಾಶಮಸಂಗಮರಸಮಗಂಧಮಚಕ್ಷುಷ್ಕಮಶ್ರೋತ್ರಮವಾಗಮನೋಽತೇಜಸ್ಕಮಪ್ರಾಣಮಮುಖಮಮಾತ್ರಮನಂತರಮಬಾಹ್ಯಂ ನ ತದಶ್ನಾತಿ ಕಿಂಚನ ನ ತದಶ್ನಾತಿ ಕಶ್ಚನ' (ಬೃ. ೫-೮-೮) ಎಂಬ ಶ್ರುತಿಯಲ್ಲಿರುವ ಸರ್ವಪದಗಳಿಗೂ ವ್ಯಾಖ್ಯಾನವನ್ನು 'ಅನ್ಯಭಾವ ವ್ಯಾವೃತ್ತೇಃ' ಎಂಬ ಪದದಿಂದ ಸೂತ್ರವು ಮಾಡಿದೆ. 'ಅಸ್ಥೂಲಮನಣ್ವಹ್ರಸ್ವಮದೀರ್ಘಂ' ಎಂಬ ನಾಲ್ಕು ಪದಗಳ ವ್ಯಾಖ್ಯಾನವನ್ನು, ಕೇವಲ ಕೆಲವು ಪದಗಳ ವ್ಯಾಖ್ಯಾನವಾದ್ದರಿಂದ, 'ಚ' ಶಬ್ದದಿಂದ ಮಾಡಲಾಗಿದೆ ಎಂದು ಭಾವ.

3. ಅಣುತ್ವ ಮಹತ್ತ್ವಾದಿಗಳು ಪರಸ್ಪರ ವಿರುದ್ಧವಾದ್ದರಿಂದ ಬ್ರಹ್ಮನಲ್ಲಿ ಅವೆಲ್ಲವೂ ಇರಲಾರವು ಎಂದು ಆಶಂಕೆ. ಸರ್ವವಿಲಕ್ಷಣನಾದ ಭಗವಂತನ ಸ್ವಭಾವವೇ ಅಚಿಂತ್ಯಾದ್ಭುತವಾದ್ದರಿಂದ ಅವನಲ್ಲಿ ಈ ಧರ್ಮಗಳೆಲ್ಲವೂ ಇರಬಹುದೆಂದು ಸಮಾಧಾನ.

वैलक्षण्यात् वस्तुस्वभावस्यैव तादृशत्वादिति यावदिति वृत्त्यन्तरं बोध्यम् ॥ ३ ॥

सदधिकरणम्—४

## ॥ ॐ ईक्षतिकर्मव्यपदेशात्सः ॐ ॥ १-३-१३

अत्र "सदेव सोम्य" इत्यादिसृष्टिस्थानस्थसन्नाम समन्वीयते। योग्यतया सदित्यन्वेति। स इत्यनेन तन्विति तुरन्वेति । "सदेव" इत्यादौ श्रुतं सत् स एव विष्णुरेव। न प्रधानम्। ईक्षतिरूपं च तत्कर्म

---

ವಿರುದ್ಧಗಳೆಂದು ಶಂಕಿಸಬಾರದು. ಏಕೆಂದರೆ, ಅನ್ಯಭಾವವ್ಯಾವೃತ್ತೇಃ-ಬ್ರಹ್ಮನು ಇತರ ವಸ್ತುಗಳಿಂದ ವಿಲಕ್ಷಣನಾಗಿರುವುದರಿಂದ, ಬ್ರಹ್ಮರೂಪವಸ್ತುವಿನ ಸ್ವಭಾವವೇ ಹಾಗಿರುವುದರಿಂದ ಎಂದು ಭಾವ—ಹೀಗೆ ವ್ಯಾಖ್ಯಾನಾಂತರವನ್ನು ತಿಳಿಯಬೇಕು.

ಸದಧಿಕರಣ—೪

## ಓಂ ಈಕ್ಷತಿಕರ್ಮವ್ಯಪದೇಶಾತ್ ಸಃ ಓಂ (೧-೩-೧೩)

**ಅಧಿಕರಣಪ್ರತಿಪಾದ್ಯ ವಿಷಯ ಮತ್ತು ಸೂತ್ರಾರ್ಥ**

[1] ಈ ಅಧಿಕರಣದಲ್ಲಿ 'ಸದೇವ ಸೋಮ್ಯ' (ಛಾಂ. ೬—೨) ಮೊದಲಾದ ಸೃಷ್ಟಿ ಪ್ರತಿಪಾದಕ ಅನೇಕ ಪ್ರಕರಣಗಳಲ್ಲಿರುವ 'ಸತ್' ಎಂಬ ನಾಮಾತ್ಮಕ ಶಬ್ದದ ಸಮನ್ವಯವನ್ನು ಮಾಡಲಾಗುತ್ತದೆ. ಅನ್ವಯಯೋಗ್ಯವಾದುದರಿಂದ 'ಸತ್' ಎಂಬ ಪದವು ಅನ್ವಯವನ್ನು ಹೊಂದುತ್ತದೆ. 'ತತ್ತು' ಎಂಬಲ್ಲಿರುವ 'ತು' ಶಬ್ದವು 'ಸಃ' ಎಂಬ ಪದದೊಂದಿಗೆ ಅನ್ವಯವನ್ನು ಹೊಂದುತ್ತದೆ. 'ಸದೇವ' ಇತ್ಯಾದಿ ಶ್ರುತಿಯಲ್ಲಿ ಶ್ರುತನಾಗಿರುವ, ಸತ್—ಸಚ್ಛಬ್ದವಾಚ್ಯನು, ಸ ಏವ-ವಿಷ್ಣುವೇ,

---

1 'ಸದೇವ ಸೋಮ್ಯ', 'ಸರ್ವಾಃ ಪ್ರಜಾಃ ಸದಾಯತನಾಃ', 'ಸತಾ ಸೋಮ್ಯ ತದಾ ಸಂಪನ್ನೋ ಭವತಿ', 'ಸತಿ ಸಂಪದ್ಯ ನ ವಿದುಃ' ಇತ್ಯಾದಿ ಅನೇಕ ಪ್ರಕರಣರೂಪವಾದ ಸ್ಥಾನ ದಲ್ಲಿರುವ 'ಸತ್' ಶಬ್ದದ ಸಮನ್ವಯವನ್ನು ಈ ಅಧಿಕರಣದಲ್ಲಿ ಮಾಡಲಾಗಿದೆ. 'ಬಹು ಸ್ಯಾಂ ಪ್ರಜಾಯೇಯ' ಎಂದು ಸತ್‌ಶಬ್ದವಾಚ್ಯಕ್ಕೆ ಜಗದಾತ್ಮನಾ ಪರಿಣಾಮವನ್ನು ಹೇಳಿರುವುದರಿಂದ ಸತ್‌ಶಬ್ದವಾಚ್ಯವು ಪ್ರಕೃತಿಯೆಂದು ಪೂರ್ವಪಕ್ಷ. ಅದೇ ಪ್ರಕರಣದಲ್ಲಿರುವ 'ತದೈಕ್ಷತ' ಎಂಬ ಶ್ರುತಿಯಲ್ಲಿ ಸತ್‌ಶಬ್ದವಾಚ್ಯವು 'ಐಕ್ಷತ—ವಿಚಾರಮಾಡಿತು' ಎಂದು ಹೇಳಿರುವುದರಿಂದ ಬ್ರಹ್ಮನೇ ಸತ್‌ಶಬ್ದವಾಚ್ಯ, ಜಡವಾದ ಪ್ರಕೃತಿಯಲ್ಲ ಎಂದು ಸಿದ್ಧಾಂತ.

च तस्य व्यपदेशात् "तदैक्षत" इतीक्षणाख्यव्यापारोक्तेर्जडे तदयोगादित्यर्थः । ईक्षतीत्येव वाच्ये कर्मेत्युक्तिः स्वरूपान्येक्षणाभावात्कथं तदैक्षतेति कर्तृत्वश्रुतिरिति न शङ्क्यम् । विशेषात् क्रियाकर्तृभाव इति सूचयितुम् । तत्त्वप्रदीपचन्द्रिकयोस्तु कर्मेति "न कर्तृत्वं न कर्माणि" इत्यत्रेव सृष्टिरुच्यते । ईक्षतिश्च कर्म च तयोरीक्षणसृष्टिक्रिययोरुक्ते-

---

ಪ್ರಕೃತಿಯಲ್ಲ ಏಕೆಂದರೆ, ಈಕ್ಷತಿರೂಪವಾದ ಕರ್ಮದ ಉಪದೇಶವಿರುವುದರಿಂದ. 'ತದೈಕ್ಷತ'ಎಂಬಲ್ಲಿ ಈಕ್ಷಣರೂಪವಾದ ಕ್ರಿಯೆಯನ್ನು ಹೇಳಲಾಗಿದೆ ಅದು ಜಡವಾದ ಪ್ರಕೃತಿಯಲ್ಲಿ ಯುಕ್ತವಾಗುವುದಿಲ್ಲವೆಂದು ಅರ್ಥ.

## ಸೂತ್ರದಲ್ಲಿ 'ಕರ್ಮ' ಪದದ ಸಾರ್ಥಕತೆ

'ಈಕ್ಷತಿ' ಎಂದಿಷ್ಟೇ ಹೇಳುವುದು ಸಾಕಾಗಿದ್ದರೂ 'ಬ್ರಹ್ಮಸ್ವರೂಪಭಿನ್ನವಾದ ಈಕ್ಷಣವಿಲ್ಲದಿರುವುದರಿಂದ [1] 'ತದೈಕ್ಷತ' ಎಂದು ಈಕ್ಷಣಕ್ರಿಯಾಕರ್ತೃತ್ವವನ್ನು ಹೇಳಿರುವುದು ಹೇಗೆ ?' ಎಂದು ಶಂಕಿಸಬಾರದು. ವಿಶೇಷಬಲದಿಂದ ಕ್ರಿಯಾ-ಕರ್ತೃ ಸಂಬಂಧವು ಹೊಂದುವುದು' ಎಂದು ಸೂಚಿಸಲು 'ಈಕ್ಷತಿಕರ್ಮ' ಎಂದು ಹೇಳಲಾಗಿದೆ.

## ತತ್ತ್ವಪ್ರದೀಪ ಮತ್ತು ಚಂದ್ರಿಕಾರೀತ್ಯಾ ವ್ಯಾಖ್ಯಾನಾಂತರ

ತತ್ತ್ವಪ್ರದೀಪ ಮತ್ತು ಚಂದ್ರಿಕಾಗಳಲ್ಲಾದರೋ, 'ಕರ್ಮ' ಪದವು [2]'ನ ಕರ್ತೃತ್ವಂ ನ ಕರ್ಮಾಣಿ' ಎಂಬಲ್ಲಿಯಂತೆ ಸೃಷ್ಟಿರೂಪಕ್ರಿಯೆಯನ್ನು ಹೇಳುತ್ತದೆ. ಈಕ್ಷತಿಶ್ಚ ಕರ್ಮ ಚ ತಯೋಃ ಅಂದರೆ ಈಕ್ಷಣಕ್ರಿಯೆ ಮತ್ತು ಸೃಷ್ಟಿಕ್ರಿಯೆಗಳ ಉಕ್ತಿ ಇರುವುದರಿಂದ ಎಂದು ಅರ್ಥ 'ತತ್ತು' ಎಂಬ ಪದಗಳ ಅನುವೃತ್ತಿ ಇದ್ದರೂ

---

1. ಈಕ್ಷಣವು ಬ್ರಹ್ಮಸ್ವರೂಪವೇ ಆಗಿರುವಾಗ 'ಐಕ್ಷತ' ಎಂಬುದಾಗಿ ಈಕ್ಷಣಕ್ಕೆ ಬ್ರಹ್ಮನು ಆಶ್ರಯನೆಂದು ಹೇಳಿರುವುದು ಹೇಗೆ ಎಂದು ಆಕ್ಷೇಪ. ಅಭೇದವಿದ್ದರೂ ಭೇದಪ್ರತಿನಿಧಿಯಾದ ವಿಶೇಷದ ಬಲದಿಂದ ಈಕ್ಷಣಕ್ರಿಯೆಗೆ ಬ್ರಹ್ಮನು ಆಶ್ರಯನೆಂಬ ಭೇದವ್ಯವಹಾರ ಇರಬಹುದು. ಸೂತ್ರದಲ್ಲಿ 'ಈಕ್ಷತಿಕರ್ಮ' ಎಂಬ ನಿರ್ದೇಶವು ಈ ಅಂಶವನ್ನು ಸೂಚಿಸುವುದೆಂದು ಸಮಾಧಾನ.

2. 'ನ ಕರ್ತೃತ್ವಂ ನ ಕರ್ಮಾಣಿ ಲೋಕಸ್ಯ ಸೃಜತಿ ಪ್ರಭುಃ' (ಗೀ. ೫-೧೪). ಈ ಶ್ಲೋಕಕ್ಕೆ ಗೀತಾತಾತ್ಪರ್ಯದಲ್ಲಿ 'ಕ್ರಿಯಾಯಾಂ ಅದೃಷ್ಟೋತ್ಪಾದನೇ ಫಲೇ ಚ ಸ್ವಾತಂತ್ರ್ಯಂ ಲೋಕಸ್ಯ ನ ಸೃಜತೀಶ್ವರಃ' ಎಂದು ಭಗವತ್ಪಾದರು ವ್ಯಾಖ್ಯಾನಮಾಡಿದ್ದಾರೆ. ಇಲ್ಲಿ ಕರ್ಮ ಪದಕ್ಕೆ ಅದೃಷ್ಟದ ಉತ್ಪಾದನೆ ಅಂದರೆ ಸೃಷ್ಟಿ ಎಂದು ಅರ್ಥಮಾಡಿದ್ದಾರೆ. ಅದರಂತೆ ಈ ಸೂತ್ರದಲ್ಲೂ 'ಕರ್ಮ' ಎಂದರೆ ಸೃಷ್ಟಿಕ್ರಿಯೆ ಎಂದು ಅರ್ಥ ಮಾಡಬಹುದು. 'ಸದೇವ ಸೋಮ್ಯ' ಇತ್ಯಾದಿ ಸೃಷ್ಟಿಪ್ರಕರಣದಲ್ಲಿ ಆಲೋಚನರೂಪವಾದ ಈಕ್ಷಣಕ್ರಿಯೆ ಮತ್ತು ಸೃಷ್ಟಿಕ್ರಿಯೆಗಳನ್ನು ಹೇಳಿರುವುದರಿಂದ ಆ ಪ್ರಕರಣಗಳಲ್ಲಿ ಬರುವ ಸತ್‌ಶಬ್ದವಾಚ್ಯನು ಬ್ರಹ್ಮನೇ ಎಂದು ಭಾವ.

रित्यर्थः । तत्त्वित्यनुवृत्तावपि स इत्युक्तिः "एको नारायण आसीत्", "स मुनिर्भूत्वा समचिन्तयत्" इत्यादिसमाख्यां सूचयितुमित्युक्तम् ॥ ४ ॥

दहराधिकरणम्—५

## ॥ ॐ दहर उत्तरेभ्यः ॐ ॥ १-३-१४

अत्र हृत्पद्मस्थत्वलिङ्गं समन्वीयते । तत्त्वित्यस्ति । द्युभ्वाद्यायतनमिति मण्डूकप्लुत्याऽन्वेति । पूर्वस्मात् सदिति च । "उभे अस्मिन् द्यावापृथिवी" इत्यादिनोक्तं द्युभ्वाद्यायतनं सत् दहरे "दहरं पुण्डरीकं वेश्म" इत्याद्युक्तदहरे हृत्पद्मे तत्तु ब्रह्मैव न जीवादिः । उत्तरेभ्यः

'ಸಃ' ಎಂದು ಹೇಳಿರುವುದು 'ಏಕೋ ನಾರಾಯಣ ಆಸೀತ್', 'ಸ ಮುನಿರ್ಭೂತ್ವಾ ಸಮಚಿಂತಯತ್' ಇತ್ಯಾದಿಶ್ರುತಿಗಳ ಸಂವಾದವನ್ನು ಸೂಚಿಸಲು ಎಂದು ಹೇಳಲಾಗಿದೆ.

ದಹರಾಧಿಕರಣ—೫

## ಓಂ ದಹರ ಉತ್ತರೇಭ್ಯಃ ಓಂ (೧-೩-೧೪)

**ಅಧಿಕರಣಪ್ರತಿಪಾದ್ಯ ವಿಷಯ ಮತ್ತು ಸೂತ್ರಾರ್ಥ**

1 ಇಲ್ಲಿ 'ಹೃತ್ಪದ್ಮಸ್ಥತ್ವ' ಎಂಬ ಲಿಂಗವನ್ನು ಸಮನ್ವಯಗೊಳಿಸಲಾಗುವುದು.

1. 'ಅಥ ಯದಿದಮಸ್ಮಿನ್ ಬ್ರಹ್ಮಪುರೇ ದಹರಂ ಪುಂಡರೀಕಂ ವೇಶ್ಮ ದಹರೋಽಸ್ಮಿನ್ನಂತರ ಆಕಾಶಸ್ತಸ್ಮಿನ್ ಯದಂತಸ್ತದನ್ವೇಷ್ಟವ್ಯಂ ತದ್ವಾವ ವಿಜಿಜ್ಞಾಸಿತವ್ಯಮಿತಿ | ತಂ ಚೇದ್ ಬ್ರೂಯುಃ ಯದಿದಮಸ್ಮಿನ್ ಬ್ರಹ್ಮಪುರೇ ದಹರಂ ಪುಂಡರೀಕಂ ವೇಶ್ಮ ದಹರೋಽಸ್ಮಿನ್ನಂತರ ಆಕಾಶ ಕಿಂ ತದತ್ರ ವಿದ್ಯತೇ ಯದನ್ವೇಷ್ಟವ್ಯಂ ಯದ್ವಾವ ವಿಜಿಜ್ಞಾಸಿತವ್ಯಮಿತಿ | ಸ ಬ್ರೂಯಾದ್ಯಾವಾನ್ ವಾ ಅಯಮಾಕಾಶಸ್ತಾವಾನೇಷೋಽಂತರ್ಹೃದಯ ಆಕಾಶಃ | ಉಭೇ ಅಸ್ಮಿನ್ ದ್ಯಾವಾಪೃಥಿವೀ ಅಂತರೇವ ಸಮಾಹಿತೇ | ಉಭಾವಗ್ನಿಶ್ಚ ವಾಯುಶ್ಚ ಸೂರ್ಯಾಚಂದ್ರಮಸಾವುಭೌ' (ಛಾಂ. ೮-೧) ಇತ್ಯಾದಿ ಶ್ರುತಿ ಇಲ್ಲಿ ವಿಷಯವಾಕ್ಯ. 'ಪೂರ್ಣಬ್ರಹ್ಮನಿಗೆ ಆಧಾರವಾದ ಈ ಶರೀರದಲ್ಲಿ ಅಲ್ಪವಾದ ಪದ್ಮರೂಪವಾದ ಸದನವಿದೆ. ಅದರೊಳಗೆ ಅಲ್ಪವಾದ ಭೂತಾಕಾಶವಿದೆ. ಅದರೊಳಗೆ ಯಾವುದಿದೆಯೋ ಅದನ್ನು ಜಿಜ್ಞಾಸೆಮಾಡಬೇಕು' ಎಂದು ಗುರುಗಳು ಹೇಳಿದಾಗ ಶಿಷ್ಯರು ಕೇಳುತ್ತಾರೆ— ಈ ಶರೀರದಲ್ಲಿರುವ ಅಲ್ಪವಾದ ಪದ್ಮಸದನದೊಳಗಿರುವ ಅಲ್ಪವಾದ ಭೂತಾಕಾಶದಲ್ಲಿ ಇರುವುದು, ಜಿಜ್ಞಾಸ್ಯವೆಂದು ಹೇಳಲ್ಪಟ್ಟದು ಯಾವುದು ? ಇದಕ್ಕುತ್ತರವಾಗಿ ಗುರುಗಳು—'ಬಹಿಃಸ್ಥಿತನಾದ ಆಕಾಶಾಖ್ಯ ಭಗವಂತನು ಗುಣತಃ ಪರಿಮಾಣತಃ ಎಷ್ಟಿರುವನೋ ಅಷ್ಟೇ ಇರುವ ಆಕಾಶಾಖ್ಯ ಭಗವಂತನು ಹೃತ್ಪದ್ಮಗತವಾದ ಭೂತಾಕಾಶದಲ್ಲೂ ದ್ಯಾವಾಪೃಥಿವ್ಯಾದ್ಯಾಶ್ರಯನಾಗಿ ನೆಲಸಿರುವನು' ಎಂದು ಹೇಳುವರೆಂದು ಸಿದ್ಧಾಂತರೀತ್ಯಾ ಶ್ರುತಿಯ ಭಾವ.

"य आत्मा अपहतपाप्मा" इत्याद्युत्तरवाक्यस्थापहतपाप्मत्वादि-धर्मेभ्य इत्यर्थः ॥

इतश्चैवमित्याह—

## ॥ ॐ गतिशब्दाभ्यां तथा हि दृष्टं लिङ्गं च ॐ ॥
## १-३-१५

दहरे तत्त्वित्यस्ति । गतिः सुप्तप्राप्तिः । शब्दो ब्रह्मशब्दः । ताभ्यां सुप्तगम्यत्वलिङ्गब्रह्मशब्दाभ्यामुक्तरूपदहरस्थं ब्रह्मैवेत्यर्थः ।

---

'ತತ್ತು' ಎಂಬ ಪದಗಳು ಅನುವೃತ್ತಿಗೊಳ್ಳುತ್ತವೆ 'ದ್ಯುಭ್ವಾದ್ಯಾಯತನಂ' ಎಂಬ ಪದವು ಮಂಡೂಕಪ್ಲುತಿಯಿಂದ ಅನ್ವಿತವಾಗುವುದು. ಹಿಂದಿನ ಅಧಿಕರಣದಿಂದ 'ಸತ್' ಎಂಬ ಪದವೂ ಅನುವೃತ್ತಿಗೊಳ್ಳುತ್ತದೆ 'ಉಭೇ ಅಸ್ಮಿನ್ ದ್ಯಾವಾ ಪೃಥಿವೀ' ಇತ್ಯಾದಿ ವಾಕ್ಯದಿಂದ ಹೇಳಲ್ಪಟ್ಟ ದ್ಯುಭ್ವಾದ್ಯಾಯತನನಾಗಿದ್ದು ದಹರೇ-'ದಹರಂ ಪುಂಡರೀಕಂ ವೇಶ್ಮ' ಇತ್ಯಾದಿಯಾಗಿ ಹೇಳಲ್ಪಟ್ಟ ಅಲ್ಪವಾದ ಹೃತ್ಪದ್ಮದಲ್ಲಿರುವವನು 'ತತ್ತು'-ಬ್ರಹ್ಮನೇ, ಜೀವ ಮೊದಲಾದವರಲ್ಲ. ಏಕೆಂದರೆ, ಉತ್ತರೇಭ್ಯಃ-'ಯ ಆತ್ಮಾ ಅಪಹತಪಾಪ್ಮಾ' ಇತ್ಯಾದಿ ಉತ್ತರವಾಕ್ಯದಲ್ಲಿ ಹೇಳಿರುವ ಅಪಹತಪಾಪ್ಮತ್ವ ಮೊದಲಾದ ಧರ್ಮಗಳಿಂದ ಎಂದು ಅರ್ಥ

ಈ ಮುಂದಿನ ಕಾರಣದಿಂದಲೂ ಹೃತ್ಪದ್ಮಸ್ಥನು ಬ್ರಹ್ಮನೇ ಎಂದು ಹೇಳಲು ಸೂತ್ರ—

## ಓಂ ಗತಿಶಬ್ದಾಭ್ಯಾಂ ತಥಾ ಹಿ ದೃಷ್ಟಂ ಲಿಂಗಂ ಚ ಓಂ
## (೧-೩-೧೫)

**'ಗತಿಶಬ್ದಾಭ್ಯಾಂ' ಎಂಬ ಸೂತ್ರಾಂಶದ ವ್ಯಾಖ್ಯಾನ**

'ದಹರೇ' ಮತ್ತು 'ತತ್ತು' ಎಂಬ ಪದಗಳು ಅನುವೃತ್ತವಾಗುತ್ತವೆ. 'ಗತಿ' ಎಂದರೆ ಸುಪ್ತಜೀವನಿಂದ ಹೊಂದಲ್ಪಡುವಿಕೆ 'ಶಬ್ದ' ಎಂದರೆ ಬ್ರಹ್ಮಶಬ್ದ. [1]ಸುಪ್ತ ಗಮ್ಯತ್ವರೂಪವಾದ ಲಿಂಗ ಮತ್ತು ಬ್ರಹ್ಮಶಬ್ದಗಳಿಂದ ಹಿಂದೆ ಹೇಳಿದಂಥ ಅಲ್ಪವಾದ

---

1. 'ಸತಾ ಸೋಮ್ಯ ತದಾ ಸಂಪನ್ನೋ ಭವತಿ' (ಛಾಂ. ೬—೮) ಎಂಬಲ್ಲಿ ಸುಪ್ತ ಗಮ್ಯತ್ವವು ಬ್ರಹ್ಮಧರ್ಮವೆಂದು ಸಿದ್ಧವಾಗಿದೆ.

"अहरहर्गच्छन्त्य एतं ब्रह्मलोकं न विन्दन्ति" इति हृत्पद्मस्थस्य सुप्तप्रजाप्राप्यत्वोक्त्या ब्रह्मणो लोकमिति ब्रह्मलोकत्वोक्त्या च तत्स्थस्य सुप्तप्राप्यत्वं ब्रह्मशब्दवाच्यत्वं च सिद्धमिति भावः । इतश्चैवमित्याह तथाहीत्यादिना । यथा गतिशब्दौ हृत्पद्मस्थगौ तथा लिङ्गमरण्याख्य-सुधासमुद्राश्रयलोकवत्त्वरूपं लिङ्गं च हृत्पद्मस्थगं दृष्टं यतोऽतोऽपि दहरस्थं ब्रह्मेत्यर्थः । एतल्लोकवत्त्वं च विष्णौ प्रसिद्धमिति हेरर्थः ।

---

ಹೃತ್ಪದ್ಮದಲ್ಲಿರುವವನು ಬ್ರಹ್ಮನೇ ಎಂದು ಅರ್ಥ. [2] 'ಅಹರಹರ್ಗಚ್ಛಂತ್ಯ ಏತಂ ಬ್ರಹ್ಮಲೋಕಂ ನ ವಿಂದಂತಿ' ಎಂಬುದಾಗಿ ಹೃತ್ಪದ್ಮಸ್ಥನಿಗೆ ಸುಪ್ತಜೀವಪ್ರಾಪ್ಯತ್ವವನ್ನು ಹೇಳಿರುವುದರಿಂದ ಮತ್ತು ಬ್ರಹ್ಮನ ಲೋಕ ಎಂಬುದಾಗಿ (ಹೃತ್ಪದ್ಮಕ್ಕೆ) ಬ್ರಹ್ಮಲೋಕತ್ವವನ್ನು ಹೇಳಿರುವುದರಿಂದ ಹೃತ್ಪದ್ಮಸ್ಥನಿಗೆ ಸುಪ್ತಪ್ರಾಪ್ಯತ್ವ ಮತ್ತು ಬ್ರಹ್ಮಶಬ್ದವಾಚ್ಯತ್ವಗಳು ಸಿದ್ಧವಾಗುತ್ತವೆಂದು ಭಾವ.

## 'ತಥಾ ಹಿ ದೃಷ್ಟಂ ಲಿಂಗಂ ಚ' ಎಂಬ ಸೂತ್ರಾಂಶದ ವ್ಯಾಖ್ಯಾನ

ಈ ಮುಂದಿನ ಕಾರಣದಿಂದಲೂ ಹೃತ್ಪದ್ಮಸ್ಥನು ಬ್ರಹ್ಮನೇ ಎಂದು 'ತಥಾ ಹಿ' ಇತ್ಯಾದಿ ಸೂತ್ರದಿಂದ ಹೇಳಲಾಗಿದೆ ಹೇಗೆ ಗತಿ ಮತ್ತು ಶಬ್ದಗಳು ಹೃತ್ಪದ್ಮಸ್ಥನಿಗೆ ಸಂಬಂಧಿಸಿವೆಯೋ, ತಥಾ—ಹಾಗೆ, ಲಿಂಗಂ—ಅರಣ್ಯಾಖ್ಯ ಸುಧಾಸಮುದ್ರಾಶ್ರಯ ಲೋಕವತ್ತ್ವವೆಂಬ ಲಿಂಗವೂ ಹೃತ್ಪದ್ಮಸ್ಥನಲ್ಲಿದೆಯೆಂದು, ದೃಷ್ಟಂ—ಶ್ರುತಿಸಿದ್ಧವಾಗಿದೆ. ಆದ್ದರಿಂದಲೂ ದಹರಸ್ಥನು ಬ್ರಹ್ಮನೇ ಎಂದು ಅರ್ಥ. ಇಂತಹ ಲೋಕವನ್ನು ಹೊಂದಿರುವುದು ವಿಷ್ಣುವಿನಲ್ಲಿ ಪ್ರಸಿದ್ಧವೆಂದು 'ಹಿ' ಶಬ್ದದ ಅರ್ಥ. [1] 'ಅರಶ್ಚ ಹ ವೈ ಣ್ಯಶ್ಚಾರ್ಣವೌ ಬ್ರಹ್ಮಲೋಕೇ' ಎಂದು ಮುಂದಿನ ವಾಕ್ಯದಲ್ಲಿ ಅರ ಮತ್ತು ಣ್ಯ ಎಂಬ ಎರಡು ಸುಧಾಸಮುದ್ರಗಳಿಗೆ ಆಶ್ರಯವಾದ ವಿಷ್ಣುಲೋಕವನ್ನುದ್ದೇಶಿಸಿ ಪ್ರಯೋಗಿಸಿರುವ 'ಬ್ರಹ್ಮಲೋಕ' ಶಬ್ದವನ್ನು ಹೃತ್ಪದ್ಮವನ್ನುದ್ದೇಶಿಸಿ

---

2. 'ಇಮಾಃ ಸರ್ವಾಃ ಪ್ರಜಾಃ ಅಹರಹರ್ಗಚ್ಛಂತ್ಯ ಏತಂ ಬ್ರಹ್ಮಲೋಕಂ ನ ವಿಂದಂತಿ' (ಛಾಂ. ೮–೩–೨). ಸುಪ್ತರಾದ ಈ ಎಲ್ಲ ಪ್ರಜೆಗಳೂ ಪ್ರತಿದಿನವೂ ಈ ಬ್ರಹ್ಮನನ್ನು ಹೊಂದುವರಾದರೂ ಬ್ರಹ್ಮನ ಲೋಕ(ಆವಾಸಸ್ಥಾನ)ವಾದ ಹೃತ್ಪದ್ಮವನ್ನಾಗಲೀ, ಅಲ್ಲಿರುವ ಬ್ರಹ್ಮನನ್ನಾಗಲೀ ತಿಳಿಯುವುದಿಲ್ಲವೆಂದು ಶ್ರುತ್ಯರ್ಥ.

1. 'ಅರಶ್ಚ ಹ ವೈ ಣ್ಯಶ್ಚಾರ್ಣವೌ ಬ್ರಹ್ಮಲೋಕೇ' (ಛಾಂ. ೮–೫–೩) ಅರ ಮತ್ತು ಣ್ಯ ಎಂಬ ಹೆಸರಿನ ಸಮುದ್ರದಂತಿರುವ ಎರಡು ಸುಧಾಸರೋವರಗಳು ವಿಷ್ಣುಲೋಕವಾದ ಶ್ವೇತದ್ವೀಪದಲ್ಲಿವೆ ಎಂದು ಶ್ರುತ್ಯರ್ಥ.

"अरश्च ह वै ण्यश्चार्णवौ ब्रह्मलोके" इत्युत्तरवाक्येऽरण्याख्यसुधासमुद्राश्रये विष्णुलोके प्रयुक्तस्य ब्रह्मलोकशब्दस्य हृत्पद्मे "एतं ब्रह्मलोकम्" इति प्रयोगात् तत्स्थस्य तल्लोकवत्त्वमिति भावः । अस्य लिङ्गस्य हृत्पद्मस्थगतत्वं न स्पष्टमिति पृथगुक्तिः । अत एवास्य तत्स्थतां वक्तुं तथेत्युक्तिः । यद्वा ब्रह्मलोकमिति हृत्पद्मस्य विष्णुलोकत्वोक्त्या तत्स्थो विष्णुरित्युक्तम् । ब्रह्मलोकपदस्य विष्णुलोकवाचित्वं कुत इत्यत इदमुच्यते । लिङ्गं सुधासमुद्राश्रयलोकवत्त्वरूपलिङ्गं च दृष्टं तदाश्रयलोकवत्त्वं च विष्णुलोकलिङ्गं प्रसिद्धमिति हेरर्थः । हृत्पद्मे प्रयुक्तब्रह्मलोकपदमुत्तरत्र प्रयुज्य "अरश्च ह वै ण्यश्चार्णवौ ब्रह्मलोके"

---

[1] 'ಏತಂ ಬ್ರಹ್ಮಲೋಕಂ' ಎಂಬಲ್ಲಿ ಪ್ರಯೋಗಿಸಿರುವುದರಿಂದ ಹೃತ್ಪದ್ಮಸ್ಥನು ಅರಣ್ಯಾಖ್ಯ ಸುಧಾಸಮುದ್ರಾಶ್ರಯವಾದ ಲೋಕವುಳ್ಳವನೆಂದು ಭಾವ.

### 'ಗತಿಶಬ್ದ'ಗಳಿಂದ ಪ್ರತ್ಯೇಕಿಸಿ 'ಲಿಂಗ'ವನ್ನು ಹೇಳಲು ಕಾರಣ

ಈ ಲಿಂಗವು ಹೃತ್ಪದ್ಮಸ್ಥನಿಗೆ ಸಂಬಂಧಿಸಿರುವುದು ಸ್ಪಷ್ಟವಲ್ಲದ ಕಾರಣ ಇದನ್ನು ಪ್ರತ್ಯೇಕವಾಗಿ ಹೇಳಲಾಗಿದೆ. ಆದ್ದರಿಂದಲೇ (ಸ್ಪಷ್ಟವಲ್ಲದ ಕಾರಣದಿಂದಲೇ) ಈ ಲಿಂಗವು ಹೃತ್ಪದ್ಮಸ್ಥನಲ್ಲಿದೆಯೆಂದು ಹೇಳಲು 'ತಥಾ' ಎಂದು ಹೇಳಲಾಗಿದೆ.

### 'ತಥಾ ಹಿ ದೃಷ್ಟಂ ಲಿಂಗಂ ಚ' ಎಂಬ ಸೂತ್ರಭಾಗಕ್ಕೆ ವ್ಯಾಖ್ಯಾನಾಂತರ

ಅಥವಾ 'ಬ್ರಹ್ಮಲೋಕಂ' ಎಂಬಲ್ಲಿ ಹೃತ್ಪದ್ಮವನ್ನು ವಿಷ್ಣುಲೋಕವೆಂದು ಹೇಳಿರುವುದರಿಂದ ಹೃತ್ಪದ್ಮಸ್ಥನು ವಿಷ್ಣುವೆಂದು ಹೇಳಲಾಗಿದೆ. ಆದರೆ ಬ್ರಹ್ಮಲೋಕಪದವು ವಿಷ್ಣುಲೋಕವನ್ನು ಹೇಳುವುದೆಂಬುದರಲ್ಲಿ ಆಧಾರವೇನು ? ಎಂಬ ಪ್ರಶ್ನೆಗೆ ಉತ್ತರವಾಗಿ ಇದನ್ನು (ಲಿಂಗವನ್ನು) ಹೇಳಲಾಗಿದೆ. ಲಿಂಗಂ–ಸುಧಾಸಮುದ್ರಾಶ್ರಯಲೋಕವತ್ತ್ವರೂಪವಾದ ಲಿಂಗವೂ, ಶ್ರುತಿಸಿದ್ಧವಾಗಿದೆ. ಸುಧಾಸಮುದ್ರಾಶ್ರಯಲೋಕತ್ವವು ವಿಷ್ಣುಲೋಕದ ಧರ್ಮವೆಂಬುದು ಪ್ರಸಿದ್ಧವೆಂದು 'ಹಿ' ಶಬ್ದದ ಅರ್ಥ. ಹೃತ್ಪದ್ಮದಲ್ಲಿ ಪ್ರಯೋಗಿಸಿರುವ 'ಬ್ರಹ್ಮಲೋಕ' ಪದವನ್ನೇ ಮುಂದೆ ಪ್ರಯೋಗಿಸಿ 'ಅರಶ್ಚ ಹ ವೈ ಣ್ಯಶ್ಚಾರ್ಣವೌ ಬ್ರಹ್ಮಲೋಕೇ' ಎಂದು ಬ್ರಹ್ಮಲೋಕವನ್ನು ಸುಧಾಸಮುದ್ರಾಶ್ರಯಲೋಕವೆಂದು ಹೇಳಿರುವುದರಿಂದ ಸತ್ಯಲೋಕವು ಬ್ರಹ್ಮ

---

1. 'ಅಹರಹಃ ಗಚ್ಛಂತ್ಯ ಏತಂ ಬ್ರಹ್ಮಲೋಕಂ' (ಛಾಂ. ೮–೩–೨) ಎಂಬಲ್ಲಿ.

इति तदाश्रयलोकत्वोक्तेर्न सत्यलोको ब्रह्मलोकपदार्थ इति भावः । अत्र पक्षे ब्रह्मशब्दरूपहेतुसाधकत्वादस्य लिङ्गस्य पृथगुक्तिः ॥

इतश्चैवमित्याह—

॥ ॐ धृतेश्च महिम्नोऽस्यास्मिन्नुपलब्धेः ॐ ॥
१-३ १६

धृतेर्धारणाच्च "य आत्मा स सेतुर्विधृतिः" इति सर्वधारकत्व-

---

ಲೋಕಪದದ ಅರ್ಥವಲ್ಲವೆಂದು ಭಾವ. [1]ಈ ಪಕ್ಷದಲ್ಲಿ 'ಬ್ರಹ್ಮಶಬ್ದ'ವೆಂಬ ಹೇತುವಿಗೆ ಸಾಧಕವಾದ್ದರಿಂದ ಈ ಲಿಂಗವನ್ನು ಪ್ರತ್ಯೇಕವಾಗಿ ಹೇಳಲಾಗಿದೆ.

ಈ ಮುಂದಿನ ಕಾರಣದಿಂದಲೂ ಹೃತ್ಪದ್ಮಸ್ಥನು ಬ್ರಹ್ಮನೇ ಎಂದು ಹೇಳಲು ಸೂತ್ರ—

ಓಂ ಧೃತೇಶ್ಚ ಮಹಿಮ್ನೋಽಸ್ಯಾಸ್ಮಿನ್ನುಪಲಬ್ಧೇಃ ಓಂ
(೧-೩-೧೬)

**ಸೂತ್ರಾರ್ಥ**

ಧೃತೇಃ—ಧಾರಣದಿಂದಲೂ, [2]'ಯ ಆತ್ಮಾ ಸ ಸೇತುರ್ವಿಧೃತಿಃ' ಎಂದು

---

1. ಹೃತ್ಪದ್ಮವು ಬ್ರಹ್ಮಲೋಕವಾದ್ದರಿಂದ ಹೃತ್ಪದ್ಮಸ್ಥನು ಬ್ರಹ್ಮಶಬ್ದವಾಚ್ಯನು, ಆದ್ದರಿಂದ ವಿಷ್ಣುವು ಎಂದು ಹೇಳಿದೆ. ಆದರೆ ಬ್ರಹ್ಮಲೋಕ ಎಂಬಲ್ಲಿ ಬ್ರಹ್ಮಶಬ್ದವು ಚತುರ್ಮುಖನನ್ನು ಹೇಳಬಾರದೇಕೆ ಎಂಬ ಶಂಕೆ ತಲೆದೋರಬಹುದು. ಸುಧಾಸಮುದ್ರಾಶ್ರಯ ಲೋಕವತ್ತ್ವರೂಪ ಲಿಂಗವನ್ನು ಹೇಳಿದಾಗ ಬ್ರಹ್ಮಲೋಕವು ವಿಷ್ಣುಲೋಕವೇ, ಬ್ರಹ್ಮಪದವು ಚತುರ್ಮುಖಪರವಲ್ಲ ಎಂದು ತಿಳಿಯುವುದು. ಹೀಗೆ, ಈ ಪಕ್ಷದಲ್ಲಿ ಹೃತ್ಪದ್ಮಸ್ಥನು ವಿಷ್ಣುವೆಂದು ಸಾಧಿಸುವ, ಸೂತ್ರದಲ್ಲಿ ಹೇಳಿರುವ ಬ್ರಹ್ಮಶಬ್ದವೆಂಬ ಹೇತುವು ವಿಷ್ಣುಪರವೆಂದು ಸಾಧಿಸಲು ಸುಧಾಸಮುದ್ರಾಶ್ರಯ ಲೋಕವತ್ತ್ವರೂಪ ಲಿಂಗವನ್ನು ಹೇಳಿರುವುದರಿಂದ ಈ ಲಿಂಗವು ಸಾಕ್ಷಾತ್ತಾಗಿ ಹೃತ್ಪದ್ಮಸ್ಥನು ವಿಷ್ಣುವೆಂದು ಸಾಧಿಸುವುದಿಲ್ಲ. ಆದ್ದರಿಂದ ಇದನ್ನು ಪ್ರತ್ಯೇಕವಾಗಿ ಹೇಳಲಾಗಿದೆ ಎಂದು ಭಾವ.

2. 'ಅಥ ಯ ಆತ್ಮಾ ಸ ಸೇತುರ್ವಿಧೃತಿರೇಷಾಂ ಲೋಕಾನಾಮಸಂಭೇದಾಯ । ನೈತಂ ಸೇತುಂ ಅಹೋರಾತ್ರೇ ತರತೋ ನ ಜರಾ ನ ಮೃತ್ಯುರ್ನ ಶೋಕೋ ನ ಸುಕೃತಂ ನ ದುಷ್ಕೃತಂ ಸರ್ವೇ ಪಾಪ್ಮಾನೋ ಅತೋ ನಿವರ್ತಂತೇ ಅಪಹತಪಾಪ್ಮಾ ಹ್ಯೇಷ ಬ್ರಹ್ಮಲೋಕಃ' (ಛಾಂ. ೮-೪-೧)—ಹೃತ್ಪದ್ಮಸ್ಥನಾಗಿರುವ ಆತ್ಮನೇ ಈ ಎಲ್ಲ ಲೋಕಗಳು ನಾಶವಾಗದಿರಲು ಧಾರಣ ಪೋಷಣಗಳನ್ನು ಮಾಡುವ ಆಶ್ರಯನಾಗಿದ್ದಾನೆ. ಇಂತಹ ಆಶ್ರಯನಾದ ಭಗವಂತನನ್ನು ಹಗಲು ರಾತ್ರಿಗಳಾಗಲೀ, ಮುಪ್ಪು, ಸಾವು, ದುಃಖ, ಪುಣ್ಯಪಾಪಗಳಾಗಲೀ ಮುಟ್ಟಲಾರವು. ಎಲ್ಲ ಪಾಪಗಳೂ ಈ ಭಗವಂತನಿಂದ ಸರ್ವದಾ ದೂರವಿರುತ್ತವೆ. ಆದ್ದರಿಂದಲೇ ಬ್ರಹ್ಮನೆಂಬ ಈ ಸರ್ವಾಶ್ರಯನು (ಲೋಕ) ಅಪಹತಪಾಪ್ಮಾ ಎಂದು ಪ್ರಸಿದ್ಧನಾಗಿದ್ದಾನೆ ಎಂದು ಶ್ರುತ್ಯರ್ಥ.

लिङ्गश्रवणाच्च दहरे ब्रह्मैव । एतल्लिङ्गं हृत्पद्मस्थगमिति । कुतः ? अस्य हृत्पद्मस्थस्य महिम्नोऽपहतपाप्मत्वादेरस्मिन् वाक्ये उपलब्धेरित्येकोऽर्थः। "य आत्मा" इति प्रागुक्तहृत्पद्मस्थात्मपरामर्शेन "स सेतुः" इत्याद्युक्त्वा सर्वे पाप्मानोऽतो निवर्तन्त इत्याद्युक्तेरिति भावः । अन्यस्तु धृतिपदेन धृतियुक्तं वाक्यं गृह्यते । अस्मिन्निति च तन्त्रम् । चशब्द उपलब्धेश्चेत्यन्वेति । धृतेर्धृतिप्रतिपादकादेषसेतुर्विधारण इति वाक्यात् वाजसनेयसमाख्यानाद्दहरे ब्रह्मैवेति यावत् । तत्रापि ब्रह्मेति कुतः ? अस्य विष्णोर्महिम्नः सर्वाधिपतित्वादेरस्मिन् हृत्पद्मस्थे अस्मिन् वाजसनेये

---

ಸರ್ವಧಾರಕತ್ವರೂಪ ಲಿಂಗದ ಶ್ರವಣವಿರುವುದರಿಂದಲೂ ಅಲ್ಪವಾದ ಹೃತ್ಪದ್ಮದಲ್ಲಿರುವವನು ಬ್ರಹ್ಮನೇ ಈ ಲಿಂಗವು ಹೃತ್ಪದ್ಮಸ್ಥನಲ್ಲಿದೆ ಎಂಬುದರಲ್ಲಿ ಪ್ರಮಾಣವೇನು ? (ಎಂಬ ಪ್ರಶ್ನೆಗೆ ಉತ್ತರ) ಅಸ್ಯ-ಈ ಹೃತ್ಪದ್ಮಸ್ಥನ, ಮಹಿಮ್ನಃ-ಅಪಹತಪಾಪ್ಮತ್ವ ಮೊದಲಾದವುಗಳ, ಅಸ್ಮಿನ್--ಈ ವಾಕ್ಯದಲ್ಲಿ, ಉಪಲಬ್ಧಿಯಿರುವುದರಿಂದ ಎಂದು ಈ ಸೂತ್ರದ ಒಂದರ್ಥ. 'ಯ ಆತ್ಮಾ' ಎಂದು ಹಿಂದೆ ಹೇಳಿದ ಹೃತ್ಪದ್ಮಸ್ಥನಾದ ಆತ್ಮನನ್ನು ಪರಾಮರ್ಶಿಸಿ 'ಸ ಸೇತುಃ' ಇತ್ಯಾದಿಯಾಗಿ ಹೇಳಿ 'ಸರ್ವೇ ಪಾಪ್ಮಾನೋ ಅತೋ ನಿವರ್ತಂತೇ' (ಛಾಂ. ೮--೪-೧) ಇತ್ಯಾದಿ ಹೇಳಿರುವುದರಿಂದ ಎಂದು ಭಾವ.

**ಸೂತ್ರಕ್ಕೆ ವ್ಯಾಖ್ಯಾನಾಂತರ**

ಇನ್ನೊಂದರ್ಥವಾದರೋ ಹೀಗಿದೆ.— ಧೃತಿಪದದಿಂದ ಧೃತಿಯನ್ನು ಹೇಳುವ ವಾಕ್ಯವನ್ನು ತೆಗೆದುಕೊಳ್ಳಬೇಕು. ಅಸ್ಮಿನ್ ಎಂಬುದನ್ನು ಆವೃತ್ತಿಮಾಡಿಕೊಳ್ಳಬೇಕು 'ಚ' ಶಬ್ದವು ಉಪಲಬ್ಧೇಶ್ಚ ಎಂದು ಅನ್ವಿತವಾಗುತ್ತದೆ. ಧೃತೇಃ-ಧೃತಿಯನ್ನು ಪ್ರತಿಪಾದಿಸುವ 'ಏಷ ಸೇತುರ್ವಿಧಾರಣಃ' (ಬೃ. ೬-೪-೨೨) ಎಂಬ ವಾಕ್ಯದಿಂದ ಬೃಹದಾರಣ್ಯಕದ ಸಮಾಖ್ಯೆ ಇರುವುದರಿಂದ ಅಲ್ಪವಾದ ಹೃತ್ಪದ್ಮನಲ್ಲಿರುವವನು ಬ್ರಹ್ಮನೇ ಎಂದು ಅರ್ಥ. ಬೃಹದಾರಣ್ಯಕದಲ್ಲೂ ಬ್ರಹ್ಮನೇ ಪ್ರತಿಪಾದಿತನಾಗಿದ್ದಾನೆ ಎಂಬುದರಲ್ಲಿ ಪ್ರಮಾಣವೇನು ? ಎಂಬ ಪ್ರಶ್ನೆಗೆ ಉತ್ತರ— ಅಸ್ಯ-ವಿಷ್ಣುವಿನ, ಮಹಿಮ್ನಃ-ಸರ್ವಾಧಿಪತಿತ್ವ ಇತ್ಯಾದಿ ಮಹಿಮೆಯು, ಅಸ್ಮಿನ್-ಹೃತ್ಪದ್ಮಸ್ಥನಲ್ಲಿ, ಅಸ್ಮಿನ್-ಈ ಬೃಹದಾರಣ್ಯಕದಲ್ಲಿ, ಉಪಲಬ್ಧೇಶ್ಚ-ಉಪಲಬ್ಧಿ

*

उपलब्धेश्चेत्यर्थः। "य एषोन्तर्हृदय आकाशस्तस्मिन् शेते सर्वस्य वशी" इत्याद्युक्त्वा "एष सर्वेश्वर एष भूतपालः" इति विष्णुलिङ्गोक्त्या तस्य वैष्णवत्वं सिद्धमिति तत्समाख्यानाद्दहरे विष्णुरिति भावः।

इतश्चैवमित्याह—

॥ ॐ प्रसिद्धेश्च ॐ ॥ १-३-१७

"दहरं विपाप्मम्" इत्यादितैत्तिरीये विष्णोर्हृत्पद्मस्थत्वप्रसिद्धेश्च तत्समाख्यानाद्दहरे ब्रह्मैवेत्यर्थः।

---

ಇರುವುದರಿಂದಲೂ ಕೂಡ ಎಂದು ಅರ್ಥ. 'ಯ ಏಷೋ ಅಂತರ್ಹೃದಯ ಆಕಾಶಃ ತಸ್ಮಿನ್ ಶೇತೇ ಸರ್ವಸ್ಯ ವಶೀ' (ಬೃ. ೬-೪-೨೨) ಇತ್ಯಾದಿಯಾಗಿ ಹೇಳಿ, 'ಏಷ ಸರ್ವೇಶ್ವರಃ ಏಷ ಭೂತಪಾಲಃ' ಎಂಬುದಾಗಿ ವಿಷ್ಣುಲಿಂಗಗಳನ್ನು ಹೇಳಿರುವುದರಿಂದ ಬೃಹದಾರಣ್ಯಕದಲ್ಲಿ ಸರ್ವಾಶ್ರಯನೆಂದು ಹೇಳಲ್ಪಟ್ಟಿರುವವನು ವಿಷ್ಣುವೆಂದು ಸಿದ್ಧನಾಗುತ್ತಾನೆ. ಆದ್ದರಿಂದ ಬೃಹದಾರಣ್ಯಕದ ಸಮಾಖ್ಯೆಯಿಂದಲೂ ದಹರಸ್ಥನು ವಿಷ್ಣುವೆಂದು ಭಾವ.

ಈ ಮುಂದೆ ಹೇಳುವ ಕಾರಣದಿಂದಲೂ ಹೃತ್ಪದ್ಮಸ್ಥನು ಬ್ರಹ್ಮನೇ ಎಂದು ಹೇಳಲು ಸೂತ್ರ—

ಓಂ ಪ್ರಸಿದ್ಧೇಶ್ಚ ಓಂ (೧-೩-೧೭)

**ಸೂತ್ರಾರ್ಥ**

1 'ದಹರಂ ವಿಪಾಪ್ಮಂ' ಇತ್ಯಾದಿಯಾದ ತೈತ್ತಿರೀಯದಲ್ಲಿ ವಿಷ್ಣುವಿಗೆ ಹೃತ್ಪದ್ಮಸ್ಥತ್ವವು ಪ್ರಸಿದ್ಧವಾಗಿರುವುದರಿಂದಲೂ ತೈತ್ತಿರೀಯ ಶ್ರುತಿಯ ಸಮಾಖ್ಯೆಯಿಂದ ಅಲ್ಪವಾದ ಹೃತ್ಪದ್ಮದಲ್ಲಿರುವವನು ಬ್ರಹ್ಮನೇ ಎಂದು ಅರ್ಥ.

---

1. "ದಹರಂ ವಿಪಾಪ್ಮಂ ಪರವೇಶ್ಮಭೂತಂ ಯತ್ಪುಂಡರೀಕಂ ಪುರಮಧ್ಯಸಂಸ್ಥಮ್। ತತ್ರಾಪಿ ದಹ್ರಂ ಗಗನಂ ವಿಶೋಕಃ ತಸ್ಮಿನ್ ಯದಂತಸ್ತದುಪಾಸಿತವ್ಯಮ್॥" (ಮಹಾ ನಾರಾ. ೧೦) ಎಂದು ತೈತ್ತಿರೀಯಶಾಖೆಯ ಮಹಾನಾರಾಯಣೋಪನಿಷತ್ತಿನ ಶ್ರುತಿ. ದೇಹವೆಂಬ ಬ್ರಹ್ಮಪುರದ ಮಧ್ಯದಲ್ಲಿ ಅಲ್ಪವೂ ಪರಬ್ರಹ್ಮನ ನಿವಾಸವೂ ಆದ್ದರಿಂದಲೇ ಪಾಪರಹಿತವೂ ಆದ, ಯಾವ ಹೃದಯ ಕಮಲವಿದೆಯೋ ಅದರಲ್ಲೂ ಅಲ್ಪವಾದ ಗಗನವಿದೆ. ಅಲ್ಲಿರುವ ಶೋಕಾದಿರಹಿತವಾದ ಬ್ರಹ್ಮವು ಉಪಾಸ್ಯವಾದುದು ಎಂದು ಶ್ರುತ್ಯರ್ಥ.

उक्तमाक्षिप्याह—

॥ ॐ इतरपरामर्शात्स इति चेन्नासम्भवात् ॐ ॥

१-३-१८

"परंज्योतिरुपसम्पद्य" इति प्रकृतस्येतरस्य जीवस्य परामर्शात् "एष आत्मा" इत्येतच्छब्देन "य आत्माऽपहतपाप्मा" इत्यादिनोक्त-हृत्पद्मस्थस्यात्मत्वविधानाद्दहरे स जीव इति चेन्न । असम्भवात् । अपहतपाप्मत्वादिधर्माणां हृत्पद्मस्थे श्रुतानां जीवे असम्भवात् "एत-दमृतमभयम्" इत्युक्तामृतत्वादेश्च असम्भवादित्यर्थः ।

---

ಉಕ್ತವಾದುದನ್ನು ಆಕ್ಷೇಪಿಸಿ ಸಮಾಧಾನ ನೀಡುವ ಸೂತ್ರ—

ಓಂ ಇತರಪರಾಮರ್ಶಾತ್ ಸ ಇತಿ ಚೇನ್ನಾಸಂಭವಾತ್ ಓಂ (೧-೩-೧೮)

**ಸೂತ್ರಾರ್ಥ**

[1] 'ಪರಂಜ್ಯೋತಿರುಪಸಂಪದ್ಯ' ಎಂದು ಪ್ರಕೃತನಾದ ಇತರಸ್ಯ–ಜೀವನ, ಪರಾಮರ್ಶಾತ್–'ಏಷ ತ ಆತ್ಮಾ' ಎಂಬುದಾಗಿ 'ಏತತ್' ಶಬ್ದದಿಂದ ಜೀವನನ್ನು ಪರಾಮರ್ಶಿಸಿ ಆತ್ಮಶಬ್ದದಿಂದ, 'ಯ ಆತ್ಮಾ ಅಪಹತಪಾಪ್ಮಾ' ಇತ್ಯಾದಿಶ್ರುತಿಯಿಂದ ಹಿಂದೆ ಹೇಳಿರುವ ಹೃತ್ಪದ್ಮಸ್ಥನಿಗೆ ಆತ್ಮತ್ವವನ್ನು ಹೇಳಿರುವುದರಿಂದ ಹೃತ್ಪದ್ಮಸ್ಥನು ಜೀವನು ಎಂದರೆ ಅದು ಸರಿಯಲ್ಲ. ಏಕೆಂದರೆ, ಅಸಂಭವಾತ್–ಹೃತ್ಪದ್ಮಸ್ಥನಲ್ಲಿ ಶ್ರುತವಾಗಿರುವ ಅಪಹತಪಾಪ್ಮತ್ವಾದಿ ಧರ್ಮಗಳು ಜೀವನಲ್ಲಿ ಅಸಂಭಾವಿತವಾದ್ದರಿಂದ, 'ಏತದಮೃತಮಭಯಂ' ಎಂಬಲ್ಲಿ ಹೇಳಿರುವ ಅಮೃತತ್ವ ಮೊದಲಾದ ಧರ್ಮಗಳೂ ಅಸಂಭಾವಿತವಾದ್ದರಿಂದ ಎಂದು ಅರ್ಥ.

---

1. "ಅಥ ಯ ಏಷ ಸಂಪ್ರಸಾದೋಽಸ್ಮಾತ್ ಶರೀರಾತ್ ಸಮುತ್ಥಾಯ ಪರಂಜ್ಯೋತಿ-ರುಪಸಂಪದ್ಯ ಸ್ವೇನ ರೂಪೇಣಾಭಿನಿಷ್ಪದ್ಯತೇ ಏಷ ಆತ್ಮೇತಿ ಹೋವಾಚ ಏತದಮೃತಮಭಯ-ಮೇತದ್ ಬ್ರಹ್ಮ" (ಛಾಂ. ೮–೩) ಎಂದು ಶ್ರುತಿ. ವಿಷ್ಣುಪ್ರಸಾದವನ್ನು ಪಡೆದ ಅಧಿಕಾರಿಯು ಚರಮಶರೀರವನ್ನು ತ್ಯಜಿಸಿ ಪರಂಜ್ಯೋತಿಯನ್ನು ಹೊಂದಿ ಸ್ವಸ್ವರೂಪಾವಿರ್ಭಾವವನ್ನು ಪಡೆಯು ತ್ತಾನೆ. ಆ ಪರಂಜ್ಯೋತಿಯು ಆತ್ಮಶಬ್ದವಾಚ್ಯನು, ನಿತ್ಯಮುಕ್ತನು, ಭಯರಹಿತನು ಎಂದು ಸಿದ್ಧಾಂತದಲ್ಲಿ ಶ್ರುತ್ಯರ್ಥ. ಸ್ವಸ್ವರೂಪಾವಿರ್ಭಾವವನ್ನು ಪಡೆದ ಜೀವನನ್ನೇ 'ಏಷಃ' ಎಂದು ನಿರ್ದೇಶಿಸಿ ಆತ್ಮನೆಂದು ಇಲ್ಲಿ ಹೇಳಿದೆ ಎಂದು ಭ್ರಮಿಸಿ ಇಲ್ಲಿ ಪೂರ್ವಪಕ್ಷ ಮಾಡಲಾಗಿದೆ. 'ಯ ಆತ್ಮಾ ಅಪಹತಪಾಪ್ಮಾ' ಎಂದು ಹಿಂದೆ ಹೃತ್ಪದ್ಮಸ್ಥನನ್ನು ಆತ್ಮನೆಂದು ಕರೆಯಲಾಗಿದೆ. ಆತ್ಮನು ಜೀವನಾದಲ್ಲಿ ಹೃತ್ಪದ್ಮಸ್ಥನೂ ಜೀವನಾಗುವನು ಎಂದು ಆಕ್ಷೇಪದ ಅಭಿಪ್ರಾಯ.

उक्तासम्भवमाक्षिप्याह—

॥ ॐ उत्तराच्चेदाविर्भूतस्वरूपस्तु ॐ ॥ १-३-१९

तुरेव । स इति दहर इति चास्ति । नेति शेषः । उत्तरात् जीवस्य सत्यकामत्वप्रतिपादकात् "स तत्र पर्येति" इत्याद्युत्तरवाक्यात् । तत एवापहतपाप्मत्वादिसम्भवेन दहरे जीव इति चेन्न । आविर्भूत-स्वरूपस्तु मुक्त एवोच्यते सत्यकामत्वेन तत्रेत्यर्थः । "स्वेन रूपेणाभि-निष्पद्यते" इत्युक्तेः । हृत्पद्मस्थस्य देहान्तर्वर्तितया मुक्तत्वायोगादिति

---

ಹಿಂದಿನ ಸೂತ್ರದಲ್ಲಿ ಹೇಳಿದ ಅಸಂಭವವನ್ನು ಆಕ್ಷೇಪಿಸಿ ಸಮಾಧಾನ ಹೇಳುವ ಸೂತ್ರ—

ಓಂ ಉತ್ತರಾಚ್ಚೇದಾವಿರ್ಭೂತಸ್ವರೂಪಸ್ತು ಓಂ
(೧-೩-೧೯)

**ಸೂತ್ರಾರ್ಥ**

'ತು'ಶಬ್ದಕ್ಕೆ ಏವ ಎಂದು ಅರ್ಥ. 'ಸಃ' ಎಂಬ ಪದವನ್ನೂ 'ದಹರೇ' ಎಂಬ ಪದವನ್ನೂ ಅನುವೃತ್ತಿಮಾಡಿಕೊಳ್ಳಬೇಕು. 'ನ' ಎಂದು ಶೇಷವನ್ನು ಸೇರಿಸಿಕೊಳ್ಳಬೇಕು. ಉತ್ತರಾತ್–ಜೀವನಿಗೆ ಸತ್ಯಕಾಮತ್ವವನ್ನು ಪ್ರತಿಪಾದಿಸುವ 'ಸ ತತ್ರ ಪರ್ಯೇತಿ' (ಛಾಂ. ೮–೧೨–೩ ಎಂಬ ಮುಂದಿನ ವಾಕ್ಯದಿಂದ. ಆ ವಾಕ್ಯದಿಂದಲೇ (ಜೀವನಲ್ಲಿ) ಅಪಹತಪಾಪ್ಮತ್ವಾದಿಗಳು ಸಂಭವಿಸುವುದರಿಂದ ದಹರಸ್ಥನು ಜೀವನು ಎಂದರೆ ಅದು ಸರಿಯಲ್ಲ.1 'ಸ್ವೇನ ರೂಪೇಣಾಭಿನಿಷ್ಪದ್ಯತೇ' ಎಂದು ಹೇಳಿರುವುದರಿಂದ ಸ್ವರೂಪಾವಿರ್ಭಾವವನ್ನು ಪಡೆದ ಮುಕ್ತನೇ ಆ ವಾಕ್ಯದಲ್ಲಿ ಹೇಳಲ್ಪಟ್ಟಿದ್ದಾನೆ ಎಂದು ಅರ್ಥ. ಹೃತ್ಪದ್ಮಸ್ಥನು ದೇಹದೊಳಗಿರುವುದರಿಂದ ಮುಕ್ತತ್ವವು ಅವನಿಗೆ ಹೊಂದುವುದಿಲ್ಲವೆಂದು ಭಾವ.

**ಸೂತ್ರದಲ್ಲಿ ಮುಕ್ತಿಯ ಸ್ವರೂಪವನ್ನು ಹೇಳಿರುವುದರ ಉದ್ದೇಶ ಮತ್ತು 'ಉತ್ತರಾತ್' ಎಂಬ ಪ್ರಯೋಗದ ಸಾಧುತ್ವ**

'ಮುಕ್ತಸ್ತು' ಎಂದು ಹೇಳಬಹುದಾಗಿದ್ದರೂ ಶ್ರುತಿಪ್ರತಿಪಾದಿತವಾದ ಮುಕ್ತಿಯ ಸ್ವರೂಪವನ್ನು ಹೇಳಲು 'ಆವಿರ್ಭೂತಸ್ವರೂಪಸ್ತು' ಎಂದು ಹೇಳಲಾಗಿದೆ.

---

1. 'ಅಥ ಯ ಏಷ ಸಂಪ್ರಸಾದ' ಇತ್ಯಾದಿ ಶ್ರುತಿಯಲ್ಲಿ ಭಗವದನುಗ್ರಹದಿರಿದ ಮುಕ್ತನಾದ ಜೀವನು ಪ್ರತಿಪಾದಿತನಾಗಿದ್ದಾನೆ. 'ಯ ಆತ್ಮಾ ಅಪಹತಪಾಪ್ಮಾ' ಎಂಬಲ್ಲಿ ಹೇಳಿದ ಸ್ವಾಭಾವಿಕ ಅಪಹತಪಾಪ್ಮತ್ವವು ಮುಕ್ತಜೀವನಿಗೆ ಅಸಂಭಾವಿತವಾದದ್ದು. ಬಂಧಮುಕ್ತನಾದ ಜೀವನಿಗೆ ದೇಹಾಂತರ್ವರ್ತಿ ಹೃತ್ಪದ್ಮಸ್ಥವೂ ಯುಕ್ತವಲ್ಲ ಎಂದು ಭಾವ.

भावः । मुक्तस्त्वति वाच्ये श्रौतमुक्तिस्वरूपोक्त्यर्थैवमुक्तिः । "पूर्वादिभ्यो नवभ्यो वा" इत्युक्तेरुत्तरादिति साधु ॥

एष आत्मेति जीवपरामर्शबलात् कथञ्चिज्जीव एव दहरस्थ इत्यत आह—

॥ ॐ अन्यार्थश्च परामर्शः ॐ ॥ १-३-२०

च एव । अन्योऽर्थो विषयो यस्य सः । परंज्योतिरित्युक्तज्योतीरूपब्रह्मविषय एव परामर्शः । परामृश्यात्मत्वविधानमित्यर्थः । एष इति पुल्लिङ्गं त्वन्त्यात्मापेक्षयेति भावः ।

---

'ಪೂರ್ವಾದಿಭ್ಯೋ ನವಭ್ಯೋ ವಾ' ಎಂದು ಹೇಳಿರುವುದರಿಂದ 'ಉತ್ತರಾತ್' ಎಂಬ ಪ್ರಯೋಗವು ಸಾಧುವಾಗಿದೆ.[1]

'ಏಷ ಆತ್ಮಾ' ಎಂದು ಜೀವನನ್ನು ಪರಾಮರ್ಶಿಸಿರುವುದರ ಆಧಾರದಿಂದ ಹೇಗಾದರೂ ಜೀವನೇ ದಹರಸ್ಥನಾಗಬಾರದೇಕೆ ಎಂಬ ಆಕ್ಷೇಪಕ್ಕೆ ಸಮಾಧಾನ ಹೇಳುವ ಸೂತ್ರ—

ಓಂ ಅನ್ಯಾರ್ಥಶ್ಚ ಪರಾಮರ್ಶಃ ಓಂ (೧-೩-೨೦)

**ಸೂತ್ರಾರ್ಥ**

'ಚ'ಕಾರಕ್ಕೆ 'ಏವ' ಎಂದು ಅರ್ಥ. ಬೇರೆಯದಾದ ಅರ್ಥ ಎಂದರೆ ವಿಷಯವುಳ್ಳದ್ದು ಅನ್ಯಾರ್ಥ. ಪರಾಮರ್ಶವು ಅಂದರೆ ಏಷಃ ಎಂದು ಪರಾಮರ್ಶಿಸಿ ಆತ್ಮತ್ವವನ್ನು ವಿಧಾನಮಾಡಿರುವುದು 'ಪರಂಜ್ಯೋತಿ' ಎಂಬಲ್ಲಿ ಹೇಳಿರುವ ಜ್ಯೋತೀರೂಪ

---

1. 'ಙಸಿಙ್ಯೋಃ ಸ್ಮಾತ್ಸ್ಮಿನೌ' (ಪಾ. ಸೂ. ೭–೧–೧೫) ಎಂಬ ಪಾಣಿನಿಸೂತ್ರವು ಸರ್ವನಾಮಶಬ್ದಗಳ ಪಂಚಮೀ ಮತ್ತು ಸಪ್ತಮೀ ವಿಭಕ್ತಿಗಳಿಗೆ ಕ್ರಮವಾಗಿ ಸ್ಮಾತ್ ಮತ್ತು ಸ್ಮಿನ್ ಎಂಬ ಆದೇಶಗಳು ಬರುವುವೆಂದು ಹೇಳುತ್ತದೆ. ಉತ್ತರಶಬ್ದವು ಸರ್ವನಾಮಶಬ್ದವಾದ್ದರಿಂದ ಅದರ ಮುಂದಿನ ಪಂಚಮೀ ವಿಭಕ್ತಿಗೆ ಸ್ಮಾತ್ ಎಂಬ ಆದೇಶ ಬಂದು ಉತ್ತರಸ್ಮಾತ್ ಎಂಗು ರೂಪವಾಗಬೇಕಿದ್ದಿತು. ಉತ್ತರಾತ್ ಎಂಬ ಪ್ರಯೋಗ ಸರಿಯೇ ಎಂದು ಶಂಕೆ. ಪೂರ್ವಾದಿಭ್ಯೋ ನವಭ್ಯೋ ವಾ (ಪಾ. ಸೂ. ೭–೧–೧೬) ಎಂಬ ಮುಂದಿನ ಸೂತ್ರವು ಪೂರ್ವ ಮೊದಲಾದ ಒಂಬತ್ತು ಶಬ್ದಗಳ ಪಂಚಮೀ, ಸಪ್ತಮೀ ವಿಭಕ್ತಿಗಳಿಗೆ ಸ್ಮಾತ್‌ಸ್ಮಿನ್ ಆದೇಶಗಳು ವಿಕಲ್ಪವಾಗಿ ಬರುವುವು ಎಂದು ಹೇಳುವುದರಿಂದ ಪೂರ್ವಾದಿ ಶಬ್ದಗಳಲ್ಲಿ ಸೇರಿದ ಉತ್ತರಶಬ್ದದ ಪಂಚಮೀ ವಿಭಕ್ತಿಗೆ ಸ್ಮಾತ್ ಎಂಬ ಆದೇಶ ಬರದಿದ್ದಾಗ ಉತ್ತರಾತ್ ಎಂದು ರೂಪವಾಗುವುದು ಎಂದು ಸಮಾಧಾನ.

उक्तमाक्षिप्याह—

## ॥ ॐ अल्पश्रुतेरिति चेत्तदुक्तम् ॐ ॥ १-३-२१

"दहरं पुण्डरीकम्" इत्यादिना अल्पस्य स्थानस्य श्रवणाद्दहरे सः न ब्रह्मेति चेत् नेति शेषः। तत् अल्पस्थानस्थत्वमुक्तं निचाय्यत्वादित्यादिना समाहितमित्यर्थः। व्योम्नोऽशतोऽल्पौकस्त्वं युक्तम्। विष्णोरंशस्यापि पूर्णत्वादिति विशेषशङ्कानिरासार्थमिदं स्मरणम्।

---

ಬ್ರಹ್ಮವಿಷಯಕವಾದದ್ದು ಎಂದು ಅರ್ಥ. ಕೊನೆಯಲ್ಲಿರುವ 'ಆತ್ಮ'ಶಬ್ದವನ್ನು ಗಮನದಲ್ಲಿಟ್ಟುಕೊಂಡು 'ಏಷಃ' ಎಂದು ಪುಲ್ಲಿಂಗಪ್ರಯೋಗಮಾಡಲಾಗಿದೆ ಎಂದು ಭಾವ 1

ಬ್ರಹ್ಮನೇ ಹೃತ್ಪದ್ಮಸ್ಥನು ಎಂದು ಹೇಳಿರುವುದನ್ನು ಆಕ್ಷೇಪಿಸಿ ಸಮಾಧಾನ ನೀಡುವ ಸೂತ್ರ—

## ಓಂ ಅಲ್ಪಶ್ರುತೇರಿತಿ ಚೇತ್ತದುಕ್ತಮ್ ಓಂ (೧-೩-೨೧)

**ಸೂತ್ರಾರ್ಥ**

'ದಹರಂ ಪುಂಡರೀಕಂ' ಇತ್ಯಾದಿಯಾಗಿ ಅಲ್ಪವಾದ ಸ್ಥಾನವು ಶ್ರುತವಾಗಿರುವುದರಿಂದ ಅಲ್ಪವಾದ ಹೃತ್ಪದ್ಮದಲ್ಲಿರುವವನು ಬ್ರಹ್ಮನಲ್ಲ ಎಂದರೆ, ಅದು ಸರಿಯಲ್ಲ ಎಂದು ಶೇಷವನ್ನು ಸೇರಿಸಿಕೊಳ್ಳಬೇಕು. ತತ್–ಅಲ್ಪಸ್ಥಾನದಲ್ಲಿರುವಿಕೆಯು, ಉಕ್ತಂ–'ನಿಚಾಯ್ಯತ್ವಾತ್' (ಬ್ರ. ಸೂ. ೧–೨–೭) ಇತ್ಯಾದಿ ಸೂತ್ರದಿಂದ ತೃಪ್ತಿಕರವಾಗಿ ವಿವರಿಸಲ್ಪಟ್ಟಿದೆ.

### ಆಕಾಶವು ಅಲ್ಪಸ್ಥಾನಸ್ಥಿತವಾಗಬಹುದಾದರೂ ಬ್ರಹ್ಮವಾಗಲಾರದು ಎಂಬ ಆಶಂಕೆ ಮತ್ತು ಅದನ್ನು ಪರಿಹರಿಸುವ ಸೂತ್ರದ ವ್ಯಾಖ್ಯಾನಾಂತರ

ಆಕಾಶಕ್ಕೆ ಅದರ ಅಂಶಗಳ ದೃಷ್ಟಿಯಿಂದ ಅಲ್ಪಸ್ಥಾನಸ್ಥಿತತ್ವವು ಯುಕ್ತವಾಗಬಹುದು. ವಿಷ್ಣುವಿನ ಅಂಶಗಳೂ ಪೂರ್ಣವಾದುದರಿಂದ ಅಂಶಗಳ ದೃಷ್ಟಿಯಿಂದಲೂ ವಿಷ್ಣುವಿಗೆ ಅಲ್ಪಸ್ಥಾನಸ್ಥಿತತ್ವವು ಯುಕ್ತವಾಗಲಾರದು ಎಂಬ ವಿಶೇಷ ಶಂಕೆಯನ್ನು ನಿರಾಕರಿಸುವ ಸಲುವಾಗಿ ನಿಚಾಯ್ಯತ್ವಾತ್ ಇತ್ಯಾದಿ ಸೂತ್ರವನ್ನು ಸ್ಮರಿಸಲಾಗಿದೆ.

---

1. ಜ್ಯೋತೀರೂಪ ಬ್ರಹ್ಮನನ್ನು ಪರಾಮರ್ಶಿಸುವುದಾದಲ್ಲಿ ಜ್ಯೋತಿಃಶಬ್ದವು ನಪುಂಸಕಲಿಂಗದಲ್ಲಿರುವ ಕಾರಣ 'ಏತತ್' ಎಂದು ನಪುಂಸಕಲಿಂಗವಿರಬೇಕಾಗಿತ್ತು ಎಂದು ಶಂಕೆ. ಜ್ಯೋತಿಯನ್ನೇ ಪರಾಮರ್ಶಿಸಿದರೂ ಆತ್ಮಶಬ್ದವು ಪುಲ್ಲಿಂಗವಾದುದರಿಂದ ಅದಕ್ಕನುಗುಣವಾಗಿ 'ಏಷಃ' ಎಂದು ಪುಲ್ಲಿಂಗಪ್ರಯೋಗ ಎಂದು ಸಮಾಧಾನ.

तन्निरासश्च तदुक्तं तत्सर्वगतत्वेनैव हृत्पद्मस्थत्वं "एष म आत्माऽन्तर्हृदये ज्यायान् पृथिव्या" इत्यादिश्रुतावुक्तमिति वृत्त्यन्तराद्बोध्यः। अचिन्त्यशक्तित्वाद्युज्यत इति भावः ॥ ५ ॥

अनुकृत्यधिकरणम्—६

## ॥ ॐ अनुकृतेस्तस्य च ॐ ॥ १-३-२२

अत्र ज्ञानार्थं प्रार्थितत्वरूपमानुकूल्येन गृह्यमाणत्वं लिङ्गं

---

ಆ ಶಂಕೆಯ ನಿರಾಸವನ್ನು ತದುಕ್ತಂ-ಸರ್ವಗತವಾದುದರಿಂದಲೇ ಹೃತ್ಪದ್ಮಸ್ಥವೂ ಆಗುವುದು ಎಂಬುವುದು 'ಏಷ ಮ ಆತ್ಮಾ ಅಂತರ್ಹೃದಯೇ ಜ್ಯಾಯಾನ್ ಪೃಥಿವ್ಯಾಃ' (ಛಾಂ ೩-೧೪-೩) ಇತ್ಯಾದಿ ಶ್ರುತಿಯಲ್ಲಿ ಹೇಳಲ್ಪಟ್ಟಿದೆ ಎಂದು ವ್ಯಾಖ್ಯಾನಾಂತರದಿಂದ ತಿಳಿಯಬೇಕು. ಅಚಿಂತ್ಯಶಕ್ತಿಯುಳ್ಳವನಾದ್ದರಿಂದ ಬ್ರಹ್ಮನಿಗೆ ಅಲ್ಪಸ್ಥಾನಸ್ಥಿತತ್ವವು ಯುಕ್ತವಾಗುವುದೆಂದು ಭಾವ.

ಅನುಕೃತ್ಯಧಿಕರಣ—೬

## ಓಂ ಅನುಕೃತೇಸ್ತಸ್ಯ ಚ ಓಂ (೧-೩-೨೨)

### ಅಧಿಕರಣದ ಉದ್ದೇಶ ಮತ್ತು ಸೂತ್ರಾರ್ಥ

1 ಈ ಅಧಿಕರಣದಲ್ಲಿ 'ಜ್ಞಾನಾರ್ಥಂ ಪ್ರಾರ್ಥಿತತ್ವ'ರೂಪವಾದ ಆನುಕೂಲ್ಯೇನ ಗೃಹ್ಯಮಾಣತ್ವ ಎಂಬ ಲಿಂಗವನ್ನು ಸಮನ್ವಯಗೊಳಿಸಲಾಗುವುದು. ಅನ್ವಯಯೋಗ್ಯ

---

1. ಕಾಠಕೋಪನಿಷತ್ತಿನ ಪಂಚಮಖಂಡದಲ್ಲಿ ಬರುವ 'ತದೇತದಿತಿ ಮನ್ಯಂತೇಽನಿರ್ದೇಶ್ಯಂ ಪರಮಂ ಸುಖಮ್ | ಕಥಂ ನು ತದ್ವಿಜಾನೀಯಾಂ ಕಿಮು ಭಾತಿ ನ ಭಾತಿ ವಾ ॥' ಎಂಬ ಶ್ರುತಿ ಇಲ್ಲಿ ವಿಷಯವಾಕ್ಯ. 'ಕಥಂ ನು ಪುತ್ರಂ ಪಶ್ಯೇಯಂ ಸ ಆಗಚ್ಛತಿ ವಾ ನ ವಾ' ಎಂಬ ವಾಕ್ಯವು ಪುತ್ರದರ್ಶನಕ್ಕಾಗಿ ಅವನ ಆಗಮನದ ಪ್ರಾರ್ಥನೆಯನ್ನು ತಿಳಿಸುವಂತೆ 'ಕಥಂ ನು ತದ್ವಿಜಾನೀಯಾಂ ಕಿಮು ಭಾತಿ ನ ಭಾತಿ ವಾ' ಎಂಬ ಶ್ರುತಿಯು ಜ್ಞಾನಕ್ಕೋಸ್ಕರ ಅಧಿಕಾರಿಯು ಮಾಡುವ ಭಾನ ಅಥವಾ ಆವಿರ್ಭಾವದ ಪ್ರಾರ್ಥನೆಯನ್ನು ತಿಳಿಸುವುದು. ಹೀಗೆ ಜ್ಞಾನಾರ್ಥಂ ಪ್ರಾರ್ಥಿತತ್ವವೇ ಆನುಕೂಲ್ಯೇನ ಗೃಹ್ಯಮಾಣತ್ವ. ಈ ಹಿಂದಿನ ವಾಕ್ಯವಾದ 'ತದೇತದಿತಿ ಮನ್ಯಂತೇ ಅನಿರ್ದೇಶ್ಯಂ ಪರಮಂ ಸುಖಂ' ಎಂಬಲ್ಲಿ ಜ್ಞಾನಿಸುಖವು ಉಕ್ತವಾಗಿದೆ. ಆನುಕೂಲ್ಯೇನ ಗೃಹ್ಯಮಾಣತ್ವವು ಜ್ಞಾನಿಸುಖಕ್ಕೇ ಸಂಬಂಧಪಟ್ಟುದೆಂದು ಪೂರ್ವಪಕ್ಷ. ಮುಂದೆ 'ತಮೇವ ಭಾಂತಮನುಭಾತಿ ಸರ್ವಂ' ಎಂದು ಜ್ಞಾನಾರ್ಥವಾಗಿ ಪ್ರಾರ್ಥಿತನು ಸೂರ್ಯಾದಿಪ್ರಕಾಶಹೇತುವೆಂದು ಹೇಳಲಾಗಿದೆ. ಸೂರ್ಯಾದಿಪ್ರಕಾಶಹೇತುತ್ವವು ಜ್ಞಾನಿಸುಖದಲ್ಲಿಲ್ಲದಿರುವುದರಿಂದ ಆನುಕೂಲ್ಯೇನ ಗೃಹ್ಯಮಾಣವು ಬ್ರಹ್ಮನೇ. ಹಿಂದೆ 'ಪರಮಂ ಸುಖಂ' ಎಂದು ಹೇಳಿರುವುದೂ ಬ್ರಹ್ಮನೇ ಎಂದು ಸಿದ್ಧಾಂತ.

समन्वीयते । आनुकूल्येन गृह्यमाणमिति योग्यतयाऽन्वेति । अनुकृतिपदेनानुभानमुच्यते । तस्यापि क्रियात्वात् । तस्येति तन्त्रम् । "कथं नु तद्विजानीयां किमु भाति न भाति वा" इत्युक्तमानुकूल्येन गृह्यमाणं तत्तु ब्रह्मैव । न तु ज्ञानिसुखम् । कुतः ? तस्याऽनुकूल्येन गृह्यमाणस्यानुकृतेः सूर्यादिभिरनुभानात् । "तमेव भान्तमनुभाति सर्वम्" इति तदधीनभानश्रवणात् सूर्यादेरिति यावत् । किञ्च तस्य, वाक्यप्रतीकं चैतत्, "तस्य भासा सर्वमिदं विभाति" इति सर्वस्य तत्प्रकाश्यत्वोक्तेरित्यर्थः । चशब्देन "न तत्र सूर्यो भाति" इत्याद्युक्तसूर्याद्यप्रकाश्यत्वाच्चेति समुच्चीयते । "कथं नु तद्विजानीयाम्" इति वाक्यशेषे

ವಾದುದರಿಂದ 'ಆನುಕೂಲ್ಯೇನ ಗೃಹ್ಯಮಾಣಂ' ಎಂಬ ಪದಗಳು ಅನ್ವಯವನ್ನು ಹೊಂದುವವು. [1]ಅನುಭಾನವೂ ಒಂದು ಕ್ರಿಯೆಯಾದುದರಿಂದ ಅನುಕೃತಿಪದಕ್ಕೆ ಅನುಭಾನವೆಂದರ್ಥ 'ತಸ್ಯ' ಎಂಬುದನ್ನು ಎರಡು ಸಲ ಅನುಸಂಧಾನಮಾಡಿಕೊಳ್ಳಬೇಕು. 'ಕಥಂ ನು ತದ್ವಿಜಾನೀಯಾಂ ಕಿಮು ಭಾತಿ ನ ಭಾತಿ ವಾ' (ಕಠ. ೨-೨-೧೪) ಎಂಬಲ್ಲಿ ಹೇಳಿರುವ 'ಆನುಕೂಲ್ಯೇನ ಗೃಹ್ಯಮಾಣವು' ತತ್ತು-ಬ್ರಹ್ಮವೇ, ಜ್ಞಾನಿಗಳ ಸುಖವಲ್ಲ. ಏಕೆಂದರೆ, ತಸ್ಯ-ಆನುಕೂಲ್ಯೇನ ಗೃಹ್ಯಮಾಣದ, ಅನುಕೃತೇಃ-ಸೂರ್ಯಾದಿಗಳಿಂದ ಅನುಭಾನವಿರುವುದರಿಂದ, 'ತಮೇವ ಭಾಂತಂ ಅನುಭಾತಿ ಸರ್ವಂ' ಎಂಬುದಾಗಿ ಸೂರ್ಯಾದಿಗಳಿಗೆ ಆನುಕೂಲ್ಯೇನ ಗೃಹ್ಯಮಾಣನಿಗೆ ಅಧೀನವಾದ ಪ್ರಕಾಶವು ಶ್ರುತವಾಗಿರುವುದರಿಂದ ಎಂದು ಭಾವ. ಮತ್ತು 'ತಸ್ಯ' ಎನ್ನುವುದು ವಾಕ್ಯದ ಪ್ರತೀಕವೂ ಆಗಿದೆ. 'ತಸ್ಯ ಭಾಸಾ ಸರ್ವಮಿದಂ ವಿಭಾತಿ' ಎಂಬುದಾಗಿ ಎಲ್ಲವೂ ಅವನಿಂದ (ಆನುಕೂಲ್ಯೇನ ಗೃಹ್ಯಮಾಣನಿಂದ) ಪ್ರಕಾಶಿಸುವುದು ಎಂದು ಹೇಳಿರುವುದರಿಂದ ಎಂದು ಅರ್ಥ.[2] 'ಚ' ಶಬ್ದದಿಂದ 'ನ ತತ್ರ ಸೂರ್ಯೋ ಭಾತಿ' ಇತ್ಯಾದಿ ಶ್ರುತಿಯಲ್ಲಿ ಹೇಳಿರುವ 'ಸೂರ್ಯಾದಿಗಳಿಂದ ಪ್ರಕಾಶ್ಯವಾಗದಿರುವುದ

1. ಅನುಕೃತಿ ಎಂದರೆ ಅನುಸರಿಸಿ ಮಾಡುವ ಕ್ರಿಯೆ. ಆದ್ದರಿಂದ ಅನುಭಾನ ಅಥವಾ ಭಗವಂತನ ಪ್ರಕಾಶವನ್ನು ಅನುಸರಿಸಿ ಸೂರ್ಯಾದಿಗಳು ಪ್ರಕಾಶಿಸುವುದೂ ಅನುಕೃತಿಯೇ ಆಗಿದೆ.

2. ಸೂತ್ರದಲ್ಲಿರುವ 'ತಸ್ಯ' ಎಂಬ ಪದವನ್ನು ಆವೃತ್ತಿಮಾಡಿಕೊಳ್ಳಬೇಕೆಂದು ಹಿಂದೆ ಹೇಳಿದೆ. ಎರಡನೆಯ 'ತಸ್ಯ' ಶಬ್ದವು 'ತಸ್ಯ ಭಾಸಾ ಸರ್ವಮಿದಂ' ಇತ್ಯಾದಿ ಶ್ರುತಿಯ ಪ್ರತೀಕವಾಗಿದ್ದು ಆ ಶ್ರುತಿಯ ಅರ್ಥವಾದ ಸರ್ವಜಗತ್ಪ್ರಕಾಶಕತ್ವರೂಪ ಹೇತುವನ್ನು ಸೂಚಿಸುವುದೆಂದು ಭಾವ.

तमिति तस्येति तत्रेति तच्छब्दैरानुकूल्येन गृह्यमाणं परामृश्य सूर्यादितेजोनियन्तृत्व-सर्वप्रकाशकत्व-सूर्याद्यप्रकाश्यत्वाख्यनिरवकाश-लिङ्गत्रयोक्तेर्ब्रह्मैवेति भावः । अनुभानादिति वाच्ये अनुकृते-रित्युक्तिः सूर्यादिकृतमन्यदपि तपनादीशाधीनमिति दर्शयितुमित्युक्तं तत्त्वप्रदीपादौ । "तापनी पाचनी चैव" इत्यादिस्मृतेः । श्रुतौ सूर्याद्यप्रकाश्यत्वस्यादित्वेऽप्यनुकृत्युक्तिः तमिति पुल्लिङ्गत्वात् कथं

---

ರಿಂದಲೂ ಕೂಡ' ಎಂಬುದಾಗಿ ಸಮುಚ್ಚಯ ಮಾಡಿಕೊಳ್ಳಲಾಗುವುದು. [1] 'ಕಥಂ ನು ತದ್ವಿಜಾನೀಯಾಂ' ಎಂಬ ವಾಕ್ಯಶೇಷದಲ್ಲಿ 'ತಂ', 'ತಸ್ಯ', 'ತತ್ರ' ಎಂಬುದಾಗಿ ತಚ್ಛಬ್ದಗಳಿಂದ ಆನುಕೂಲ್ಯೇನ ಗೃಹ್ಯಮಾಣನನ್ನು ಪರಾಮರ್ಶಿಸಿ ಸೂರ್ಯಾದಿ ತೇಜೋನಿಯಾಮಕತ್ವ, ಸರ್ವಪ್ರಕಾಶಕತ್ವ, ಸೂರ್ಯಾದ್ಯಪ್ರಕಾಶ್ಯತ್ವ ಎಂಬ ನಿರವಕಾಶವಾದ ಮೂರು ಲಿಂಗಗಳನ್ನು ಹೇಳಿರುವುದರಿಂದ ಆನುಕೂಲ್ಯೇನ ಗೃಹ್ಯಮಾಣನು ಬ್ರಹ್ಮನೇ ಎಂದು ಭಾವ.

## ಸೂತ್ರದಲ್ಲಿ 'ಅನುಭಾನಾತ್' ಎಂಬುದರ ಬದಲು 'ಅನುಕೃತೇಃ' ಎಂದು ಹೇಳಿರುವುದರ ಉದ್ದೇಶ

[2] 'ತಾಪನೀ ಪಾಚನೀ ಚೈವ' ಇತ್ಯಾದಿ ಸ್ಮೃತಿ ಇರುವುದರಿಂದ ಸೂರ್ಯಾದಿಗಳು ಮಾಡುವ ಇತರ ಕ್ರಿಯೆಗಳೂ ಈಶ್ವರಾಧೀನವೆಂದು ತಿಳಿಸಲು 'ಅನುಭಾನಾತ್' ಎಂದು ಹೇಳಬೇಕಾಗಿದ್ದರೂ 'ಅನುಕೃತೇಃ' ಎಂದು ಹೇಳಲಾಗಿದೆ ಎಂದು ತತ್ವಪ್ರದೀಪ ಮೊದಲಾದ ಗ್ರಂಥಗಳಲ್ಲಿ ಹೇಳಿದೆ.

---

1. 'ಕಥಂ ನು ತದ್ವಿಜಾನೀಯಾಂ' ಎಂಬ ವಾಕ್ಯದ ಶೇಷ 'ನ ತತ್ರ ಸೂರ್ಯೋ ಭಾತಿ ನ ಚಂದ್ರತಾರಕಂ ನೇಮಾ ವಿದ್ಯುತೋ ಭಾಂತಿ ಕುತೋಽಯಮಗ್ನಿಃ । ತಮೇವ ಭಾಂತಂ ಅನುಭಾತಿ ಸರ್ವಂ ತಸ್ಯ ಭಾಸಾ ಸರ್ವಮಿದಂ ವಿಭಾತಿ ॥ ಎಂಬ ಶ್ರುತಿ. ಇಲ್ಲಿರುವ 'ತತ್ರ', 'ತಂ' 'ತಸ್ಯ' ಶಬ್ದಗಳಿಂದ ಆನುಕೂಲ್ಯೇನ ಗೃಹ್ಯಮಾಣ ಅಥವಾ ಜ್ಞಾನಾರ್ಥಂ ಪ್ರಾರ್ಥಿತನನ್ನು ಪರಾಮರ್ಶಿಸಿ ಕ್ರಮವಾಗಿ ಸೂರ್ಯಾದ್ಯಪ್ರಕಾಶ್ಯತ್ವ, ಸೂರ್ಯಾದಿತೇಜೋನಿಯಾಮಕತ್ವ ಮತ್ತು ಸರ್ವಪ್ರಕಾಶಕತ್ವ ಎಂಬ ಮೂರು ನಿರವಕಾಶಬ್ರಹ್ಮಲಿಂಗಗಳು ಹೇಳಲ್ಪಟ್ಟಿವೆಯಾದ್ದರಿಂದ ಆನುಕೂಲ್ಯೇನ ಗೃಹ್ಯಮಾಣನು ಬ್ರಹ್ಮನೆಂದು ತಾತ್ಪರ್ಯ.

2. ತಾಪನೀ ಪಾಚನೀ ಚೈವ ಶೋಷಿಣೀ ಚ ಪ್ರಕಾಶಿನೀ । ನೈವ ರಾಜನ್ ರವೇಃ ಶಕ್ತಿಃ ಶಕ್ತಿರ್ನಾರಾಯಣಸ್ಯ ಸಾ ॥ ಎಂದು ಮಹಾಭಾರತವಾಕ್ಯ. ಸುಡುವುದು, ಪಕ್ವಗೊಳಿಸುವುದು, ಒಣಗಿಸುವುದು, ಬೆಳಗಿಸುವುದು ಮೊದಲಾದ, ಸೂರ್ಯನಲ್ಲಿ ನಾವು ನೋಡುವ ಶಕ್ತಿಗಳೆಲ್ಲವೂ ಭಗವದಧೀನವೆಂದು ಇದರ ಭಾವ. ಸೂರ್ಯಾದಿಗಳ ಅನುಭಾನ ಅಥವಾ ಪ್ರಕಾಶನಕ್ರಿಯೆ ಮಾತ್ರವಲ್ಲದೆ ಅನ್ಯ ಕೃತಿಗಳೂ ಭಗವದಧೀನವೆಂದು ಸೂಚಿಸಲು 'ಅನುಕೃತೇಃ' ಎಂದು ಹೇಳಿದೆ ಎಂದು ಭಾವ.

"कथं नु तत्" इत्युक्तं तमित्यादिना परामृश्यत इति पूर्वपक्षमूलत्वाद्वा, क्रियान्तरमपि तदधीनमिति ज्ञापयितुं वेति । अत एव "किमु भाति" इत्युक्तदुर्ज्ञेयस्य "न तत्र सूर्यो भाति" इति प्रत्यभिज्ञानात् संनिहितपरामर्शिप्रातिपदिकप्राबल्याच्च तदेव परामृश्यत इति वक्तुं तस्यानुकृतेरित्याह । अन्यथाऽनुकृतेरित्येवावक्ष्यत् ॥

---

**ಶ್ರುತಿಗನುಗುಣವಾಗಿ ಸೂರ್ಯಾದ್ಯಪ್ರಕಾಶ್ಯತ್ವವನ್ನು ಹೇಳದೆ ಅನುಕೃತಿಯನ್ನು ಹೇಳಿರುವುದರ ಉದ್ದೇಶ**

[1]" 'ತಂ' ಎಂಬುದು ಪುಲ್ಲಿಂಗವಾದ್ದರಿಂದ 'ಕಥಂ ನು ತತ್' ಎಂದು ಹೇಳಿರುವುದನ್ನು ಪರಾಮರ್ಶಿಸಲು ಹೇಗೆ ಸಾಧ್ಯ?" ಎಂಬ ಪೂರ್ವಪಕ್ಷಕ್ಕೆ ಆಧಾರವಾದ್ದರಿಂದ ಅಥವಾ ಇತರ ಕ್ರಿಯೆಗಳೂ ಭಗವದಧೀನ ಎಂದು ಜ್ಞಾಪಿಸುವ ಉದ್ದೇಶದಿಂದ [2]ಶ್ರುತಿಯಲ್ಲಿ ಸೂರ್ಯಾದ್ಯಪ್ರಕಾಶ್ಯತ್ವವನ್ನು ಮೊದಲು ಹೇಳಿದ್ದರೂ ಸೂತ್ರದಲ್ಲಿ ಅನುಕೃತಿಯನ್ನು ಹೇಳಲಾಗಿದೆ. [3]ಆದ್ದರಿಂದಲೇ [4]'ಕಿಮು ಭಾತಿ' ಎಂಬಲ್ಲಿ ಹೇಳಿರುವ ದುರ್ಜ್ಞೇಯನನ್ನೇ 'ನ ತತ್ರ ಸೂರ್ಯೋ ಭಾತಿ' ಎಂದು ಸ್ಮರಿಸಿರುವುದ

---

1. " 'ತಮೇವ ಭಾಂತಂ' ಎಂಬಲ್ಲಿ ಹೇಳಿರುವ ಸೂರ್ಯಾದಿತೇಜೋನಿಯಾಮಕತ್ವರೂಪ ಬ್ರಹ್ಮಲಿಂಗವು ಆನುಕೂಲ್ಯೇನ ಗೃಹ್ಯಮಾಣನಿಗೆ ಸಂಬಂಧಿಸಿದ್ದಲ್ಲ. ಏಕೆಂದರೆ, ಆನುಕೂಲ್ಯೇನ ಗೃಹ್ಯಮಾಣನು 'ಕಥಂ ನು ತತ್' ಇತ್ಯಾದಿ ಶ್ರುತಿಯಲ್ಲಿ ನಪುಂಸಕಲಿಂಗದ ತತ್ ಶಬ್ದದಿಂದ ಪ್ರಸ್ತುತನಾಗಿದ್ದು ಅವನನ್ನು ಪುಲ್ಲಿಂಗದ 'ತಂ' ಶಬ್ದದಿಂದ ಪರಾಮರ್ಶಿಸಲು ಸಾಧ್ಯವಿಲ್ಲ. ಆದ್ದರಿಂದ ಆನುಕೂಲ್ಯೇನ ಗೃಹ್ಯಮಾಣನು ಬ್ರಹ್ಮನಲ್ಲ" ಎಂಬ ಪೂರ್ವಪಕ್ಷಕ್ಕೆ ಮೂಲವಾದ ಯುಕ್ತಿಯು ಅನುಕೃತಿಯನ್ನು ಹೇಳುವ 'ತಮೇವ ಭಾಂತಂ' ಇತ್ಯಾದಿ ವಾಕ್ಯದಲ್ಲಿದೆ. ಆದ್ದರಿಂದ ಸೂತ್ರದಲ್ಲಿ ಅನುಕೃತಿಯನ್ನು ಹೇಳಿದೆ ಎಂದು ಭಾವ.

2. 'ನ ತತ್ರ ಸೂರ್ಯೋ ಭಾತಿ' ಇತ್ಯಾದಿ ಶ್ರುತಿಯಲ್ಲಿ.

3. ಪುಲ್ಲಿಂಗ ತತ್ ಶಬ್ದದಿಂದ 'ಕಥಂ ನು ತತ್' ಎಂಬಲ್ಲಿ ನಪುಂಸಕಲಿಂಗ ತತ್ ಶಬ್ದದಿಂದ ಪರಾಮರ್ಶಿಸುವುದು ಯುಕ್ತವಾದುದರಿಂದಲೇ.

4. ಪುಲ್ಲಿಂಗ ತತ್ ಪದದಿಂದ ಆನುಕೂಲ್ಯೇನ ಗೃಹ್ಯಮಾಣನೇ ಪರಾಮೃಶ್ಯನೆಂದು ಹೇಳಲು ಎರಡು ಕಾರಣಗಳು. ಒಂದು 'ಕಿಮು ಭಾತಿ ನ ಭಾತಿ ವಾ' ಎಂಬಲ್ಲಿ ಆನುಕೂಲ್ಯೇನ ಗೃಹ್ಯಮಾಣನು ದುರ್ಜ್ಞೇಯನೆಂದು ಹೇಳಿರುವುದನ್ನೇ 'ತಮೇವ ಭಾಂತಂ' ಎಂಬ ವಾಕ್ಯದ ಹಿಂದಿನ ವಾಕ್ಯವಾದ 'ನ ತತ್ರ ಸೂರ್ಯೋ ಭಾತಿ' ಎಂಬಲ್ಲಿ ಪ್ರತ್ಯಭಿಜ್ಞಾನ ಮಾಡಿರುವುದು. ಎರಡು— 'ನಿತ್ಯೋ ನಿತ್ಯಾನಾಂ' ಎಂದು ಪುಲ್ಲಿಂಗ ಪದಗಳಿಂದ ಪ್ರಸ್ತುತನಾದ ವ್ಯವಹಿತನಾದ ಚೇತನನನ್ನೇ ತಮೇವ ಎಂಬಲ್ಲಿರುವ ತತ್ ಪದದಿಂದ ಪರಾಮರ್ಶಿಸಬೇಕು ಎಂದು ಸೂಚಿಸುವ ಪುಲ್ಲಿಂಗಕ್ಕಿಂತಲೂ, ಸನ್ನಿಹಿತವಾದುದನ್ನೇ ಪರಾಮರ್ಶಿಸುವ 'ತಂ' ಎಂಬಲ್ಲಿನ ತತ್ ಪ್ರಾತಿಪದಿಕಕ್ಕೆ ಪ್ರಾಬಲ್ಯವಿರುವುದು.

पूर्वोक्तलिङ्गत्रयस्य वैष्णवत्वं श्रुतिस्मृतिभ्यामाह—

## ॥ ॐ अपि स्मर्यते ॐ ॥ १-३-२३

अपिः श्रूयत इति समुच्चिनोति । "अहं तत्तेजो रश्मीत्" इत्यत्र तेज इति सर्वप्रकाशकत्वं रश्मीदिति सूर्यादितेजोनियन्तृत्वं श्रूयते । "यदादित्यगतं तेजः" इति स्मृतौ "मामकम्" इत्यनेन

---

ರಿಂದ ಮತ್ತು ಸನ್ನಿಹಿತವಾದುದನ್ನು ಪರಾಮರ್ಶಿಸುವ [1]ಪ್ರಾತಿಪದಿಕಕ್ಕೆ ಪ್ರಾಬಲ್ಯವಿರುವುದರಿಂದ ಆನುಕೂಲ್ಯೇನ ಗೃಹ್ಯಮಾಣನೇ ತಮೇವ ಎಂಬಲ್ಲಿರುವ ತತ್ ಪದದಿಂದ ಪರಾಮರ್ಶಿಸಲ್ಪಡುತ್ತಾನೆ ಎಂದು ಸೂಚಿಸಲು 'ತಸ್ಯ ಅನುಕೃತೇಃ' ಎಂದು ಹೇಳಿದ್ದಾರೆ. ಇಲ್ಲದಿದ್ದಲ್ಲಿ 'ಅನುಕೃತೇಃ' ಎಂದಿಷ್ಟು ಮಾತ್ರ ಸೂತ್ರಕಾರರು ಹೇಳುತ್ತಿದ್ದರು.

ಹಿಂದೆ ಹೇಳಿದ ಮೂರು ಲಿಂಗಗಳೂ ವಿಷ್ಣುಸಂಬಂಧಿಯೆಂದು ಶ್ರುತಿಸ್ಮೃತಿಗಳಿಂದ ಹೇಳುವ ಸೂತ್ರ—

## ಓಂ ಅಪಿ ಸ್ಮರ್ಯತೇ ಓಂ (೧-೩-೨೩)

**ಸೂತ್ರಾರ್ಥ**

ಅಪಿ ಶಬ್ದವು 'ಶ್ರೂಯತೇ' ಎಂಬುದನ್ನು ಸಮುಚ್ಚಯಗೊಳಿಸುತ್ತದೆ. [2] 'ಅಹಂ ತತ್ತೇಜೋ ರಶ್ಮೀತ್' ಎಂಬ ಶ್ರುತಿಯಲ್ಲಿ ತೇಜಃ ಶಬ್ದದಿಂದ ಸರ್ವಪ್ರಕಾಶಕತ್ವವೂ, 'ರಶ್ಮೀತ್' ಎಂಬುದರಿಂದ ಸೂರ್ಯಾದಿತೇಜೋನಿಯಾಮಕತ್ವವೂ ನಾರಾಯಣನಲ್ಲಿ ಶ್ರುತವಾಗಿದೆ. 'ಯದಾದಿತ್ಯಗತಂ ತೇಜಃ' ಎಂಬ ಸ್ಮೃತಿಯಲ್ಲಿ[3] 'ಮಾಮಕಂ'

---

1. ಲಿಂಗ–ಪ್ರಾತಿಪದಿಕ ಇವೆರಡರಲ್ಲಿ ಪ್ರಾತಿಪದಿಕವೇ ಪ್ರಬಲವೆಂದು ಮೀಮಾಂಸಕರ ನಿರ್ಣಯ.

2. ಅಹಂ ತತ್ತೇಜೋ ರಶ್ಮೀತ್ ನಾರಾಯಣಂ ಪುರುಷಂ ಜಾತಮಗ್ರತಃ । ಪುರುಷಾತ್ ಪ್ರಕೃತಿರ್ಜಗದಂಡಂ ತ್ರಿಪುರುಷಂ ಮಾಯಾಬೀಜಮಜಾಯತ ॥ ಎಂದು ಚತುರ್ವೇದಶಿಖಾ ಎಂಬ ಶ್ರುತಿ. ಅಹಂ–ಅಹೇಯನೂ, ತತ್–ವ್ಯಾಪ್ತನೂ, ತೇಜಃ–ಜಗತ್ಪ್ರಕಾಶಕನೂ, ರಶ್ಮೀತ್–ಅಲ್ಪವಾದ ಸೂರ್ಯಾದಿತೇಜಸ್ಸಿನ ಪ್ರಕಾಶಕನೂ, ಪುರುಷಂ–ಪೂರ್ಣಷಡ್ಗುಣನೂ ಆದ ನಾರಾಯಣಂ–ನಾರಾಯಣಾಖ್ಯ ಬ್ರಹ್ಮವು, ಅಗ್ರತಃ ಜಾತಂ–ಪ್ರಲಯಕಾಲದಲ್ಲಿದ್ದಿತು. ಪುರುಷಾತ್'–ಆ ಪುರುಷನಿಂದ, ಪ್ರಕೃತಿಃ–ಪ್ರಕೃತಿಯೂ, ಜಗತ್–ಜೀವಸಮುದಾಯವೂ, ತ್ರಿಪುರುಷಂ–ಬ್ರಹ್ಮವಾಯುರುದ್ರಾಖ್ಯ ಪುರುಷತ್ರಯಸಹಿತವಾದ, ಮಾಯಾಬೀಜಂ–ಪ್ರಕೃತಿಯೇ ಉಪಾದಾನವಾಗುಳ್ಳ, ಅಂಡಂ–ಬ್ರಹ್ಮಾಂಡವೂ, ಅಜಾಯತ–ಹುಟ್ಟಿತು ಎಂದು ಶ್ರುತ್ಯರ್ಥ.

3 "ಯದಾದಿತ್ಯಗತಂ ತೇಜೋ ಜಗದ್ಭಾಸಯತೇಽಖಿಲಮ್ । ಯಚ್ಚಂದ್ರಮಸಿ ಯಚ್ಚಾಗ್ನೌ ತತ್ತೇಜೋ ವಿದ್ಧಿ ಮಾಮಕಮ್ ।" (ಗೀ. ೧೫–೧೨). "ಅಖಿಲ ಜಗತ್ತನ್ನೂ ಪ್ರಕಾಶಿಸುವ ಯಾವ ತೇಜಸ್ಸು ಆದಿತ್ಯನಲ್ಲಿದೆಯೋ, ಹಾಗೆಯೇ ಚಂದ್ರ, ಅಗ್ನಿ ಇವುಗಳಲ್ಲಿ ಯಾವ ತೇಜಸ್ಸಿದೆಯೋ ಅದು ನನ್ನದೇ, ನನಗೆ ಅಧೀನವಾದದ್ದು ಎಂದು ತಿಳಿ" ಎಂದು ಶ್ಲೋಕಾರ್ಥ.

तद्द्वयं स्मर्यते । मामकं मदधीनं मदीयश्चेत्यर्थात् । "न तद्भासयते सूर्यः" इति तृतीयं स्मर्यत इत्यर्थः । यद्वा यथाटीकं सूत्रद्वयं लिङ्गद्वयपरम् । स्मृताविव श्रुतौ विवक्षितार्थस्यास्फुटत्वात् सा अपिना समुच्चिता । स्मृतिस्तु स्वशब्दोक्ता । यद्वा पूर्वत्र चशब्दोऽनुकृतेस्तस्येत्युक्तसर्वप्रकाशकत्वाच्चेति हेतुद्वयसमुच्चये । अत्रापि हेत्वन्तरसमुच्चये । "न तद्भासयते" इति सूर्याद्यप्रकाश्यत्वं विष्णोः स्मर्यते । अतोऽप्यानुकूल्येन गृह्यमाणं ब्रह्मैवेत्यस्य वृत्त्यन्तरं बोध्यम् ॥ ६ ॥

---

ಎಂಬುದರಿಂದ ಈ ಎರಡೂ ಲಿಂಗಗಳು ಸ್ಮೃತವಾಗಿವೆ. ಏಕೆಂದರೆ, 'ಮಾಮಕಂ' ಎಂದರೆ ನನಗೆ ಅಧೀನವಾದದ್ದು ಮತ್ತು ನನ್ನದು ಎರಡೂ ಅರ್ಥವಾಗುವುದು. [1] 'ನ ತದ್ಭಾಸಯತೇ ಸೂರ್ಯಃ' ಎಂಬುದಾಗಿ ಮೂರನೆಯ ಲಿಂಗವು ಸ್ಮೃತವಾಗಿದೆ.

### ಈ ಸೂತ್ರಕ್ಕೆ ತತ್ತ್ವಪ್ರಕಾಶಿಕಾರೀತ್ಯಾ ವ್ಯಾಖ್ಯಾನಾಂತರ

ಅಥವಾ, ತತ್ತ್ವಪ್ರಕಾಶಿಕೆಗನುಸಾರವಾಗಿ [2]ಎರಡು ಸೂತ್ರಗಳೂ ಎರಡು ಲಿಂಗಗಳಲ್ಲಿ ತಾತ್ಪರ್ಯವುಳ್ಳವು. ಸ್ಮೃತಿಯಲ್ಲಿ ವಿವಕ್ಷಿತವಾದ ಅರ್ಥವು ಸ್ಫುಟವಾಗಿರುವಂತೆ [3]ಶ್ರುತಿಯಲ್ಲಿ ಸ್ಫುಟವಾಗಿಲ್ಲದ ಕಾರಣ ಶ್ರುತಿಯನ್ನು ಅಪಿಶಬ್ದದಿಂದ ಸಮುಚ್ಚಯಗೊಳಿಸಲಾಗಿದೆ. ಆದರೆ ಸ್ಮೃತಿಯನ್ನು[4] ಸ್ವಶಬ್ದದಿಂದಲೇ ಹೇಳಲಾಗಿದೆ.

### ಇದೇ ಸೂತ್ರಕ್ಕೆ ತತ್ತ್ವಪ್ರಕಾಶಿಕೆಯಲ್ಲಿ ಹೇಳಿದ ಇನ್ನೊಂದು ವ್ಯಾಖ್ಯಾನ

ಅಥವಾ, ಹಿಂದಿನ ಸೂತ್ರದಲ್ಲಿ 'ಚ'ಶಬ್ದವು [5]ಅನುಕೃತಿಯಿಂದ ಮತ್ತು 'ತಸ್ಯ'[6] ಎಂಬಲ್ಲಿ ಹೇಳಿರುವ ಸರ್ವಪ್ರಕಾಶಕತ್ವದಿಂದ ಎಂಬುದಾಗಿ ಹೇತುದ್ವಯದ ಸಮುಚ್ಚಯ

---

1. "ನ ತದ್ಭಾಸಯತೇ ಸೂರ್ಯೋ ನ ಶಶಾಂಕೋ ನ ಪಾವಕಃ । ಯದ್ ಗತ್ವಾ ನ ನಿವರ್ತಂತೇ ತದ್ಧಾಮ ಪರಮಂ ಮಮ ॥" (ಗೀ. ೧೫–೬). "ಯಾವುದನ್ನು ಪಡೆದು ಜ್ಞಾನಿಗಳು ಹಿಂದಿರುಗುವುದಿಲ್ಲವೋ ಆ ಸರ್ವೋತ್ತಮವಾದ ಸ್ವರೂಪವು ನನ್ನದು. ಆ ಸ್ವರೂಪವನ್ನು ಸೂರ್ಯನಾಗಲೀ, ಚಂದ್ರನಾಗಲೀ, ಅಗ್ನಿಯಾಗಲೀ ಪ್ರಕಾಶಿಸಲಾರದು" ಎಂದು ಅರ್ಥ. ಈ ಶ್ಲೋಕವು ಸೂರ್ಯಾದ್ಯಪ್ರಕಾಶ್ಯತ್ವರೂಪವಾದ ಮೂರನೆಯ ಲಿಂಗವನ್ನು ತಿಳಿಸುವುದು.

2. ಅನುಕೃತೇಸ್ತಸ್ಯ ಚ, ಅಪಿ ಸ್ಮರ್ಯತೇ ಈ ಎರಡು ಸೂತ್ರಗಳಿಗೂ ಸೂರ್ಯಾದಿ ತೇಜೋನಿಯಾಮಕತ್ವ, ಸಕಲಜಗತ್ಪ್ರಕಾಶಕತ್ವ ಎಂಬ ಎರಡು ಲಿಂಗಗಳಲ್ಲೇ ತಾತ್ಪರ್ಯ.

3 ಅಹಂ ತತ್ತೇಜೋ ರಶ್ಮೀತ್ ಇತ್ಯಾದಿ ಶ್ರುತಿಯಲ್ಲಿ.

4. ಸ್ಮೃತಿಶಬ್ದದಿಂದಲೇ.

5. ಅನುಭಾನ ಅಥವಾ ಸೂರ್ಯಾದಿ ತೇಜೋನಿಯಾಮಕತ್ವದಿಂದ.

6. 'ತಸ್ಯ ಭಾಸಾ ಸರ್ವಮಿದಂ ವಿಭಾತಿ' ಎಂಬಲ್ಲಿ.

वामनाधिकरणम्—७

## ॥ ॐ शब्दादेव प्रमितः ॐ ॥ १-३-२४

**अत्र नये ईशाननाम समन्वीयते । तच्च योग्यतयाऽन्वेति । तत्त्वित्यस्ति । “अङ्गुष्ठमात्रः पुरुषो मध्य आत्मनि तिष्ठति, “ईशानो भूतभव्यस्य” इत्युक्त ईशानो ब्रह्मैव प्रमितः । ईशानशब्दो ब्रह्ममात्र-वाचित्वेन प्रमितो न तु वायुवाचित्वेनेत्यर्थः । “मध्ये वामन-मासीनम्” इति वामनशब्दादेवेत्यर्थः । एवेति प्राणादिव्यवस्थापक-त्वादिवायुलिङ्गाच्छ्रुतेः प्राबल्यमुच्यते । प्रमित इति निरवकाशत्वम् ॥**

---

ವನ್ನು ಹೇಳುತ್ತದೆ. ಈ ಸೂತ್ರದಲ್ಲಿ 'ಅಪಿ' ಶಬ್ದವು [1]ಇನ್ನೊಂದು ಹೇತುವಿನ ಸಮುಚ್ಚಯವನ್ನು ಹೇಳುವುದು 'ನ ತದ್ ಭಾಸಯತೇ' ಎಂದು ಸೂರ್ಯಾದ್ಯಪ್ರಕಾಶ್ಯತ್ವವು ವಿಷ್ಣುವಿಗೆ ಸ್ಮರಿಸಲ್ಪಟ್ಟಿದೆ. ಆದ್ದರಿಂದಲೂ ಆನುಕೂಲ್ಯೇನ ಗೃಹ್ಯಮಾಣನು ಬ್ರಹ್ಮನೇ ಎಂದು ವ್ಯಾಖ್ಯಾನಾಂತರವನ್ನು ತಿಳಿಯಬೇಕು.

### ವಾಮನಾಧಿಕರಣ—೭

## ಓಂ ಶಬ್ದಾದೇವ ಪ್ರಮಿತಃ ಓಂ (೧--೩--೨೪)

**ಅಧಿಕರಣದ ಉದ್ದೇಶ ಮತ್ತು ಸೂತ್ರಾರ್ಥ**

[2]ಈ ಅಧಿಕರಣದಲ್ಲಿ ಈಶಾನ ಎಂಬ ನಾಮಾತ್ಮಕ ಶಬ್ದವನ್ನು ಸಮನ್ವಯಗೊಳಿಸ

---

1. ಹಿಂದಿನ ಸೂತ್ರದಲ್ಲಿ ಹೇಳಿದ ಎರಡು ಹೇತುಗಳಿಗೆ ಸೂರ್ಯಾದ್ಯಪ್ರಕಾಶ್ಯತ್ವ ಎಂಬ ಇನ್ನೊಂದು ಹೇತುವಿನ ಸಮುಚ್ಚಯವನ್ನು ಹೇಳುತ್ತದೆ.

2. "ಅಂಗುಷ್ಠಮಾತ್ರಃ ಪುರುಷಃ ಮಧ್ಯ ಆತ್ಮನಿ ತಿಷ್ಠತಿ । ಈಶಾನೋ ಭೂತಭವ್ಯಸ್ಯ ತತೋ ನ ವಿಜುಗುಪ್ಸತೇ ॥" (ಕಾ. ೪—೧೨) ಎಂಬ ಶ್ರುತಿ ಇಲ್ಲಿ ವಿಷಯವಾಕ್ಯ. ಅಂಗುಷ್ಠಮಾತ್ರದಷ್ಟು ಪರಿಮಾಣದ ಅಭಿವ್ಯಕ್ತಿಯುಳ್ಳ ಪೂರ್ಣಷಡ್ಗುಣರೂಪನಾದ ಭಗವಂತನು ದೇಹದ ಮಧ್ಯವಾದ ಹೃದಯದಲ್ಲಿದ್ದಾನೆ. ಅವನು ಭೂತಭವಿಷ್ಯತ್‌ವರ್ತಮಾನಗಳಿಗೆ ಪ್ರೇರಕನಾಗಿದ್ದಾನೆ. ಆದ್ದರಿಂದಲೇ ಅವನನ್ನು ತಿಳಿದವನು ತನ್ನನ್ನು ರಕ್ಷಿಸಿಕೊಳ್ಳಲು ಇಷ್ಟಪಡುವುದಿಲ್ಲ ಎಂದು ಸಿದ್ಧಾಂತದಲ್ಲಿ ಶ್ರುತ್ಯರ್ಥ. ಇಲ್ಲಿ ಶ್ರುತನಾಗಿರುವ ಈಶಾನನು ಪ್ರಾಣನೆಂದು ಪೂರ್ವಪಕ್ಷ.

ಊರ್ಧ್ವಂ ಪ್ರಾಣಮುನ್ನಯತ್ಯಪಾನಂ ಪ್ರತ್ಯಗಸ್ಯತಿ ।
ಮಧ್ಯೇ ವಾಮನಮಾಸೀನಂ ವಿಶ್ವೇ ದೇವಾ ಉಪಾಸತೇ ॥ (ಕಾ. ೫—೩)

ಎಂಬಲ್ಲಿ ಶ್ರುತವಾಗಿರುವ ಪ್ರಾಣಾದಿವ್ಯವಸ್ಥಾಪಕತ್ವ, ಮಧ್ಯಮತ್ವ ಮತ್ತು ಸರ್ವದೇವೋಪಾಸ್ಯತ್ವಗಳೆಂಬ ಪ್ರಾಣನ ಲಿಂಗಗಳು ಪೂರ್ವಪಕ್ಷಪ್ರಾಪಕಯುಕ್ತಿಗಳು. ನಿರವಕಾಶ ವಿಷ್ಣುಶ್ರುತಿಯಾದ ವಾಮನಶಬ್ದವಿರುವುದರಿಂದ ಈಶಾನನು ವಿಷ್ಣುವೇ ಎಂದು ಸಿದ್ಧಾಂತ.

ननु कथमङ्गुष्ठमात्र इत्युक्त तन्मात्रत्वं ब्रह्मण इत्यत आह—

## ॥ ॐ हृद्यपेक्षया तु मनुष्याधिकारत्वात् ॐ ॥
## १-३-२५

"अङ्गुष्ठमात्र" इति योग्यतयाऽन्वेति । तत्त्वित्यस्ति । तुरेव । अप्यर्थे च । हृदीति तत्स्थावकाश उच्यते । हृत्स्थावकाशापेक्षयैव ब्रह्माख्यपुरुषोऽङ्गुष्ठमात्र उच्यते न तु स्वत इत्यर्थः । हृदयाकाशरूपस्थानगतं तद्गते विष्णावुपचयर्त इति भावः । तन्मात्रपरिमाणतया

ಲಾಗುತ್ತದೆ. ಅನ್ವಯಯೋಗ್ಯತೆಯಿರುವುದರಿಂದ ಈಶಾನ ಎಂಬ ಶಬ್ದವು ಅನ್ವಯವನ್ನು ಹೊಂದುತ್ತದೆ 'ತತ್ತು' ಎಂಬ ಪದಗಳು ಅನುವೃತ್ತಿಗೊಳ್ಳುತ್ತವೆ 'ಅಂಗುಷ್ಠ ಮಾತ್ರಃ ಪುರುಷೋ ಮಧ್ಯ ಆತ್ಮನಿ ತಿಷ್ಠತಿ | ಈಶಾನೋ ಭೂತಭವ್ಯಸ್ಯ' ಎಂಬಲ್ಲಿ ಹೇಳಲ್ಪಟ್ಟ ಈಶಾನನು ಬ್ರಹ್ಮನೇ ಎಂದು [1]ಪ್ರಮಿತನಾಗಿದ್ದಾನೆ. ಈಶಾನಶಬ್ದವು ಬ್ರಹ್ಮನನ್ನು ಮಾತ್ರ ಹೇಳುವುದು ಎಂದು ಪ್ರಮಿತವಾಗಿದೆ ಹೊರತು ವಾಯುವಾಚಕವೆಂದು ಪ್ರಮಿತವಲ್ಲ ಎಂದು ಅರ್ಥ. 'ಮಧ್ಯೇ ವಾಮನಮಾಸೀನಂ' ಎಂದು ವಾಮನ ಶಬ್ದದಿಂದಲೇ ಎಂದು ಅರ್ಥ 'ಏವ' ಶಬ್ದವು ಪ್ರಾಣಾದಿವ್ಯವಸ್ಥಾಪಕತ್ವ ಮೊದಲಾದ ವಾಯುಲಿಂಗಗಳಿಗಿಂತಲೂ ಶ್ರುತಿಯು ಪ್ರಬಲವಾದದ್ದು ಎಂದು ತಿಳಿಸುತ್ತದೆ. 'ಪ್ರಮಿತ' ಪದವು ಶ್ರುತಿಯು ನಿರವಕಾಶವೆಂದು ಸೂಚಿಸುತ್ತದೆ.

'ಅಂಗುಷ್ಠಮಾತ್ರಃ' ಎಂಬಲ್ಲಿ ಹೇಳಿರುವ ಅಂಗುಷ್ಠಪರಿಮಾಣವು ಬ್ರಹ್ಮನಲ್ಲಿರುವುದು ಹೇಗೆ ಸಾಧ್ಯ ಎಂಬ ಆಕ್ಷೇಪಕ್ಕೆ ಉತ್ತರ—

## ಓಂ ಹೃದ್ಯಪೇಕ್ಷಯಾ ತು ಮನುಷ್ಯಾಧಿಕಾರತ್ವಾತ್ ಓಂ
## (೧-೩-೨೫)

**ಸೂತ್ರಾರ್ಥ**

ಅನ್ವಯಯೋಗ್ಯವಾದುದರಿಂದ 'ಅಂಗುಷ್ಠಮಾತ್ರಃ' ಎಂದು ಅನ್ವಿತವಾಗುತ್ತದೆ. 'ತತ್ತು' ಎಂಬ ಪದಗಳು ಅನುವೃತ್ತಿಗೊಳ್ಳುತ್ತವೆ. 'ತು' ಶಬ್ದಕ್ಕೆ ಏವ ಎಂದು ಅರ್ಥ. ಅಪಿ ಶಬ್ದದ ಅರ್ಥವೂ ಇದೆ. 'ಹೃದಿ' ಎಂಬುದು ಹೃದಯದಲ್ಲಿರುವ ಅವಕಾಶವನ್ನು ಹೇಳುತ್ತದೆ. ಹೃದಯದಲ್ಲಿರುವ ಅವಕಾಶದ ದೃಷ್ಟಿಯಿಂದಲೇ ಬ್ರಹ್ಮನು ಅಂಗುಷ್ಠಪರಿಮಾಣನೆಂದು ಹೇಳಲ್ಪಟ್ಟಿದ್ದಾನೆ ಹೊರತು ಸ್ವಾಭಾವಿಕವಾಗಲ್ಲ. ಹೃದಯಾಕಾಶರೂಪವಾದ ಸ್ಥಾನದಲ್ಲಿರುವುದನ್ನು ಹೃದಯಾಕಾಶದಲ್ಲಿರುವ

1. ಮಹಾಯೋಗ–ವಿದ್ವದ್ರೂಢಿಗಳಿಂದ ಈಶಾನಶಬ್ದವಾಚ್ಯನೆಂದು ಪ್ರಸಿದ್ಧನಾಗಿದ್ದಾನೆ.

व्यक्तहृत्स्थरूपापेक्षयेत्यपि मुख्योऽर्थः टीकातो भाति । पश्वादीनामङ्गुष्ठाभावेऽप्यङ्गुष्ठमात्र इति विद्याया मनुष्याधिकारत्वात् "अङ्गुष्ठमात्रः पुरुषः" इति युक्तमित्यर्थः । पश्वादिगतस्याङ्गुष्ठमात्रत्वानुक्तेरिति भावः ॥ ७ ॥

देवताधिकरणम्

## ॥ ॐ तदुपर्यपि बादरायणः सम्भवात् ॐ ॥
## १-३-२६

अत्र देवानामधिकारोऽस्तीति प्रसङ्गादुच्यते । अधिकार इति

---

ವಿಷ್ಣುವಿನಲ್ಲಿ ಉಪಚಾರದಿಂದ ಹೇಳಲಾಗಿದೆ ಎಂದು ಭಾವ. 'ಅಂಗುಷ್ಠಮಾತ್ರ ಪರಿಣಾಮವುಳ್ಳದ್ದಾಗಿ ಅಭಿವ್ಯಕ್ತವಾಗುವ ಹೃದಯದಲ್ಲಿರುವ ಭಗವದ್ರೂಪದ ದೃಷ್ಟಿಯಿಂದ' ಎಂಬ ಮುಖ್ಯವಾದ ಅರ್ಥವೂ ತತ್ತ್ವಪ್ರಕಾಶಿಕೆಯಿಂದ ತಿಳಿದುಬರುತ್ತದೆ.

**'ಮನುಷ್ಯಾಧಿಕಾರತ್ವಾತ್' ಎಂಬ ಸೂತ್ರಾಂಶದ ವ್ಯಾಖ್ಯಾನ**

ಪಶು ಮೊದಲಾದವುಗಳಿಗೆ ಅಂಗುಷ್ಠವಿಲ್ಲದಿದ್ದರೂ 'ಅಂಗುಷ್ಠಮಾತ್ರಃ' ಎಂದು ತಿಳಿಸುವ ವಿದ್ಯೆಗೆ ಮನುಷ್ಯರು ಅಧಿಕಾರಿಗಳಾದ್ದರಿಂದ 'ಅಂಗುಷ್ಠಮಾತ್ರಃ ಪುರುಷಃ' ಎಂದು ಹೇಳಿರುವುದು ಯುಕ್ತವೆಂದು ಅರ್ಥ. ಪಶ್ವಾದಿಗಳಲಿ[illegible] ಹೃದಯದ್ರೂಪಕ ಅಂಗುಷ್ಠಮಾತ್ರತ್ವವನ್ನು ಹೇಳಿಲ್ಲವೆಂದು ಭಾವ.

ದೇವತಾಧಿಕರಣ—೮

## ಓಂ ತದುಪರ್ಯಪಿ ಬಾದರಾಯಣಃ ಸಂ[illegible]
## (೧-೩-೨೬)

**ಅಧಿಕರಣದ ಉದ್ದೇಶ ಮತ್ತು ಸೂತ್ರಾರ್ಥ**

ಈ ಅಧಿಕರಣದಲ್ಲಿ [1]ಪ್ರಾಸಂಗಿಕವಾಗಿ ದೇವತೆಗಳಿಗೂ ವೇದವಿದ್ಯಾಧಿಕಾರವಿದೆ

---

1. 'ಹೃದ್ಯಪೇಕ್ಷಯಾ ತು ಮನುಷ್ಯಾಧಿಕಾರತ್ವಾತ್' ಎಂಬ ಹಿಂದಿನ ಸೂತ್ರದಲ್ಲಿ ಮನುಷ್ಯರಿಗೇ ವೇದವಿದ್ಯೆಯಲ್ಲಿ ಅಧಿಕಾರ ಎಂಬ ಮಾತು ಬಂದಿದೆ. ಹಾಗಾದರೆ ದೇವತೆಗಳಿಗೆ ಅಧಿಕಾರವಿಲ್ಲವೇ ಎಂಬ ಪ್ರಶ್ನೆ ಪ್ರಸ್ತುತವಾಗುವುದರಿಂದ ಪ್ರಸಂಗವಶಾತ್ ಈ ಅಧಿಕರಣವು ದೇವತೆಗಳಿಗೆ ವೇದವಿದ್ಯಾಧಿಕಾರವನ್ನು ಸಮರ್ಥಿಸುವುದು. ಆದ್ದರಿಂದ, ಸಕಲಶಬ್ದಗಳನ್ನೂ ಪರಬ್ರಹ್ಮನಲ್ಲಿ

विभागविपरिणामाभ्यामस्ति । तदुपरि तस्य प्रकृतस्य मनुष्यत्वस्योपरि विद्याकर्मभ्यां देवत्वप्राप्त्यनन्तरमपि । देवानामपीति यावत् । अधिकारोऽस्ति । कुतः ? सम्भवात् । विशिष्टबुद्ध्यादेः सम्भवादिति बादरायण आहेत्यर्थः । बादरायण इति विमतिसूचनाय । देवानामिति वाच्ये तदुपरीत्युक्तिर्देवत्वस्य सादित्वादिना मोक्षार्थिता युक्तेति सूचयितुम् । अपीत्यनेन न केवलं तेषां मनुष्यत्वदशायामित्याह । पूरणगुणेत्यत्र सना तव्येन च साहचयात् कृदन्ताव्ययेनैव समासनिषेधात्तदुपरीति साधु ॥

---

ಯೆಂದು ಹೇಳಲಾಗುತ್ತದೆ. 'ಅಧಿಕಾರ' ಎಂಬ ಪದವು ವಿಭಾಗ ಮತ್ತು ವಿಭಕ್ತಿ ವ್ಯತ್ಯಾಸಗಳೊಂದಿಗೆ ಅನುವೃತ್ತಿಗೊಳ್ಳುತ್ತದೆ. ತದುಪರಿ—ತಸ್ಯ-ಪ್ರಸಕ್ತವಾದ ಮನುಷ್ಯತ್ವದ, ಉಪರಿ-(ಅನಂತರ) ವಿದ್ಯೆ ಮತ್ತು ಕರ್ಮಗಳಿಂದ ದೇವತ್ವಪ್ರಾಪ್ತ್ಯನಂತರವೂ ಕೂಡ, ದೇವತೆಗಳಿಗೂ ಎಂದು ತಾತ್ಪರ್ಯ, ಅಧಿಕಾರವಿದೆ. ಏಕೆಂದರೆ, ಸಂಭವಾತ್-ವಿಶಿಷ್ಟಬುದ್ಧಿ ಮೊದಲಾದವುಗಳಿರುವುದರಿಂದ ಎಂದು ಬಾದರಾಯಣರು ಹೇಳುತ್ತಾರೆ ಎಂದು ಅರ್ಥ.

**ಸೂತ್ರದ ಪದಗಳ ಸ್ವಾರಸ್ಯ**

'ಬಾದರಾಯಣಃ' ಎಂಬ ಪದವು ಭಿನ್ನಾಭಿಪ್ರಾಯವನ್ನು ಸೂಚಿಸುವುದಕ್ಕೋಸ್ಕರ. 'ದೇವಾನಾಂ' ಎಂದು ಹೇಳಬಹುದಾಗಿದ್ದರೂ 'ತದುಪರಿ' ಎಂದು ಹೇಳಿರುವುದು ದೇವತ್ವಕ್ಕೆ ಉತ್ಪತ್ತಿ ಮೊದಲಾದವುಗಳಿರುವುದರಿಂದ ದೇವತೆಗಳಿಗೆ ಮೋಕ್ಷದಲ್ಲಿ ಅಭಿಲಾಷೆಯು ಯುಕ್ತವಾದುದು ಎಂದು ಸೂಚಿಸಲು. 'ಅಪಿ' ಪದದಿಂದ 'ಆ ದೇವತೆಗಳಿಗೆ ಮನುಷ್ಯತ್ವದೆಶೆಯಲ್ಲಿ ಮಾತ್ರವಲ್ಲದೇ ದೇವತ್ವದೆಶೆಯಲ್ಲಿಯೂ ಅಧಿಕಾರವುಂಟು' ಎಂದು ಸೂತ್ರಕಾರರು ಹೇಳುತ್ತಾರೆ.

---

ಸಮನ್ವಯ ಮಾಡಲು ಹೊರಟಿರುವ ಈ ಅಧ್ಯಾಯದಲ್ಲಿ ಈ ಅಧಿಕರಣ ಅಸಂಗತವೆಂಬ ಆಕ್ಷೇಪಕ್ಕೆ ಅವಕಾಶವಿಲ್ಲವೆಂದು ಭಾವ.

ದೇವತ್ವವು ಅನಾದಿನಿತ್ಯವಾದುದರಿಂದ ದೇವತೆಗಳಿಗೆ ಮೋಕ್ಷಾದಿಫಲದಲ್ಲಿ ಅಭಿಲಾಷೆಯೇ ಇಲ್ಲ. ಅರ್ಥಿತ್ವವೂ ಅಧಿಕಾರದ ಲಕ್ಷಣವಾದ್ದರಿಂದ ಅರ್ಥಿತ್ವವಿಲ್ಲದ ದೇವತೆಗಳಿಗೆ ಅಧಿಕಾರವು ಇಲ್ಲವೆಂದು ಈ ಅಧಿಕರಣದ ಪೂರ್ವಪಕ್ಷ. ವೇದವಿದ್ಯಾಧಿಕಾರಕ್ಕೆ ಆವಶ್ಯಕವಾದ ವಿಶಿಷ್ಟಬುದ್ಧಿ, ದೇವತ್ವಕ್ಕೂ ಆದ್ಯಂತಗಳಿರುವುದರಿಂದ ಮೋಕ್ಷಾದಿ ವೇದೋಕ್ತಫಲದಲ್ಲಿ ಅರ್ಥಿತ್ವ ಮೊದಲಾದವುಗಳು ದೇವತೆಗಳಿಗೂ ಇರುವುದರಿಂದ ಅವರೂ ಅಧಿಕಾರಿಗಳೆಂದು ಸಿದ್ಧಾಂತ.

तदुपरीत्यनेनोक्तं सादित्वं तावदाक्षिप्याह—

## ॥ ओं विरोधः कर्मणीति चेन्नानेकप्रतिपत्तेर्दर्शनात् ॥ ओं ॥ १-३-२७

तदुपरीत्युक्तदेवपदस्य सादित्वे कर्मणि कर्मविषये विरोधो व्यर्थता स्यात् । इन्द्रादिपदप्राप्तेः पूर्वमिन्द्रादिदेवताऽभावेन तदुद्देशेन हविस्त्यागायोगादिति चेन्न । अनेकप्रतिपत्तेर्दर्शनात् । अनेकेषां

---

**'ತದುಪರಿ' ಎಂಬ ಪದವು ಸಾಧುವಾಗಿದೆ**

[1] 'ಪೂರಣಗುಣ' ಎಂಬ ಸೂತ್ರದಲ್ಲಿ ಸನ್ ಮತ್ತು ತವ್ಯ ಪ್ರತ್ಯಯಗಳ ಜೊತೆ ಇರುವುದರಿಂದ ಕೃದಂತ ಅವ್ಯಯದೊಂದಿಗೆ ಸಮಾಸವು ನಿಷೇಧಿಸಲ್ಪಟ್ಟಿದೆ. ಆದ್ದರಿಂದ 'ತದುಪರಿ' ಎಂಬ ಶಬ್ದವು ಸಾಧು.

'ತದುಪರಿ' ಎಂಬುದರಿಂದ ಹೇಳಿದ ದೇವತ್ವದ ನಾದಿತ್ವವನ್ನು ಆಕ್ಷೇಪಿಸಿ ಸಮಾಧಾನ ನೀಡುವ ಸೂತ್ರ—

## ಓಂ ವಿರೋಧಃ ಕರ್ಮಣೀತಿ ಚೇನ್ನಾನೇಕಪ್ರತಿಪತ್ತೇ-ರ್ದರ್ಶನಾತ್ ಓಂ (೧-೩-೨೭)

**ಸೂತ್ರಾರ್ಥ**

'ತದುಪರಿ' ಎಂಬಲ್ಲಿ ಹೇಳಿರುವಂತೆ ದೇವತ್ವವು ಸಾದಿಯಾಗುವುದಾದರೆ, ಕರ್ಮಣಿ— ಕರ್ಮವಿಷಯದಲ್ಲಿ, ವಿರೋಧಃ—ವೈಯರ್ಥ್ಯವುಂಟಾದೀತು. ಏಕೆಂದರೆ, ಇಂದ್ರಾದಿ ಪದಪ್ರಾಪ್ತಿಯಾಗುವ ಮುಂಚೆ ಇಂದ್ರಾದಿದೇವತೆಗಳಿಲ್ಲದಿರುವುದರಿಂದ ಅವರನ್ನುದ್ದೇಶಿಸಿ ಹವಿಸ್ಸನ್ನು ನೀಡಲು ಸಾಧ್ಯವಿಲ್ಲದ್ದರಿಂದ ಎಂದರೆ ಅದು ಸರಿಯಲ್ಲ. ಅನೇಕಪ್ರತಿಪತ್ತೇಃ ದರ್ಶನಾತ್—ಅನೇಕೇಷಾಂ- ಯೋಗ್ಯತೆಯುಳ್ಳ ಅನೇಕ ಮನುಷ್ಯರು, ಪ್ರತಿಪತ್ತೇಃ—

---

1. ಪೂರಣಗುಣಸುಹಿತಾರ್ಥಸದವ್ಯಯತವ್ಯಸಮಾನಾಧಿಕರಣೇನ (ಪಾ. ೨-೨-೧೧) ಪೂರಣ, ಗುಣ ಮತ್ತು ತೃಪ್ತಿ—ಇವುಗಳನ್ನು ಹೇಳುವ ಪದಗಳೊಂದಿಗೆ, ಶತೃ ಮತ್ತು ಶಾನಚ್ (ಸತ್) ಪ್ರತ್ಯಯಾಂತಪದ, ಅವ್ಯಯ, ತವ್ಯಪ್ರತ್ಯಯಾಂತವಾದ ಪದ ಮತ್ತು ಸಮಾನವಿಭಕ್ತಿಕವಾದ ಪದ ಇವುಗಳೊಂದಿಗೆ ಷಷ್ಠ್ಯಂತಪದವು ಸಮಾಸವನ್ನು ಹೊಂದುವುದಿಲ್ಲವೆಂದು ಸೂತ್ರಾರ್ಥ. ಸತ್ ಮತ್ತು ತವ್ಯಗಳೆಂಬ ಕೃತ್‌ಪ್ರತ್ಯಯಗಳ ಮಧ್ಯೆ ಇರುವ ಅವ್ಯಯ ಪದದಿಂದಲೂ ಕೃದವ್ಯಯ ವನ್ನೇ ಗ್ರಹಿಸಬೇಕೆಂದು ಪಾಣಿನಿಯ ಆಶಯ. ಆದ್ದರಿಂದ 'ಉಪರಿ' ಎಂಬ ತದ್ಧಿತಾವ್ಯಯದೊಡನೆ ತಸ್ಯ ಎಂಬ ಷಷ್ಠ್ಯಂತಪದವು ಸಮಾಸ ಪಡೆಯಲು ಈ ಸೂತ್ರದ ವಿರೋಧವಿಲ್ಲವೆಂದು ಭಾವ.

*

योग्यमनुष्याणां प्रतिपत्तेः पूर्वं पूर्वं देवतापदप्राप्तेः "यज्ञेन यज्ञम्" इति श्रुतौ दर्शनादित्यर्थः । एतद्देवताभावेऽपि प्राप्तपदद्देवतान्तर-सत्त्वान्न कर्मविरोध इति भावः ॥

सान्तत्वमाक्षिप्याह—

॥ ॐ शब्द इति चेन्नातः प्रभवात्प्रत्यक्षानुमाना-भ्याम् ॐ ॥ १-३-२८

विरोध इत्यस्ति । अतःशब्दः प्रकृतशब्दपरः । प्रभवशब्द-स्तन्नियमावगमपरः । तदुपरीत्युक्तिलब्धसान्तत्वे देवपदस्योपप्लवे सति शब्दे नित्ये वेदरूपशब्दे अप्रामाण्याख्यविरोधः स्यात् । पश्चा-दिन्द्रादिदेवताभावेन वाच्यहीनस्य प्रामाण्यायोगादिति चेन्न । अतः

---

ಹಿಂದೆ, ಅದಕ್ಕೂ ಹಿಂದೆ, ದೇವತಾಪದವನ್ನು ಹೊಂದಿರುವುದು [1] 'ಯಜ್ಞೇನ ಯಜ್ಞಂ' ಎಂಬ ಶ್ರುತಿಯಲ್ಲಿ ದೃಷ್ಟವಾಗಿರುವುದರಿಂದ ಎಂದು ಅರ್ಥ. ಈ ದೇವತೆ ಇಲ್ಲದಿದ್ದರೂ ಆ ಪದವನ್ನು ಪಡೆದಿರುವ ಇನ್ನೊಬ್ಬ ದೇವತೆ ಇರುವುದರಿಂದ ಕರ್ಮವಿರೋಧವಿಲ್ಲ ವೆಂದು ಭಾವ.

(ದೇವತ್ವಕ್ಕೆ) ಅಂತವಿದೆಯೆಂದು ಹೇಳಿದುದನ್ನು ಆಕ್ಷೇಪಿಸಿ ಉತ್ತರಿಸುವ ಸೂತ್ರ—

ಓಂ ಶಬ್ದ ಇತಿ ಚೇನ್ನಾತಃ ಪ್ರಭವಾತ್ ಪ್ರತ್ಯಕ್ಷಾನು-ಮಾನಾಭ್ಯಾಮ್ ಓಂ (೧-೩-೨೮)

**ಸೂತ್ರಾರ್ಥ**

'ವಿರೋಧಃ' ಎಂಬ ಪದವು ಅನುವೃತ್ತವಾಗುತ್ತದೆ. 'ಅತಃ' ಎಂಬ ಪದವು

---

1. " ಯಜ್ಞೇನ ಯಜ್ಞಮಯಜಂತ ದೇವಾಃ ತಾನಿ ಧರ್ಮಾಣಿ ಪ್ರಥಮಾನ್ಯಾಸನ್ ।
ತೇ ಹ ನಾಕಂ ಮಹಿಮಾನಃ ಸಚಂತ ಯತ್ರ ಪೂರ್ವೇ ಸಾಧ್ಯಾಃ ಸಂತಿ ದೇವಾಃ ॥ "
ಎಂದು ಪುರುಷಸೂಕ್ತದ ಮಂತ್ರ. ದೇವತ್ವಯೋಗ್ಯರಾದ ಮನುಷ್ಯರು ಜ್ಞಾನಕರ್ಮಾತ್ಮಕಯಜ್ಞ ದಿಂದ ಯಜ್ಞನಾಮಕ ಭಗವಂತನನ್ನು ಆರಾಧಿಸಿದರು. ಆ ಯಜ್ಞದಿಂದಾಗಿ ಅವರು ದೇವತ್ವವನ್ನು ಪಡೆದು ಪ್ರಮುಖರಾದ ಲೋಕಧಾರಕರಾದರು. ತಮ್ಮ ಅಧಿಕಾರಾಂತ್ಯದಲ್ಲಿ ಅವರು ಹಿಂದಿನ ಕಲ್ಪದ ಸಾಧ್ಯಾದಿ ದೇವತೆಗಳಿರುವ ಮೋಕ್ಷವನ್ನು ಪಡೆದರು ಎಂದು ಮಂತ್ರಾರ್ಥ.

शब्दात् । "धाता यथा पूर्वमकल्पयत्" "यथैव नियमः काले" इत्यादिशब्दात् देवानां प्रभवनियमावगमात् प्रवाहरूपेण देवानां नित्यत्वान्न दोष इति भावः । शब्दे उपचरिताऽप्युक्तिः स्यादत उक्तं प्रत्यक्षेति । महतां प्रभवनियमप्रत्यक्षादन्येषामुपरितनकालो देववान् कालत्वादित्यनुमानात्तन्नियमावगमादित्यर्थः । नन्वत इत्येवालं किं

---

ಪ್ರಕೃತವಾದ ಶಬ್ದವನ್ನು ಹೇಳುವುದು. [1]'ಪ್ರಭವ' ಶಬ್ದವು ಅದರ (ಪ್ರಭವದ) ನಿಯಮಾವಗಮ ಎಂಬ ಅರ್ಥವುಳ್ಳದ್ದು. 'ತದುಪರಿ' ಎಂಬ ಉಕ್ತಿಯಿಂದ ತಿಳಿದು ಬರುವ ಸಾಂತತ್ವವು ಅಂದರೆ ದೇವಪದಕ್ಕೆ ವಿನಾಶವು ಇರುವುದಾದರೆ, ಶಬ್ದೇ–ನಿತ್ಯ ವಾದ ವೇದರೂಪ ಶಬ್ದದಲ್ಲಿ ಅಪ್ರಾಮಾಣ್ಯವೆಂಬ ವಿರೋಧವು ಬಂದೀತು. ಏಕೆಂದರೆ, ವಿನಾಶವಾದ ನಂತರ ಇಂದ್ರಾದಿ ದೇವತೆಗಳಿಲ್ಲದಿರುವುದರಿಂದ ಅರ್ಥಹೀನವಾದ ಶಬ್ದಕ್ಕೆ ಪ್ರಾಮಾಣ್ಯವು ಕೂಡುವುದಿಲ್ಲವಾದ್ದರಿಂದ ಎಂದರೆ ಅದು ಸರಿಯಲ್ಲ. ಅತಃಶಬ್ದದಿಂದ, 'ಧಾತಾ ಯಥಾ ಪೂರ್ವಮಕಲ್ಪಯತ್', [2]'ಯಥೈವ ನಿಯಮಃ ಕಾಲೇ' ಇತ್ಯಾದಿ ಆಗಮದಿಂದ ದೇವತೆಗಳಿಗೆ ಉತ್ಪತ್ತಿಯ ನಿಯಮವಿರುವುದು ತಿಳಿದುಬರುವುದರಿಂದ ; ಪ್ರವಾಹರೂಪದಿಂದ ದೇವತೆಗಳು ನಿತ್ಯರಾದುದರಿಂದ ದೋಷವಿಲ್ಲವೆಂದು ಭಾವ.

ಆಗಮಗಳಲ್ಲಿ ಔಪಚಾರಿಕವಾದ ಉಕ್ತಿಯೂ ಇರಬಹುದು ಎಂಬ ಆಶಂಕೆಗೆ ಉತ್ತರ—'ಪ್ರತ್ಯಕ್ಷ' ಎಂದು. ಮಹಾತ್ಮರಿಗೆ ದೇವತೆಗಳ ಪ್ರಭವನಿಯಮದ ಪ್ರತ್ಯಕ್ಷ ವಿರುವುದರಿಂದ, ಇತರ ಸಾಮಾನ್ಯರಿಗೂ 'ಮುಂದಿನ ಕಾಲವು ದೇವತೆಗಳನ್ನು ಹೊಂದಿರುವುದು, ಕಾಲವಾದುದರಿಂದ' ಎಂಬ ಅನುಮಾನದಿಂದ ಪ್ರಭವದ ನಿಯಮವು ತಿಳಿದುಬರುವುದರಿಂದ ಎಂದು ಅರ್ಥ.

---

1. ಪ್ರಭವನಿಯಮಾವಗಮ ಎಂದರೆ ಉತ್ಪತ್ತಿಯ ನಿಯಮದ ತಿಳುವಳಿಕೆ. 'ಧಾತಾ ಯಥಾ ಪೂರ್ವಮಕಲ್ಪಯತ್' ಇತ್ಯಾದಿ ಆಗಮವಾಕ್ಯಗಳಿಂದ ಒಂದು ಕಲ್ಪ ಮುಗಿದ ನಂತರ ಇನ್ನೊಂದು ಕಲ್ಪದಲ್ಲಿ ದೇವತೆಗಳು ಹುಟ್ಟಿಯೇ ಹುಟ್ಟುತ್ತಾರೆ ಎಂಬ ನಿಯಮವು ತಿಳಿದುಬರುವುದು. ಅದ್ದರಿಂದ ದೇವತೆಗಳಿಲ್ಲದ ಕಾಲವಿಲ್ಲದಿರುವುದರಿಂದ ದೇವತಾವಾಚಕಶಬ್ದಕ್ಕೆ ಅಪ್ರಾಮಾಣ್ಯರೂಪ ವಿರೋಧವಿಲ್ಲವೆಂದು ಭಾವ.

2. ಯಥೈವ ನಿಯಮಃ ಕಾಲೇ ಸುರಾದಿನಿಯಮಸ್ತಥಾ । ತಸ್ಮಾನ್ನಾನೀದೃಶಂ ಕ್ವಾಪಿ ವಿಶ್ವಮೇತದ್ಭವಿಷ್ಯತಿ ॥ ಎಂದು ಸ್ಮೃತಿವಾಕ್ಯ. ಹೇಗೆ, ಹಿಂದಿನ ಯುಗ ಅಥವಾ ಕಲ್ಪ ಮುಗಿದ ಕೂಡಲೇ ಇನ್ನೊಂದು ಯುಗ ಅಥವಾ ಕಲ್ಪ ಹುಟ್ಟುವುದೆಂಬ ನಿಯಮವಿದೆಯೋ ಹಾಗೆ ಒಂದು ಕಲ್ಪದಲ್ಲಿ ದೇವ-ಉಪದೇವಾದಿಗಳ ಅಧಿಕಾರಾವಧಿ ಮುಕ್ತಾಯವಾದ ಮೇಲೆ ಇನ್ನೊಂದು ಕಲ್ಪದಲ್ಲಿ ಇನ್ನೊಬ್ಬ ದೇವಾದಿಗಳು ಹುಟ್ಟಿಯೇ ಹುಟ್ಟುವರು. ಭಗವಂತನಿಂದ ಸೃಷ್ಟವಾದ ಈ ವಿಶ್ವ ಎಂದೂ ಹಿಂದಿನ ವಿಶ್ವಕ್ಕಿಂತ ವಿಸದೃಶವಾಗಿರುವುದಿಲ್ಲ ಎಂದು ಸ್ಮೃತಿಯ ಅರ್ಥ.

प्रत्यक्षाद्युक्त्या । मैवम् । श्रुतावुपचारोक्तिनिरासार्थत्वादनुमानस्याप्ययोग्यजनार्थत्वात् । अत एव चशब्दाभावः । शब्दप्रत्यक्षानुमानेभ्य इत्यनुक्त्वा पृथगुक्तिश्च प्राङ्निर्देशश्च शब्दस्य जात्या प्राबल्यात् । कर्मणीव सादित्वयुक्तचोद्यसमाध्योः शब्दे, शब्द इव च सान्तत्वनिमित्तशङ्कोत्तरयोः कर्मण्यपि साम्येन विरोधः शब्दकर्मणोरिति चेदिति विन्यसितव्येऽपि कर्मणा देवत्वोक्तौ तर्हि कर्मणि विरोध इति

---

**'ಪ್ರತ್ಯಕ್ಷಾನುಮಾನಾಭ್ಯಾಂ' ಎಂಬ ಸೂತ್ರಭಾಗದ ಸಾರ್ಥಕ್ಯ ಮತ್ತು ಶಬ್ದದಿಂದ ಪ್ರತ್ಯೇಕವಾಗಿ, ಶಬ್ದದ ಅನಂತರ ಪ್ರತ್ಯಕ್ಷಾದಿಗಳನ್ನು ಹೇಳಿರುವುದರ ಕಾರಣ**

'ಅತಃ' ಎಂಬಲ್ಲಿಯವರೆಗೆ ಮಾತ್ರ ಸಾಕು. ಪ್ರತ್ಯಕ್ಷಾದಿಗಳನ್ನು ಹೇಳುವುದರಿಂದ ಉಪಯೋಗವೇನು ? ಹಾಗಲ್ಲ. [1]ಶ್ರುತಿಯಲ್ಲಿ ಉಪಚಾರದ ಮಾತುಗಳಿರಬಹುದೆಂಬ ಶಂಕೆಯನ್ನು ನಿವಾರಿಸುವುದಕ್ಕಾಗಿ ಪ್ರತ್ಯಕ್ಷವನ್ನು ಹೇಳಲಾಗಿದೆ. [2]ಯೋಗ್ಯತೆ ಇಲ್ಲದ ಜನರಿಗೋಸ್ಕರವಾಗಿ ಅನುಮಾನವನ್ನು ಹೇಳಲಾಗಿದೆ. [3]ಆದ್ದರಿಂದಲೇ 'ಚ' ಶಬ್ದವಿಲ್ಲ. ಶಬ್ದಕ್ಕೆ ಜಾತ್ಯಾ ಪ್ರಾಬಲ್ಯವಿರುವುದರಿಂದ 'ಶಬ್ದಪ್ರತ್ಯಕ್ಷಾನುಮಾನೇಭ್ಯಃ' ಎಂದು ಹೇಳದೆ ಶಬ್ದವನ್ನು ಪ್ರತ್ಯೇಕವಾಗಿ ಹೇಳಲಾಗಿದೆ ಮತ್ತು ಮೊದಲು ಉಲ್ಲೇಖಮಾಡಲಾಗಿದೆ.

**'ವಿರೋಧಃ ಶಬ್ದಕರ್ಮಣೋರಿತಿ ಚೇತ್' ಇತ್ಯಾದಿಯಾಗಿ ಒಂದೇ ಸೂತ್ರವನ್ನು ರಚಿಸದೆ ಎರಡು ಪ್ರತ್ಯೇಕ ಸೂತ್ರಗಳನ್ನು ರಚಿಸುವುದರ ಕಾರಣ**

ದೇವತಾಪದವು ನಾದಿಯಾದುದು ಎಂದು ಹೇಳುವುದರಿಂದ ಉದ್ಭವಿಸುವ ಆಕ್ಷೇಪ-ಸಮಾಧಾನಗಳು ಕರ್ಮದ ವಿಷಯದಲ್ಲಿ ಹೇಗೋ ಹಾಗೆ ಶಬ್ದದ ವಿಷಯದಲ್ಲೂ ಸಮಾನವಾಗಿರುವುದರಿಂದ, ಹಾಗೆಯೇ ದೇವತಾಪದವು ಸಾಂತವಾದುದರ ಪ್ರಯುಕ್ತ ಉಂಟಾಗುವ ಶಂಕೆ-ಉತ್ತರಗಳು ಶಬ್ದದ ವಿಷಯದಲ್ಲಿ ಹೇಗೋ ಹಾಗೆ ಕರ್ಮದ

---

1. ದೇವತೆಗಳ ಪ್ರವಾಹ ನಿತ್ಯವಾದುದೆಂಬುದನ್ನು ಮಹಾತ್ಮರು ಪ್ರತ್ಯಕ್ಷೀಕರಿಸಿಕೊಂಡಿರುವುದರಿಂದ ದೇವಪ್ರವಾಹ ನಿತ್ಯವೆಂದು ಹೇಳುವ ಆಗಮವಾಕ್ಯ ಔಪಚಾರಿಕವಲ್ಲವೆಂದು ಭಾವ.

2. ದೇವಪ್ರವಾಹದ ನಿತ್ಯತ್ವವನ್ನು ಪ್ರತ್ಯಕ್ಷದಿಂದ ನೋಡುವ ಯೋಗ್ಯತೆಯಿಲ್ಲದಿರುವ ಜನರಿಗೆ ಅನುಮಾನಪ್ರಮಾಣದಿಂದ ನಿತ್ಯತ್ವವು ಸಿದ್ಧಿಸುವುದೆಂದು ಭಾವ.

3. ಶಬ್ದ ಔಪಚಾರಿಕವೆಂಬ ಆಶಂಕೆಯ ನಿವಾರಣೆಗಾಗಿ ಪ್ರತ್ಯಕ್ಷ, ಪ್ರತ್ಯಕ್ಷವು ಸರ್ವಸಾಧಾರಣವಲ್ಲವೆಂಬ ಆಕ್ಷೇಪದ ಪರಿಹಾರಕ್ಕಾಗಿ ಅನುಮಾನ— ಈ ಕ್ರಮದಿಂದ ಶಬ್ದಾದಿಗಳನ್ನು ಹೇಳಿರುವುದರಿಂದ ಸಮುಚ್ಚಯಾರ್ಥಕವಾದ 'ಚ' ಶಬ್ದವನ್ನು ಸೂತ್ರದಲ್ಲಿ ಪ್ರಯೋಗಿಸಿಲ್ಲ.

तत्रैवोत्थिते चोद्ये शब्देनोद्धृते तर्हि शब्दे विरोध इत्यनन्तरं शङ्कोत्थानादाकाङ्क्षाक्रमाद्योगद्वयम् ॥

अर्थापत्त्या देवप्रवाहनित्यत्वमाह—

॥ ॐ अत एव च नित्यत्वम् ॐ ॥ १-३-२९

अत एव शब्दनित्यत्वादेव । तदन्यथानुपपत्त्यैवेत्यर्थः । नित्यत्वं देवप्रवाहस्येत्यर्थः । किं युक्त्यन्तरान्वेषणेनेत्येवार्थः । न केवलं शब्दात् किन्तु शब्दनित्यत्वान्यथानुपपत्त्या चेति चार्थः । न हीन्द्रागच्छेत्यादिवाचो नित्यत्वं वाच्यानित्यत्वे युज्यत इति भावः । अर्थापत्तेरनुमानविशेषत्वात्पृथगुक्तिः ॥

---

ವಿಷಯದಲ್ಲೂ ಸಮಾನವಾದುದರಿಂದ 'ವಿರೋಧಃ ಶಬ್ದಕರ್ಮಣೋರಿತಿ ಚೇತ್' ಎಂಬುದಾಗಿ ಸೂತ್ರವಿನ್ಯಾಸ ಮಾಡಬೇಕಾಗಿದ್ದರೂ, ಕರ್ಮದಿಂದ ದೇವತ್ವವು ಲಭಿಸುವುದೆಂದು ಹೇಳಿದಾಗ, 'ಹಾಗಾದಲ್ಲಿ ಕರ್ಮದ ವಿಷಯದಲ್ಲಿ ವಿರೋಧ' ಎಂದು ಅಲ್ಲಿಯೇ ಉದ್ಭವಿಸಿದ ಆಕ್ಷೇಪವನ್ನು ಶಬ್ದದಿಂದ ಪರಿಹರಿಸಿದಾಗ 'ಹಾಗಾದರೆ ಶಬ್ದದ ವಿಷಯದಲ್ಲಿ ವಿರೋಧ' ಎಂಬುದಾಗಿ ಅನಂತರವೇ ಶಂಕೆಯು ಹುಟ್ಟುವುದರಿಂದ ಆಕಾಂಕ್ಷೆಯ ಕ್ರಮವನ್ನನುಸರಿಸಿ ಎರಡು ಸೂತ್ರಗಳನ್ನು ರಚಿಸಲಾಗಿದೆ.

ಅರ್ಥಾಪತ್ತಿಯಿಂದ ದೇವಪ್ರವಾಹದ ನಿತ್ಯತ್ವವನ್ನು ಹೇಳುವ ಸೂತ್ರ—

ಓಂ ಅತ ಏವ ಚ ನಿತ್ಯತ್ವಮ್ ಓಂ (೧-೩-೨೯)

**ಸೂತ್ರಾರ್ಥ**

ಅತ ಏವ—[1] ಶಬ್ದವು ನಿತ್ಯವಾದುದರಿಂದಲೇ, ದೇವಪ್ರವಾಹವು ನಿತ್ಯವಲ್ಲದಿದ್ದರೆ ಶಬ್ದನಿತ್ಯತ್ವವು ಅನುಪಪನ್ನವಾಗುವುದರಿಂದಲೇ ಎಂದು ಅರ್ಥ, ದೇವಪ್ರವಾಹವು ನಿತ್ಯವೆಂದರ್ಥ.

**ಸೂತ್ರದ ಏವ, ಚ ಗಳ ಅರ್ಥ ಮತ್ತು ಈ ಸೂತ್ರವನ್ನು ಪ್ರತ್ಯೇಕವಾಗಿ ರಚಿಸಿರುವುದರ ಕಾರಣ**

ದೇವಪ್ರವಾಹವು ನಿತ್ಯವೆಂದು ಸಾಧಿಸಲು ಬೇರೆ ಯುಕ್ತಿಗಳನ್ನು ಹುಡುಕುವುದೇಕೆ? ಎಂದು ಏವಕಾರದ ಅರ್ಥ. ಶಬ್ದದಿಂದ ಮಾತ್ರವಲ್ಲದೇ ಶಬ್ದನಿತ್ಯತ್ವವು

---

1. ವೇದರೂಪವಾದ ಶಬ್ದವು.

नन्वे देवानां प्रवाहनित्यत्वेऽपि नानानामरूपवत्त्वेनैकप्रकार-वेदस्याप्रामाण्याख्यविरोधः स्यादित्यत आह—

॥ ॐ समाननामरूपत्वाच्चावृत्तावप्यविरोधो दर्शनात्स्मृतेश्च ॐ ॥ १-३-३०

तदुपरीत्यतो देवानामित्यन्वेति । प्राचीनदेवानां मुक्तत्वेन स्वस्वपदेष्ववृत्तावपि तदन्येषां तत्समाननामरूपत्वात् । तत्त्वप्रदीपरीत्या समानधर्मकत्वाच्चेति चशब्दार्थः । तत्प्रतिपादकैकविधवेदस्याप्रामा-

[1]ಅನ್ಯಥಾ ಅನುಪಪನ್ನವಾಗುವುದರಿಂದಲೂ ಎಂದು ಚಕಾರದ ಅರ್ಥ. ವಾಚ್ಯಾರ್ಥವೇ ಅನಿತ್ಯವಾಗಿದ್ದಲ್ಲಿ 'ಇಂದ್ರ ಆಗಚ್ಛ' ಇತ್ಯಾದಿ ವಾಕ್ಯಗಳ ನಿತ್ಯತ್ವವು ಯುಕ್ತವಲ್ಲ ವಷ್ಟೇ ಎಂದು ಭಾವ. [2]ಅರ್ಥಾಪತ್ತಿಯು ಅನುಮಾನವಿಶೇಷವಾದುದರಿಂದ ಪ್ರತ್ಯೇಕ ವಾಗಿ ಹೇಳಲಾಗಿದೆ.

ದೇವತೆಗಳು ಪ್ರವಾಹತಃ ನಿತ್ಯರಾದರೂ ಅವರಿಗೆ ಭಿನ್ನ ಭಿನ್ನ ಹೆಸರು ಮತ್ತು ಆಕಾರಗಳಿರುವುದರಿಂದ ಏಕಪ್ರಕಾರವಾದ ವೇದಕ್ಕೆ ಅಪ್ರಾಮಾಣ್ಯರೂಪವಿರೋಧವು ಬಂದೀತು ಎಂಬ ಆಶಂಕೆಗೆ ಸಮಾಧಾನ—

ಓಂ ಸಮಾನನಾಮರೂಪತ್ವಾಚ್ಚಾವೃತ್ತಾವಪ್ಯವಿರೋಧಃ ದರ್ಶನಾತ್ ಸ್ಮೃತೇಶ್ಚ ಓಂ (೧-೩-೩೦)

**ಸೂತ್ರಾರ್ಥ**

[3]'ತದುಪರಿ' ಎಂಬ ಸೂತ್ರದಿಂದ ದೇವಾನಾಂ ಎಂಬುದು ಅನ್ವಯ ಹೊಂದುತ್ತದೆ. ಪ್ರಾಚೀನ ದೇವತೆಗಳು ತಮ್ಮ ತಮ್ಮ ಪದದಲ್ಲಿ ಇಲ್ಲದಿದ್ದರೂ ಆ ಪದಗಳಿಗೆ ಬಂದಿರುವ ಇತರರಿಗೆ ಪ್ರಾಚೀನದೇವತೆಗಳಿಗೆ ಸಮಾನವಾದ ನಾಮರೂಪಗಳಿರುವುದರಿಂದ—ತತ್ತ್ವಪ್ರದೀಪರೀತ್ಯಾ 'ಸಮಾನಧರ್ಮಗಳನ್ನು ಹೊಂದಿರುವುದರಿಂದಲೂ'

1. ದೇವಪ್ರವಾಹವು ನಿತ್ಯವೆಂದು ಒಪ್ಪಿದ್ದರೆ.

2. ಅರ್ಥಾಪತ್ತಿಯೂ ಅನುಮಾನವೇ, ಬೇರೆ ಪ್ರಮಾಣವಲ್ಲ ಎಂದು ಸಿದ್ಧಾಂತ. ಅದ್ದರಿಂದ ಹಿಂದಿನ ಸೂತ್ರದಲ್ಲಿ ಹೇಳಿರುವ ಅನುಮಾನಪದದಿಂದಲೇ ಈ ಸೂತ್ರವು ಹೇಳುವ ಅರ್ಥಾಪತ್ತಿಯನ್ನು ಸಂಗ್ರಹಿಸಲು ಸಾಧ್ಯವಿರುವಾಗ ಪ್ರತ್ಯೇಕವಾದ ಈ ಸೂತ್ರ ಏಕೆ ? ಎಂದು ಆಕ್ಷೇಪ. ಸಮಾಧಾನ ಸ್ಪಷ್ಟ.

3. 'ತದುಪರಿ' ಎಂಬ ಪದದ ತಾತ್ಪರ್ಯಾರ್ಥ ದೇವತೆಗಳಿಗೆ ಎಂದು. ಆ ಅರ್ಥ ಕೊಡುವ ದೇವಾನಾಂ ಎಂಬ ಪದ ಇಲ್ಲಿ ಅನ್ವಯ ಹೊಂದುತ್ತದೆಂದು ಭಾವ.

व्याख्यविरोधो नास्ति। तदेव कुत इति चेत् दर्शनात् । "यथा पूर्वम्" इति श्रुतेः । "अनादिनिधना नित्या" इत्यादिस्मृतेश्चेत्यर्थः । इन्द्रादिपदस्थत्वोपाधिना तानेव प्रतिपादयतीति भावः । श्रुतेः स्वरूपकॢप्तिनियमपरत्वरूपान्यथासिद्धिनिरासकत्वात् स्मृतेः पृथगुक्तिः। चन्द्रिकायान्तु प्राचीनानां तत्पदस्थानां मुक्तानां सतामन्येषां तत्पद-प्राप्तिः पुनस्तेषामपि मुक्तिरित्येवं मुक्तेरावृत्तावपीत्येकमर्थमुक्त्वा

---

ಎಂದು ಚ ಶಬ್ದದ ಅರ್ಥ—ಆ ದೇವತೆಗಳನ್ನು ಪ್ರತಿಪಾದಿಸುವ ಒಂದೇ ವಿಧವಾದ ವೇದಕ್ಕೆ ಅಪ್ರಾಮಾಣ್ಯವೆಂಬ ವಿರೋಧವಿಲ್ಲ. ಆಯಾ ಪದಕ್ಕೆ ಬಂದ ಎಲ್ಲ ದೇವತೆಗಳಿಗೂ ಸಮಾನ ನಾಮರೂಪಗಳಿರುವುದಾದರೂ ಹೇಗೆ ? ಎಂದರೆ, ದರ್ಶನಾತ್–[1] 'ಯಥಾ ಪೂರ್ವಂ' ಎಂದು ಶ್ರುತಿಯಿರುವುದರಿಂದ, ಮತ್ತು [2] 'ಅನಾದಿನಿಧನಾ ನಿತ್ಯಾ' ಇತ್ಯಾದಿ ಸ್ಮೃತಿಯಿರುವುದರಿಂದ ಎಂದು ಅರ್ಥ. ಇಂದ್ರಾದಿಪದಗಳಲ್ಲಿರುವ ನಿಮಿತ್ತದಿಂದ ಆ ದೇವತೆಗಳನ್ನೇ ವೇದವು ಪ್ರತಿಪಾದಿಸುವುದೆಂದು ಭಾವ.

**ಸೂತ್ರದಲ್ಲಿ ಶ್ರುತಿಸ್ಮೃತಿಗಳನ್ನು ಪ್ರತ್ಯೇಕವಾಗಿ ಹೇಳಿರುವುದರ ಕಾರಣ**

[3]ದೇವತಾಸ್ವರೂಪವು ನಿಯತವಾಗಿ ಕಲ್ಪಿತವಾಗುತ್ತದೆಂಬುದನ್ನು ತಿಳಿಸುವುದರಲ್ಲಿ ಶ್ರುತಿಗೆ ತಾತ್ಪರ್ಯವೆಂಬ ಅನ್ಯಥಾಸಿದ್ಧಿಯನ್ನು ನಿರಾಕರಿಸುವುದರಿಂದ ಸ್ಮೃತಿಯನ್ನು ಪ್ರತ್ಯೇಕವಾಗಿ ಹೇಳಲಾಗಿದೆ.

**ಚಂದ್ರಿಕಾದಲ್ಲಿ 'ಆವೃತ್ತೌ' ಎಂಬುದಕ್ಕೆ ವ್ಯಾಖ್ಯಾನಾಂತರ**

[1] ಚಂದ್ರಿಕೆಯಲ್ಲಾದರೋ, ಆಯಾ ಪದದಲ್ಲಿರುವ ಹಿಂದಿನ ದೇವತೆಗಳು ಮುಕ್ತರಾಗುತ್ತಿದ್ದಂತೆ ಬೇರೆಯವರಿಗೆ ಆ ಪದದ ಪ್ರಾಪ್ತಿಯಾಗುವುದು. ಪುನಃ ಅವರಿಗೂ

---

1. ಧಾತಾ ಯಥಾ ಪೂರ್ವಮಕಲ್ಪಯತ್ ಎಂಬ ಶ್ರುತಿ.

2. " ಅನಾದಿನಿಧನಾ ನಿತ್ಯಾ ವಾಗುತ್ಸೃಷ್ಟಾ ಸ್ವಯಂಭುವಾ । ಋಷೀಣಾಂ ನಾಮಧೇಯಾನಿ ಯಾಶ್ಚ ವೇದೇಷು ದೃಷ್ಟಯಃ । ವೇದಶಬ್ದೇಭ್ಯ ಏವಾದೌ ನಿರ್ಮಮೇ ಸ ಮಹೇಶ್ವರಃ ॥ " —ಸ್ವತಂತ್ರನಾದ ಭಗವಂತನಿಂದ ಸೃಷ್ಟಿಕಾಲದಲ್ಲಿ ಆದ್ಯಂತಗಳಿಲ್ಲದ ಆದ್ದರಿಂದಲೇ ನಿತ್ಯವೆನಿಸಿದ ವೇದವು ಉಚ್ಚರಿಸಲ್ಪಟ್ಟಿತು. ಆ ವೇದದ ಶಬ್ದಗಳಿಂದಲೇ ಆ ಮಹೇಶ್ವರನಾದ ವಿಷ್ಣುವು ಬ್ರಹ್ಮಾದಿ ದೇವತೆಗಳ ನಾಮಧೇಯಗಳನ್ನು ನಿರ್ಮಿಸಿದನು. ವೇದಗಳಲ್ಲಿ ಆ ದೇವತೆಗಳ ಆಕಾರಗಳು ಹೇಗೆ ವರ್ಣಿತವಾಗಿವೆಯೋ ಹಾಗೆಯೇ ಅವುಗಳನ್ನು ನಿರ್ಮಿಸಿದನು—ಎಂದು ಸ್ಮೃತಿಯ ಭಾವ.

3. 'ಧಾತಾ ಯಥಾ' ಇತ್ಯಾದಿ ಶ್ರುತಿಯು ಪ್ರತಿಕಲ್ಪದಲ್ಲೂ ಹಿಂದಿನ ಕಲ್ಪದಂತೆ ನಿಯತವಾಗಿ ದೇವತಾಸ್ವರೂಪವು ಕಲ್ಪಿತವಾಗುವುದೆನ್ನುವುದನ್ನು ಮಾತ್ರ ಹೇಳುವುದು ಹೊರತು ನಾಮ-ರೂಪಗಳೂ ಹಿಂದಿನ ಕಲ್ಪದಂತೇ ಇರುತ್ತವೆ ಎಂದು ಹೇಳುವುದಿಲ್ಲ ಎಂಬ ಅನ್ಯಥಾಸಿದ್ಧಿಶಂಕೆಯನ್ನು ಅವೇ ನಾಮರೂಪಗಳಿರುವುವೆಂದು ಸ್ಪಷ್ಟವಾಗಿ ಹೇಳುವ ಸ್ಮೃತಿಯು ನಿರಾಕರಿಸುವುದು. ಆದ್ದರಿಂದಲೇ ಸ್ಮೃತಿಯನ್ನು ಪ್ರತ್ಯೇಕವಾಗಿ ಹೇಳಲಾಗಿದೆ.

प्राचीनानां मुक्तत्वेन स्वस्वपदादावृत्तावपीति चेति तत्त्वप्रदीपोक्तमावृत्तावित्यस्यार्थान्तरमुक्तम् ॥

देवानामधिकारमाक्षिपति—

॥ ओँ मध्वादिष्वसम्भवादनधिकारं जैमिनिः ओँ ॥
१-३-३१

देवानामित्यस्ति । "असौ वा आदित्यो देवमधु" इत्याद्युक्तमधुज्योतिष्टोमादिविद्यासु देवानामनधिकारं जैमिनिर्मन्यत इत्यर्थः ।

---

ಮುಕ್ತಿಯಾಗುವುದು. ಹೀಗೆ ಮುಕ್ತಿಯ ಆವೃತ್ತಿ ಇದ್ದರೂ ಎಂದು ಒಂದು ಅರ್ಥವನ್ನು ಹೇಳಿ, ಹಿಂದಿನ ದೇವತೆಗಳು ಮುಕ್ತರಾದ್ದರಿಂದ [2]ಆಯಾ ಪದದಿಂದ ಆವೃತ್ತಿ ಇದ್ದರೂ ಎಂದು 'ಆವೃತ್ತೌ' ಎಂಬುದಕ್ಕೆ ತತ್ತ್ವಪ್ರದೀಪದಲ್ಲಿ ಹೇಳಿದ ಅರ್ಥಾಂತರವನ್ನೂ ಹೇಳಲಾಗಿದೆ.

ದೇವತೆಗಳಿಗೆ ವೇದವಿದ್ಯಾಧಿಕಾರವನ್ನು ಆಕ್ಷೇಪಿಸುವ ಸೂತ್ರ—

ಓಂ ಮಧ್ವಾದಿಷ್ವಸಂಭವಾದನಧಿಕಾರಂ ಜೈಮಿನಿಃ ಓಂ
(೧--೩--೩೧)

**ಸೂತ್ರಾರ್ಥ**

'ದೇವಾನಾಂ' ಎಂಬ ಪದವು ಅನುವೃತ್ತವಾಗುತ್ತದೆ. [3]'ಅಸೌ ವಾ ಆದಿತ್ಯೋ ದೇವಮಧು' ಇತ್ಯಾದಿ ಶ್ರುತಿಯಲ್ಲಿ ಹೇಳಿದ ಮಧುವಿದ್ಯೆ, ಜ್ಯೋತಿಷ್ಟೋಮಾದಿ ವಿದ್ಯೆ

---

1. 'ಸಮಾನನಾಮರೂಪತ್ವಾಚ್ಚಾವೃತ್ತೌ' ಎಂಬಲ್ಲಿ ತತ್ತ್ವಪ್ರದೀಪರೀತ್ಯಾ 'ಆವೃತ್ತೌ' ಎಂಬ ಪದವಿಭಾಗ. ತತ್ತ್ವಪ್ರಕಾಶಿಕಾರೀತ್ಯಾ 'ಅವೃತ್ತೌ' ಎಂದು ವಿಭಾಗ. 'ಆವೃತ್ತೌ' ಎಂಬ ಪದಕ್ಕೆ ತತ್ತ್ವಪ್ರದೀಪದಲ್ಲಿ ಹೇಳಿದ ಅರ್ಥವಲ್ಲದೇ ತಮ್ಮದೇ ಆದ ಇನ್ನೊಂದು ಅರ್ಥವನ್ನೂ ಚಂದ್ರಿಕಾಕಾರರು ಹೇಳಿದ್ದಾರೆಂದು ಮೇಲಿನ ವಾಕ್ಯದ ಭಾವ. 'ಆ ದೇವತೆಗಳು ತಮ್ಮ ಪದದಲ್ಲಿ ಇಲ್ಲದಿದ್ದರೂ' ಎಂದು ಅವೃತ್ತೌ ಎಂಬುದರ ಅರ್ಥ ಹಿಂದೆ ತಂತ್ರದೀಪಿಕೆಯಲ್ಲಿ ಸ್ಪಷ್ಟವಾಗಿದೆ.

2 ಆಯಾ ಪದವು ಪ್ರತಿಕಲ್ಪದಲ್ಲೂ ಸಂಭವಿಸುವುದು ಆ ಪದಗಳ ಆವೃತ್ತಿ.

3. 'ಅಸೌ ವಾ ಆದಿತ್ಯೋ ದೇವಮಧು' (ಛಾಂ. ೩–೬) ಎಂದು ಉಪಕ್ರಮಿಸಿ ಅನೇಕ ಅಮೃತವಿದ್ಯೆಗಳನ್ನು ಹೇಳಿದೆ. ಆ ವಿದ್ಯೆಗಳಿಗೆ ಮಧುವಿದ್ಯೆ ಎಂದು ಹೆಸರು. ಮುಂದೆ 'ಸ ಏತದೇವ ಅಮೃತಂ ವೇದ ವಸೂನಾಮೇವೈಕೋ ಭೂತ್ವಾ' (ಛಾಂ. ೩–೬–೩) ಇತ್ಯಾದಿಯಾಗಿ ವಸುಪದ ಪ್ರಾಪ್ತಿಯನ್ನು ಫಲವೆಂದು ಹೇಳಿದೆ. ಇಂತಹ ವಿದ್ಯೆಗಳಿಗೆ ದೇವತೆಗಳಿಗೆ ಅಧಿಕಾರವಿಲ್ಲವೆಂದು ಆಕ್ಷೇಪ.

मोक्षेतरवसुत्वादिफलकासु योग्यानां वसुत्वादिफलानामाप्तत्वादयोग्यानामकाम्यत्वेनार्थिताऽसम्भवादित्यर्थः ॥

मोक्षार्थविद्यास्वधिकारः स्यादित्यत आह—

॥ ॐ ज्योतिषि भावाच्च ॐ ॥ १-३-३२

चोऽप्यर्थे । देवानामित्यस्ति । ज्योतिःशब्दो ज्ञानपरः । देवानां ज्ञाने भावात् । वस्तूनामिति शेषः । समस्तवस्तुविषयीकरणादिति यावत् । देवानां सार्वज्ञ्येन मोक्षार्थविद्यास्वपि तत्साध्यज्ञानस्याप्तत्वेनाऽर्थिताऽसम्भवादनधिकारं मन्यत इत्यन्वयः । ज्ञाने

---

ಗಳಲ್ಲಿ ದೇವತೆಗಳಿಗೆ ಅಧಿಕಾರವಿಲ್ಲವೆಂದು ಜೈಮಿನಿ ಋಷಿಗಳು ಭಾವಿಸುತ್ತಾರೆ ಎಂದು ಅರ್ಥ. ಮೋಕ್ಷೇತರವಾದ ವಸುಪದ ಮೊದಲಾದ ಫಲವುಳ್ಳ ವಿದ್ಯೆಗಳಲ್ಲಿ ಆ ಪದಪ್ರಾಪ್ತಿಯೋಗ್ಯತೆಯುಳ್ಳ ದೇವತೆಗಳಿಗೆ ಆ ವಸುಪದ ಮೊದಲಾದ ಫಲಗಳು ಈಗಾಗಲೇ ದೊರೆತಿರುವುದರಿಂದ [1]ಅರ್ಥಿತ್ವವಿರುವುದಿಲ್ಲ. ಆ ಪದಪ್ರಾಪ್ತಿಯೋಗ್ಯತೆ ಇಲ್ಲದವರಿಗೆ ಆ ಪದಗಳು ಬಯಸತಕ್ಕದ್ದೇ ಅಲ್ಲವಾದ್ದರಿಂದ ಅರ್ಥಿತ್ವವಿರುವುದಿಲ್ಲ ಎಂದು ಅರ್ಥ.

ಮೋಕ್ಷಫಲಕವಾದ ವಿದ್ಯೆಗಳಲ್ಲಿ ಅಧಿಕಾರವಿರಬಹುದು ಎಂಬ ಶಂಕೆಗೆ ಉತ್ತರ—

ಓಂ ಜ್ಯೋತಿಷಿ ಭಾವಾಚ್ಚ ಓಂ (೧-೩-೩೨)

**ಸೂತ್ರಾರ್ಥ**

'ಚ' ಶಬ್ದಕ್ಕೆ ಅಪಿ ಎಂದು ಅರ್ಥ. ದೇವಾನಾಂ ಎಂದು ಅನುವೃತ್ತವಾಗುತ್ತದೆ. ಜ್ಯೋತಿಃ ಶಬ್ದಕ್ಕೆ ಜ್ಞಾನ ಎಂದರ್ಥ. ದೇವತೆಗಳ ಜ್ಞಾನದಲ್ಲಿ ಇರುವುದರಿಂದ— 'ವಸ್ತುಗಳು' ಎಂದು ಶೇಷವನ್ನು ಸೇರಿಸಿಕೊಳ್ಳಬೇಕು—ಎಲ್ಲ ವಸ್ತುಗಳನ್ನೂ ವಿಷಯೀಕರಿಸುವುದರಿಂದ ಎಂದು ಭಾವ. ದೇವತೆಗಳು ಸರ್ವಜ್ಞರಾದ್ದರಿಂದ ಮೋಕ್ಷಫಲಕವಾದ ವಿದ್ಯೆಗಳಲ್ಲೂ, ಆ ವಿದ್ಯೆಗಳಿಂದ ಉಂಟಾಗುವ ಜ್ಞಾನ ಈಗಾಗಲೇ ಲಭಿಸಿರುವುದರಿಂದ, ಅರ್ಥಿತ್ವವಿಲ್ಲ. ಆದ್ದರಿಂದ ಅಧಿಕಾರವಿಲ್ಲವೆಂದು ಜೈಮಿನಿಗಳು ಭಾವಿಸುತ್ತಾರೆ ಎಂದು ಅನ್ವಯ.

---

1. ಅರ್ಥಿತ್ವ—ಅಭಿಲಾಷೆ. ಅರ್ಥೀ ಸಮರ್ಥೋ ವಿದ್ವಾನ್ ಅಧಿಕ್ರಿಯತೇ ಎಂದಿರುವುದರಿಂದ ಅರ್ಥಿಯಲ್ಲದವನು ಅಧಿಕಾರಿಯಲ್ಲ.

भावादिति सर्वज्ञत्वादिति वा वाच्ये ज्योतिषीत्याद्युक्तिरादित्यप्रकाशे सर्ववस्तूनामन्तर्भाववदित्यर्थसूचनार्था ।

योगद्वयोक्तमनधिकारचोद्यं समाधत्ते—

॥ ॐ भावं तु बादरायणोऽस्ति हि ॐ ॥
१-३-३३

मध्वादिष्विति अधिकारस्येति देवानामिति चास्ति । तुर्विशेषे । बादरायणस्त्वित्यन्वयः । भावं देवानां मध्वाद्यशेषविद्यास्वधिकारस्य भावं मन्यते । कुतः ? अस्ति हि । अतिशय इति शेषः । मोक्षफले तद्धेतुज्ञाने चातिशयोऽस्ति हि यतोऽतोऽतिशयार्थमित्यर्थः । अन्यथा

---

**'ಜ್ಯೋತಿಷಿ' ಎಂಬ ಪ್ರಯೋಗದ ಸ್ವಾರಸ್ಯ**

'ಜ್ಞಾನೇ ಭಾವಾತ್' ಎಂದಾಗಲೀ 'ಸರ್ವಜ್ಞತ್ವಾತ್' ಎಂದಾಗಲೀ ಹೇಳಬೇಕಾಗಿದ್ದರೂ 'ಜ್ಯೋತಿಃ' ಎಂದು ಮೊದಲಾಗಿ ಹೇಳಿರುವುದು ಸೂರ್ಯನ ಪ್ರಕಾಶದಲ್ಲಿ ಎಲ್ಲ ವಸ್ತುಗಳೂ ಅಂತರ್ಭಾವಗೊಳ್ಳುವಂತೆ ದೇವತೆಗಳ ಜ್ಞಾನದಲ್ಲಿ ಎಲ್ಲ ವಸ್ತುಗಳೂ ಅಂತರ್ಭಾವಗೊಂಡಿವೆ ಎಂಬ ಅರ್ಥವನ್ನು ಸೂಚಿಸಲು.

ಎರಡು ಸೂತ್ರಗಳಲ್ಲಿ ಹೇಳಿದ, ದೇವತೆಗಳಿಗೆ ವೇದವಿದ್ಯಾಧಿಕಾರವಿಲ್ಲವೆಂಬ ಆಕ್ಷೇಪಕ್ಕೆ ಸಮಾಧಾನ—

ಓಂ ಭಾವಂ ತು ಬಾದರಾಯಣೋಽಸ್ತಿ ಹಿ ಓಂ
(೧-೩-೩೩)

**ಸೂತ್ರಾರ್ಥ**

ಮಧ್ವಾದಿಷು, ಅಧಿಕಾರಸ್ಯ, ದೇವಾನಾಂ ಎಂಬ ಪದಗಳು ಅನುವೃತ್ತವಾಗುತ್ತವೆ. 'ತು' ಶಬ್ದವು ವಿಶೇಷಾರ್ಥಕವಾದುದು. 'ಬಾದರಾಯಣಃ ತು' ಎಂದು ಅನ್ವಯ. ಭಾವಂ—ದೇವತೆಗಳಿಗೆ ಮಧು ಮೊದಲಾದ ಅಶೇಷವಿದ್ಯೆಗಳಲ್ಲೂ ಅಧಿಕಾರವಿರುವುದನ್ನು ಬಾದರಾಯಣರು ಅಂಗೀಕರಿಸುತ್ತಾರೆ. ಏಕೆಂದರೆ, —ಅಸ್ತಿ ಹಿ, ಅತಿಶಯ ಎಂದು ಶೇಷವನ್ನು ಸೇರಿಸಿಕೊಳ್ಳಬೇಕು—ಮೋಕ್ಷಫಲದಲ್ಲಿ ಮತ್ತು ಅದಕ್ಕೆ ಕಾರಣವಾದ ಜ್ಞಾನದಲ್ಲಿ ಅತಿಶಯವಿದೆಯಾದ್ದರಿಂದ ಆ ಅತಿಶಯಕ್ಕೋಸ್ಕರ ಎಂದು ಅರ್ಥ. ಅಧಿಕಾರವಿಲ್ಲದಿದ್ದಲ್ಲಿ ಪಡೆಯಲು ಯೋಗ್ಯವಾದ ಜ್ಞಾನ ಮತ್ತು ಫಲಗಳ ಅತಿಶಯವು ಲಭಿಸದಿರುವಂತಾದೀತು ಎಂದು ಭಾವ.

योग्यस्य ज्ञानफलयोरतिशयस्यानवाप्त्यापत्तेरिति भावः । जैमिनिमतं तु प्राप्तज्ञानफलयोरर्थेऽनधिकार इत्यविरोधो बोध्यः ॥ ८ ॥

अपशूद्राधिकरणम्—९

## ॥ ॐ शुगस्य तदनादरश्रवणात्तदाद्रवाणात्सूच्यते हि ॐ ॥ १-३-३४

अत्र शूद्राणामधिकारो नेत्युच्यते । वेदविद्यास्विति प्रकृतम् । शूद्रस्येत्यर्थादन्वेति । अनधिकार इत्यस्ति । आद्यस्तच्छब्दः श्रुत्युक्त-हंसपरः । अन्त्यः शुक्परः । तया शुचा आद्रवणान्निमित्ताच्छूद्रेत्युक्त पौत्रायणो मुनिना "अह हारेत्वा शूद्र" इत्यादि श्रुतौ, न रूढ्या ।

---

**ಜೈಮಿನಿ-ಬಾದರಾಯಣರಿಗೆ ವಿರೋಧವಿಲ್ಲ**

ಈಗಾಗಲೇ ಪಡೆದಿರುವ ಜ್ಞಾನಕ್ಕೋಸ್ಕರವಾಗಲೀ ಫಲಕ್ಕೋಸ್ಕರವಾಗಲೀ ವೇದವಿದ್ಯೆಯಲ್ಲಿ ಅಧಿಕಾರವಿಲ್ಲವೆಂದು ಜೈಮಿನಿಗಳ ಮತ. ಆದ್ದರಿಂದ ವಿರೋಧವಿಲ್ಲ ಎಂದು ತಿಳಿಯಬೇಕು.

ಅಪಶೂದ್ರಾಧಿಕರಣ—೯

## ಓಂ ಶುಗಸ್ಯ ತದನಾದರಶ್ರವಣಾತ್ತದಾದ್ರವಾಣಾತ್ ಸೂಚ್ಯತೇ ಹಿ ಓಂ (೧-೩-೩೪)

**ಅಧಿಕರಣದ ಉದ್ದೇಶ ಮತ್ತು ಸೂತ್ರಾರ್ಥ**

ಈ ಅಧಿಕರಣದಲ್ಲಿ ಶೂದ್ರರಿಗೆ ವೇದವಿದ್ಯಾಧಿಕಾರವಿಲ್ಲವೆಂದು ಹೇಳಲಾಗುವುದು. 'ವೇದವಿದ್ಯಾಸು' ಎಂಬ ಪದವು ಪ್ರಕೃತಸಂದರ್ಭಕ್ಕನುಗುಣವಾಗಿ ಲಭಿಸುವುದು. ಅರ್ಥಾತ್ ಪ್ರಾಪ್ತವಾಗುವ 'ಶೂದ್ರಸ್ಯ' ಎಂಬ ಪದವೂ ಪ್ರಕೃತಸೂತ್ರದಲ್ಲಿ ಅನ್ವಯುವನ್ನು ಪಡೆಯುವುದು. 'ಅನಧಿಕಾರಃ' ಎಂಬ ಪದವು ಹಿಂದಿನ ಅಧಿಕರಣದಿಂದ ಅನುವೃತ್ತಿಗೊಳ್ಳುವುದು. ಸೂತ್ರದಲ್ಲಿ ಮೊದಲನೆಯ 'ತತ್' ಶಬ್ದವು ಶ್ರುತ್ಯುಕ್ತವಾದ ಹಂಸವನ್ನು ಹೇಳುವುದು. ಎರಡನೆಯ 'ತತ್' ಶಬ್ದವು ಶುಕ್ ಎಂದರೆ ಶೋಕವನ್ನು ಹೇಳುವುದು. 'ಅಹ ಹಾರೇತ್ವಾ ಶೂದ್ರ' ಇತ್ಯಾದಿ ಶ್ರುತಿಯಲ್ಲಿ 'ಶುಚಾ ಆದ್ರವಣ' ಎಂದರೆ ಶೋಕದಿಂದ ಕರಗುವಿಕೆ ಎಂಬ ನಿಮಿತ್ತದಿಂದಾಗಿ

अतः शूद्रस्यानधिकार इत्यर्थः। शुगेवास्य किं निमित्तेत्यत उक्तम्— शुगस्य तदनादरेति । "कम्वर एनम्" इत्यादिना हंसकृतानादर-श्रवणादस्य पौत्रायणस्य शुगित्यर्थः । कथं ज्ञायते शुगस्य जातेत्यत उक्तम् । सूच्यते हीति । हि यस्मात् "सः सञ्जिहान एव क्षत्तार-मुवाच" इति व्यग्रत्वोक्त्या सूच्यते । अतः शुगस्य ज्ञायत इत्यर्थः ।

---

[1]ಪೌತ್ರಾಯಣನು ಮುನಿಯಿಂದ ಶೂದ್ರನೆಂದು ಕರೆಯಲ್ಪಟ್ಟಿದ್ದಾನೇ ಹೊರತು ರೂಢಿಯಿಂದಲ್ಲ ಆದ್ದರಿಂದ ಶೂದ್ರನಿಗೆ ವೇದಾಧಿಕಾರವಿಲ್ಲವೆಂದು ಅರ್ಥ. ಪೌತ್ರಾಯಣನಿಗೆ ಶೋಕ ಉಂಟಾಗಲು ಕಾರಣವಾದರೂ ಏನು ಎಂಬ ಪ್ರಶ್ನೆಗೆ ಉತ್ತರ—'ಶೂದ್ರಸ್ಯ ತದನಾದರ' ಎಂದು. 'ಕಂ ಉ ಅರೇ ಏನಂ' ಎಂದು ಮುಂತಾಗಿ ಹಂಸವು ತೋರ್ಪಡಿಸಿದ ಅನಾದರವನ್ನು ಕೇಳಿದುದರಿಂದ, ಅಸ್ಯ–ಪೌತ್ರಾಯಣನಿಗೆ, ಶುಕ್–ಶೋಕ ಉಂಟಾಯಿತೆಂದು ಅರ್ಥ. ರಾಜನಿಗೆ ಶೋಕವುಂಟಾಯಿತೆನ್ನುವುದು ನಮಗೆ ಹೇಗೆ ತಿಳಿದುಬರುವುದು ಎಂಬ ಪ್ರಶ್ನೆಗೆ ಉತ್ತರ—'ಸೂಚ್ಯತೇ ಹಿ' ಎಂದು. ಹಿ–ಯಾವ ಕಾರಣದಿಂದ, "ಆ ರಾಜನು ಹಾಸಿಗೆಯಿಂದ ಕೂಡಲೇ ಎದ್ದು ಸಾರಥಿಯನ್ನು ಕುರಿತು (ರೈಕ್ವನನ್ನು ಹುಡುಕಲು) ಹೇಳಿದನು" ಎಂದು ರಾಜನ ವ್ಯಗ್ರತೆಯನ್ನು

---

1 ಛಾಂದೋಗ್ಯದ ನಾಲ್ಕನೆಯ ಅಧ್ಯಾಯದಲ್ಲಿ ಬರುವ ಸಂವರ್ಗ ಪ್ರಕರಣದಲ್ಲಿ ಹೀಗೊಂದು ಆಖ್ಯಾಯಿಕೆ ಇದೆ—ಪೌತ್ರಾಯಣನೆಂಬ ರಾಜನು ಒಂದು ರಾತ್ರಿ ತನ್ನ ಪ್ರಾಸಾದದ ಮೇಲ್ಭಾಗದ ಬಯಲಿನಲ್ಲಿ ಮಲಗಿದ್ದನು. ಆವನ ಮೇಲೆ ಕೆಲವು ಹಂಸಪಕ್ಷಿಗಳು ಹಾರಿಹೋದವು. ಮುಂದೆ ಹಾರುತ್ತಿದ್ದ ಎರಡು ಹಂಸಗಳಲ್ಲಿ ಒಂದು ಹಂಸವು ಇನ್ನೊಂದು ಹಂಸವನ್ನು ಉದ್ದೇಶಿಸಿ, "ಎಲೈ ಮಂದದೃಷ್ಟಿಯುಳ್ಳವನೇ! ಪೌತ್ರಾಯಣನ ತೇಜಸ್ಸು ತಗಲುವಂತೆ ಅವನ ಮೇಲೆ ಹಾರಬೇಡ. ಸುಟ್ಟುಹೋದೀಯೆ!" ಎಂದು ಎಚ್ಚರಿಸಿತು. ಆ ಹಂಸವು ಅಪಕ್ಕುತ್ತರವಾಗಿ "ಅರೆ, ಹಂಸ! ಗಾಡಿಯ ಕೆಳಗಿರುವ ಆ ರೈಕ್ವನನ್ನು ಕುರಿತು ಹೇಳುವಂತೆ ಯಾರನ್ನು ಕುರಿತು ಈ ಮಾತಾಡುತ್ತಿದ್ದೀಯೆ" ಎಂದು ಪೌತ್ರಾಯಣನ ಬಗ್ಗೆ ಅನಾದರವನ್ನು ತೋರ್ಪಡಿಸಿತು. ಈ ಅನಾದರದ ಮಾತನ್ನು ಕೇಳಿದ ರಾಜನು ದುಃಖಿತನಾಗಿ ತನ್ನ ಸಾರಥಿಯನ್ನು ಕರೆದು ರೈಕ್ವನನ್ನು ಹುಡುಕಲು ಆದೇಶಿಸಿದನು. ರೈಕ್ವನನ್ನು ಹುಡುಕಲು ಹೊರಟ ಸಾರಥಿಯು ಒಮ್ಮೆ ಅವನು ಸಿಗಲಿಲ್ಲವೆಂದು ಬಂದರೂ ರಾಜನು ರೈಕ್ವನ ಗುರುತನ್ನು ಹೇಳಿದ ನಂತರ ಪುನಃ ಹುಡುಕಿ ರಾಜನಿಗೆ ರೈಕ್ವನಿರುವ ಸ್ಥಳವನ್ನು ತಿಳಿಸಿದನು. ರಾಜನು ಆರುನೂರು ಗೋವುಗಳನ್ನೂ, ಮುಕ್ತಾಹಾರವನ್ನೂ, ರಥವನ್ನೂ ತೆಗೆದುಕೊಂಡು ರೈಕ್ವನ ಬಳಿಗೆ ಬಂದು ಗುರುದಕ್ಷಿಣೆಯಾಗಿ ಅವುಗಳನ್ನು ಸ್ವೀಕರಿಸಿ ಉಪದೇಶಿಸಬೇಕೆಂದು ಪ್ರಾರ್ಥಿಸುವನು. ರೈಕ್ವಮುನಿಯು ರಾಜನನ್ನು ಕುರಿತು ಕ್ರೋಧದಿಂದ, "ಅಹ ಶೂದ್ರ! ಈ ಹಾರ, ರಥ, ಗೋವುಗಳು ಎಲ್ಲವೂ ನಿನಗೇ ಇರಲಿ. ನನಗದರಿಂದ ಉಪಯೋಗವೇನು?" ಎಂದು ಹೇಳುವನು. ಕೊನೆಗೆ ರಾಜನಿಂದ ಸಾಂತ್ವನಗೊಂಡ ರೈಕ್ವಮುನಿಯು ರಾಜನ ಮೇಲೆ ಕರುಣೆದೋರಿ ಸಂವರ್ಗವಿದ್ಯೆಯನ್ನುಪದೇಶಿಸುವನು.

शुचा द्रवतीति निरुक्तत्वाद्गकारस्य दत्वे दीर्घे च शूद्र इति भवति । शुग्द्रेति वाच्ये श्रुतौ शूद्रेत्युक्तिः शोकाधिक्यज्ञापनाय । अत एव सूत्रे तद्द्रवणादिति वाच्ये तदाद्रवणादित्युकारव्याख्यानमाङा कृतम् ॥

ननु श्रौतश्शूद्रशब्दो रूढः किं न स्यादित्यत आह—

## ॥ ॐ क्षत्रियत्वावगतेश्चोत्तरत्र चैत्ररथेन लिङ्गात् ॐ ॥ १-३-३५

---

ಸೂಚಿಸಲಾಗಿದೆಯೋ ಆ ಕಾರಣದಿಂದ ರಾಜನಿಗೆ ಶೋಕವುಂಟಾಯಿತೆಂದು ನಮಗೆ ತಿಳಿಯುವುದು ಎಂದು ಅರ್ಥ.

### ಸಂವರ್ಗಪ್ರಕರಣದಲ್ಲಿರುವ 'ಶೂದ್ರ'ಶಬ್ದದ ನಿಷ್ಪತ್ತಿ ಮತ್ತು ಆ ಶಬ್ದವನ್ನು ಉಪಯೋಗಿಸಿರುವುದರ ಪ್ರಯೋಜನ

[1] 'ಶುಚಾ ದ್ರವತಿ' ಎಂದು ನಿರುಕ್ತಿ ಇರುವುದರಿಂದ ಶುಗ್ ಎಂಬಲ್ಲಿರುವ ಗಕಾರಕ್ಕೆ ದಕಾರಾದೇಶ ಬಂದು ಶು ಎಂಬಲ್ಲಿನ ಉಕಾರವು ದೀರ್ಘವಾದಾಗ ಶೂದ್ರ ಎಂದು ರೂಪವಾಗುವುದು. [2] 'ಶುಗ್‌ದ್ರ' ಎಂದು ಹೇಳಬೇಕಿದ್ದಾಗ 'ಶೂದ್ರ' ಎಂದು ಹೇಳಿರುವುದು ಶೋಕದ ಆಧಿಕ್ಯವನ್ನು ಸೂಚಿಸಲು. ಆದ್ದರಿಂದಲೇ ಸೂತ್ರದಲ್ಲೂ 'ತದ್ದ್ರವಣಾತ್' ಎಂದು ಹೇಳುವ ಬದಲು [3] 'ತದಾದ್ರವಣಾತ್' ಎಂದು ಹೇಳಿ ಉಕಾರದ ವ್ಯಾಖ್ಯಾನವನ್ನು 'ಆಙ್' ಎಂಬ ಉಪಸರ್ಗದಿಂದ ಮಾಡಲಾಗಿದೆ.

ಉಪನಿಷತ್ತಿನಲ್ಲಿರುವ ಶೂದ್ರಶಬ್ದವು ರೂಢಿಯಿಂದ ಶೂದ್ರಜಾತಿಯಲ್ಲಿ ಹುಟ್ಟಿದವನನ್ನೇ ಏಕೆ ಹೇಳಬಾರದು ಎಂಬ ಆಶಂಕೆಗೆ ಉತ್ತರ—

## ಓಂ ಕ್ಷತ್ರಿಯತ್ವಾವಗತೇಶ್ಚೋತ್ತರತ್ರ ಚೈತ್ರರಥೇನ ಲಿಂಗಾತ್ ಓಂ (೧-೩-೩೫)

---

1. ದುಃಖದಿಂದ ಕರಗಿದನು.

2. 'ಶೂ' ಎಂಬಲ್ಲಿರುವ ದೀರ್ಘವು ಶೋಕದ ಆಧಿಕ್ಯವನ್ನು ಸೂಚಿಸಲೆಂದು ಭಾವ.

3. ಆದ್ರವಣ ಎಂದರೆ ಅತ್ಯಂತ ಕರಗುವಿಕೆ. ಅತ್ಯಂತ ಎಂಬ ಅರ್ಥವನ್ನು ಕೊಡುವ ಆಕಾರವು 'ಶೂದ್ರ' ಎಂಬಲ್ಲಿನ ಊಕಾರದ ವ್ಯಾಖ್ಯಾನವೆಂದು ಅಭಿಪ್ರಾಯ.

अस्येत्यस्ति । आद्रवणादिति शूद्रस्यानधिकार इति च । चित्रश्चासौ रथश्च चित्ररथस्तस्येदं चैत्ररथम् । भावप्रधानश्चेदं, तेन । उत्तरत्रास्याद्रवणादुत्तरवाक्ये पौत्रायणस्याद्रवणोक्त्यनन्तरं "अयमश्वतरीरथः" इत्युत्तरवाक्ये श्रुतेन इत्यर्थः । चैत्ररथेन चैत्ररथत्वेन चित्ररथसम्बन्धित्वेन लिङ्गात् लिङ्गेनास्य पौत्रायणस्य क्षत्रियत्वावगतेश्च शूद्रशब्दो न रूढ इति शूद्रस्यानधिकार इत्यर्थः । अश्वतरीयुक्तरथश्चित्रपदार्थः । "रथस्त्वश्वतरीयुक्तश्चित्रः" इत्यादेः । रथेन लिङ्गेनेत्येव वाच्ये चित्रपदमपूर्वरथयोगात् क्षत्रियत्वसम्भावनार्थम् । चित्रेणेत्युक्तावपि तादृशरथेनेति सिद्धे रथोक्तिः स्पष्टार्था । चित्रेति वाच्ये

---

**ಸೂತ್ರಾರ್ಥ**

ಹಿಂದಿನ ಸೂತ್ರದಿಂದ 'ಅಸ್ಯ' ಎಂದು ಅನುವೃತ್ತಿಗೊಳ್ಳುತ್ತದೆ. ಹಾಗೆಯೇ 'ಆದ್ರವಣಾತ್', 'ಶೂದ್ರಸ್ಯ', 'ಅನಧಿಕಾರಃ' ಎಂಬ ಪದಗಳೂ ಅನುವೃತ್ತವಾಗುತ್ತವೆ. ಚಿತ್ರವಾಗಿರುವ ರಥ ಚಿತ್ರರಥ. ಅದಕ್ಕೆ ಸಂಬಂಧಿಸಿದುದು ಚೈತ್ರರಥ. ಚೈತ್ರರಥಶಬ್ದವು ಇಲ್ಲಿ ಭಾವಪ್ರಧಾನವಾದುದು.[1] ಉತ್ತರತ್ರ-ಪೌತ್ರಾಯಣನಿಗೆ ಆದ್ರವಣವನ್ನು ಹೇಳುವ ವಾಕ್ಯದ ಮುಂದಿನ ವಾಕ್ಯದಲ್ಲಿ ಅಂದರೆ ಪೌತ್ರಾಯಣನಿಗೆ ಆದ್ರವಣವನ್ನು ಹೇಳಿದ ನಂತರ 'ಅಯಮಶ್ವತರೀರಥಃ' ಎಂಬ ಮುಂದಿನ ವಾಕ್ಯದಲ್ಲಿ ಶ್ರುತವಾಗಿರುವ, ಚೈತ್ರರಥೇನ ಲಿಂಗಾತ್-ಚೈತ್ರರಥತ್ವ ಎಂದರೆ ಚಿತ್ರರಥಸಂಬಂಧವೆಂಬ ಲಿಂಗದಿಂದ ಪೌತ್ರಾಯಣನ, ಕ್ಷತ್ರಿಯಶ್ಚಾವಗತೇಶ್ಚ-ಕ್ಷತ್ರಿಯತ್ವವು ತಿಳಿದು ಬರುವುದರಿಂದಲೂ ಶೂದ್ರಶಬ್ದವು ರೂಢವಲ್ಲದ್ದರಿಂದ ಶೂದ್ರರಿಗೆ ವೇದವಿದ್ಯಾಧಿಕಾರವಿಲ್ಲವೆಂದರ್ಥ. 'ರಥಸ್ತು ಅಶ್ವತರೀಯುಕ್ತಃ ಚಿತ್ರಃ' ಇತ್ಯಾದಿ ಕೋಶವಿರುವುದರಿಂದ ಚಿತ್ರಪದಕ್ಕೆ ಹೇಸರಗತ್ತೆಗಳನ್ನು ಕಟ್ಟಿದ ರಥವೆಂದರ್ಥ.

**'ಚೈತ್ರರಥೇನ ಲಿಂಗಾತ್' ಎಂಬ ಸೂತ್ರಭಾಗದ ಪದಗಳ ಸ್ವಾರಸ್ಯ**

ಅಪೂರ್ವವಾದ ರಥದ ಸಂಬಂಧದಿಂದ ಪೌತ್ರಾಯಣನು ಕ್ಷತ್ರಿಯನಾಗಿರಬಹುದು ಎಂದು ಸಂಭಾವನೆಯನ್ನು ಉಂಟುಮಾಡಲು 'ರಥೇನ ಲಿಂಗೇನ' ಎಂದಿಷ್ಟೇ ಹೇಳಬಹುದಾಗಿದ್ದರೂ ಚಿತ್ರಪದವನ್ನೂ ಉಪಯೋಗಿಸಲಾಗಿದೆ. 'ಚಿತ್ರೇಣ' ಎಂದಿಷ್ಟೇ ಹೇಳಿದರೂ ಹೇಸರಗತ್ತೆಗಳನ್ನು ಕಟ್ಟಿದ ರಥವೆಂದು ಅರ್ಥವಾಗುವುದು. ಆದರೂ

---

1. ಚಿತ್ರರಥಸಂಬಂಧಿತ್ವ ಅಥವಾ ಚಿತ್ರರಥದ ಸಂಬಂಧ ಎಂಬ ಧರ್ಮವು ಚೈತ್ರರಥಶಬ್ದದ ಅರ್ಥವೆಂದು ಅಭಿಪ್ರಾಯ.

**चैत्रेत्युक्तिः "हारेत्वा तव" इत्युक्तमुख्यस्वाभाविकसम्बन्धं द्योतयितुम्। तेन रथित्वमात्रस्य वैदिकमात्रेऽपि कथञ्चित् सम्भवाद्व्यभिचार इति न शङ्क्यम्। लिङ्गेनेति वाच्ये लिङ्गादित्युक्तिर्व्यत्ययात्, तृतीयापञ्चम्योर्हेतुरूपैकार्थत्वाद्वेति । उत्तरत्रेत्युक्तिस्तादृशरथबोधकवाक्यद्योतनाय। यद्वा शूद्रेति सम्बोधनादुत्तरत्रेत्यर्थः। तेन शूद्रश्रुतितोऽपि लिङ्गस्य चरमत्वेन प्राबल्यं सूचयति । चशब्दः "श्रद्धादेयो बहुदायी" इत्यादिवाक्यशेषस्थलिङ्गान्तरसमुच्चयार्थ इत्यप्येके ॥**

ಸ್ಪಷ್ಟತೆಗಾಗಿ ರಥಪದವನ್ನೂ ಉಪಯೋಗಿಸಲಾಗಿದೆ. ಚಿತ್ರ ಎಂದು ಹೇಳುವುದರ ಬದಲು ಚೈತ್ರ ಎಂದು ಹೇಳಿರುವುದು 'ಹಾರೇತ್ವಾ ತವ' ಎಂಬಲ್ಲಿ ಹೇಳಿರುವ ರಥದ ಸಂಬಂಧವು ಮುಖ್ಯವಾದ ಸ್ವಾಭಾವಿಕ ಸಂಬಂಧ ಎಂದು ತಿಳಿಸಲು. ಆದ್ದರಿಂದಲೇ, ಎಲ್ಲ ವೈದಿಕರಿಗೂ ಕಥಂಚಿತ್ ರಥವಿರಬಹುದಾದ್ದರಿಂದ ರಥವಿದ್ದಮಾತ್ರದಿಂದ ಪೌತ್ರಾಯಣನು ಕ್ಷತ್ರಿಯನಾಗಬೇಕಾಗಿಲ್ಲ ಎಂಬ ಶಂಕೆಗೆ ಅವಕಾಶವಿಲ್ಲ.[1] 'ಲಿಂಗೇನ'[2] ಎಂದಿರಬೇಕಾಗಿದ್ದರೂ 'ಲಿಂಗಾತ್' ಎಂಬುದಾಗಿ ವಿಭಕ್ತಿಯ ವ್ಯತ್ಯಾಸದಿಂದ ಹೇಳಲಾಗಿದೆ. ಅಥವಾ, ತೃತೀಯಾ ಮತ್ತು ಪಂಚಮೀ ವಿಭಕ್ತಿಗಳಿಗೆ ಹೇತು ಎಂಬ ಒಂದೇ ಅರ್ಥವಿರುವುದರಿಂದ 'ಲಿಂಗೇನ' ಎಂದು ಹೇಳುವುದರ ಬದಲು 'ಲಿಂಗಾತ್' ಎಂದು ಹೇಳಿದೆ.

### 'ಉತ್ತರತ್ರ' ಎಂಬ ಪದದ ಸಾರ್ಥಕತೆ

'ಉತ್ತರತ್ರ' ಎಂದು ಹೇಳಿರುವುದು ಅಂತಹ ರಥವನ್ನು ತಿಳಿಸುವ ವಾಕ್ಯವನ್ನು ಸೂಚಿಸಲು. ಅಥವಾ ಶೂದ್ರ ಎಂದು ಸಂಬೋಧನೆ ಮಾಡಿದನಂತರ ಎಂದು ಅರ್ಥ. ಇದರಿಂದ 'ಶೂದ್ರ' ಶಬ್ದಕ್ಕಿಂತಲೂ ಆನಂತರ ಇರುವುದರಿಂದ ಲಿಂಗವು ಪ್ರಬಲವೆಂದು ಸೂಚಿಸಲಾಗಿದೆ.[3]

---

1. ಸ್ವಾಭಾವಿಕವಾಗಿ ರಥದ ಸಂಬಂಧ ಕ್ಷತ್ರಿಯರಿಗೇ ಹೊರತು ಬ್ರಾಹ್ಮಣರಿಗಲ್ಲ. ಆದ್ದರಿಂದ ರಥದ ಮುಖ್ಯ ಸಂಬಂಧವನ್ನು ಪಡೆದಿರುವ ಪೌತ್ರಾಯಣನು ಕ್ಷತ್ರಿಯನೆಂದೇ ಸಿದ್ಧವಾಗುವುದು ಎಂದು ಭಾವ.

2 ಸೂತ್ರದಲ್ಲಿ ಚೈತ್ರರಥೇನ ಎಂಬ ವಿಶೇಷಣಕ್ಕನುಗುಣವಾಗಿ ಲಿಂಗೇನ ಎಂದಿರಬೇಕಾಗಿತ್ತು.

3. ಸಾಮಾನ್ಯವಾಗಿ ಲಿಂಗಕ್ಕಿಂತಲೂ ಶ್ರುತಿ ಅಥವಾ ರೂಢಶಬ್ದಕ್ಕೇ ಪ್ರಾಬಲ್ಯ. ಆದ್ದರಿಂದ ಚಿತ್ರರಥಸಂಬಂಧವೆಂಬ ಲಿಂಗಕ್ಕಿಂತಲೂ 'ಶೂದ್ರ' ಎಂಬ ಶ್ರುತಿಗೇ ಪ್ರಾಬಲ್ಯವಿರುವುದರಿಂದ ಪೌತ್ರಾಯಣನು ಶೂದ್ರನೇ ಎಂದು ಸಿದ್ಧವಾಗಬೇಕಾಗಿತ್ತು. ಆದರೆ ಸ್ವಭಾವತಃ ದುರ್ಬಲವಾದ ಲಿಂಗವೂ ಚರಮವಾಗಿರುವ ಕಾರಣದಿಂದ ಉಪಕ್ರಮದಲ್ಲಿರುವ ಶ್ರುತಿಗಿಂತ ಪ್ರಬಲವಾಗುವುದು. ಆದ್ದರಿಂದ ಲಿಂಗವನ್ನಾಧರಿಸಿ ಪೌತ್ರಾಯಣನು ಕ್ಷತ್ರಿಯನೆಂದು ತೀರ್ಮಾನಿಸಬಹುದೆಂದು ಸೂಚಿಸಲು ಸೂತ್ರದಲ್ಲಿ 'ಉತ್ತರತ್ರ' ಎಂದು ಹೇಳಲಾಗಿದೆ ಎಂದು ಭಾವ.

इतश्च शूद्रस्यानधिकार इत्याह—

॥ ॐ संस्कारपरामर्शात्तदभावाभिलापाच्च ॐ ॥
१-३-३६

अन्यार्थवचनं परामर्शः । अध्ययनाङ्गत्वेन "तमध्यापयीत" इत्युपनयनाख्यसंस्कारपरामर्शात् शूद्रस्य च "नाग्निर्न यज्ञो न संस्कारः" इति श्रुतौ संस्काराभावाभिलापाच्च शूद्रस्य वेदविद्यानधिकार इत्यर्थः । यद्वा पूर्वसूत्रे रथस्य वेदव्याप्तत्वाद्वेदद्वारा लिङ्गत्वमभिमतम् । तद्द्वयं शूद्रेऽप्यस्त्वित्यतोऽयं योगः । वेदाङ्ग-

**ಸೂತ್ರದಲ್ಲಿರುವ 'ಚ' ಶಬ್ದಕ್ಕೆ ಇನ್ನೊಂದು ವ್ಯಾಖ್ಯಾನ**

'ಚ'ಶಬ್ದವು 'ಶ್ರದ್ಧಾದೇಯೋ ಬಹುದಾಯೀ' ಇತ್ಯಾದಿ ವಾಕ್ಯಶೇಷದಲ್ಲಿರುವ ಲಿಂಗಾಂತರದ ಸಮುಚ್ಚಯವನ್ನು ಹೇಳುವುದೆಂದೂ ಕೆಲವರು ಹೇಳುವರು.

ಈ ಮುಂದಿನ ಕಾರಣದಿಂದಲೂ ಶೂದ್ರನಿಗೆ ವೇದವಿದ್ಯಾಧಿಕಾರವಿಲ್ಲವೆಂದು ಹೇಳಲು ಸೂತ್ರ—

ಓಂ ಸಂಸ್ಕಾರಪರಾಮರ್ಶಾತ್ತದಭಾವಾಭಿಲಾಪಾಚ್ಚ ಓಂ
(೧-೩-೩೬)

**ಸೂತ್ರಾರ್ಥ**

ಪರಾಮರ್ಶವೆಂದರೆ ಇನ್ನೊಂದರ ಉದ್ದೇಶದಿಂದ ಹೇಳುವುದು. 'ತಮಧ್ಯಾಪಯೀತ' ಎಂದು ಅಧ್ಯಯನದ ಅಂಗವಾಗಿ ಉಪನಯನರೂಪ ಸಂಸ್ಕಾರವನ್ನು ಹೇಳಿರುವುದರಿಂದ, ಶೂದ್ರನಿಗಾದರೋ 'ನಾಗ್ನಿರ್ನ ಯಜ್ಞೋ ನ ಸಂಸ್ಕಾರಃ' (ಪೈಂಗೀ ಶ್ರುತಿ) ಎಂದು ಸಂಸ್ಕಾರವಿಲ್ಲವೆಂದು ಹೇಳಿರುವುದರಿಂದಲೂ ಶೂದ್ರನಿಗೆ ವೇದವಿದ್ಯಾಧಿಕಾರವಿಲ್ಲವೆಂದು ಅರ್ಥ.

**ಇದೇ ಸೂತ್ರಕ್ಕೆ ಪ್ರಕಾರಾಂತರದಿಂದ ಅವತರಣಿಕೆಗಳು**

ಅಥವಾ, ಹಿಂದಿನ ಸೂತ್ರದಲ್ಲಿ ಯಾರು ರಥಿಯೋ ಅವನು ವೇದವುಳ್ಳವನು ಎಂಬ ವ್ಯಾಪ್ತಿಯಿರುವುದರಿಂದ ರಥವು ವೇದದ ಮೂಲಕ ಪೌತ್ರಾಯಣನು ಕ್ಷತ್ರಿಯನೆಂದು ಸಾಧಿಸಲು ಲಿಂಗವೆಂದು ಅಭಿಮತವಾಗಿದೆ. ರಥ ಮತ್ತು ವೇದ ಇವುಗಳೆರಡೂ ಶೂದ್ರನಿಗೂ ಇರಲಿ ಎಂಬ ಆಶಂಕೆಗೆ ಉತ್ತರವಾಗಿ ಈ ಸೂತ್ರ ಬಂದಿದೆ. ವೇದಕ್ಕೆ ಅಂಗವಾದ ಸಂಸ್ಕಾರವಿಲ್ಲದಿರುವುದರಿಂದ ಶೂದ್ರನಿಗೆ ವೇದವಿಲ್ಲ. ಆದ್ದರಿಂದಲೇ ರಥವೂ

संस्काराभावाद्वेदाभावेन रथित्वं च नेति योज्यम् । शूद्रं नोपनयीतेति निषेधाभावादस्तु तस्यापि संस्कार इत्यतो वा ।

इतश्च न संस्कार इति वाऽऽह—

॥ ॐ तदभावनिर्धारणे च प्रवृत्तेः ॐ ॥
१-३-३७

चोऽवधारणे समुच्चये वा । तस्य प्रकृतशूद्रत्वस्याभावनिर्धारणे सत्येव प्रवृत्तेः । संस्कार इत्यस्ति । उपनयनसंस्कारे प्रवृत्तेश्च न

---

ಇಲ್ಲ ಎಂದು ವಾಕ್ಯಗಳನ್ನು ಯೋಜಿಸಿಕೊಳ್ಳಬೇಕು ಅಥವಾ, ಶೂದ್ರನಿಗೆ ಉಪನಯನ ಮಾಡಬಾರದು ಎಂಬ ನಿಷೇಧವಿಲ್ಲದಿರುವುದರಿಂದ ಶೂದ್ರನಿಗೂ ಸಂಸ್ಕಾರ ವಿರಬಹುದು ಎಂಬ ಆಶಂಕೆಗೆ ಉತ್ತರವಾಗಿ ಈ ಸೂತ್ರ ಬಂದಿದೆ.

ಈ ಮುಂದಿನ ಕಾರಣದಿಂದಲೂ ಶೂದ್ರನಿಗೆ ಸಂಸ್ಕಾರವಿಲ್ಲವೆಂದು ಹೇಳಲು ಸೂತ್ರ—

ಓಂ ತದಭಾವನಿರ್ಧಾರಣೇ ಚ ಪ್ರವೃತ್ತೇಃ ಓಂ
(೧-೩-೩೭)

**ಸೂತ್ರಾರ್ಥ**

'ಚ' ಶಬ್ದವು ಅವಧಾರಣ ಅಥವಾ ಸಮುಚ್ಚಯವನ್ನು ಹೇಳುವುದು. ತಸ್ಯ ಅಂದರೆ ಪ್ರಸ್ತುತವಾದ ಶೂದ್ರತ್ವವು ಇಲ್ಲವೆಂದು ನಿಶ್ಚಯವಿದ್ದಾಗಲೇ ಪ್ರವೃತ್ತಿ

---

1. ಛಾಂದೋಗ್ಯದಲ್ಲಿ ಹೀಗೆ ಆಖ್ಯಾಯಿಕೆ ಇದೆ.—ವೇದಾಧ್ಯಯನದಲ್ಲಿ ತೀವ್ರ ಆಸಕ್ತಿ ಪಡೆದಿದ್ದ ಸತ್ಯಕಾಮನೆಂಬ ಬಾಲಕನು ಉಪನಯನವಿಲ್ಲದೇ ವೇದಾಧ್ಯಯನವಾಗಲಾರದೆಂದೂ, ಆಚಾರ್ಯರು ಗೋತ್ರವನ್ನು ತಿಳಿಸದಿದ್ದಲ್ಲಿ ಉಪನಯನಮಾಡಲಾರರೆಂದೂ, ಆದ್ದರಿಂದ ತನ್ನ ಗೋತ್ರ ವನ್ನು ತಿಳಿಸಬೇಕೆಂದು ತನ್ನ ತಾಯಿ ಜಬಲೆಯ ಬಳಿ ಹೋಗಿ ಕೇಳಿದನು. ಜಬಲೆಯು ಸತ್ಯಕಾಮನ ಗೋತ್ರ ಯಾವುದೆಂದು ತನಗೆ ತಿಳಿಯದೆಂದಳು. ಗೌತಮರ ಬಳಿ ಹೋಗಿ ಬ್ರಹ್ಮಚರ್ಯಕ್ಕಾಗಿ ಉಪನಯನ ಮಾಡಬೇಕೆಂದು ಪ್ರಾರ್ಥಿಸಿದ ಸತ್ಯಕಾಮನನ್ನು ಗೌತಮರು ಅವನ ಗೋತ್ರ ಕೇಳಿದಾಗ ತಾಯಿ ತಿಳಿಸಿದಂತೆ ತನ್ನ ಗೋತ್ರ ಯಾವುದೋ ತಿಳಿಯದೆಂದು ಸತ್ಯವನ್ನು ನುಡಿದ ಸತ್ಯಕಾಮನ ಆರ್ಜವವನ್ನು ಕಂಡು ಗೌತಮರು ಅವನು ಬ್ರಾಹ್ಮಣನೆಂದೇ ನಿಶ್ಚಯಿಸಿ ಉಪನಯನವನ್ನು ಮಾಡಿದರು.

ಸತ್ಯಕಾಮನು ಶೂದ್ರನಲ್ಲವೆಂದು ನಿರ್ಧರಿಸಿದ ನಂತರವೇ ಗೌತಮರು ಸತ್ಯಕಾಮನಿಗೆ ಉಪನಯನ ಮಾಡಲು ಉದ್ಯುಕ್ತರಾದ್ದರಿಂದ ಶೂದ್ರನಿಗೆ ಉಪನಯನಾದಿ ಸಂಸ್ಕಾರ ನಿಷೇಧವಿದೆ ಯೆಂದು ತಿಳಿದುಬರುವುದೆಂದು ಭಾವ.

*

निषेधाभाव इति वा न संस्कार इति वा योज्यम् । "नैतदब्राह्मणो विवक्तुमर्हति" इति सत्यकामे शूद्रत्वाभावं निश्चित्यैव तदुपनयने प्रवृत्तत्वात्तेन लिङ्गेन निषेधादिर्ज्ञायत इति भावः । अन्त्यपक्षे संस्काराभावे साध्ये नाग्निरिति प्रागुक्तश्रुत्या प्रवृत्तिरूपलिङ्गसमुच्चये चः ॥

संस्काराभावेऽपि विशिष्टबुद्ध्यादिमत्त्वाद् द्विजवदधिकारः स्यादित्यत आह—

॥ ॐ श्रवणाध्ययनार्थप्रतिषेधात्स्मृतेश्च ॐ ॥

१-३-३८

---

ಯಿರುವುದರಿಂದ—'ಸಂಸ್ಕಾರೇ' ಎಂಬ ಪದವು ಅನುವೃತ್ತವಾಗುವುದು—ಉಪನಯನ ಸಂಸ್ಕಾರದಲ್ಲಿ ಪ್ರವೃತ್ತಿ ಇರುವುದರಿಂದಲೂ ಕೂಡ 'ನಿಷೇಧವಿಲ್ಲವೆಂದಿಲ್ಲ' ಎಂದಾಗಲೀ 'ಸಂಸ್ಕಾರವಿಲ್ಲ' ಎಂದಾಗಲೀ ಸೇರಿಸಿಕೊಳ್ಳಬೇಕು. 1 'ನೈತದಬ್ರಾಹ್ಮಣೋ ವಿವಕ್ತು-ಮರ್ಹತಿ'—ಬ್ರಾಹ್ಮಣನಲ್ಲದವನು ಇಂತಹ ಸತ್ಯವಚನವನ್ನು ಸರ್ವಥಾ ಆಡಲಾರ—ಎಂಬುದಾಗಿ ಸತ್ಯಕಾಮನು ಶೂದ್ರನಲ್ಲವೆಂದು ನಿರ್ಧರಿಸಿದ ನಂತರವೇ ಅವನ ಉಪನಯನಕ್ಕಾಗಿ ಪ್ರವೃತ್ತಿಮಾಡಿರುವ ಕಾರಣದಿಂದ ಶೂದ್ರನಿಗೆ ಸಂಸ್ಕಾರನಿಷೇಧ ಮೊದಲಾದವುಗಳು ಇವೆಯೆಂದು ತಿಳಿದುಬರುತ್ತದೆ ಎಂದು ಭಾವ.

1ಎರಡನೆಯ ಪಕ್ಷದಲ್ಲಿ—ಶೂದ್ರನಿಗೆ ಸಂಸ್ಕಾರವಿಲ್ಲವೆಂದು ಸಾಧಿಸಲು ಹಿಂದೆ ಹೇಳಿದ 'ನಾಗ್ನಿಃ' ಎಂಬ ಶ್ರುತಿಯೊಂದಿಗೆ ಪ್ರವೃತ್ತಿರೂಪವಾದ ಲಿಂಗದ ಸಮುಚ್ಚಯ ವನ್ನು 'ಚ' ಶಬ್ದವು ಹೇಳುವುದು.

ಸಂಸ್ಕಾರವಿಲ್ಲದಿದ್ದರೂ ವಿಶಿಷ್ಟಬುದ್ಧಿ ಮೊದಲಾದವು ಇರುವುದರಿಂದ ದ್ವಿಜರಿಗಿರು ವಂತೆ ಶೂದ್ರರಿಗೂ ವೇದಾಧಿಕಾರವೇಕಿರಬಾರದು ಎಂಬ ಆಕ್ಷೇಪಕ್ಕೆ ಸಮಾಧಾನವನ್ನು ಹೇಳುವ ಸೂತ್ರ—

ಓಂ ಶ್ರವಣಾಧ್ಯಯನಾರ್ಥಪ್ರತಿಷೇಧಾತ್ ಸ್ಮೃತೇಶ್ಚ ಓಂ

(೧-೩-೩೮)

---

1. ನಿಷೇಧವಿಲ್ಲವೆಂದಿಲ್ಲ ಎಂದಾಗಲೀ, ಸಂಸ್ಕಾರವಿಲ್ಲ ಎಂದಾಗಲೀ ಪದಗಳನ್ನು ಸೇರಿಸಿ ಕೊಳ್ಳಬೇಕು ಎಂದು ಹೇಳಿದ ಪಕ್ಷಗಳಲ್ಲಿ ಎರಡನೆಯ ಪಕ್ಷ.

अर्थपदेनार्थविधारणमुच्यते । वेदश्रवणाध्ययनार्थविधारणानां "श्रवणे त्रपुजतुभ्याम्" इत्यादिना प्रतिषेधात् "नाग्निर्न यज्ञः शूद्रस्य" इत्यादिस्मृतेश्च शूद्रस्यानधिकार इत्यर्थः । श्रुतौ शूद्रपदानुक्तेः पृथक् स्मृत्युक्तिः ॥ ९ ॥

कम्पनाधिकरणम्—१०

## ॥ ॐ कम्पनात् ॐ ॥ १-३-३९

अत्र वज्रनाम समन्वीयते । योग्यतया वज्र इत्यन्वेति ।

---

**ಸೂತ್ರಾರ್ಥ**

'ಅರ್ಥ' ಪದವು ಅರ್ಥನಿಶ್ಚಯವನ್ನು ಹೇಳುವುದು. ವೇದಶ್ರವಣ, ವೇದಾಧ್ಯಯನ, ವೇದಾರ್ಥನಿರ್ಣಯ ಇವುಗಳನ್ನು 'ಶ್ರವಣೇ ತ್ರಪು ಜತುಭ್ಯಾಂ' ಇತ್ಯಾದಿ ವಾಕ್ಯದಿಂದ ನಿಷೇಧಿಸಿರುವುದರಿಂದ, 'ನಾಗ್ನಿರ್ನ ಯಜ್ಞಃ ಶೂದ್ರಸ್ಯ' ಇತ್ಯಾದಿಸ್ಮೃತಿ ಇರುವುದರಿಂದಲೂ ಶೂದ್ರನಿಗೆ ವೇದಾಧಿಕಾರವಿಲ್ಲವೆಂದರ್ಥ. ಶ್ರುತಿಯಲ್ಲಿ ಶೂದ್ರಪದವನ್ನು ಹೇಳದಿರುವುದರಿಂದ ಪ್ರತ್ಯೇಕವಾಗಿ ಸ್ಮೃತಿಯನ್ನು ಹೇಳಲಾಗಿದೆ.

**ಕಂಪನಾಧಿಕರಣ—೧೦**

## ಓಂ ಕಂಪನಾತ್ ಓಂ (೧-೩-೩೯)

**ಅಧಿಕರಣದ ಉದ್ದೇಶ ಮತ್ತು ಸೂತ್ರಾರ್ಥ**

ಈ [1]ಅಧಿಕರಣದಲ್ಲಿ 'ವಜ್ರ' ಎಂಬ ನಾಮಾತ್ಮಕಶಬ್ದದ ಸಮನ್ವಯವನ್ನು ಮಾಡಲಾಗಿದೆ. ಅನ್ವಯಯೋಗ್ಯವಾದ 'ವಜ್ರ' ಎಂಬ ಪದವು ಅನ್ವಯವನ್ನು

---

1. ಯದಿದಂ ಕಿಂಚ ಜಗತ್ಸರ್ವಂ ಪ್ರಾಣ ಏಜತಿ ನಿಃಸೃತಂ ।
ಮಹದ್ಭಯಂ ವಜ್ರಮುದ್ಯತಂ ಯ ಏತದ್ವಿದುರಮೃತಾಸ್ತೇ ಭವಂತಿ ॥ (ಕಠ ೬—೩)

ಎಂಬ ಶ್ರುತಿ ಈ ಅಧಿಕರಣದ ವಿಷಯವಾಕ್ಯ. ಈ ಎಲ್ಲ ಜಗತ್ತು ಪ್ರಾಣಶಬ್ದವಾಚ್ಯನಾದ ಯಾವ ಹರಿಯನ್ನು ಆಶ್ರಯಿಸಿಕೊಂಡಿದೆಯೋ, ಯಾರಿಂದ ಸೃಷ್ಟವಾಗಿದೆಯೋ, ಯಾರಿಂದ ಕ್ರಿಯಾಶೀಲವಾಗಿದೆಯೋ ಅಂತಹ ಮಹನೀಯನೂ, ದುಷ್ಟಭಯಂಕರನೂ, ದೋಷವರ್ಜಿತನೂ, ಸರ್ವಪ್ರಯತ್ನಶೀಲನೂ ಆದ ಭಗವಂತನನ್ನು ಯಾರು ಸಾಕ್ಷಾತ್ಕರಿಸಿಕೊಳ್ಳುವರೋ ಅವರು ಮುಕ್ತರಾಗುತ್ತಾರೆ ಎಂದು ಸಿದ್ಧಾಂತದಲ್ಲಿ ಶ್ರುತ್ಯರ್ಥ. ಉದ್ಯತವಜ್ರವೆಂದರೆ ಎತ್ತಲ್ಪಟ್ಟಿರುವ ವಜ್ರಾಯುಧವೆಂದೂ ಅದರ ಜ್ಞಾನವೇ ಮೋಕ್ಷಸಾಧನವೆಂದೂ ಪೂರ್ವಪಕ್ಷ. (ಯಸ್ಮಾತ್) 'ಏಜತಿ' ಎಂಬುದಾಗಿ ವಜ್ರಶಬ್ದವಾಚ್ಯನನ್ನು ಸರ್ವಜಗಚ್ಚೇಷ್ಟಕನೆಂದು ಹೇಳಿರುವುದರಿಂದ ಬ್ರಹ್ಮನೇ ವಜ್ರಶಬ್ದವಾಚ್ಯನೆಂದು ಸಿದ್ಧಾಂತ.

तत्त्वित्यस्ति । “महद्भयं वज्रमुद्यतम्” इत्युक्तवज्रो ब्रह्मैव । न त्विन्द्रायुधम् । कम्पनात् “जगत्सर्वं प्राण एजति निःसृतम्” इति कम्पनवचनात् जगच्चेष्टकत्वलिङ्गादित्यर्थः ॥ १० ॥

ज्योतिरधिकरणम्—११

## ॥ ॐ ज्योतिर्दर्शनात् ॐ ॥ १-३-४०

अत्र ज्योतिर्नाम समन्वीयते । “योऽयं विज्ञानमयः प्राणेषु

---

ಪಡೆಯುವುದು. 'ತತ್ ತು' ಎಂಬ ಪದಗಳು ಅನುವೃತ್ತಿಗೊಳ್ಳುತ್ತವೆ. 'ಮಹದ್ಭಯಂ ವಜ್ರಮುದ್ಯತಂ' ಎಂಬಲ್ಲಿ ಹೇಳಿರುವ ವಜ್ರವು ಬ್ರಹ್ಮನೇ, ಇಂದ್ರಾಯುಧವಲ್ಲ. ಕಂಪನಾತ್–'ಜಗತ್ಸರ್ವಂ ಪ್ರಾಣ ಏಜತಿ ನಿಃಸೃತಂ' ಎಂದು ಕಂಪನವನ್ನು ಹೇಳಿರುವುದರಿಂದ, ಜಗಚ್ಚೇಷ್ಟಕತ್ವವೆಂಬ ಬ್ರಹ್ಮನ ಅಸಾಧಾರಣಧರ್ಮದಿಂದ ಎಂದು ಅರ್ಥ

ಜ್ಯೋತಿರಧಿಕರಣ—೧೧

## ಓಂ ಜ್ಯೋತಿರ್ದರ್ಶನಾತ್ ಓಂ (೧-೩-೪೦)

**ಅಧಿಕರಣದ ಉದ್ದೇಶ ಮತ್ತು ಸೂತ್ರಾರ್ಥ**

[1]ಈ ಅಧಿಕರಣದಲ್ಲಿ ಜ್ಯೋತಿಃ ಎಂಬ ನಾಮಾತ್ಮಕಶಬ್ದದ ಸಮನ್ವಯವನ್ನು ಮಾಡಲಾಗಿದೆ. 'ಯೋಽಯಂ ವಿಜ್ಞಾನಮಯಃ ಪ್ರಾಣೇಷು ಹೃದ್ಯಂತರ್ಜ್ಯೋತಿಃ'

---

1. "ಯೋಽಯಂ ವಿಜ್ಞಾನಮಯಃ ಪ್ರಾಣೇಷು ಹೃದ್ಯಂತರ್ಜ್ಯೋತಿಃ ಪುರುಷಃ" (ಬೃ. ೬–೩–೭) ಎಂಬ ಶ್ರುತಿ ಇಲ್ಲಿ ವಿಷಯವಾಕ್ಯ. ಜನಕಮಹಾರಾಜನು ಯಾಜ್ಞವಲ್ಕ್ಯ ಮಹರ್ಷಿಗಳನ್ನು ಕುರಿತು ಜೀವನಿಗೆ ಜ್ಞಾನಸಾಧನ ಯಾವುದೆಂದು ಪ್ರಶ್ನಿಸಲು ಯಾಜ್ಞವಲ್ಕ್ಯರು ಆದಿತ್ಯ, ಚಂದ್ರ, ಅಗ್ನಿ ಮತ್ತು ವಾಕ್‌ಗಳಲ್ಲಿ ಹಿಂದಿನದು ಅಸ್ತಮಿತವಾದಾಗ ಮುಂದಿನದು ಜಾಗ್ರತ್ಕಾಲದಲ್ಲಿ ಜೀವನಿಗೆ ಜ್ಞಾನಸಾಧನವೆಂದು ಹೇಳುವರು. ಸುಷುಪ್ತಿ ಮತ್ತು ಸ್ವಪ್ನಾವಸ್ಥೆಗಳಲ್ಲಿ ಆದಿತ್ಯ ಮೊದಲಾದ ನಾಲ್ಕೂ ಅಸ್ತವಾಗಿರುವುದರಿಂದ ಜೀವನ ಜ್ಞಾನಸಾಧನ ಬೇರೆ ಯಾವುದೆಂದು ಜನಕನು ಪುನಃ ಪ್ರಶ್ನಿಸಲು ಆತ್ಮನೆಂದು ಯಾಜ್ಞವಲ್ಕ್ಯರು ಉತ್ತರಿಸುವರು. ಆ ಆತ್ಮನ ಸ್ವರೂಪವನ್ನು ಪ್ರಶ್ನಿಸಿದಾಗ 'ಯೋಽಯಂ ವಿಜ್ಞಾನಮಯಃ' ಇತ್ಯಾದಿಯಾಗಿ ಉತ್ತರಿಸುವರು. ವಿಜ್ಞಾನಪೂರ್ಣನೂ, ಇಂದ್ರಿಯಗಳಲ್ಲೂ ಮನಸ್ಸಿನಲ್ಲೂ ನಿಯಾಮಕನಾಗಿದ್ದು, ಜೀವರ ಜ್ಞಾನಸಾಧನನಾದ ಪೂರ್ಣಷಡ್ಗುಣನಾದ ಚೇತನನು ಆ ಆತ್ಮನೆಂದು ಸಿದ್ಧಾಂತದಲ್ಲಿ ಶ್ರುತ್ಯರ್ಥ, ಪೂರ್ವಪಕ್ಷ ಸಿದ್ಧಾಂತಗಳು ಸ್ಪಷ್ಟ.

हृद्यन्तर्ज्योतिः" इत्युक्तं ज्योतिर्ब्रह्मैव । न तु जीवः । कुतः ? दर्शनात् "विष्णुरेव ज्योतिर्विष्णुरेव ब्रह्म" इति श्रुतेरित्यर्थः । प्राक् समन्वितत्वेऽप्युभयत्र प्रसिद्धत्वेन पृथगुक्तिः । एवमग्रेऽपि ॥ ११ ॥

आकाशाधिकरणम्—१२

## ॥ ॐ आकाशोऽर्थान्तरत्वादिव्यपदेशात् ॐ ॥
## १-३-४१

---

ಎಂಬಲ್ಲಿ ಹೇಳಿರುವ ಜ್ಯೋತಿಸ್ಸು ಬ್ರಹ್ಮನೇ, ಜೀವನಲ್ಲ. ಏಕೆಂದರೆ, ದರ್ಶನಾತ್– 'ವಿಷ್ಣುರೇವ ಜ್ಯೋತಿಃ ವಿಷ್ಣುರೇವ ಬ್ರಹ್ಮ' ಎಂದು ಶ್ರುತಿ ಇರುವುದರಿಂದ ಎಂದು ಅರ್ಥ.

**ಈ ಅಧಿಕರಣವು ವ್ಯರ್ಥವಲ್ಲ**

1 ಹಿಂದೆ ಜ್ಯೋತಿಶ್ಶಬ್ದದ ಸಮನ್ವಯವನ್ನು ಮಾಡಿದ್ದರೂ ಇಲ್ಲಿ ಜ್ಯೋತಿಶ್ಶಬ್ದವು ಉಭಯತ್ರ ಪ್ರಸಿದ್ಧವಾದುದರಿಂದ ಪ್ರತ್ಯೇಕವಾಗಿ ಸಮನ್ವಯವನ್ನು ಮಾಡಲಾಗಿದೆ. ಹೀಗೆಯೇ ಮುಂದಿನ ಅಧಿಕರಣಗಳಲ್ಲೂ ತಿಳಿಯಬೇಕು.

ಆಕಾಶಾಧಿಕರಣ—೧೨

## ಓಂ ಆಕಾಶೋಽರ್ಥಾಂತರತ್ವಾದಿವ್ಯಪದೇಶಾತ್ ಓಂ
## (೧–೩–೪೧)

---

1. ಇದೇ ಅಧ್ಯಾಯದ ಪ್ರಥಮಪಾದದಲ್ಲಿ ಅನ್ಯತ್ರಪ್ರಸಿದ್ಧವಾದ ಜ್ಯೋತಿಶ್ಶಬ್ದದ ಸಮನ್ವಯವನ್ನು ಮಾಡಲಾಗಿದೆ. ಆದರೂ ಬೃಹದಾರಣ್ಯಕದ 'ಯೋಽಯಂ' ಇತ್ಯಾದಿವಾಕ್ಯದಲ್ಲಿ ಜ್ಯೋತಿಶ್ಶಬ್ದವು ಉಭಯತ್ರ ಪ್ರಸಿದ್ಧವಾದುದೆಂದು ಪುನಃ ಪೂರ್ವಪಕ್ಷಕ್ಕೆ ಅವಕಾಶವಿದೆ. ಆದ್ದರಿಂದ ಪುನಃ ಸಮನ್ವಯಮಾಡಬೇಕಾಯಿತೆಂದು ಭಾವ. ಪ್ರಥಮಪಾದದಲ್ಲಿ ಜ್ಯೋತಿಶ್ಶಬ್ದಕ್ಕೆ ವಿಷ್ಣುವಿನಲ್ಲಿ ಪ್ರಸಿದ್ಧಿಯನ್ನು ಸಾಧಿಸಲಾಗಿದೆ. ಈ ವಿಷಯವಾಕ್ಯದ ಮುಂದಿನ ವಾಕ್ಯದಲ್ಲಿ 'ಉಭೌ ಲೋಕಾವನುಸಂಚರತಿ' ಎಂದು ಕರ್ಮಾಧೀನವಾದ ಲೋಕಸಂಚಾರವೆಂಬ ಜೀವಲಿಂಗವಿರುವುದರಿಂದ ಜೀವನಲ್ಲಿ ಪ್ರಸಿದ್ಧಿ—ಹೀಗೆ ಜ್ಯೋತಿಶ್ಶಬ್ದವು ಉಭಯತ್ರ ಪ್ರಸಿದ್ಧವಾದುದು. ಪರಮಾತ್ಮನೇ ಜೀವನನ್ನು ಕರೆದುಕೊಂಡು ಉಭಯಲೋಕಗಳನ್ನು ಸಂಚರಿಸುವನೆಂದು ಸಿದ್ಧಾಂತದಲ್ಲಿ ಶ್ರುತಿಯ ಅರ್ಥವಾದುದರಿಂದ ಜೀವಲಿಂಗವೇ ಇಲ್ಲವೆಂದು ಸಿದ್ಧಾಂತದಲ್ಲಿ ಉಭಯತ್ರ ಪ್ರಸಿದ್ಧಿಯ ಪರಿಹಾರ.

अत्राकाशनाम समन्वीयते । "आकाशो वै नाम नामरूपयोर्निर्वहिता" इत्युक्ताकाशस्तत्तु ब्रह्मैव । न त्वव्याकृताकाशः । कुतः ? अर्थान्तरत्वादिव्यपदेशात् । अन्योऽर्थोऽर्थान्तरम् । विलक्षणोऽर्थः । तस्य भावः । नामरूपराहित्यरूपविलक्षणार्थत्वव्यपदेशात् आदिपदाद्ब्रह्मत्वामृतत्वव्यपदेशादित्यर्थः । अर्थान्तरत्वमात्रोक्तावपि "नामरूपयोर्निर्वहिता ते यदन्तरा तद्ब्रह्म तदमृतम्" इति विषयवाक्ये

---

**ಈ ಅಧಿಕರಣದ ಉದ್ದೇಶ ಮತ್ತು ಸೂತ್ರಾರ್ಥ**

1 ಈ ಅಧಿಕರಣದಲ್ಲಿ ಆಕಾಶನಾಮದ ಸಮನ್ವಯವನ್ನು ಮಾಡಲಾಗಿದೆ 'ಆಕಾಶೋ ವೈ ನಾಮ ನಾಮರೂಪಯೋರ್ನಿರ್ವಹಿತಾ' ಎಂಬಲ್ಲಿ ಹೇಳಿರುವ ಆಕಾಶವು ತತ್ತು-ಬ್ರಹ್ಮನೇ, ಅವ್ಯಾಕೃತಾಕಾಶವಲ್ಲ. ಏಕೆಂದರೆ, ಅರ್ಥಾಂತರತ್ವಾದಿವ್ಯಪದೇಶಾತ್-ಅನ್ಯವಾದ ಅರ್ಥ=ಅರ್ಥಾಂತರ ಎಂದರೆ ವಿಲಕ್ಷಣವಾದ ಪದಾರ್ಥ. ಅದರ ಧರ್ಮ ಅರ್ಥಾಂತರತ್ವ ನಾಮರೂಪರಾಹಿತ್ಯವೆಂಬ ವಿಲಕ್ಷಣ ವಸ್ತುಧರ್ಮವನ್ನು ಹೇಳಿರುವುದರಿಂದ. ಆದಿಪದದಿಂದ ಬ್ರಹ್ಮತ್ವ, ಅಮೃತತ್ವಗಳನ್ನು ಹೇಳಿರುವುದರಿಂದ ಎಂದರ್ಥ.

**ಅರ್ಥಾಂತರತ್ವವೆಂದರೆ ನಾಮರೂಪರಾಹಿತ್ಯ**

2ಅರ್ಥಾಂತರತ್ವವೆಂದಿಷ್ಟೇ ಹೇಳಿದ್ದರೂ 'ನಾಮರೂಪಯೋರ್ನಿರ್ವಹಿತಾ ತೇ ಯದಂತರಾ ತದ್‌ಬ್ರಹ್ಮ' ಎಂಬ ವಿಷಯವಾಕ್ಯದಲ್ಲಿ ಸನ್ನಿಹಿತವಾದುದರಿಂದ ನಾಮ ರೂಪರಹಿತತ್ವವೆಂಬ ವಿಶೇಷಧರ್ಮವು ತಿಳಿದುಬರುವುದು. ಅಥವಾ ಅರ್ಥಾಂತರತ್ವ ವೆಂದರೆ ರೂಪರಾಹಿತ್ಯ ಆದಿಪದದಿಂದ ನಾಮರಾಹಿತ್ಯವನ್ನು ಗ್ರಹಿಸಬೇಕು. ಪ್ರಾಕೃತರೂಪರಾಹಿತ್ಯದಿಂದ ಮತ್ತು ಸಾಕಲ್ಯೇನ ಶಬ್ದಗಳಿಗೆ ಗೋಚರವಾಗದಿರುವಿಕೆ

---

1. 'ಆಕಾಶೋ ವೈ ನಾಮ ನಾಮರೂಪಯೋರ್ನಿರ್ವಹಿತಾ' (ಛಾಂ. ೮-೧೪-೧) ಎಂಬ ಶ್ರುತಿ ಇಲ್ಲಿ ವಿಷಯವಾಕ್ಯ. ವೈ, ನಾಮ ಎಂಬ ಪದಗಳು ಈ ಆಕಾಶವು ಪ್ರಸಿದ್ಧವಾದುದೆಂದು ಹೇಳುತ್ತದೆ. ಆದ್ದರಿಂದ ನಾಮರೂಪಾತ್ಮಕವಾದ ಪ್ರಪಂಚಕ್ಕೆ ಆಶ್ರಯವೆಂದು ಇಲ್ಲಿ ಶ್ರುತವಾಗಿರುವ ಆಕಾಶವು ಪ್ರಸಿದ್ಧವಾದ ಅವ್ಯಾಕೃತಾಕಾಶವೇ ಎಂದು ಪೂರ್ವಪಕ್ಷ 'ತೇ ಯದಂತರಾ ತದ್‌ ಬ್ರಹ್ಮ' (ಛಾಂ. ೮-೧೪-೧) ಎಂಬ ಮುಂದಿನ ವಾಕ್ಯದಲ್ಲಿ ಇಲ್ಲಿ ಶ್ರುತವಾಗಿರುವ ಆಕಾಶವನ್ನು ನಾಮರೂಪಾತ್ಮಕ ಪ್ರಪಂಚಭಿನ್ನ ಅಥವಾ ಪ್ರಾಕೃತನಾಮರೂಪರಹಿತವೆಂದು ವರ್ಣಿಸಿರುವುದರಿಂದ ಮತ್ತು ಬ್ರಹ್ಮಶಬ್ದವಿರುವುದರಿಂದ ಈ ಆಕಾಶವು ಬ್ರಹ್ಮನೇ ಎಂದು ಸಿದ್ಧಾಂತ.

2. ಅರ್ಥಾಂತರವೆಂದರೆ ವಿಲಕ್ಷಣವಾದ ಪದಾರ್ಥ. ವೈಲಕ್ಷಣ್ಯವನ್ನು ಸೂತ್ರದಲ್ಲಿ ಸ್ಪಷ್ಟ ಪಡಿಸದಿದ್ದರೂ 'ತೇ ಯದಂತರಾ' ಇತ್ಯಾದಿ ವಿಷಯವಾಕ್ಯದಲ್ಲೇ ನಾಮರೂಪರಾಹಿತ್ಯವೆಂಬ ವೈಲಕ್ಷಣ್ಯವಿಶೇಷವು ಸ್ಪಷ್ಟವೆಂದು ಅಭಿಪ್ರಾಯ.

सन्निहितत्वात् अनामरूपत्वरूपविशेषसिद्धिः । यद्वाऽर्थान्तरत्वमरूपत्वं आदिपदेनामतत्वं ग्राह्यम् । प्राकृतरूपराहित्यात् साकल्येन शब्दागोचरत्वरूपानामत्वाच्चेत्यर्थः । निरपेक्षहेतुत्वं सूचयितुं पृथगुक्तिः । श्रुतावनामत्वस्यादित्वेऽप्यरूपत्वोक्तिर्नाम्नोऽर्थसापेक्षत्वात् ॥ १२ ॥

सुषुप्त्यधिकरणम्—१३

## ॥ ॐ सुषुप्त्युत्क्रान्त्योर्भेदेन ॐ ॥ १३-४२

अत्र स्वप्नादिद्रष्टृत्वलिङ्गं समन्वीयते । व्यपदेशादित्यस्ति ।

---

ಎಂಬ ನಾಮರಾಹಿತ್ಯದಿಂದ ಎಂದು ಅರ್ಥ ನಾಮರಾಹಿತ್ಯ ಮತ್ತು ರೂಪರಾಹಿತ್ಯಗಳು ಒಂದನ್ನೊಂದು ಅವಲಂಬಿಸದೆ ಆಕಾಶವನ್ನು ಬ್ರಹ್ಮನೆಂದು ಸಾಧಿಸುವುದರಿಂದ ಅವುಗಳನ್ನು ಪ್ರತ್ಯೇಕವಾಗಿ ಹೇಳಲಾಗಿದೆ [1] ಶ್ರುತಿಯಲ್ಲಿ [2]ನಾಮರಾಹಿತ್ಯವನ್ನು ಮೊದಲು ಹೇಳಿದ್ದರೂ ನಾಮವು ಅರ್ಥಸಾಪೇಕ್ಷವಾದುದರಿಂದ ಸೂತ್ರದಲ್ಲಿ ರೂಪರಾಹಿತ್ಯವನ್ನು ಮೊದಲು ಹೇಳಲಾಗಿದೆ.

### ಸುಷುಪ್ತ್ಯಧಿಕರಣ—೧೩

## ಓಂ ಸುಷುಪ್ತ್ಯುತ್ಕ್ರಾಂತ್ಯೋರ್ಭೇದೇನ ಓಂ (೧-೩-೪೨)

**ಈ ಅಧಿಕರಣದ ಉದ್ದೇಶ ಮತ್ತು ಸೂತ್ರಾರ್ಥ**

[3]ಈ ಅಧಿಕರಣದಲ್ಲಿ ಸ್ವಪ್ನಾದಿದ್ರಷ್ಟೃತ್ವ ಎಂಬ ಲಿಂಗವನ್ನು ಸಮನ್ವಯ

---

1. ಅರ್ಥಾಂತರತ್ವಪದದಿಂದ ರೂಪರಾಹಿತ್ಯವನ್ನೂ, ಅದಿಪದದಿಂದ ನಾಮರಾಹಿತ್ಯವನ್ನೂ ಹೇಳಲಾಗಿದೆ.

2. 'ತೇ ಯದಂತರಾ ತದ್ ಬ್ರಹ್ಮ' ಎಂಬ ಶ್ರುತಿಗೆ ನಾಮರೂಪರಹಿತವಾದ ಆಕಾಶವು ಬ್ರಹ್ಮವೆಂದರ್ಥ. ಇಲ್ಲಿ ನಾಮರಾಹಿತ್ಯವನ್ನು ಮೊದಲು ಹೇಳಿದ್ದರೂ, ಸೂತ್ರದಲ್ಲಿ ಅರ್ಥಾಂತರತ್ವ ಪದದಿಂದ ಮೊದಲು ರೂಪರಾಹಿತ್ಯವನ್ನೂ ಅನಂತರ ಆದಿಪದದಿಂದ ನಾಮರಾಹಿತ್ಯವನ್ನೂ ಹೇಳಿರುವುದಕ್ಕೆ ಕಾರಣ ಶಬ್ದ–ಅರ್ಥ ಇವೆರಡರಲ್ಲಿ ಶಬ್ದವು ಅರ್ಥಸಾಪೇಕ್ಷವಾಗಿರುವುದು ಎಂದು ಭಾವ.

3. 'ಸ ಯತ್ತತ್ರ ಕಿಂಚಿತ್ಪಶ್ಯತಿ, ಅನನ್ವಾಗತಸ್ತೇನ ಭವತಿ' ಎಂಬ ಬೃಹದಾರಣ್ಯಕಶ್ರುತಿ ಇಲ್ಲಿ ವಿಷಯವಾಕ್ಯ. 'ಅವನು ಸ್ವಪ್ನಾವಸ್ಥೆಯಲ್ಲಿ ಯಾವ ಅನಿಷ್ಟವನ್ನು ನೋಡಿದರೂ ತತ್ಪ್ರಯುಕ್ತ ದುಃಖದ ಸ್ಪರ್ಶ ಅವನಿಗಾಗುವುದಿಲ್ಲ' ಎಂದು ಈ ಶ್ರುತಿಯ ಅರ್ಥ. ಇಲ್ಲಿ ಹೇಳಲ್ಪಟ್ಟಿರುವ ಸ್ವಪ್ನಾದಿದ್ರಷ್ಟೃವು ಜೀವನೆಂದು ಪೂರ್ವಪಕ್ಷ 'ಅಸಂಗೋ ಹ್ಯಯಂ ಪುರುಷಃ' ಎಂಬ ಮುಂದಿನ ವಾಕ್ಯದಲ್ಲಿ ಸ್ವಪ್ನಾದಿದ್ರಷ್ಟೃವಿಗೆ ದುಃಖಸ್ಪರ್ಶವಾಗದಿರಲು ಬ್ರಹ್ಮನ ಅಸಾಧಾರಣಧರ್ಮವಾದ ಅಸಂಗತ್ವವನ್ನು ಕಾರಣವನ್ನಾಗಿ ಹೇಳಿರುವುದರಿಂದ ಸ್ವಪ್ನಾದಿದ್ರಷ್ಟೃವು ಬ್ರಹ್ಮನೆಂದು ಸಿದ್ಧಾಂತ.

स्वप्नादिद्रष्टेति योग्यतयाऽन्वेति । "स यत्तत्र किञ्चित्पश्यत्यनन्वागतस्तेन भवति" इत्युक्तस्वप्नादिद्रष्टा तत्तु ब्रह्मैव । न जीवः । कुतः ? "अनन्वागतस्तेन भवत्यसङ्गो ह्ययं पुरुषः" इत्यसङ्गत्वलिङ्गात् । न चाभेदेन लिङ्गोपपत्तिः । "प्राज्ञेनात्मना सम्परिष्वक्तः" इति "प्राज्ञेनात्मनाऽन्वारूढः" इति च सुषुप्त्युत्क्रान्तिप्रकरणयोः भेदेन जीवेशयोर्व्यपदेशादिति परम्परया योज्यम् ॥ १३ ॥

ब्राह्मणाधिकरणम्—१४

## ॥ ॐ पत्यादिशब्देभ्यः ॐ ॥ १-३-४३

ಮಾಡಲಾಗಿದೆ. ಹಿಂದಿನ ಸೂತ್ರದಿಂದ 'ವ್ಯಪದೇಶಾತ್' ಎಂಬ ಪದವು ಅನುವೃತ್ತವಾಗುತ್ತದೆ. ಅನ್ವಯಯೋಗ್ಯವಾದ 'ಸ್ವಪ್ನಾದಿದ್ರಷ್ಟಾ' ಎಂಬ ಪದವು ಅನ್ವಯವನ್ನು ಪಡೆಯುವುದು. 'ಸ ಯತ್ತತ್ರ ಕಿಂಚಿತ್ಪಶ್ಯತ್ಯನನ್ವಾಗತಸ್ತೇನ ಭವತಿ' (ಬೃ ೬-೩-೧೫) ಎಂಬಲ್ಲಿ ಹೇಳಿರುವ ಸ್ವಪ್ನಾದಿದ್ರಷ್ಟೃವು ಬ್ರಹ್ಮನೇ, ಜೀವನಲ್ಲ. ಏಕೆಂದರೆ, 'ಅನನ್ವಾಗತಸ್ತೇನ ಭವತ್ಯಸಂಗೋ ಹ್ಯಯಂ ಪುರುಷಃ' ಎಂಬುದಾಗಿ ಅಸಂಗತ್ವಲಿಂಗವಿರುವುದರಿಂದ. ಜೀವಬ್ರಹ್ಮರಿಗೆ ಅಭೇದವಿರುವುದರಿಂದ ಅಸಂಗತ್ವಲಿಂಗವು ಜೀವನಲ್ಲೂ ಯುಕ್ತವೇ ಎಂದರೆ ಅದು ಸರಿಯಲ್ಲ. [1] 'ಪ್ರಾಜ್ಞೇನ ಆತ್ಮನಾ ಸಂಪರಿಷ್ವಕ್ತಃ' ಎಂಬುದಾಗಿ ಮತ್ತು [2] 'ಪ್ರಾಜ್ಞೇನ ಆತ್ಮನಾ ಅನ್ವಾರೂಢಃ' ಎಂಬುದಾಗಿ ಸುಷುಪ್ತಿಪ್ರಕರಣ ಮತ್ತು ಉತ್ಕ್ರಾಂತಿಪ್ರಕರಣಗಳಲ್ಲಿ ಜೀವಬ್ರಹ್ಮರ ಭೇದವನ್ನು ಹೇಳಿರುವುದರಿಂದ ಎಂದು ಪರಂಪರೆಯಿಂದ ಯೋಜಿಸಿಕೊಳ್ಳಬೇಕು.

ಬ್ರಾಹ್ಮಣಾಧಿಕರಣ—೧೪

## ಓಂ ಪತ್ಯಾದಿಶಬ್ದೇಭ್ಯಃ ಓಂ (೧-೩-೪೩)

1. "ಪ್ರಾಜ್ಞೇನ ಆತ್ಮನಾ ಸಂಪರಿಷ್ವಕ್ತೋ ನ ಬಾಹ್ಯಂ ವೇದ ಕಿಂಚನ ನಾಂತರಂ" (ಬೃ. ೬–೩–೨೧) ಎಂದು ಸುಷುಪ್ತಿಪ್ರಕರಣದಲ್ಲಿರುವ ಶ್ರುತಿ. ಸರ್ವಜ್ಞನಾದ ಪರಮಾತ್ಮನಿಂದ ಸಮಾಲಿಂಗಿತನಾದ ಸುಪ್ತಜೀವನು ದೇಹದ ಹೊರಗಿನ ವಿಷಯಗಳನ್ನಾಗಲೀ ಒಳಗಿನ ವಿಷಯಗಳನ್ನಾಗಲೀ ತಿಳಿಯುವುದಿಲ್ಲ ಎಂದು ಶ್ರುತ್ಯರ್ಥ. ಜೀವಬ್ರಹ್ಮಭೇದ ಇಲ್ಲಿ ಸ್ಪಷ್ಟ.

2. 'ಪ್ರಾಜ್ಞೇನ ಆತ್ಮನಾ ಅನ್ವಾರೂಢಃ ಉತ್ಸರ್ಜದ್ಯಾತಿ' (ಬೃ. ೬–೩–೩೫) ಎಂದು ಜೀವನಿಗೆ ದೇಹದಿಂದ ಉತ್ಕ್ರಮಣವನ್ನು ಹೇಳುವ ಪ್ರಕರಣದಲ್ಲಿರುವ ಶ್ರುತಿ ಪರಮಾತ್ಮನಿಂದ ಅಧಿಷ್ಠಿತನಾದ ಜೀವನು ಹಿಂದಿನ ದೇಹವನ್ನು ಬಿಟ್ಟು ದೇಹಾಂತರವನ್ನು ಅಥವಾ ಲೋಕಾಂತರವನ್ನು ಕುರಿತು ಹೋಗುವನು ಎಂದು ಅರ್ಥ. ಜೀವೇಶಭೇದ ಇಲ್ಲೂ ಸ್ಪಷ್ಟ.

अत्र ब्राह्मणनाम समन्वीयते। ब्राह्मण इति योग्यतयाऽन्वेति। "एष नित्यो महिमा ब्राह्मणस्य" इत्युक्तो ब्राह्मणस्तु ब्रह्मैव। न विरिञ्चः। कुतः? "सर्वस्य वशी सर्वस्येशानः। सर्वाधिपतिः" इत्यादिसर्वाधिपत्यादिवाचिशब्देभ्य इत्यर्थः। अत्र श्रुतौ वशित्वस्यादित्वेऽपि भाष्योक्तश्रुत्यन्तरानुरोधात् पत्यादीत्युक्तम्। प्रत्येकं हेतुत्वज्ञापनाय बहुवचनमित्याहुः ॥ १४ ॥

---

## ಅಧಿಕರಣದ ಉದ್ದೇಶ ಮತ್ತು ಸೂತ್ರಾರ್ಥ

1 ಈ ಅಧಿಕರಣದಲ್ಲಿ ಬ್ರಾಹ್ಮಣ ಎಂಬ ನಾಮಸಮನ್ವಯವನ್ನು ಮಾಡಲಾಗಿದೆ. ಅನ್ವಯಯೋಗ್ಯವಾದ ಬ್ರಾಹ್ಮಣ ಎಂಬ ಪದವು ಅನ್ವಯವನ್ನು ಪಡೆಯುವುದು. 'ಏಷ ನಿತ್ಯೋ ಮಹಿಮಾ ಬ್ರಾಹ್ಮಣಸ್ಯ' ಎಂಬಲ್ಲಿ ಉಕ್ತನಾಗಿರುವ ಬ್ರಾಹ್ಮಣನು ಬ್ರಹ್ಮನೇ, ವಿರಿಂಚನಲ್ಲ ಏಕೆಂದರೆ, 'ಸರ್ವಸ್ಯ ವಶೀ ಸರ್ವಸ್ಯೇಶಾನಃ ಸರ್ವಾಧಿಪತಿಃ' ಇತ್ಯಾದಿಯಾಗಿ ಸರ್ವಾಧಿಪತ್ಯ ಮೊದಲಾದವುಗಳನ್ನು ಹೇಳುವ ಶಬ್ದಗಳಿಂದ ಎಂದು ಅರ್ಥ.

## 'ವಶಿತ್ವಾದಿಶಬ್ದೇಭ್ಯಃ' ಎಂದು ಸೂತ್ರವಿರಬೇಕಾಗಿತ್ತು ಎಂಬ ಆಕ್ಷೇಪಕ್ಕೆ ಸಮಾಧಾನ

ಈ ಶ್ರುತಿಯಲ್ಲಿ ವಶಿತ್ವವನ್ನು ಮೊದಲು ಹೇಳಿದ್ದರೂ ಭಾಷ್ಯದಲ್ಲಿ ಹೇಳಿರುವ 2ಇನ್ನೊಂದು ಶ್ರುತಿಯನ್ನನುಸರಿಸಿ ಪತ್ಯಾದಿ ಎಂದು ಹೇಳಲಾಗಿದೆ. ವಶಿತ್ವ ಮೊದಲಾದವುಗಳು ಪ್ರತ್ಯೇಕವಾದ ಹೇತುಗಳು ಎಂದು ತಿಳಿಸಲು ಶಬ್ದೇಭ್ಯಃ ಎಂದು ಬಹುವಚನವನ್ನು ಪ್ರಯೋಗಿಸಲಾಗಿದೆ ಎಂದು ಹೇಳುವರು.

---

1. 'ಏಷ ನಿತ್ಯೋ ಮಹಿಮಾ ಬ್ರಾಹ್ಮಣಸ್ಯ' (ಬೃ. ೬-೪-೨೩) ಎಂಬ ಶ್ರುತಿ ಇಲ್ಲಿ ವಿಷಯವಾಕ್ಯ. ನಿತ್ಯಮಹಿಮಶಾಲಿಯೆಂದು ಇಲ್ಲಿ ಶ್ರುತನಾಗಿರುವ ಬ್ರಾಹ್ಮಣನು 'ಸ ವಾ ಏಷ ಮಹಾನಜ ಆತ್ಮಾ' (ಬೃ. ೬-೪-೨೪) ಎಂಬ ಮುಂದಿನ ವಾಕ್ಯದಲ್ಲಿರುವ ವಿರಿಂಚನಲ್ಲಿ ಪ್ರಸಿದ್ಧವಾಗಿರುವ ಅಜ ಶಬ್ದದ ಬಲದಿಂದ ವಿರಿಂಚನೇ ಎಂದು ಪೂರ್ವಪಕ್ಷ. ಮುಂದೆ ಬ್ರಹ್ಮನ ಅಸಾಧಾರಣ ಧರ್ಮಗಳಾದ ಸರ್ವಾಧಿಪತ್ಯ ಮೊದಲಾದವುಗಳನ್ನು ಹೇಳುವ ಶಬ್ದಗಳಿರುವುದರಿಂದ ಈ ಬ್ರಾಹ್ಮಣನು ಬ್ರಹ್ಮನೇ ಎಂದು ಸಿದ್ಧಾಂತ.

2. 'ಸರ್ವಸ್ಯಾಧಿಪತಿಃ ಸರ್ವಸ್ಯೇಶಾನಃ ... ಸ ವಾ ಏಷ ನೇತಿ ನೇತಿ' (ಬೃ ೬-೪-೨೨) ಎಂಬ ಶ್ರುತಿ.

तृतीयपादसारसङ्ग्रह

अत्राद्यनये अजस्याविर्भावाख्यजनिः, भूमनये सर्वगतस्यापि परिस्पन्दक्रिया, अक्षरनये महतोऽप्यणुत्वम्, ईक्षतिनये स्वरूपैरेव बहुभवनम्, दहरनये ईशांशस्यापि व्याप्तता, अनुकृतिनये सूर्यादिकृतेरीशायत्तत्वम्, शब्दादिति नये प्राणप्रेरकत्वं श्रुत्यादेः पूर्वपूर्वप्राबल्यं च, देवतानये देवर्ष्यादीनां कर्मब्रह्मविद्ययोरधिकारः, शुगिति नये वेदविद्यायामेव शूद्रस्यानधिकारः, कम्पनादिति नये रूढितः स्मार्तयोगस्य प्राबल्यम्, ज्योतिर्नये जीवेन सहेशस्य लोकान्तरसञ्चारस्य

---

ಈ ಪಾದದ ಅಧಿಕರಣಗಳ ಸಾರಸಂಗ್ರಹ

ಈ ಪಾದದ ಮೊದಲನೆಯ ಅಧಿಕರಣದಲ್ಲಿ ಜನನರಹಿತನಾದ ಬ್ರಹ್ಮನಿಗೆ ಆವಿರ್ಭಾವರೂಪವಾದ ಜನನವನ್ನು ಹೇಳಲಾಗಿದೆ. ಭೂಮಾಧಿಕರಣದಲ್ಲಿ ಸರ್ವಗತನಿಗೂ ಚಲನಕ್ರಿಯೆಯನ್ನು ಹೇಳಿದೆ. ಅಕ್ಷರಾಧಿಕರಣದಲ್ಲಿ ಬ್ರಹ್ಮನು ಮಹತ್ತಾಗಿದ್ದರೂ ಅಣುವೂ ಆಗಿರುವನೆಂದು ಹೇಳಿದೆ. ಈಕ್ಷತಿನಯದಲ್ಲಿ ಬ್ರಹ್ಮನು ತನ್ನ ಸ್ವರೂಪಗಳಿಂದಲೇ ಬಹುವಾಗಿರುವನೆಂದು ಸಮರ್ಥಿಸಿದೆ. ದಹರಾಧಿಕರಣದಲ್ಲಿ ಈಶ್ವರನ ಅಂಶಗಳಿಗೂ ವ್ಯಾಪ್ತಿಯಿರುವುದೆಂದು ಪ್ರತಿಪಾದಿಸಿದೆ. ಅನುಕೃತ್ಯಧಿಕರಣದಲ್ಲಿ ಸೂರ್ಯ ಮೊದಲಾದವರ ಕ್ರಿಯೆಗಳೆಲ್ಲವೂ ಈಶಾಧೀನವೆಂದು ನಿರೂಪಿಸಲಾಗಿದೆ. 'ಶಬ್ದಾತ್' ಎಂಬ ನಯದಲ್ಲಿ ಭಗವಂತನಿಗೆ ಪ್ರಾಣಪ್ರೇರಕತ್ವವನ್ನೂ [1]ಶ್ರುತ್ಯಾದಿಗಳಲ್ಲಿ ಹಿಂದುಹಿಂದಿನ ಪ್ರಮಾಣಕ್ಕೆ ಪ್ರಾಬಲ್ಯವನ್ನೂ ಸಾಧಿಸಲಾಗಿದೆ. ದೇವತಾಧಿಕರಣದಲ್ಲಿ ದೇವತೆಗಳು ಋಷಿಗಳು ಮೊದಲಾದವರಿಗೆ ಕರ್ಮ-ಬ್ರಹ್ಮವಿದ್ಯೆಗಳಲ್ಲಿ ಅಧಿಕಾರವನ್ನು ಸಮರ್ಥಿಸಲಾಗಿದೆ. 'ಶುಕ್' ಎಂಬ ಅಧಿಕರಣದಲ್ಲಿ ವೇದವಿದ್ಯೆಯಲ್ಲಿ ಮಾತ್ರ ಶೂದ್ರನಿಗೆ ಅಧಿಕಾರವಿಲ್ಲವೆಂದು ಹೇಳಿದೆ. 'ಕಂಪನಾತ್' ಎಂಬ ಅಧಿಕರಣದಲ್ಲಿ [2]ರೂಢಿಗಿಂತಲೂ ಸ್ಮೃತಿಯಲ್ಲಿ ಹೇಳಿರುವ ಯೋಗಕ್ಕೆ ಪ್ರಾಬಲ್ಯವನ್ನು ಸಮರ್ಥಿಸ

---

1 ಶ್ರುತಿ-ಲಿಂಗ-ವಾಕ್ಯ-ಪ್ರಕರಣ-ಸ್ಥಾನ-ಸಮಾಖ್ಯಾ —ಎಂಬ ಪ್ರಮಾಣಗಳಲ್ಲಿ ಮುಂದುಮುಂದಿನದಕ್ಕಿಂತ ಹಿಂದುಹಿಂದಿನದು ಪ್ರಬಲ.

2. ವಜ್ರಶಬ್ದಕ್ಕೆ ಆಯುಧದಲ್ಲಿರುವ ರೂಢಿಗಿಂತಲೂ—"ಚಕ್ರಂ ಚಂಕ್ರಮಣಾದೇಷ ವರ್ಜನಾದ್ ವಜ್ರಮುಚ್ಯತೇ । ಖಂಡನಾದ್ ಖಡ್ಗ ಏವೈಷ ಹೇತಿನಾಮಾ ಸ್ವಯಂ ಹರಿಃ" ಎಂಬ ಸ್ಮೃತಿಯಲ್ಲಿ ಹೇಳಿರುವ ಯೋಗ ಪ್ರಬಲವೆಂದು ಹೇಳಲಾಗಿದೆ.

कर्मानधीनत्वम्, सुषुप्तिनये निर्लेपत्वम्, अन्त्यनये विरिञ्चैक्यनिरास इत्यादि सिद्धमिति विवेक्तव्यम् ॥

इति श्रीमद्राघवेन्द्रयतिकृतायां तन्त्रदीपिकायां प्रथमाध्यायस्य तृतीय: पादः ॥ श्रीकृष्णार्पणमस्तु ॥

---

ಲಾಗಿದೆ. ಜ್ಯೋತಿರ್ನಯದಲ್ಲಿ ಜೀವನೊಂದಿಗೆ ಈಶ್ವರನು ಮಾಡುವ ಲೋಕಾಂತರ ಸಂಚಾರವು ಕರ್ಮಾಧೀನವಾದದ್ದಲ್ಲವೆಂದು ಹೇಳಿದೆ ಸುಷುಪ್ತ್ಯಧಿಕರಣದಲ್ಲಿ ಭಗವಂತನು ನಿರ್ಲೇಪನೆಂದು ನಿರೂಪಿಸಿದೆ ಅಂತಿಮಾಧಿಕರಣದಲ್ಲಿ ಭಗವಂತನಿಗೆ ವಿರಿಂಚನಿಂದ ಅಭೇದದ ನಿರಾಸ ಮೊದಲಾದವುಗಳು ಸಿದ್ಧವಾಗುವುವೆಂದು ವಿಮರ್ಶಿಸಿ ತಿಳಿಯ ಬೇಕು.

ಶ್ರೀಮದ್ರಾಘವೇಂದ್ರಯತಿಗಳು ರಚಿಸಿರುವ ತಂತ್ರದೀಪಿಕೆಯಲ್ಲಿ
ಪ್ರಥಮಾಧ್ಯಾಯದ ತೃತೀಯಪಾದವು ಸಮಾಪ್ತವಾಯಿತು.
ಶ್ರೀಕೃಷ್ಣಾರ್ಪಣಮಸ್ತು

# अथ प्रथमाध्यायस्य चतुर्थः पादः

अस्मिन् पादेऽन्यत्रैव प्रसिद्धद्विविधशब्दसमन्वय उच्यते ।

## ॥ ॐ आनुमानिकमप्येकेषामिति चेन्न शरीररूपकविन्यस्तगृहीतेर्दर्शयति च ॐ ॥ १-४-१

अत्रैश्वर्यविरोध्यवरत्वदुःखित्वाद्यर्थकशब्दाः समन्वीयन्ते । अत्राव्यक्तजीवबद्धादिशब्दो योग्यतयाऽन्वेति । अपिरेवार्थे । आनुमानिकमिति जीवादेरुपलक्षणम् । तत्त्वित्यस्ति । "अव्यक्तात् पुरुषः परः" "जीवा एव तु दुःखिनः" इत्युक्ताव्यक्तादिशब्दैरानुमानिकमप्यनु-

---

# ಪ್ರಥಮಾಧ್ಯಾಯ—ಚತುರ್ಥಪಾದ

**ಈ ಪಾದದ ಪ್ರತಿಪಾದ್ಯವಿಷಯ**

ಈ ಪಾದದಲ್ಲಿ ಅನ್ಯತ್ರೈವ ಪ್ರಸಿದ್ಧವಾದ ನಾಮಾತ್ಮಕ ಮತ್ತು ಲಿಂಗಾತ್ಮಕ ಹೀಗೆ ಎರಡೂ ವಿಧವಾದ ಶಬ್ದಗಳ ಸಮನ್ವಯವನ್ನು ಹೇಳಲಾಗುವುದು.

## ಓಂ ಆನುಮಾನಿಕಮಪ್ಯೇಕೇಷಾಮಿತಿ ಚೇನ್ನ ಶರೀರರೂಪಕವಿನ್ಯಸ್ತಗೃಹೀತೇರ್ದರ್ಶಯತಿ ಚ ಓಂ (೧-೪-೧)

**ಅಧಿಕರಣದ ಉದ್ದೇಶ ಮತ್ತು ಸೂತ್ರಾರ್ಥ**

ಈ ಅಧಿಕರಣದಲ್ಲಿ ಐಶ್ವರ್ಯವಿರೋಧಿಯಾದ ನೀಚತ್ವ, ದುಃಖ ಮೊದಲಾದವುಗಳನ್ನು ಹೇಳುವ ಶಬ್ದಗಳನ್ನು ಸಮನ್ವಯಮಾಡಲಾಗುವುದು ಇಲ್ಲಿ ಅನ್ವಯಯೋಗ್ಯವಾದುದರಿಂದ ಅವ್ಯಕ್ತ, ಜೀವ, ಬದ್ಧ ಮೊದಲಾದ ಶಬ್ದಗಳು ಅನ್ವಿತವಾಗುವುವು 'ಅಪಿ' ಶಬ್ದಕ್ಕೆ 'ಏವ' ಎಂದು ಅರ್ಥ ಆನುಮಾನಿಕಪದದಿಂದ ಜೀವನನ್ನು ಉಪಲಕ್ಷಣಯಾ ಗ್ರಹಿಸಬೇಕು 'ತತ್ ತು' ಎಂಬ ಪದಗಳು ಅನುವೃತ್ತವಾಗುವುವು.

'ಅವ್ಯಕ್ತಾತ್ ಪುರುಷಃ ಪರಃ', 'ಜೀವಾ ಏವ ತು ದುಃಖಿನಃ' ಎಂಬಲ್ಲಿ ಹೇಳಿರುವ ಅವ್ಯಕ್ತ ಮೊದಲಾದ ಶಬ್ದಗಳಿಂದ, ಆನುಮಾನಿಕಮಪಿ—ಅನುಮಾನ ಪ್ರಮಾಣದಿಂದ ಸಿದ್ಧವಾಗುವ—ಶೈಷಿಕ ಠಕ್ ಪ್ರತ್ಯಯವನ್ನು ಸೇರಿಸಲಾಗಿದೆ—

मानगम्यम्, शैषिकष्ठक्, प्रधानादिरेव केषाञ्चिच्छाखासूच्यत इति चेन्न। अव्यक्तादि तत्तु परममुख्यवृत्त्या ब्रह्मैव । न प्रधानादि । कुतः? दर्शयति श्रुतिः । चशब्देन स्मृतिः । "अव्यक्तमचलं शान्तम्" इति श्रुतिः । "अव्यक्तोऽक्षर उच्यते" इति स्मृतिश्च। तथा "अनेन जीवेनात्मना" इति श्रुतिः । "जीवो विनयिता साक्षी" इति स्मृतिश्चाव्यक्तादि ब्रह्मेति यतो दर्शयति तस्मादित्यर्थः। विष्णोरेवाव्यक्तादिशब्दवाच्यत्वे कथमन्यत्र व्यवहार इत्यत उक्तम्। शरीरेति। शरीरस्य रूपमिव रूपं यस्य तच्छरीररूपं, कुत्सितं शरीररूपं शरीररूपकं प्रधानादि तत्र विन्यस्तस्य स्थितस्य विष्णोरव्यक्तादिपदेन

---

ಪ್ರಕೃತಿ ಮೊದಲಾದವುಗಳೇ ಕೆಲವು ಶಾಖೆಗಳಲ್ಲಿ ಹೇಳಲ್ಪಡುತ್ತವೆ ಎಂದರೆ ಅದು ಸರಿಯಲ್ಲ. ಅವ್ಯಕ್ತ ಮೊದಲಾದ ಶಬ್ದವಾಚ್ಯವಾದದ್ದು, ತತ್ತು–ಪರಮಮುಖ್ಯವೃತ್ತಿ ಯಿಂದ ಬ್ರಹ್ಮನೇ ಆಗಿದ್ದಾನೆ, ಪ್ರಕೃತಿ ಮೊದಲಾದವುಗಳಲ್ಲ. ಏಕೆಂದರೆ, ಶ್ರುತಿಯು ಹಾಗೆ ತಿಳಿಸುತ್ತಿದೆ. 'ಚ' ಶಬ್ದದಿಂದ ಸ್ಮೃತಿಯನ್ನೂ ತೆಗೆದುಕೊಳ್ಳಬೇಕು. 'ಅವ್ಯಕ್ತಮಚಲಂ ಶಾಂತಂ' ಎಂಬ ಶ್ರುತಿ ಮತ್ತು 'ಅವ್ಯಕ್ತೋಽಕ್ಷರ ಉಚ್ಯತೇ' ಎಂಬ ಸ್ಮೃತಿ ಹಾಗೆಯೇ 'ಅನೇನ ಜೀವೇನ ಆತ್ಮನಾ' ಎಂಬ ಶ್ರುತಿ ಮತ್ತು 'ಜೀವೋ ವಿನಯಿತಾ ಸಾಕ್ಷೀ' ಎಂಬ ಸ್ಮೃತಿಯು ಅವ್ಯಕ್ತಾದಿಗಳು ಬ್ರಹ್ಮನೆಂದೇ ತಿಳಿಸುವುದರಿಂದ ಎಂದು ಅರ್ಥ.

ಅವ್ಯಕ್ತಾದಿ ಶಬ್ದಗಳ ವಾಚ್ಯಾರ್ಥವು ವಿಷ್ಣುವೇ ಆದಲ್ಲಿ ಅನ್ಯತ್ರ ಅವ್ಯಕ್ತ ಮೊದಲಾದ ಶಬ್ದಗಳನ್ನು ವ್ಯವಹರಿಸುವುದಾದರೂ ಹೇಗೆ ಎಂಬ ಆಕ್ಷೇಪಕ್ಕೆ ಉತ್ತರ 'ಶರೀರ' ಎಂದು ಶರೀರದ ರೂಪದಂತೆ ಅಂದರೆ ಆಕೃತಿಯಂತೆ ಆಕೃತಿಯುಳ್ಳದ್ದು ಶರೀರರೂಪ ಪ್ರಧಾನಾದಿಗಳು ಅಂತಹ ಶರೀರರೂಪಕ ಅಂದರೆ ಕುತ್ಸಿತವಾದ ಶರೀರರೂಪ ಅಂತಹ ಪ್ರಧಾನಾದಿಗಳಲ್ಲಿ ಇರುವ ವಿಷ್ಣುವನ್ನೇ ಅವ್ಯಕ್ತ ಮೊದಲಾದ ಶಬ್ದಗಳಿಂದ ಗ್ರಹಿಸುವುದರಿಂದ ಎಂದು ಅರ್ಥ.

**'ಶರೀರರೂಪಕವಿನ್ಯಸ್ತಗೃಹೀತೇಃ' ಎಂಬ ಸೂತ್ರಭಾಗದಲ್ಲಿರುವ ಪದಗಳ ಸ್ವಾರಸ್ಯ**

'ವಿನ್ಯಸ್ತ' ಎಂದು ಹೇಳಿದ್ದರಿಂದ ಅವ್ಯಕ್ತ ಮೊದಲಾದ ಶಬ್ದವಾಚ್ಯನಾದ ಬ್ರಹ್ಮನ ಸಂಬಂಧವಿರುವುದರಿಂದ ಪ್ರಕೃತಿ ಮೊದಲಾದವುಗಳ ವಿಷಯದಲ್ಲೂ ಅವ್ಯಕ್ತ

गृहीतेरित्यर्थः । विन्यस्तेत्युक्त्या अव्यक्तादिशब्दवाच्यब्रह्मसम्बन्धात् प्रधानादावव्यक्तादिशब्दव्यवहार इति दर्शितम् । वैपरीत्यं किं नेत्यतः शरीरेति । जीवशरीरं यथा तत्तन्त्रं तथा प्रधानाद्यपि ब्रह्मतन्त्रमिति । मुख्यशरीरं कुतो नेत्यतः केति । न हि कुत्सितं मुख्यशरीरं भवतीति भावः । स्थितेति वाच्ये विन्यस्तेत्युक्तिः प्रधानादिविशिष्टस्यैवाव्यक्तादिपदेन गृहीतिर्न केवलस्येति वक्तुम् ॥

श्रौतस्मार्तप्रयोगेऽप्यव्यक्तादिशब्दस्य विष्णौ मुख्यत्वं कुत इत्यत आह—

## ॥ ॐ सूक्ष्मं तु तदर्हत्वात् ॐ ॥ १ ४ २

---

ಮೊದಲಾದ ಶಬ್ದಗಳ ವ್ಯವಹಾರವಿರುವುದು ಎಂದು ಸೂಚಿತವಾಗುವುದು ಅವ್ಯಕ್ತಾದಿ ಶಬ್ದವಾಚ್ಯವಾದ ಪ್ರಕೃತಿ ಮೊದಲಾದವುಗಳ ಸಂಬಂಧವಿರುವುದರಿಂದಲೇ ಬ್ರಹ್ಮನಲ್ಲಿ ಅವ್ಯಕ್ತಾದಿ ಶಬ್ದಗಳ ವ್ಯವಹಾರವೆಂದು ವಿಪರೀತವಾಗಿಯೇ ಏಕೆ ಹೇಳಬಾರದು ಎಂಬ ಆಕ್ಷೇಪಕ್ಕೆ ಉತ್ತರ 'ಶರೀರ' ಎಂದು. ಜೀವನ ಶರೀರ ಹೇಗೆ ಜೀವನ ಅಧೀನವೋ ಹಾಗೆ ಪ್ರಧಾನಾದಿಗಳೂ ಬ್ರಹ್ಮನ ಅಧೀನವೆಂದು ಭಾವ[1] ಪ್ರಧಾನಾದಿಗಳು ಬ್ರಹ್ಮನಿಗೆ ಮುಖ್ಯಶರೀರವೇಕಾಗಬಾರದು ಎಂಬ ಪ್ರಶ್ನೆಗೆ ಉತ್ತರ—'ಕ' ಎಂದು. ಕುತ್ಸಿತವಾದದ್ದು ಮುಖ್ಯಶರೀರವಾಗಲಾರದಷ್ಟೇ ಎಂದು ಭಾವ. 'ಸ್ಥಿತ' ಎಂದು ಹೇಳುವ ಬದಲು 'ವಿನ್ಯಸ್ತ' ಎಂದು ಹೇಳಿರುವುದು ಪ್ರಧಾನಾದಿ ವಿಶಿಷ್ಟನಾದ ಬ್ರಹ್ಮನನ್ನೇ ಅವ್ಯಕ್ತಾದಿ ಪದಗಳು ತಿಳಿಸುವುವು ಹೊರತು ಕೇವಲ ಬ್ರಹ್ಮನನ್ನಲ್ಲ ಎಂಬುದನ್ನು ತಿಳಿಸಲು.

ಶ್ರೌತ ಮತ್ತು ಸ್ಮಾರ್ತ ಪ್ರಯೋಗಗಳಲ್ಲಾದರೂ ಅವ್ಯಕ್ತಾದಿ ಶಬ್ದಗಳು ವಿಷ್ಣುವಿನಲ್ಲೇ ಮುಖ್ಯವೆನ್ನಲು ಏನು ಕಾರಣ ಎಂಬ ಪ್ರಶ್ನೆಗೆ ಉತ್ತರ—

## ಓಂ ಸೂಕ್ಷ್ಮಂ ತು ತದರ್ಹತ್ವಾತ್ ಓಂ (೧-೪-೨)

---

1. ಬ್ರಹ್ಮ ಮತ್ತು ಪ್ರಕೃತಿಗಳಲ್ಲಿ ಪರಸ್ಪರ ಸಂಬಂಧವಿದ್ದರೂ, ಬ್ರಹ್ಮನೇ ಸ್ವತಂತ್ರ. ಅವನ ಶರೀರಸ್ಥಾನೀಯವಾದ ಪ್ರಕೃತಿ ಅವನಿಗೆ ಅಧೀನವಾದದ್ದು. ಆದ್ದರಿಂದ ಸ್ವತಂತ್ರನಾದ ಬ್ರಹ್ಮನೇ ಅವ್ಯಕ್ತಾದಿಶಬ್ದಗಳ ಪರಮಮುಖ್ಯಾರ್ಥವೆಂದೂ ಅವನಿಗೆ ಅಧೀನವಾದ ಪ್ರಧಾನಾದಿಗಳು ಅವ್ಯಕ್ತಾದಿಶಬ್ದಗಳ ಕೇವಲ ಮುಖ್ಯಾರ್ಥವೆಂದು ಹೇಳುವುದೇ ಉಚಿತ ಎಂದು ಭಾವ.

तुरेव । सूक्ष्ममेव वस्त्वव्यक्तशब्दवाच्यमित्यर्थः । अव्यक्तत्वस्यैव तच्छब्दनिमित्तत्वात् कथमेतदित्यत उक्तम् — तदर्हत्वात् । तदिति तन्त्रम् । तस्य सूक्ष्मस्य तस्य प्रकृताव्यक्तत्वस्यार्हत्वादित्यर्थः । सूक्ष्मस्यैवाव्यक्तशब्दप्रवृत्तिनिमित्ताव्यक्तताहत्वात् तदव्यक्तशब्दवाच्यं ब्रह्मैव । "यत्तत्सूक्ष्मं परमं वेदितव्यम्" इत्यादेः सूक्ष्मतममित्यव्यक्तशब्दमुख्यार्थ इति भावः । जीवादिपदनिमित्तप्राणधारकत्वादेरुपलक्षणमेतत् ।

ननु विष्णोरव्यक्तादिशब्दमुख्यार्थत्वेऽपीह परत्वावधित्वार्थक-

---

**ಸೂತ್ರಾರ್ಥ**

'ತು' ಶಬ್ದಕ್ಕೆ ಏವ ಎಂದು ಅರ್ಥ. ಸೂಕ್ಷ್ಮವಾದ ವಸ್ತುವೇ ಅವ್ಯಕ್ತ ಶಬ್ದವಾಚ್ಯವಾದದ್ದು ಎಂದು ಅರ್ಥ. ಅವ್ಯಕ್ತತ್ವವೇ ಅವ್ಯಕ್ತಶಬ್ದದ ಪ್ರವೃತ್ತಿ ನಿಮಿತ್ತವಾದುದರಿಂದ ಸೂಕ್ಷ್ಮವಸ್ತುವೇ ಅವ್ಯಕ್ತಶಬ್ದವಾಚ್ಯವೆನ್ನುವುದು ಹೇಗೆ ಎಂಬ ಆಕ್ಷೇಪಕ್ಕೆ ಸಮಾಧಾನ—'ತದರ್ಹತ್ವಾತ್'. 'ತತ್' ಶಬ್ದವನ್ನು ಆವೃತ್ತಿ ಮಾಡಿಕೊಳ್ಳಬೇಕು. ತಸ್ಯ–ಆ ಸೂಕ್ಷ್ಮವಾದ ವಸ್ತುವಿಗೇ, ತಸ್ಯ–ಪ್ರಕೃತವಾದ ಅವ್ಯಕ್ತತ್ವದ ಅರ್ಹತೆ ಇರುವುದರಿಂದ ಎಂದು ಅರ್ಥ. ಸೂಕ್ಷ್ಮವಾದ ವಸ್ತುವೇ ಅವ್ಯಕ್ತಶಬ್ದದ ಪ್ರವೃತ್ತಿನಿಮಿತ್ತವಾದ ಅವ್ಯಕ್ತತ್ವವನ್ನು ಹೊಂದಿರಲು ಅರ್ಹ ವಾದುದರಿಂದ ಅವ್ಯಕ್ತಶಬ್ದವಾಚ್ಯನು ಬ್ರಹ್ಮನೇ. 'ಯತ್ತತ್ ಸೂಕ್ಷ್ಮಂ ಪರಮಂ ವೇದಿತವ್ಯಂ' ಇತ್ಯಾದಿ ಶ್ರುತಿಗಳಿಂದ ಸೂಕ್ಷ್ಮತಮವಾದದ್ದು ಎಂದು ಅವ್ಯಕ್ತಶಬ್ದದ ಮುಖ್ಯಾರ್ಥವೆಂದು ಭಾವ. ಜೀವ ಮೊದಲಾದ ಪದಗಳ ಪ್ರವೃತ್ತಿನಿಮಿತ್ತಗಳಾದ ಪ್ರಾಣಧಾರಕತ್ವ ಮೊದಲಾದವುಗಳಿಗೂ ಅವ್ಯಕ್ತತ್ವವು ಉಪಲಕ್ಷಣವಾಗಿದೆ.

ವಿಷ್ಣುವು ಅವ್ಯಕ್ತ ಮೊದಲಾದ ಶಬ್ದಗಳ ಮುಖ್ಯಾರ್ಥವಾಗಿದ್ದರೂ 'ಅವ್ಯಕ್ತಾತ್ ಪುರುಷಃ ಪರಃ' ಇತ್ಯಾದಿ ಪ್ರಕೃತ ಶ್ರುತಿಗಳಲ್ಲಿ [1]ಪರತ್ವಾವಧಿತ್ವವನ್ನು ಹೇಳುವ

---

1. ಯಾರಿಂದ ಇನ್ನೊಬ್ಬರಿಗೆ ಪರತ್ವ ಅಂದರೆ ಶ್ರೇಷ್ಠತ್ವವನ್ನು ಹೇಳುವೆವೋ ಅವರು ಪರತ್ವಕ್ಕೆ ಅವಧಿ. ಇಂತಹ ಅವಧಿತ್ವವು 'ಅವ್ಯಕ್ತಾತ್' ಎಂಬಲ್ಲಿರುವ ಪಂಚಮೀವಿಭಕ್ತಿಯ ಅರ್ಥ. ಆದ್ದರಿಂದ ಅವ್ಯಕ್ತಾತ್ ಎಂಬಲ್ಲಿರುವ ಪಂಚಮೀವಿಭಕ್ತಿಯು, ಅವ್ಯಕ್ತವು ಪುರುಷನಿಗಿಂತ ಅವರ ಎಂದರೆ ಅಧಮವೆಂದು ಸೂಚಿಸುವುದು. ಬ್ರಹ್ಮನಿಗೆ ಅವರತ್ವವು ಯುಕ್ತವಲ್ಲವಾದ್ದರಿಂದ ಈ ಶ್ರುತಿಯಲ್ಲಿ ಬ್ರಹ್ಮನು ಅವ್ಯಕ್ತಶಬ್ದವಾಚ್ಯನಲ್ಲ ಎಂದು ಭಾವ.

पञ्चम्याक्षिप्तावरत्वदुःखित्वादेश्चायोगेन पञ्चम्यादेः व्यर्थतापत्तेर्नाव्य-क्तादिशब्दवाच्यं ब्रह्मेत्यत आह—

## ॥ ॐ तदधीनत्वादर्थवत् ॐ ॥ १-४-३

अवरत्वाक्षेपकावधित्वादिवाचिपञ्चम्यादिशब्दजातमित्यन्वेति। अर्थवत् परब्रह्मण्यर्थवत् न व्यर्थम्। कुतः? तदधीनत्वात्। अवरत्व-दुःखित्वादितन्निमित्तधर्माणां तस्य विन्यस्तपदेन प्रकृतस्य ब्रह्मणोऽधीनत्वादित्यर्थः। ब्रह्मण्यवरत्वादेरभावेऽपि अन्यगतावरत्वादेः तदधीनत्वात्तत्र तद्वाचिशब्दो राज्ञि जयिशब्दवदस्तीति भावः।

ಪಂಚಮೀವಿಭಕ್ತಿಯಿಂದ ಸೂಚಿತವಾಗುವ ಅವರತ್ವ, ದುಃಖಿತ್ವ ಮೊದಲಾದವುಗಳು ಬ್ರಹ್ಮನಲ್ಲಿ ಯುಕ್ತವಾಗುವುದಿಲ್ಲವಾದ್ದರಿಂದ ಪಂಚಮೀವಿಭಕ್ತಿ ಮೊದಲಾದವುಗಳು ಅರ್ಥರಹಿತವಾಗುವುವು. ಆದ್ದರಿಂದ ಈ ಶ್ರುತಿಗಳಲ್ಲಿ ಬ್ರಹ್ಮನು ಅವ್ಯಕ್ತಾದಿಶಬ್ದವಾಚ್ಯನಲ್ಲ ಎಂಬ ಆಶಂಕೆಗೆ ಉತ್ತರ—

## ಓಂ ತದಧೀನತ್ವಾದರ್ಥವತ್ ಓಂ (೧-೪-೩)

**ಸೂತ್ರಾರ್ಥ**

'ಅವರತ್ವವನ್ನು ಸೂಚಿಸುವ ಅವಧಿತ್ವಾದಿಗಳನ್ನು ಹೇಳುವ ಪಂಚಮೀವಿಭಕ್ತಿ ಮೊದಲಾದ ಶಬ್ದಸಮೂಹವು' ಎಂಬ ಪದಗಳನ್ನು ಇಲ್ಲಿ ಅನ್ವಯಿಸಿಕೊಳ್ಳಬೇಕು ಅಂತಹ ಪಂಚಮ್ಯಾದಿ ಶಬ್ದಗಳು, ಅರ್ಥವತ್- ಪರಬ್ರಹ್ಮನ ವಿಷಯದಲ್ಲಿ ಅರ್ಥವತ್ತಾಗಿರುವುವು, ಅರ್ಥರಹಿತವಲ್ಲ. ಏಕೆಂದರೆ, ತದಧೀನತ್ವಾತ್ ಅವರತ್ವ, ದುಃಖಿತ್ವ ಮೊದಲಾದ, ಪಂಚಮ್ಯಾದಿ ಪದಗಳ ಪ್ರವೃತ್ತಿನಿಮಿತ್ತವಾದ ಧರ್ಮಗಳು, ತಸ್ಯ– ಹಿಂದಿನ ಸೂತ್ರದ (೧–೪–೧) 'ವಿನ್ಯಸ್ತ' ಪದದಿಂದ ಪ್ರಕೃತನಾಗುವ ಬ್ರಹ್ಮನಿಗೆ ಅಧೀನವಾಗಿರುವುದರಿಂದ ಎಂದು ಅರ್ಥ. ಬ್ರಹ್ಮನಲ್ಲಿ ಅವರತ್ವ ಮೊದಲಾದವುಗಳು ಇಲ್ಲದಿದ್ದರೂ ಇತರರಲ್ಲಿ ಇರುವ ಅವರತ್ವಾದಿಗಳು ಬ್ರಹ್ಮನಿಗೆ ಅಧೀನವಾದುದರಿಂದ [1]ರಾಜನಿಗೆ 'ಜಯೀ' ಎಂಬ ಶಬ್ದವಿರುವಂತೆ ಅವರತ್ವಾದಿವಾಚಕ ಶಬ್ದಗಳು ಬ್ರಹ್ಮನಿಗೆ ಇವೆಯೆಂದು ಭಾವ.

---

1. ಯುದ್ಧರಂಗಕ್ಕೆ ಹೋಗಿ ಜಯಿಸಿದವರು ಸೈನಿಕರು, ರಾಜನಲ್ಲ. ಆದರೂ ಸೈನಿಕರಲ್ಲಿರುವ ಜಯವು ರಾಜನಿಗೆ ಅಧೀನವಾದುದರಿಂದ ರಾಜನನ್ನು 'ಜಯಿ' ಎಂದು ವ್ಯವಹರಿಸುವರು. ಹಾಗೆಯೇ ಅವರತ್ವ, ದುಃಖಿತ್ವಾದಿಗಳು ಜೀವನಲ್ಲೇ ಇದ್ದರೂ ಅವು ಬ್ರಹ್ಮನಿಗೆ ಅಧೀನವಾದುದರಿಂದ ಬ್ರಹ್ಮನನ್ನು ಅವರತ್ವಾದಿವಾಚಕಶಬ್ದಗಳಿಂದ ವ್ಯವಹರಿಸುವುದು ಸಮಂಜಸವೆಂದು ಭಾವ.

इतश्च मुख्यतोऽव्यक्तादिशब्दवाच्यं ब्रह्मेत्याह—

॥ ॐ ज्ञेयत्वावचनाच्च ॐ ॥ १-४-४

अव्यक्तजीवादिशब्दमुख्यार्थो ब्रह्मैव । नानुमानिकादिः । "तमेवैकं जानथ आत्मानम्" इति ब्रह्मण एव मुमुक्षुज्ञेयत्वोक्त्यनुक्तिभ्यां मोक्षार्थवेदानां ब्रह्मपरत्वसिद्धौ प्रतिवाक्यं तत्परत्वस्य "आदावन्ते च मध्ये च" इत्यादिना सिद्धेः स्वतःप्राप्तमुख्यवृत्तित्यागायोगात् अव्यक्तादिशब्दमुख्यार्थो ब्रह्मैवेति भावः ।

उक्तमाक्षिप्याह—

॥ ॐ वदतीति चेन्न प्राज्ञो हि ॐ ॥ १-४-५

---

ಈ ಮುಂದಿನ ಕಾರಣದಿಂದಲೂ ಮುಖ್ಯವಾಗಿ ಅವ್ಯಕ್ತಾದಿ ಶಬ್ದವಾಚ್ಯವಾದುದು ಬ್ರಹ್ಮನೇ ಎಂದು ಹೇಳುವ ಸೂತ್ರ—

ಓಂ ಜ್ಞೇಯತ್ವಾವಚನಾಚ್ಚ ಓಂ (೧-೪-೪)

**ಸೂತ್ರಾರ್ಥ**

ಅವ್ಯಕ್ತ, ಜೀವ ಮೊದಲಾದ ಶಬ್ದಗಳ ಮುಖ್ಯಾರ್ಥನು ಬ್ರಹ್ಮನೇ, ಪ್ರಕೃತಿ ಮೊದಲಾದವರಲ್ಲ. 'ತಮೇವೈಕಂ ಜಾನಥ ಆತ್ಮಾನಂ' (ಮುಂ-೩-೩-೫) ಎಂಬುದಾಗಿ ಬ್ರಹ್ಮನೇ ಮುಮುಕ್ಷುಗಳಿಂದ ಜ್ಞೇಯನೆಂದು ಹೇಳಿರುವುದರಿಂದ ಮತ್ತು ಇತರರಿಗೆ ಮುಮುಕ್ಷುಜ್ಞೇಯತ್ವವನ್ನು ಹೇಳದಿರುವುದರಿಂದ ಮೋಕ್ಷಫಲವನ್ನು ಹೇಳುವ ವೇದಗಳಿಗೆ ಬ್ರಹ್ಮನಲ್ಲೇ ತಾತ್ಪರ್ಯವೆಂದು ಸಿದ್ಧವಾಗಲು 'ಆದಾವಂತೇ ಚ ಮಧ್ಯೇ ಚ ವಿಷ್ಣುಃ ಸರ್ವತ್ರ ಗೀಯತೇ' ಇತ್ಯಾದಿ ವಚನಗಳಿಂದ ಪ್ರತಿಯೊಂದು ವೇದ ವಾಕ್ಯಕ್ಕೂ ಬ್ರಹ್ಮನಲ್ಲೇ ತಾತ್ಪರ್ಯವೆಂದು ಸಿದ್ಧವಾಗುವುದು. ಹೀಗೆ ತಾನಾಗಿಯೇ ಶಬ್ದಗಳಿಗೆ ಬ್ರಹ್ಮನಲ್ಲಿ ಮುಖ್ಯವೃತ್ತಿಯು ಪ್ರಾಪ್ತವಾದಾಗ ಅದನ್ನು ತ್ಯಜಿಸಲಾಗುವುದಿಲ್ಲವಾದ್ದರಿಂದ ಅವ್ಯಕ್ತಾದಿಶಬ್ದಗಳ ಮುಖ್ಯಾರ್ಥನು ಬ್ರಹ್ಮನೇ ಎಂದು ಭಾವ.

ಹೇಳಿದುದನ್ನು ಆಕ್ಷೇಪಿಸಿ ಸಮಾಧಾನ ನೀಡುವ ಸೂತ್ರ—

ಓಂ ವದತೀತಿ ಚೇನ್ನ ಪ್ರಾಜ್ಞೋ ಹಿ ಓಂ (೧-೪-೫)

*

ज्ञेयत्वावचनमन्यस्यापि सिद्धम् । यतो "महतः परं ध्रुवं निचाय्य तं मृत्युमुखात् प्रमुच्यते" इति महत्परत्वलिङ्गेन प्रधानस्यापि मुमुक्षुज्ञेयत्वं वदति श्रुतिरिति चेन्न । प्राज्ञो हि । यस्मात् प्राज्ञो विष्णुरत्र उच्यत इत्यर्थः । सर्वतः परे महत्परत्वं युक्तमिति भावः ॥

विष्णुग्रहणे किं कारणमित्यत आह—

**॥ ॐ प्रकरणात् ॐ ॥ १–४–६**

"सोऽध्वनः पारमाप्नोति तद्विष्णोः परमं पदम्" इति

---

**ಸೂತ್ರಾರ್ಥ**

ಮುಮುಕ್ಷುಜ್ಞೇಯತ್ವವು ಬ್ರಹ್ಮಭಿನ್ನವಾದ ಪ್ರಧಾನಕ್ಕೂ ಪ್ರಸಿದ್ಧವಾಗಿದೆ. ಏಕೆಂದರೆ, [1] 'ಮಹತಃ ಪದಂ ಧ್ರುವಂ ನಿಚಾಯ್ಯ ತಂ ಮೃತ್ಯುಮುಖಾತ್ ಪ್ರಮುಚ್ಯತೇ' ಎಂದು ಮಹತ್ಪರತ್ವಲಿಂಗದಿಂದ ಪ್ರಕೃತಿಗೂ ಶ್ರುತಿಯು ಮುಮುಕ್ಷು-ಜ್ಞೇಯತ್ವವನ್ನು ಹೇಳುತ್ತಿದೆ ಎಂದರೆ ಅದು ಸರಿಯಲ್ಲ. ಪ್ರಾಜ್ಞೋ ಹಿ—ಏಕೆಂದರೆ, [2]ಪ್ರಾಜ್ಞವಿಷ್ಣುವೇ ಆ ಶ್ರುತಿಯಲ್ಲಿ ಹೇಳಲ್ಪಟ್ಟಿದ್ದಾನೆ ಎಂದು ಅರ್ಥ. ಎಲ್ಲರಿಗಿಂತಲೂ ಶ್ರೇಷ್ಠನಾದವನಲ್ಲಿ ಮಹತ್ಪರತ್ವವು ಯುಕ್ತವೆಂದು ಭಾವ.

ಈ ಶ್ರುತಿಯಲ್ಲಿ 'ಮಹತಃ ಪರಂ' ಎಂಬ ಪದಗಳಿಂದ ವಿಷ್ಣುವನ್ನು ಗ್ರಹಿಸಲು ಕಾರಣವೇನು ಎಂಬ ಪ್ರಶ್ನೆಗೆ ಉತ್ತರ—

**ಓಂ ಪ್ರಕರಣಾತ್ ಓಂ (೧-೪-೬)**

**ಸೂತ್ರಾರ್ಥ**

[3] 'ಸೋಽಧ್ವನಃ ಪಾರಮಾಪ್ನೋತಿ ತದ್ವಿಷ್ಣೋಃ ಪರಮಂ ಪದಂ' ಎಂದು

---

1. ಅನಾದ್ಯನಂತಂ ಮಹತಃ ಪರಂ ಧ್ರುವಂ ನಿಚಾಯ್ಯ ತಂ ಮೃತ್ಯುಮುಖಾತ್ ಪ್ರಮುಚ್ಯತೇ (ಕಠ. ೩–೧೫) ಉತ್ಪತ್ತಿರಹಿತನೂ, ಅಪರಿಚ್ಛಿನ್ನನೂ, ಸರ್ವೋತ್ತಮನೂ ಆದ್ದರಿಂದಲೇ ಮಹತ್ತತ್ತ್ವಕ್ಕಿಂತಲೂ ಶ್ರೇಷ್ಠನೂ, ನಿರ್ವಿಕಾರನೂ ಆದ ವಿಷ್ಣುವನ್ನು ತಿಳಿದು ಸಂಸಾರದಿಂದ ಮುಕ್ತನಾಗುತ್ತಾನೆ ಎಂದು ಸಿದ್ಧಾಂತದಲ್ಲಿ ಶ್ರುತ್ಯರ್ಥ. 'ಮಹತಃ ಪರಮವ್ಯಕ್ತಂ' ಇತ್ಯಾದಿ ಶ್ರುತಿಯಲ್ಲಿ ಮಹತ್ತತ್ತ್ವಕ್ಕಿಂತ ಪರವಾದುದು ಅವ್ಯಕ್ತವೆಂದು ಪ್ರಸಿದ್ಧವಾಗಿದೆ. ಆದ್ದರಿಂದ ಅವ್ಯಕ್ತದ ಅಂದರೆ ಪ್ರಧಾನದ ಜ್ಞಾನವೇ ಮೋಕ್ಷಕಾರಣವೆಂದು ಶ್ರುತಿಯು ಹೇಳುವುದು ಎಂದು ಪೂರ್ವಪಕ್ಷಿಯ ಅಭಿಪ್ರಾಯ.

2. 'ಪ್ರಜ್ಞ ಏವ ಪ್ರಾಜ್ಞಃ' ಎಂಬ ವ್ಯುತ್ಪತ್ತಿಯಂತೆ ಪ್ರಾಜ್ಞಶಬ್ದಕ್ಕೆ ಸರ್ವಜ್ಞನಾದ ಪರಮಾತ್ಮ ಎಂದು ಅರ್ಥ.

3. 'ಸೋಽಧ್ವನಃ ಪಾರಮಾಪ್ನೋತಿ ತದ್ವಿಷ್ಣೋಃ ಪರಮಂ ಪದಂ' (ಕಠ. ೩–೯). ಸಕಲವೂ ಈಶಾಧೀನವೆಂದು ತಿಳಿಯುವವನು ಸಂಸಾರವೆಂಬ ಮಾರ್ಗದ ತುದಿಯನ್ನು ಮುಟ್ಟುತ್ತಾನೆ. ಆ ತುದಿ ವಿಷ್ಣುವಿನ ಪರಮಪದ—ಕ್ಷೀರಾಬ್ಧಿ ಮೊದಲಾದಲ್ಲಿರುವ ಮುಕ್ತಪ್ರಾಪ್ಯವಾದ ಸ್ಥಾನ ಎಂದು ಶ್ರುತ್ಯರ್ಥ.

प्रकरणोक्तार्थोपासकस्य विष्णुपदप्राप्त्युक्त्या निर्णीतात्प्रकरणात् प्राज्ञस्तत्रोच्यत इत्यन्वयः ॥

इतश्च प्राज्ञ एव निचाय्यवाक्योक्त इत्याह—

॥ ॐ त्रयाणामेव चैवमुपन्यासः प्रश्नश्च ॐ ॥
१-४-७

आद्यचशब्दो युक्तिसमुच्चये । न केवलं प्रकरणादिति । अन्त्यः प्रश्नोपन्याससमुच्चये । प्राज्ञ इत्यस्ति । बुद्धिस्थत्वात् एतदुपनिषदीत्यन्वेति । एवं "वीतमन्युस्त्वां ददृशिवान्मृत्युमुखात्प्रमुक्तम्" इति,

---

ಆ ಪ್ರಕರಣದಲ್ಲಿ ಹೇಳಿರುವ ವಿಷಯವನ್ನು ಉಪಾಸಿಸುವನಿಗೆ ವಿಷ್ಣುಪದಪ್ರಾಪ್ತಿಯನ್ನು ಹೇಳಿರುವುದರಿಂದ ವಿಷ್ಣುಪರವೆಂದು ನಿರ್ಣೀತವಾದ ಪ್ರಕರಣದಿಂದಾಗಿ 'ಮಹತಃ ಪರಂ' ಎಂಬ ಶ್ರುತಿಯಲ್ಲಿ ಪ್ರಾಜ್ಞನೇ ಹೇಳಲ್ಪಟ್ಟಿದ್ದಾನೆ ಎಂದು ಅನ್ವಯ.

ಈ ಮುಂದಿನ ಕಾರಣದಿಂದಲೂ 1 'ನಿಚಾಯ್ಯ' ವಾಕ್ಯದಲ್ಲಿ ಹೇಳಲ್ಪಟ್ಟಿರುವವನು ಪ್ರಾಜ್ಞನೇ ಎಂದು ಹೇಳುವ ಸೂತ್ರ—

ಓಂ ತ್ರಯಾಣಾಮೇವ ಚೈವಮುಪನ್ಯಾಸಃ
ಪ್ರಶ್ನಶ್ಚ ಓಂ (೧-೪-೭)

**ಸೂತ್ರಾರ್ಥ**

ಸೂತ್ರದಲ್ಲಿ ಮೊದಲನೆಯ 'ಚ' ಶಬ್ದವು 'ಪ್ರಕರಣದಿಂದ ಮಾತ್ರವಲ್ಲದೇ ಯುಕ್ತಿಯಿಂದಲೂ' ಎಂಬುದಾಗಿ ಯುಕ್ತಿಯ ಸಮುಚ್ಚಯವನ್ನು ಹೇಳುವುದು. ಕೊನೆಯಲ್ಲಿರುವ 'ಚ' ಶಬ್ದವು ಪ್ರಶ್ನ ಮತ್ತು ಉಪನ್ಯಾಸಗಳ ಸಮುಚ್ಚಯವನ್ನು ಹೇಳುವುದು. 'ಪ್ರಾಜ್ಞಃ' ಎಂಬ ಪದವು ಅನುವೃತ್ತಿಗೊಳ್ಳುವುದು. ಬುದ್ಧಿಸ್ಥವಾದುದರಿಂದ 'ಈ ಉಪನಿಷತ್ತಿನಲ್ಲಿ' ಎಂಬ ಪದಗಳು ಅನ್ವಿತವಾಗುತ್ತವೆ. 2ಏವಂ—

---

1. 'ಅನಾದ್ಯನಂತಂ ಮಹತಃ ಪರಂ ಧ್ರುವಂ ನಿಚಾಯ್ಯ' ಇತ್ಯಾದಿ ವಾಕ್ಯದಲ್ಲಿ.

2. ಕಠೋಪನಿಷತ್ತಿನಲ್ಲಿ ಬರುವ ನಚಿಕೇತನ ಕಥೆ ಸುಪ್ರಸಿದ್ಧ. ತಂದೆಯ ಶಾಪದಂತೆ ಯಮನ ಬಳಿಗೆ ತೆರಳಿದ ನಚಿಕೇತನಿಗೆ ಯಮನು ಕೊಟ್ಟ ಮೂರು ವರಗಳ ವಿವರ ಇಲ್ಲಿ ಉಲ್ಲೇಖಿಸಿರುವ ಮೂರು ಮಂತ್ರಗಳಲ್ಲಿ ಬಂದಿದೆ. 'ವೀತಮನ್ಯುಃ' ಇತ್ಯಾದಿ ವಾಕ್ಯದಲ್ಲಿ—'ಕ್ರೋಧವನ್ನು ತ್ಯಜಿಸಿದ ನಿನ್ನ ತಂದೆಯು ಮೃತ್ಯುಮುಖದಿಂದ ಬಿಡುಗಡೆ ಹೊಂದಿದ ನಿನ್ನನ್ನು ನೋಡಲಿ' ಎಂಬ ಮೊದಲನೆಯ ವರದ ಉಪನ್ಯಾಸವಿದೆ. 'ಸ್ವರ್ಗ್ಯಮಗ್ನಿ' ಇತ್ಯಾದಿ ವಾಕ್ಯದಲ್ಲಿ 'ಎಲೈ ನಚಿಕೇತನೇ ಸ್ವರ್ಗಸಾಧನನೂ, ಅಗ್ನಿನಾಮಕನೂ ಆದ ಇಷ್ಟಕಚಿತಿಸ್ಥನಾದ ಹರಿಯನ್ನು ತಿಳಿದಿರುವ ನಾನು ಆ ಹರಿಯ ಸ್ವರೂಪವನ್ನು ಹೇಳುವೆನು. ತಿಳಿದುಕೋ' ಎಂದು ಎರಡನೆಯ ವರದ ಪ್ರಸ್ತಾಪವಿದೆ. 'ದೇವೈರತ್ರಾಪಿ' ಇತ್ಯಾದಿ ವಾಕ್ಯದಲ್ಲಿ 'ನೀನು ಕೇಳುತ್ತಿರುವ, ಮೃತಜೀವರ ಮತ್ತು ಮುಕ್ತಜೀವರ ಪ್ರೇರಕನಾದ ಬ್ರಹ್ಮನ ಸ್ವರೂಪ ವಿಷಯದಲ್ಲಿ ದೇವತೆಗಳೂ ಹಿಂದೆ ಸಂಶಯಗ್ರಸ್ತರಾಗಿದ್ದರು' ಎಂದು ಮೂರನೆಯ ವರದ ಪ್ರಸ್ತಾಪವಿದೆ.

"स्वर्ग्यमग्निं नचिकेतः प्रजानन्" इति, "देवैरत्रापि विचिकित्सितं किल" इत्येवं प्रकारेण त्रयाणां पितृसौमनस्य-स्वर्ग्याग्नि-ब्रह्मणामेवोपन्यासो यतोऽतश्च प्राज्ञ एव तत्र उच्यत इत्यर्थः । त्रयाणामेवेति कुत इत्यत उक्तम्—प्रश्नश्चेति । "सुमना यथा स्याद्वीतमन्युः" इति, "स त्वमग्निं स्वर्ग्यमध्येषि मृत्यो प्रब्रूहि तम्" इति, "येयं प्रेते विचिकित्सा मनुष्ये" इति चैतत् त्रितयविषय एव प्रश्नश्च यतोऽत उपन्यासस्त्रितयविषय इत्यर्थः । आद्यश्चो हेतौ । अन्त्यः समुच्चय

---

'ವೀತಮನ್ಯುಃ ತ್ವಾಂ ದದೃಶಿವಾನ್ ಮೃತ್ಯುಮುಖಾತ್ ಪ್ರಮುಕ್ತಂ' (ಕಠ. ೧–೧–೧೦) ಎಂದು, 'ಸ್ವರ್ಗ್ಯಮಗ್ನಿಂ ನಚಿಕೇತಃ ಪ್ರಜಾನನ್' (ಕಠ. ೧–೧–೧೩) ಎಂದು ಮತ್ತು 'ದೇವೈರತ್ರಾಪಿ ವಿಚಿಕಿತ್ಸಿತಂ ಕಿಲ' (ಕಠ. ೧–೧–೨೦) ಎಂದು, ತ್ರಯಾಣಾಂ–ತಂದೆಯ ಮನಸ್ಸಿನ ಪ್ರಸನ್ನತೆ, ಸ್ವರ್ಗ್ಯಾಗ್ನಿ ಮತ್ತು ಬ್ರಹ್ಮ ಈ ಮೂರರ ಉಪನ್ಯಾಸವೇ ಇರುವ ಕಾರಣದಿಂದಲೂ ಈ ಉಪನಿಷತ್ತಿನಲ್ಲಿ ಪ್ರಾಜ್ಞನೇ ಹೇಳಲ್ಪಡುತ್ತಾನೆ ಎಂದು ಅರ್ಥ. ಕೇವಲ ಮೂರರ ನಿರೂಪಣೆಯಿದೆ ಎಂದು ಹೇಳುವುದು ಹೇಗೆ ಎಂಬ ಆಶಂಕೆಗೆ ಉತ್ತರ 'ಪ್ರಶ್ನಶ್ಚ' ಎಂದು. 'ಸುಮನಾ ಯಥಾ ಸ್ಯಾತ್ ವೀತಮನ್ಯುಃ' (ಕಠ. ೧–೧–೯) ಎಂದು, 'ಸ ತ್ವಮಗ್ನಿಂ ಸ್ವರ್ಗಮಧ್ಯೇಷಿ ಮೃತ್ಯೋ ಪ್ರಬ್ರೂಹಿ ತಂ' (ಕಠ. ೧–೧–೧೨) ಎಂದು ಮತ್ತು 'ಯೇಯಂ ಪ್ರೇತೇ ವಿಚಿಕಿತ್ಸಾ ಮನುಷ್ಯೇ' (ಕಠ. ೧–೧–೧೯)[1] ಎಂಬುದಾಗಿ ಈ ಮೂರರ ವಿಷಯದಲ್ಲೇ ಪ್ರಶ್ನೆ ಇರುವುದರಿಂದ ಉಪನ್ಯಾಸವೂ ಮೂರನ್ನು ಕುರಿತದ್ದು ಎಂದು ಅರ್ಥ. 'ಮೊದಲನೆಯ 'ಚ' ಕಾರವು ಹೇತ್ವರ್ಥಕವಾದುದು [2] ಕೊನೆಯ 'ಚ' ಕಾರವು ಸಮುಚ್ಚಯವನ್ನು ಹೇಳುವುದು' ಎಂದು ಕೆಲವರು ಹೇಳುವರು.

---

1. ಈ ಮೂರು ವಾಕ್ಯಗಳಿಂದ ನಚಿಕೇತನು ಕ್ರಮವಾಗಿ— 'ನನ್ನ ತಂದೆಯು ಕ್ರೋಧವನ್ನು ಕಳೆದು ಮನಃಪ್ರಸನ್ನತೆಯನ್ನು ಪಡೆಯುವಂತಾಗಲಿ', 'ಎಲೈ ಮೃತ್ಯು, ಸ್ವರ್ಗಸಾಧನನಾದ ಅಗ್ನಿನಾಮಕ ಹರಿಯನ್ನು ನೀನು ತಿಳಿದಿದ್ದೀಯೆ. ಅವನನ್ನು ನನಗೆ ಉಪದೇಶಿಸು'. 'ಮೃತರಾದ ಮತ್ತು ಮುಕ್ತರಾದ ಜೀವರಿಗೆ ನಿಯಾಮಕನಾಗಿ ಭಗವಂತನಿದ್ದಾನೆಂದು ಕೆಲವರು, ಇಲ್ಲವೆಂದು ಕೆಲವರು ಹೇಳುವರು. ಮೃತ–ಮುಕ್ತಜೀವರಿಗೆ ಪ್ರೇರಕನಾದ ಆ ಭಗವಂತನ ಸ್ವರೂಪವನ್ನು ಉಪದೇಶಿಸು' ಎಂದು ಮೂರು ವರಗಳನ್ನು ಕೇಳುತ್ತಿದ್ದಾನೆ.

2. 'ಉಪನ್ಯಾಸವೂ ಪ್ರಶ್ನೆಗಳೂ ಮೂರರ ವಿಷಯದಲ್ಲೇ ಇವೆ ಎಂಬ ಹೇತುವಿನಿಂದಲೂ' ಎಂದು ಸೂತ್ರಾರ್ಥ.

इत्येके । प्रश्नस्यादित्वेऽपि प्रतिवचनस्थनिचाय्यवाक्यस्य प्रधानपरत्व-शङ्कनात् तन्निरसितुमुपन्यासस्यादावुक्तिः । त्रयाणामेव चेत्येव पूर्ताविवमित्युक्तिः त्रयमध्ये प्रधानस्य न निवेश इति दर्शयितुं प्रकार-त्रयोक्त्यर्था । उपन्यासस्योक्तत्रयविषयत्वसिद्ध्यै प्रश्नोक्तिः ।

ननु प्रवृत्तिनिमित्तसत्त्वेऽपि प्रयोगप्राचुर्याभावान्मुख्यतो नाव्यक्तादिशब्दं ब्रह्मेत्यत आह—

॥ ॐ महद्वच्च ॐ ॥ १-४-८

चशब्दादव्यक्तादिशब्दं ब्रह्मैवेति समुच्चीयते । महद्वत् महच्छब्दं ब्रह्म यथा तथेत्यर्थः । महच्छब्दो महत्तत्त्वे प्रयोगप्राचुर्य-

---

**ಸೂತ್ರದಲ್ಲಿ ಉಪನ್ಯಾಸವನ್ನು ಮೊದಲು ಉಲ್ಲೇಖಿಸಿರುವುದರ ಕಾರಣ, 'ಏವಂ' ಶಬ್ದ ಮತ್ತು ಪ್ರಶ್ನೆಗಳ ಉಲ್ಲೇಖದ ಅವಶ್ಯಕತೆ.**

ಉಪನಿಷತ್ತಿನಲ್ಲಿ ಪ್ರಶ್ನೆಗಳೇ ಮೊದಲಿದ್ದರೂ ಉತ್ತರದಲ್ಲಿರುವ ನಿಚಾಯ್ಯ ವಾಕ್ಯವು ಪ್ರಕೃತಿಪರವಾದುದು ಎಂದು ಶಂಕಿಸಿರುವುದರಿಂದ ಅದನ್ನು ನಿರಾಕರಿಸುವ ಸಲುವಾಗಿ ಉಪನ್ಯಾಸವನ್ನು ಮೊದಲು ಸೂತ್ರದಲ್ಲಿ ಹೇಳಲಾಗಿದೆ. 'ತ್ರಯಾಣಾ-ಮೇವ ಚ' ಎಂದಿಷ್ಟೇ ಸಾಕಾಗಿದ್ದರೂ 'ಏವಂ' ಎಂದು ಹೇಳಿರುವುದು ಮೂರರ ಮಧ್ಯದಲ್ಲಿ ಪ್ರಧಾನಕ್ಕೆ ಸೇರ್ಪಡೆಯಿಲ್ಲ ಎಂದು ತೋರಿಸುವ ಸಲುವಾಗಿ ಉಪನ್ಯಾಸ ಮತ್ತು ಪ್ರಶ್ನೆಗಳ ಪ್ರಕಾರತ್ರಯವನ್ನು ಹೇಳಲು. ಉಪನ್ಯಾಸವೂ ಪ್ರಶ್ನೆಮಾಡಿದ ಮೂರು ವಿಷಯಗಳನ್ನೇ ಕುರಿತದ್ದು ಎಂದು ಸಾಧಿಸುವ ಸಲುವಾಗಿ ಪ್ರಶ್ನೆಗಳನ್ನು ಉಲ್ಲೇಖಿಸಲಾಗಿದೆ.

ಅವ್ಯಕ್ತತ್ವವೆಂಬ ಅವ್ಯಕ್ತಶಬ್ದದ ಪ್ರವೃತ್ತಿನಿಮಿತ್ತವು ಬ್ರಹ್ಮನಲ್ಲಿದ್ದರೂ ಆ ಶಬ್ದದ ಪ್ರಚುರ ಪ್ರಯೋಗವು ಬ್ರಹ್ಮನ ವಿಷಯದಲ್ಲಿ ಇಲ್ಲದಿರುವುದರಿಂದ ಅವ್ಯಕ್ತ ಶಬ್ದದ ಮುಖ್ಯವಾಚ್ಯನು ಬ್ರಹ್ಮನಲ್ಲ ಎಂಬ ಆಕ್ಷೇಪಕ್ಕೆ ಸಮಾಧಾನ ನೀಡುವ ಸೂತ್ರ—

ಓಂ ಮಹದ್ವಚ್ಚ ಓಂ (೧-೪-೮)

**ಸೂತ್ರಾರ್ಥ**

'ಚ' ಶಬ್ದದಿಂದ 'ಅವ್ಯಕ್ತಾದಿ ಶಬ್ದವಾಚ್ಯನೂ ಬ್ರಹ್ಮನೇ' ಎಂದು ಸಮುಚ್ಚಯ ಮಾಡಿಕೊಳ್ಳಬೇಕು. ಮಹದ್ವತ್–ಬ್ರಹ್ಮನು ಮಹಚ್ಛಬ್ದವಾಚ್ಯನು ಹೇಗೋ ಹಾಗೆ

वत्त्वेन ब्रह्मणि तद्धीनोऽपि "महान्तं विभुमात्मानम्" इत्यादौ यथा महत्त्वरूपतत्प्रवृत्तिनिमित्तसत्त्वान्मुख्यः तथाऽव्यक्तादिशब्दोऽन्यत्र प्रसिद्ध्या ब्रह्मणि तदभावेऽपि निमित्तातिशयान्मुख्य इति भावः ।

महच्छब्देऽपि विप्रतिपन्नं प्रति दृष्टान्तान्तरमाह—

॥ ॐ चमसवदविशेषात् ॐ ॥ १-४-९

अव्यक्तादि ब्रह्मैवेत्यस्ति । चमसशब्दो यज्ञपात्रे प्रसिद्धोऽपि यथा शिरसि मुख्यस्तथाऽव्यक्तादिरपि ब्रह्मैव तत्र मुख्य इत्यर्थः । ननु "इदं तच्छिर एष ह्यर्वाग्बिलश्चमस ऊर्ध्वबुध्न" इत्यनुशासनसत्त्वात्तस्य तथात्वेऽप्यत्र कुत इत्यत उक्तम्—अविशेषात् । "नामानि सर्वाणि" इति श्रुतेः "इदं तच्छिरः" इति श्रुत्या अविशेषात्

---

ಎಂದು ಅರ್ಥ. ಮಹಚ್ಛಬ್ದದ ಪ್ರಚುರಪ್ರಯೋಗವು ಮಹತ್ತ್ವದ ಬಗ್ಗೆ ಇದ್ದು ಬ್ರಹ್ಮನಲ್ಲಿ ಇಲ್ಲದಿದ್ದರೂ, ಮಹಚ್ಛಬ್ದದ ಪ್ರವೃತ್ತಿನಿಮಿತ್ತವಾದ ಮಹತ್ತ್ವವು ಬ್ರಹ್ಮನಲ್ಲಿರುವುದರಿಂದ 'ಮಹಾಂತಂ ವಿಭುಮಾತ್ಮಾನಂ' (ಕಠ. ೨-೨೨) ಇತ್ಯಾದಿ ಶ್ರುತಿಗಳಲ್ಲಿ ಮಹಚ್ಛಬ್ದದ ಮುಖ್ಯವಾಚ್ಯನು ಬ್ರಹ್ಮನೇ ಆಗಿರುವಂತೆ ಅವ್ಯಕ್ತಾದಿ ಶಬ್ದಗಳು ಇತರ ಕಡೆಗಳಲ್ಲಿ ಪ್ರಸಿದ್ಧವಾಗಿದ್ದರೂ, ಬ್ರಹ್ಮನಲ್ಲಿ ಆ ಪ್ರಸಿದ್ಧಿ ಇಲ್ಲದಿದ್ದರೂ, ಅವ್ಯಕ್ತತ್ವವೆಂಬ ಪ್ರವೃತ್ತಿನಿಮಿತ್ತವು ಬ್ರಹ್ಮನಲ್ಲಿ ಅತಿಶಯವಾಗಿ ಇರುವುದರಿಂದ ಅವ್ಯಕ್ತಶಬ್ದದ ಮುಖ್ಯಾರ್ಥನು ಬ್ರಹ್ಮನೇ ಎಂದು ಭಾವ.

ಮಹಚ್ಛಬ್ದದ ವಿಷಯದಲ್ಲೂ ವಿಪ್ರತಿಪತ್ತಿ ಇರುವವನನ್ನು ಕುರಿತು ಇನ್ನೊಂದು ದೃಷ್ಟಾಂತವನ್ನು ಹೇಳುವ ಸೂತ್ರ—

ಓಂ ಚಮಸವದವಿಶೇಷಾತ್ ಓಂ (೧-೪-೯)

**ಸೂತ್ರಾರ್ಥ**

'ಅವ್ಯಕ್ತಾದಿಃ ಬ್ರಹ್ಮೈವ' ಎಂಬ ಪದಗಳನ್ನು ಅಧ್ಯಾಹಾರಮಾಡಿಕೊಳ್ಳಬೇಕು. 'ಚಮಸ' ಶಬ್ದವು ಯಜ್ಞಪಾತ್ರದಲ್ಲಿ ಪ್ರಸಿದ್ಧವಾಗಿದ್ದರೂ ಶಿರಸ್ಸು ಎಂಬ ಅರ್ಥದಲ್ಲಿ ಹೇಗೆ ಮುಖ್ಯವೋ ಹಾಗೆ ಅವ್ಯಕ್ತಾದಿ ಶಬ್ದಗಳೂ, ಬ್ರಹ್ಮೈವ–ಬ್ರಹ್ಮನಲ್ಲೇ

तत्साम्यात् । अस्या अप्यनुशासनरूपत्वादिति यावत् । समन्वयस्य गुणपूर्त्यर्थत्वेऽप्यत्र दोषवाचिनां तदुक्तिः "प्राण ऋच इत्येव विद्यात्"

ಮುಖ್ಯ ಎಂದು ಅರ್ಥ[1] 'ಇದಂ ತಚ್ಛಿರ ಏಷ ಹ್ಯರ್ವಾಗ್‌ಬಿಲಶ್ಚಮಸ ಊರ್ಧ್ವ-ಬುಧ್ನಃ' ಎಂದು ಅನುಶಾಸನವಿರುವುದರಿಂದ ಚಮಸಶಬ್ದವು ಶಿರಸ್ಸು ಎಂಬ ಅರ್ಥದಲ್ಲಿ ಮುಖ್ಯವಾಗಬಹುದಾದರೂ ಪ್ರಕೃತಿ ಅವ್ಯಕ್ತಾದಿಶಬ್ದಗಳು ಬ್ರಹ್ಮನಲ್ಲಿ ಮುಖ್ಯ ವೇಕಾಗಬೇಕು ಎಂಬ ಆಶಂಕೆಗೆ ಉತ್ತರ—ಅವಿಶೇಷಾತ್—'ನಾಮಾನಿ ಸರ್ವಾಣಿ' ಎಂಬ ಶ್ರುತಿಗೆ 'ಇದಂ ತಚ್ಛಿರಃ' ಎಂಬ ಶ್ರುತಿಯಿಂದ, ಅವಿಶೇಷಾತ್— ಸಾಮ್ಯವಿರು ವುದರಿಂದ. 'ನಾಮಾನಿ ಸರ್ವಾಣಿ' ಎಂಬ ಶ್ರುತಿಯೂ ಅನುಶಾಸನರೂಪವಾದುದರಿಂದ ಎಂದು ಭಾವ.[2]

## ದೋಷವಾಚಕ ಶಬ್ದಗಳಿಗೂ ಭಗವಂತನಲ್ಲಿ ಸಮನ್ವಯ ಹೇಳುವುದರ ಉದ್ದೇಶ

ಬ್ರಹ್ಮನ ಗುಣಪೂರ್ಣತ್ವಸಿದ್ಧಿಯೇ ಸಮನ್ವಯದ ಉದ್ದೇಶವಾದರೂ ದೋಷ ವಾಚಕಶಬ್ದಗಳಿಗೂ ಸಮನ್ವಯವನ್ನು ಹೇಳಿರುವುದು 'ಪ್ರಾಣ ಋಚ ಇತ್ಯೇವ

1. ಬೃಹದಾರಣ್ಯಕದ ನಾಲ್ಕನೆ ಅಧ್ಯಾಯದ ಎರಡನೆ ಬ್ರಾಹ್ಮಣದಲ್ಲಿ ರುದ್ರಾದಿದೇವತೆಗಳು ಅಕ್ಷಿಸ್ಥನಾದ ಪ್ರಾಣನನ್ನು ಉಪಾಸನೆ ಮಾಡುವುದರ ಪ್ರಸ್ತಾಪ ಬಂದಿದೆ. ಈ ವಿಷಯದಲ್ಲಿ ಸಂವಾದಿಯಾದ ಮಂತ್ರವನ್ನು ಉದಾಹರಿಸುವುದಾಗಿ ಉಪನಿಷತ್ತು 'ತದೇಷ ಶ್ಲೋಕೋ ಭವತಿ' ಎಂದು ಹೇಳಿ 'ಅರ್ವಾಗ್‌ಬಿಲಶ್ಚಮಸ ಊರ್ಧ್ವಬುಧ್ನಃ ತಸ್ಮಿನ್ ಯಶೋ ನಿಹಿತಂ ವಿಶ್ವರೂಪಂ' ಇತ್ಯಾದಿಯಾಗಿ ಮಂತ್ರವನ್ನು ಉದಾಹರಿಸುತ್ತದೆ. ಅನಂತರ ಉಪನಿಷತ್ತೇ ಈ ಮಂತ್ರದ ಒಂದೊಂದು ಪಾದವನ್ನು ವ್ಯಾಖ್ಯಾನ ಮಾಡುತ್ತದೆ. 'ಇದಂ ತಚ್ಛಿರಃ ಏಷ ಹ್ಯರ್ವಾಗ್‌ಬಿಲಶ್ಚಮಸ ಊರ್ಧ್ವಬುಧ್ನಃ' ಎಂಬ ಉಪನಿಷದ್ವಾಕ್ಯ ಮಂತ್ರದ ಮೊದಲನೆಯ ಪಾದದ ವ್ಯಾಖ್ಯಾನ. 'ಅರ್ವಾಗ್‌ಬಿಲಶ್ಚಮಸ ಊರ್ಧ್ವಬುಧ್ನಃ' ಎಂದು ಮಂತ್ರದ ಪ್ರಥಮಪಾದದಲ್ಲಿ ಹೇಳಿದುದು 'ಇದಂ ತಚ್ಛಿರಃ' ಕಣ್ಣಿಗೆ ಕಾಣುವ ಈ ಶಿರಸ್ಸು ಎಂದು ಉಪನಿಷತ್ತಿನ ಅರ್ಥ. ಚಮಸವೆಂದರೆ ಯಜ್ಞಪಾತ್ರೆ. ಅದು ಶಿರಸ್ಸಾಗುವುದು ಹೇಗೆ ಎಂಬ ಪ್ರಶ್ನೆಗೆ ಚಮಸಪಾತ್ರೆಯ ಲಕ್ಷಣ ಶಿರಸ್ಸಿನಲ್ಲಿರು ವುದರಿಂದ ಎಂದು ಉಪನಿಷತ್ತಿನ ಸಮಾಧಾನ. ಚಮಸಪಾತ್ರವು ಹೇಗೆ ಅರ್ವಾಗ್‌ಬಿಲ ಎಂದರೆ ಕೆಳಭಾಗದಲ್ಲಿ ಮುಖವುಳ್ಳದ್ದೂ ಮತ್ತು ಊರ್ಧ್ವಬುಧ್ನಃ ಅಂದರೆ ಮೇಲ್ಭಾಗದಲ್ಲಿ ವರ್ತುಲವೂ ಕಠಿನವೂ ಆದ ಆಕಾರವುಳ್ಳದ್ದೂ ಆಗಿದೆಯೋ ಹಾಗೆಯೇ ಶಿರಸ್ಸೂ ಇರುವುದರಿಂದ ಚಮಸ ಶಬ್ದದ ಮುಖ್ಯಾರ್ಥ ಶಿರಸ್ಸೆಂದು ಉಪನಿಷತ್ತಿನ ಭಾವ.

2. ಚಮಸ ಶಬ್ದವು ಯಜ್ಞಪಾತ್ರೆ ಎಂಬ ಅರ್ಥದಲ್ಲೇ ಪ್ರಸಿದ್ಧವಾಗಿದ್ದರೂ 'ಇದಂ ತಚ್ಛಿರಃ ಏಷ ಹ್ಯರ್ವಾಗ್‌ಬಿಲಃ' ಇತ್ಯಾದಿ ಉಪನಿಷತ್ತಿನ ಆದೇಶದಂತೆ ಚಮಸ ಶಬ್ದದ ಮುಖ್ಯಾರ್ಥ ಶಿರಸ್ಸು ಎಂದು ಒಪ್ಪಬೇಕೋ ಹಾಗೆಯೇ ಅವ್ಯಕ್ತಾದಿ ಶಬ್ದಗಳು ಬೇರೆಡೆಯಲ್ಲೇ ಪ್ರಸಿದ್ಧ ವಾಗಿದ್ದರೂ 'ನಾಮಾನಿ ಸರ್ವಾಣಿ ಯಮಾವಿಶಂತಿ' ಇತ್ಯಾದಿ ಶ್ರುತಿಯೂ ಎಲ್ಲ ಶಬ್ದಗಳಿಗೂ ಭಗವಂತನೇ ಮುಖ್ಯಾರ್ಥವೆಂದು ಆದೇಶ ನೀಡುತ್ತಿರುವುದರಿಂದ ಅದನ್ನು ಅಂಗೀಕರಿಸಬೇಕೆಂದು ಭಾವ.

इत्यादौ सर्वशब्दवाच्यत्वस्यापि मुमुक्षुज्ञेयत्वोक्तेरिति बोध्यम् । स्पष्टमेतदग्रे कल्पनेत्यत्र ॥ १ ॥

ज्योतिरधिकरणम्—२

## ॥ ॐ ज्योतिरुपक्रमात्तु तथा ह्यधीयत एके ॐ ॥ १-४-१०

अत्र सर्वे शब्दा वर्णपदादिरूपेण समन्वीयन्ते । तत्त्वित्यस्ति । तुरेव । ल्यब्लोपनिमित्ता पञ्चमी । हिर्हेतौ । "ज्योतिषा यजेत" इत्युक्तज्योतिरादिः तत्तु परममुख्यवृत्त्या ब्रह्मैव । न तु कर्मादिः । कुतः ? हि यस्मादेके शाखिनः, तदित्यावर्तते, तद्ब्रह्म तथा सर्वशब्द-

---

ವಿದ್ಯಾತ್ ' ಇತ್ಯಾದಿ ಶ್ರುತಿಗಳಲ್ಲಿ ಮುಮುಕ್ಷುವು ಸರ್ವಶಬ್ದವಾಚ್ಯತ್ವವನ್ನೂ ತಿಳಿಯಬೇಕು ಎಂದು ಹೇಳಿರುವುದರಿಂದ ಎಂದು ಗ್ರಹಿಸಬೇಕು.1 ಮುಂದೆ 'ಕಲ್ಪನೋಪದೇಶಾಚ್ಚ ಮಧ್ವಾದಿಪದವಿರೋಧಃ' (ಬ್ರ. ಸೂ. ೧-೪-೧೧) ಎಂಬಲ್ಲಿ ಈ ವಿಷಯವು ಸ್ಪಷ್ಟವಾಗುತ್ತದೆ.

ಜ್ಯೋತಿರುಪಕ್ರಮಾಧಿಕರಣ—೨

## ಓಂ ಜ್ಯೋತಿರುಪಕ್ರಮಾತ್ತು ತಥಾ ಹ್ಯಧೀಯತ ಏಕೇ ಓಂ (೧–೪–೧೦)

### ಅಧಿಕರಣದ ಉದ್ದೇಶ ಮತ್ತು ಸೂತ್ರಾರ್ಥ

ಈ ಅಧಿಕರಣದಲ್ಲಿ ವರ್ಣ, ಪದ ಇತ್ಯಾದಿ ಸಕಲಶಬ್ದಗಳ ಸಮನ್ವಯವನ್ನು ಮಾಡಲಾಗುವುದು. 'ತತ್ ತು' ಎಂಬ ಪದಗಳು ಅನುವೃತ್ತಿಗೊಳ್ಳುತ್ತವೆ. 'ತು' ಶಬ್ದಕ್ಕೆ ಏವ ಎಂದು ಅರ್ಥ. ಲ್ಯಪ್ ಪ್ರತ್ಯಯದ ಲೋಪದಿಂದಾಗಿ ಪಂಚಮೀ-

---

1. 'ತಾ ವಾ ಏತಾಃ ಸರ್ವಾ ಋಚಃ ಸರ್ವೇ ವೇದಾಃ ಸರ್ವೇ ಘೋಷಾಃ ಏಕೈವ ವ್ಯಾಹೃತಿಃ ಪ್ರಾಣ ಏವ ಪ್ರಾಣ ಋಚ ಇತ್ಯೇವ ವಿದ್ಯಾತ್ ' (ಐ. ಆ. ೨–೩) ಎಂಬಲ್ಲಿ ಭಗವಂತನನ್ನು ಸರ್ವಶಬ್ದವಾಚ್ಯನೆಂದು ಮುಮುಕ್ಷುಗಳು ತಿಳಿಯಬೇಕೆಂದು ಹೇಳಿದೆ ಎಂದು ಭಾವ.

2. ಲ್ಯಬ್‌ಲೋಪೇ ಕರ್ಮಣ್ಯಧಿಕರಣೇ ಚ ಎಂದು ವಾರ್ತಿಕ.

वाच्यत्वेन "ता वा एतास्सर्वा ऋचः" इत्यादिनाऽधीयते पठन्ति तस्मादित्यर्थः । कया वृत्त्येत्यत उक्तम्—उपक्रमात्त्विति । उपक्रमं विधायैव । "एष इमं लोकमभ्यार्चत्" इत्युपक्रम्यैव "ता वा एता" इति अधीयत इति उपलक्षणत्वेन कांश्चिदृष्यादिशब्दान्

ವಿಭಕ್ತಿಯು ಬಂದಿದೆ. 'ಹಿ' ಶಬ್ದವು ಹೇತ್ವರ್ಥಕವಾದುದು. 'ಜ್ಯೋತಿಷಾ ಯಜೇತ' ಎಂಬಲ್ಲಿ ಹೇಳಿರುವ ಜ್ಯೋತಿರಾದಿಗಳು, ತತ್ತು–ಪರಮಮುಖ್ಯವೃತ್ತಿಯಿಂದ[1] ಬ್ರಹ್ಮನೇ, ಕರ್ಮ ಮೊದಲಾದುವಲ್ಲ. ಏಕೆಂದರೆ, ಹಿ–ಯಾವ ಕಾರಣದಿಂದ, ಏಕೇ–ಕೆಲವು ಶಾಖಿಗಳು—'ತತ್' ಪದವನ್ನು ಆವೃತ್ತಿಮಾಡಿಕೊಳ್ಳಬೇಕು—ತತ್–ಬ್ರಹ್ಮನನ್ನು, ತಥಾ–ಸರ್ವಶಬ್ದವಾಚ್ಯನೆಂದು, ಅಧೀಯತೇ–ಪಠಿಸುವರೋ ಆ ಕಾರಣದಿಂದ ಎಂದು ಅರ್ಥ. ಯಾವ ವೃತ್ತಿಯಿಂದ ಎಂಬ ಆಶಂಕೆಗೆ ಉತ್ತರ—'ಉಪಕ್ರಮಾತ್ತು' ಎಂದು ಉಪಕ್ರಮವನ್ನು ಮಾಡಿದ ಕೂಡಲೇ—[2]'ಏಷ ಇಮಂ ಅಭ್ಯಾರ್ಚತ್ ಎಂದು ಪ್ರಾರಂಭಿಸಿ ಕೂಡಲೇ 'ತಾ ವಾ ಏತಾ' ಎಂದು ಪಠಿಸುತ್ತಾರೆ. ಉಪಲಕ್ಷಣವಾಗಿ ಕೆಲವು ಋಷ್ಯಾದಿವಾಚಕ ಶಬ್ದಗಳನ್ನು ಬ್ರಹ್ಮನಲ್ಲಿ ಯೌಗಿಕವೆಂದು ಹೇಳುವ ಮೂಲಕ ಪ್ರಾರಂಭಿಸಿ ಸರ್ವಶಬ್ದಗಳೂ ಭಗವಂತನನ್ನು ಹೇಳುವವೆಂದು ಹೇಳಿರುವುದರಿಂದ ಮಹಾಯೋಗ, ವಿದ್ವದ್ರೂಢಿ ವೃತ್ತಿಗಳಿಂದ ಬ್ರಹ್ಮನು ಸಕಲಶಬ್ದವಾಚ್ಯನೆಂದು ಭಾವ.

1. ಪದ ಮತ್ತು ಅರ್ಥಗಳ ಸಂಬಂಧಕ್ಕೆ ವೃತ್ತಿ ಎಂದು ಹೆಸರು. ವ್ಯವಹಾರದ ದೃಷ್ಟಿಯಿಂದ ಜ್ಯೋತಿರಾದಿ ಪದಗಳ ಮುಖ್ಯಾರ್ಥವು ಆಯಾ ಕರ್ಮಾದಿಗಳಾಗಿದ್ದರೂ ಪರಮಮುಖ್ಯವೃತ್ತಿಯಿಂದ ಬ್ರಹ್ಮನೇ ಆ ಪದಗಳ ಅರ್ಥವೆಂದು ಭಾವ.

2. 'ಏಷ ಇಮಂ ಲೋಕಂ ಅಭ್ಯಾರ್ಚತ್' — ಐತರೇಯದ ದ್ವಿತೀಯಾರಣ್ಯಕದ ದ್ವಿತೀಯಾಧ್ಯಾಯದಲ್ಲಿ ವಿಷ್ಣುವಿಗೆ ಸರ್ವದೇಹಾಂತರ್ಯಾಮಿತ್ವವನ್ನು ಮೇಲಿನ ಮಂತ್ರದಿಂದ ಹೇಳಲಾಗಿದೆ. ಅಪೂರ್ಣನಿಗೆ ಸರ್ವದೇಹಾಂತರ್ಯಾಮಿತ್ವವು ಅನುಪಪನ್ನವಾದ್ದರಿಂದ ವಿಷ್ಣುವಿಗೆ ಗುಣಪೂರ್ಣತ್ವವನ್ನು ಹೇಳುವುದಕ್ಕೋಸ್ಕರ ಸರ್ವಶಬ್ದವಾಚ್ಯತ್ವವನ್ನೂ ಇಲ್ಲಿ ಹೇಳಲಾಗಿದೆ. ಪ್ರಾರಂಭದಲ್ಲಿ, ಮಧುಚ್ಛಂದ ಮೊದಲಾದ ನೂರು ಋಷಿಗಳ ಹೆಸರೆಂದು ಪ್ರಸಿದ್ಧವಾದ ಶತರ್ಚಿ ಶಬ್ದದ ಸಮನ್ವಯವನ್ನು ಉಪನಿಷತ್ತಿನಲ್ಲಿ ತೋರಿಸಲಾಗಿದೆ. ಇಮಂ ಲೋಕಂ ಎಂದರೆ ಬ್ರಹ್ಮಾದಿ ಸಕಲರ ಶರೀರಗಳನ್ನು ಪ್ರವೇಶಿಸಿ ನೂರು ವರ್ಷಗಳಕಾಲ ಇದ್ದುದರಿಂದ ವಿಷ್ಣುವನ್ನು ಶತರ್ಚಿಯೆಂದು ವಿದ್ವಾಂಸರು ಹೇಳುವರೆಂದೂ ಹೀಗೆಯೇ ಸಕಲ ಋಷಿವಾಚಕ ಶಬ್ದಗಳನ್ನೂ ವಿಷ್ಣುವಿನಲ್ಲಿ ಸಮನ್ವಯಿಸಬೇಕೆಂದು ತಿಳಿಸಿ ಈ ಕೆಲವು ಶಬ್ದಗಳಷ್ಟೇ ಅಲ್ಲದೆ ಸಕಲ ವರ್ಣಪದಾತ್ಮಕ ಶಬ್ದಗಳಿಗೂ ವಿಷ್ಣುವೇ ಮುಖ್ಯಾರ್ಥವೆಂದು 'ತಾ ವಾ ಏತಾಃ ಸರ್ವಾ ಋಚಃ' ಇತ್ಯಾದಿ ಉಪನಿಷದ್ವಾಕ್ಯದಲ್ಲಿ ಹೇಳಲಾಗಿದೆ. ಆದ್ದರಿಂದ ಸರ್ವಶಬ್ದವಾಚ್ಯತ್ವವು ಭಗವಂತನಲ್ಲಿ ಸಿದ್ಧವಾಗುವುದೆಂದು ಭಾವ.

ब्रह्मणि यौगिकत्वाद्युक्तयोपक्रम्य सर्वशब्दानां तन्निष्ठतोक्तेर्महायोग-रूढिवृत्त्या तद्वाचित्वमिति भावः। श्रुतौ वसन्तादेरादित्वेऽपि प्रधान-कर्मवाचित्वेन प्राधान्यादन्योपलक्षणत्वेन ज्योतिरुक्तिः। महायोग-विद्वद्रूढ्योः प्रदर्शनायोपक्रमात्त्वित्युक्तिः।

ननु कथं ज्योतिरादिसर्वशब्दवाच्यं ब्रह्म? कर्मक्रमादिविरोधात् व्युत्पत्त्यसम्भवाच्चेत्यत आह—

## ॥ ॐ कल्पनोपदेशाच्च मध्वादिवदविरोधः ॐ ॥
## १-४-११

---

ಸೂತ್ರದಲ್ಲಿ 'ಜ್ಯೋತಿಃ' ಮತ್ತು 'ಉಪಕ್ರಮಾತ್ತು' ಎಂಬ ಪದಗಳ ವೈಶಿಷ್ಟ್ಯ.

[1]ಶ್ರುತಿಯಲ್ಲಿ ವಸಂತ ಮೊದಲಾದ ಪದಗಳೇ ಪ್ರಾರಂಭದಲ್ಲಿದ್ದರೂ [2]ಪ್ರಧಾನ ಕರ್ಮವಾಚಕವಾದ ಪ್ರಯುಕ್ತ ಪ್ರಾಧಾನ್ಯವಿರುವುದರಿಂದ ಇತರ ಪದಗಳಿಗೆ ಉಪ-ಲಕ್ಷಣವಾಗಿ ಜ್ಯೋತಿಃಶಬ್ದವನ್ನು ಹೇಳಲಾಗಿದೆ. [3]ಮಹಾಯೋಗ ಮತ್ತು ವಿದ್ವದ್ರೂಢಿಗಳನ್ನು ಪ್ರದರ್ಶಿಸುವ ಸಲುವಾಗಿ 'ಉಪಕ್ರಮಾತ್ತು' ಎಂದು ಹೇಳಲಾಗಿದೆ.

ಕರ್ಮ, ಕ್ರಮ ಮೊದಲಾದುವುಗಳು ಇಲ್ಲದಂತಾಗುವುದರಿಂದ ಮತ್ತು ಶಬ್ದಗಳಿಗೆ ಬೇರೆ ಅರ್ಥವೇ ಇಲ್ಲದಿದ್ದಲ್ಲಿ ಅವುಗಳಿಗೆ ಬ್ರಹ್ಮನಲ್ಲಿ ವ್ಯುತ್ಪತ್ತಿಯುಂಟಾಗಲೂ ಸಾಧ್ಯವಿಲ್ಲವಾದ್ದರಿಂದ ಬ್ರಹ್ಮನು ಜ್ಯೋತಿರಾದಿ ಸರ್ವಶಬ್ದವಾಚ್ಯನೆಂದು ಹೇಳುವುದು ಹೇಗೆ ಎಂಬ ಆಶಂಕೆಗೆ ಸಮಾಧಾನ ನೀಡುವ ಸೂತ್ರ—

## ಓಂ ಕಲ್ಪನೋಪದೇಶಾಚ್ಚ ಮಧ್ವಾದಿವದವಿರೋಧಃ ಓಂ
## (೧-೪-೧೧)

---

1. 'ವಸಂತೇ ವಸಂತೇ ಜ್ಯೋತಿಷಾ ಯಜೇತ' ಎಂಬ ಶ್ರುತಿಯಲ್ಲಿ.

2. ಜ್ಯೋತಿಷ್ಟೋಮವೆಂಬ ಪ್ರಧಾನಯಾಗರೂಪವಾದ ಕರ್ಮ.

3. ಐತರೇಯದ ದ್ವಿತೀಯಾರಣ್ಯಕದ ದ್ವಿತೀಯಾಧ್ಯಾಯದ ಉಪಕ್ರಮದಲ್ಲೇ 'ತಂ ಯಚ್ಛತಂ ವರ್ಷಾಣ್ಯಭ್ಯಾರ್ಚತ್ ತಸ್ಮಾತ್ ಶತರ್ಚಿನ ಇತ್ಯಾಚಕ್ಷತೇ' ಎಂದು ಶತರ್ಚಿಶಬ್ದಕ್ಕೆ ಮಹಾಯೋಗ ವಿದ್ವದ್ರೂಢಿಗಳನ್ನು ತೋರಿಸಿ 'ತಾ ವಾ ಏತಾಃ' ಇತ್ಯಾದಿಯಾಗಿ ಸಕಲ ಶಬ್ದವಾಚ್ಯತ್ವವನ್ನು ಹೇಳಿರುವುದರಿಂದ ಸಕಲಶಬ್ದಗಳಿಗೂ ಬ್ರಹ್ಮನಲ್ಲಿ ಮಹಾಯೋಗ ವಿದ್ವದ್ರೂಢಿಗಳು ಸಿದ್ಧವಾಗುವುವೆಂದು ಭಾವ.

च एव समुच्चये वा । कल्पनेति तन्त्रम् । कल्पनां क्लृप्तिम् । लोकसिद्धरूढ्यादिवृत्तिक्लृप्तिमुपेत्यैव कल्पनया व्युत्पादनेन लोकक्लृप्त-महायोगवृत्तेर्व्युत्पादनेन सर्वशब्दवाच्यत्वेन "ता वा" इत्यादि-नोपदेशात् । कल्पनायाः सर्वशब्दवाच्यत्वेनोपासनायाः "प्राण ऋच इत्येव विद्यात्" इत्यादावुपदेशादविरोधश्च । न केवलं साधकमस्ति, कर्माद्यननुष्ठानविरोधश्च नेत्यर्थः । मध्वादिवत् । यथा "असावादित्यो देवमधु" इति मधुशब्दस्यादित्यस्थविष्णौ उपासनार्थमुक्तावपि न क्षौद्रकादौ व्यवहारविरोधस्तद्वदित्यर्थः । एवार्थचशब्दस्य उपेत्यै-वेत्याद्याहृतेनान्वयः । योग्यतया कल्पनापदेन वा उपदेशादेवेति

---

**ಸೂತ್ರಾರ್ಥ**

'ಚ' ಶಬ್ದಕ್ಕೆ ಏವ ಅಥವಾ ಸಮುಚ್ಚಯ ಎಂದು ಅರ್ಥ. 'ಕಲ್ಪನಾ' ಪದವನ್ನು ಅನೇಕಬಾರಿ ಅನುಸಂಧಾನ ಮಾಡಿಕೊಳ್ಳಬೇಕು. ಕಲ್ಪನಾಂ—ಕ್ಲೃಪ್ತಿಯನ್ನು ಅಂದರೆ ಲೋಕದಲ್ಲಿ ಸಿದ್ಧವಾಗಿರುವ ರೂಢಿ ಮೊದಲಾದ ವೃತ್ತಿಗಳ ನಿಯಮವನ್ನು ಒಪ್ಪಿಕೊಂಡೇ, ಕಲ್ಪನಯಾ–ತಿಳಿಸುವುದರಿಂದ ಅಂದರೆ ಲೋಕದಲ್ಲಿ ಸಿದ್ಧವಲ್ಲದ ಮಹಾಯೋಗವೃತ್ತಿಯನ್ನು ತಿಳಿಸುವ ಮೂಲಕ 'ತಾ ವಾ ಏತಾಃ' ಇತ್ಯಾದಿ ಶ್ರುತಿಗಳು ಬ್ರಹ್ಮನನ್ನು ಸರ್ವಶಬ್ದವಾಚ್ಯನೆಂದು ಉಪದೇಶಿಸುವುದರಿಂದ ಮತ್ತು 'ಪ್ರಾಣ ಋಚ ಇತ್ಯೇವ ವಿದ್ಯಾತ್' ಇತ್ಯಾದಿ ಶ್ರುತಿಯಲ್ಲಿ, ಕಲ್ಪನಾಯಾಃ ಅಂದರೆ ಸರ್ವಶಬ್ದವಾಚ್ಯತ್ವೇನ ಭಗವದುಪಾಸನೆಯು ಉಪದೇಶವಿರುವುದರಿಂದ ಕರ್ಮ, ಕ್ರಮ ಮೊದಲಾದವುಗಳು ಇಲ್ಲದಂತಾಗುವ ವಿರೋಧವಿಲ್ಲ. ಬ್ರಹ್ಮನು ಸರ್ವಶಬ್ದ ವಾಚ್ಯನೆಂಬ ವಿಷಯದಲ್ಲಿ ಸಾಧಕಪ್ರಮಾಣವಿರುವುದಷ್ಟೇ ಅಲ್ಲ, ಕರ್ಮಾದಿಗಳ ಅನುಷ್ಠಾನವಿಲ್ಲದಂತಾದೀತು ಎಂಬ ವಿರೋಧವೂ ಇಲ್ಲವೆಂದರ್ಥ. ಮಧ್ವಾದಿವತ್— 'ಅಸಾವಾದಿತ್ಯೋ ದೇವಮಧು'(ಛಾಂ. ೩-೧-೧) ಎಂಬಲ್ಲಿ ಆದಿತ್ಯನಲ್ಲಿರುವ ವಿಷ್ಣುವನ್ನು ಕುರಿತು ಉಪಾಸನೆಗೋಸ್ಕರ ಮಧುಶಬ್ದವನ್ನು ಹೇಳಿದ್ದರೂ ಹೇಗೆ ಜೇನು ಮೊದಲಾದುವುಗಳಲ್ಲಿ ಮಧುಶಬ್ದವನ್ನು ವ್ಯವಹರಿಸಲು ವಿರೋಧವಿಲ್ಲವೋ ಹಾಗೆಯೇ ಉಪಾಸನೆಗೋಸ್ಕರ ಸರ್ವಶಬ್ದಗಳನ್ನು ಬ್ರಹ್ಮನಲ್ಲಿ ಹೇಳಿದ್ದರೂ ಇತರ ಪದಾರ್ಥಗಳಲ್ಲಿ ಆ ಶಬ್ದಗಳನ್ನು ವ್ಯವಹರಿಸಿದರೆ ವಿರೋಧವಿಲ್ಲ ಎಂದು ಅರ್ಥ.

**'ಚ' ಶಬ್ದದ ಅನ್ವಯ**

'ಏವ' ಎಂದು ಅರ್ಥವಿರುವ 'ಚ' ಶಬ್ದವನ್ನು ಅಧ್ಯಾಹಾರಮಾಡಿಕೊಂಡಿರುವ 'ಉಪೇತ್ಯ' (ಅಂಗೀಕರಿಸಿ) ಎಂಬ ಪದದೊಂದಿಗೆ ಅನ್ವಯಿಸಬೇಕು. ಕೆಲವರು

वाऽन्वय इत्येके । तथा चान्यत्रापि वृत्त्यङ्गीकाराद् व्युत्पत्त्यादि युज्यत इति भावः । पूर्वोत्तरनयशेषत्वेऽप्यस्य योगस्यात्र निवेशो व्युत्पत्त्युक्त्यर्थः ॥ २ ॥

पञ्चजनाधिकरणम्—३

## ॥ ॐ न सङ्ख्योपसंग्रहादपि नानाभावादतिरेकाच्च ॐ ॥ १-४-१२

अत्र बहुत्ववाचिशब्दाः समन्वीयन्ते । अपिर्विभागेन विरोध-

---

ಅನ್ವಯಯೋಗ್ಯವಾದ ‘ ಕಲ್ಪನಾ ’ ಪದದ ಜೊತೆಗೆ ಅಥವಾ ‘ ಉಪದೇಶಾತ್ ’ ಎಂಬ ಪದದೊಂದಿಗೆ ಅನ್ವಯಿಸಬೇಕೆಂದು ಹೇಳುವರು. ಒಟ್ಟಿನಲ್ಲಿ ಬ್ರಹ್ಮನನ್ನುಳಿದು ಇತರ ವಸ್ತುಗಳಲ್ಲೂ ಶಬ್ದಗಳ ವೃತ್ತಿಯನ್ನು ಒಪ್ಪಿರುವುದರಿಂದ ಬ್ರಹ್ಮನಲ್ಲಿ ಶಬ್ದಗಳ ವ್ಯುತ್ಪತ್ತಿ ಯುಕ್ತವೆಂದು ಭಾವ.

**ಈ ಸೂತ್ರವನ್ನು ಈ ಅಧಿಕರಣದಲ್ಲಿ ಸೇರಿಸಿರುವ ಉದ್ದೇಶ—**

ಈ ಸೂತ್ರವನ್ನು ಹಿಂದಿನ ಅಥವಾ ಮುಂದಿನ ಅಧಿಕರಣದ ಕೊನೆಗೆ ಸೇರಿಸಬಹುದಾಗಿದ್ದರೂ ಶಬ್ದಗಳಿಗೆ ಬ್ರಹ್ಮನಲ್ಲಿ ವ್ಯುತ್ಪತ್ತಿಯನ್ನು ಹೇಳಲು ಇಲ್ಲಿ ಸೇರಿಸಲಾಗಿದೆ

**ಪಂಚಜನಾಧಿಕರಣ—೩**

## ಓಂ ನ ಸಂಖ್ಯೋಪಸಂಗ್ರಹಾದಪಿ ನಾನಾಭಾವಾದತಿರೇಕಾಚ್ಚ ಓಂ (೧-೪-೧೨)

**ಅಧಿಕರಣದ ಉದ್ದೇಶ ಮತ್ತು ಸೂತ್ರಾರ್ಥ**

[1]ಈ ಅಧಿಕರಣದಲ್ಲಿ ಬಹುತ್ವವಾಚಕ ಶಬ್ದಗಳ ಸಮನ್ವಯವನ್ನು ಮಾಡಲಾಗು

---

1. ಬಹುತ್ವಸಂಖ್ಯಾವಿಶಿಷ್ಟವಸ್ತುವಾಚಕವಾದ ಮತ್ತು ಆಧಾರಾಧೇಯವಾಚಕವಾದ ಶಬ್ದಗಳ ಸಮನ್ವಯ ಈ ಅಧಿಕರಣದ ಉದ್ದೇಶ.

“ ಯಸ್ಮಿನ್ ಪಂಚ ಪಂಚಜನಾ ಆಕಾಶಶ್ಚ ಪ್ರತಿಷ್ಠಿತಃ |
ತಮೇವಂ ಮನ್ಯ ಆತ್ಮಾನಂ ವಿದ್ವಾನ್ ಬ್ರಹ್ಮಾಮೃತೋಽಮೃತವ್ ॥ ”

ಎಂಬ ಬೃಹದಾರಣ್ಯಕದ ವಾಕ್ಯ ಇಲ್ಲಿ ವಿಷಯವಾಕ್ಯ. ಬ್ರಹ್ಮನು ಸರ್ವಶಬ್ದವಾಚ್ಯನಾದಲ್ಲಿ ‘ ಪಂಚ ಪಂಚಜನಾಃ ’ ಎಂಬಲ್ಲಿ ಹೇಳಿರುವ ಬಹುತ್ವಸಂಖ್ಯೆಯಾಗಲೀ, ‘ ಯಸ್ಮಿನ್ ಪಂಚಜನಾಃ ’ ಎಂಬಲ್ಲಿ ಹೇಳಿರುವ ಆಧಾರಾಧೇಯಭಾವವಾಗಲೀ ಒಬ್ಬನೇ ಬ್ರಹ್ಮನಿಗೆ ಸಂಭವಿಸುವುದು ಹೇಗೆ ಎಂದು ಪೂರ್ವಪಕ್ಷ. ಸಿದ್ಧಾಂತ ತಂತ್ರದೀಪಿಕೆಯಲ್ಲಿ ಸ್ಪಷ್ಟ.

ಸರ್ವಶರೀರಗತನಾದ ಪರಮಾತ್ಮನಲ್ಲಿ ಪ್ರತಿಪುರುಷನಲ್ಲಿರುವ ಪ್ರಾಣಾದಿಗಳಿಗೆ ಜನಕವಾದ ಆದ್ದರಿಂದಲೇ ಪಂಚಜನಶಬ್ದವಾಚ್ಯವಾದ ಐದು ಭಗವದ್ರೂಪವಿಶೇಷಗಳು ಆಶ್ರಿತವಾಗಿವೆ. ಹಾಗೆಯೇ ಆಕಾಶಾಖ್ಯ ಭಗವದ್ರೂಪವೂ ಆಕಾಶಾಖ್ಯ ಪ್ರಕೃತಿಯೂ ಆಶ್ರಿತವಾಗಿದೆ. ಆ ಪರಮಾತ್ಮನನ್ನು ನಾನು ತಿಳಿಯುವೆನು. ಹೀಗೆ ಸರ್ವಶಬ್ದವಾಚ್ಯನೂ ಅಮೃತನೂ ಆದ ಬ್ರಹ್ಮನನ್ನು ತಿಳಿದವನು ಅಮೃತತ್ವವನ್ನು ಪಡೆಯುವನು ಎಂದು ಸಿದ್ಧಾಂತದಲ್ಲಿ ಶ್ರುತ್ಯರ್ಥ.

पदाकर्षणार्थः । आधाराधेयभावसमुच्चयार्थो वा । पञ्चजना इति योग्यतयाऽन्वेति । तत्त्वित्यस्ति । "यस्मिन् पञ्च पञ्चजना" इत्युक्तपञ्चपञ्चेति विशेषणयुक्ता जनाः तत्तु ब्रह्मैव परममुख्यवृत्त्या । न प्राणःचक्षुश्रोत्रमनांसि । कुतः ? तदधीनत्वज्ञेयत्वावचनादिविशेषाद्युक्तहेतुभ्यः । अग्रेतनहेतोश्चेति भावः । एवं तर्हि पञ्चेत्युक्तबहुत्वसङ्ख्यादिविरोध इत्यतः सूत्रम्—सङ्ख्योपसङ्ग्रहादपि । पञ्चेति बहुत्वसङ्ख्योपसङ्ग्रहात् यस्मिन्ब्रह्मणीत्युक्ताधाराधेयभावादपि न विरोधः । कुतः ? नानाभावात् । नानाशब्दो भिन्नवाची । नानारूपाणां भावात् सत्त्वादतिरेकाच्च भेदाच्च जना इत्युक्तरूपापेक्षया यस्मिन्नित्युक्तशरीरस्थरूपस्यातिरिक्तत्वाच्चेति द्वयोः क्रमेण निरासः । प्रागुक्तहेतुभिरेवेहापि ब्रह्मत्वसिद्धेः

---

ವುದು. ಹಿಂದಿನ ಸೂತ್ರದ 'ಅವಿರೋಧ' ಪದದಿಂದ 'ವಿರೋಧ' ಪದವನ್ನು ಪ್ರತ್ಯೇಕಿಸಿ ಈ ಸೂತ್ರಕ್ಕೆ ಸೇರಿಸಿಕೊಳ್ಳುವುದು 'ಅಪಿ' ಪದದ ಪ್ರಯೋಜನ. ಅಥವಾ ಆಧಾರಾಧೇಯಭಾವದ ಸಮುಚ್ಚಯವು 'ಅಪಿ' ಪದದ ಅರ್ಥ. ಅನ್ವಯಯೋಗ್ಯವಾದುದರಿಂದ 'ಪಂಚಜನಾಃ' ಎಂಬ ಪದವು ಇಲ್ಲಿ ಅನ್ವಿತವಾಗುತ್ತಿದೆ 'ತತ್ತು' ಎಂಬ ಪದಗಳು ಅನುವೃತ್ತಿಯನ್ನು ಹೊಂದುತ್ತವೆ.

'ಯಸ್ಮಿನ್ ಪಂಚ ಪಂಚಜನಾಃ' (ಬೃ. ೬–೪–೧೭) ಎಂಬಲ್ಲಿ ಹೇಳಿರುವ 'ಪಂಚ ಪಂಚ' ಎಂಬ ವಿಶೇಷಣಸಹಿತರಾದ ಜನಗಳು, ತತ್ತು ಪರಮಮುಖ್ಯವೃತ್ತಿಯಿಂದ ಬ್ರಹ್ಮನೇ; ಪ್ರಾಣ, ಚಕ್ಷು, ಶ್ರೋತ್ರ, ಮನಸ್ಸುಗಳಲ್ಲ ಏಕೆಂದರೆ, ಹಿಂದೆ ಹೇಳಿರುವ ತದಧೀನತ್ವ, ಜ್ಞೇಯತ್ವಾವಚನಾದಿವಿಶೇಷ ಮೊದಲಾದ ಹೇತುಗಳಿಂದ ಮತ್ತು ಮುಂದೆ ಹೇಳುವ ಹೇತುವಿನಿಂದ ಎಂದು ಭಾವ. ಹಾಗಾದಲ್ಲಿ, 'ಪಂಚ' ಎಂಬಲ್ಲಿ ಹೇಳಿರುವ ಬಹುತ್ವಸಂಖ್ಯೆ ಮೊದಲಾದುವುಗಳ ವಿರೋಧ ಬರುವುದು ಎಂಬ ಆಕ್ಷೇಪಕ್ಕೆ ಸಮಾಧಾನ ನೀಡುವ ಸೂತ್ರ—'ಸಂಖ್ಯೋಪಸಂಗ್ರಹಾದಪಿ' 'ಪಂಚ' ಎಂದು ಬಹುತ್ವಸಂಖ್ಯೆಯನ್ನು ಸಂಕ್ಷಿಪ್ತವಾಗಿ ಹೇಳಿರುವುದರಿಂದಾಗಲೀ 'ಯಸ್ಮಿನ್ ಬ್ರಹ್ಮಣಿ' ಎಂಬಲ್ಲಿ ಹೇಳಿರುವ ಆಧಾರಾಧೇಯಭಾವದಿಂದಾಗಲೀ ವಿರೋಧವಿಲ್ಲ. ಏಕೆಂದರೆ, ನಾನಾಭಾವಾತ್- ನಾನಾಶಬ್ದಕ್ಕೆ ಭಿನ್ನ ಎಂದು ಅರ್ಥ. ನಾನಾರೂಪಗಳು ಇರುವುದರಿಂದ, ಅತಿರೇಕಾಚ್ಚ–ಮತ್ತು ಭೇದವಿರುವುದರಿಂದ, 'ಜನಾಃ' ಎಂಬಲ್ಲಿ ಪ್ರತಿಪಾದಿತವಾಗಿರುವ ಭಗವದ್ರೂಪಕ್ಕಿಂತ 'ಯಸ್ಮಿನ್' ಎಂಬಲ್ಲಿ ಹೇಳಿರುವ

बाधकमात्रमुद्धृतम् । एवमग्रेऽपि । अत्र भेदो विशेषो बोध्यः । अत्राविरोधपक्षमनुवर्त्य नेत्यवक्तुं शक्यत्वेऽपि तदुक्तिः सङ्ख्योपसङ्ग्रहादपि "प्राणस्य प्राणम्" इत्यादिषष्ठीनिर्दिष्टप्राणादयो न पञ्चजना नानाभावात् तेषां प्रतिशरीरं नानात्वेन पञ्चत्वायोगात् । न ह्येकस्मिन् देहे एक एव प्राणादिरित्यादिवृत्त्यन्तरं चन्द्रिकोक्तदिशा ज्ञापयितुं सङ्ख्योपसङ्ग्रहादपि यो विरोधः स नेत्यन्वयलाभाय चेति ॥

---

ಶರೀರಸ್ಥಭಗವದ್ರೂಪವು ಅತಿರಿಕ್ತವಾಗಿರುವುದರಿಂದಲೂ ಕೂಡ—ಎಂದು ಎರಡು [1]ಆಕ್ಷೇಪಗಳನ್ನು ಕ್ರಮವಾಗಿ ನಿರಾಕರಿಸಲಾಗಿದೆ. [2]ಹಿಂದೆ ಹೇಳಿದ ಹೇತುಗಳಿಂದಲೇ ಬ್ರಹ್ಮತ್ವವು ಸಿದ್ಧವಾಗುವುದರಿಂದ ಈ ಸೂತ್ರದಲ್ಲಿ ಬ್ರಹ್ಮತ್ವಸಿದ್ಧಿಗೆ ಬಾಧಕವನ್ನು ಮಾತ್ರ ಪರಿಹರಿಸಲಾಗಿದೆ. ಹೀಗೆಯೇ ಮುಂದೆಯೂ ತಿಳಿಯಬೇಕು. ಇಲ್ಲಿ [3]ಭೇದವೆಂದರೆ ವಿಶೇಷವೆಂದು ತಿಳಿಯಬೇಕು.

## ಸೂತ್ರದಲ್ಲಿ 'ನ' ಶಬ್ದದ ಉಪಯುಕ್ತತೆ

ಹಿಂದಿನ ಸೂತ್ರದಿಂದ 'ಅವಿರೋಧಃ' ಎಂಬ ಪದವನ್ನು ಅನುವೃತ್ತಿಮಾಡಿಕೊಂಡು 'ನ' ಶಬ್ದವನ್ನು ಈ ಸೂತ್ರದಲ್ಲಿ ಬಿಡಬಹುದಾಗಿದ್ದಿತು ಆದರೂ, ಸಂಖ್ಯೆಯನ್ನು ಸಂಕ್ಷೇಪಿಸಿ ಹೇಳಿರುವ ಕಾರಣದಿಂದಲೂ 'ಪ್ರಾಣಸ್ಯ ಪ್ರಾಣಂ' ಇತ್ಯಾದಿ ಶ್ರುತಿಯಲ್ಲಿ ಷಷ್ಠೀ ವಿಭಕ್ತ್ಯಂತ ಪ್ರಾಣಾದಿ ಪದಗಳಿಂದ ನಿರ್ದೇಶಿಸಲ್ಪಟ್ಟವರು ಪಂಚಜನರಲ್ಲ ನಾನಾಭಾವಾತ್–ಆ ಪ್ರಾಣಾದಿಗಳು ಪ್ರತಿಶರೀರದಲ್ಲೂ ಭಿನ್ನರಾಗಿರುವುದರಿಂದ ಅವರಲ್ಲಿ ಐದು ಎಂಬ ಸಂಖ್ಯೆ ಯುಕ್ತವಾಗಲಾರದು. ಒಂದು ದೇಹದಲ್ಲಿ ಒಬ್ಬನೇ ಪ್ರಾಣ ಎಂದಿಲ್ಲವಷ್ಟೆ—ಎಂದು ಚಂದ್ರಿಕಾದಲ್ಲಿ ಹೇಳಿರುವಂತೆ ವ್ಯಾಖ್ಯಾನಾಂತರವನ್ನು ಸೂಚಿಸಲು ಮತ್ತು 'ಸಂಖ್ಯೋಪಸಂಗ್ರಹದಿಂದ ಯಾವ ವಿರೋಧ ಬರುವುದೋ ಅದಿಲ್ಲ' ಎಂದು ಅನ್ವಯವನ್ನು ಪಡೆಯಲು 'ನ' ಶಬ್ದವನ್ನು ಸೂತ್ರದಲ್ಲಿ ಸೇರಿಸಲಾಗಿದೆ.

---

1. ಬಹುತ್ವಸಂಖ್ಯೆಯಾಗಲೀ, ಆಧಾರಾಧೇಯಭಾವವಾಗಲೀ ಒಬ್ಬನೇ ಬ್ರಹ್ಮನಿಗೆ ಯುಕ್ತವಲ್ಲ ಎಂಬ ಆಕ್ಷೇಪಗಳನ್ನು.

2. ತದಧೀನತ್ವ ಮೊದಲಾದ ಹೇತುಗಳಿಂದಲೇ.

3. ಪರಮಾತ್ಮನ ರೂಪಗಳಿಗೆ ಭೇದವಿಲ್ಲದಿರುವುದರಿಂದ ಭೇದಪ್ರತಿನಿಧಿಯಾದ ವಿಶೇಷವನ್ನು ಭೇದಶಬ್ದದಿಂದ ಹೇಳಲಾಗಿದೆ ಎಂದು ಭಾವ.

के ते पञ्चत्वाश्रयरूपविशेषाः, कुतश्च हेतुविशेषात्ते ब्रह्मेत्यत आह—

॥ ॐ प्राणादयो वाक्यशेषात् ॐ ॥ १-४-१३

पञ्चजना इत्यस्ति । "प्राणस्य प्राणमुत चक्षुषश्चक्षुः" इत्यादि-द्वितीयान्तनिर्दिष्टप्राणचक्षुःश्रोत्रान्नमनःशब्दिताः पञ्चजनाः "प्राणस्य प्राणम्" इत्यादिवाक्यशेषादित्यर्थः । अत्र प्राणप्राणदत्वादिलिङ्गात् पञ्चजना ब्रह्मरूपविशेषा इत्युक्तं भवति । तेन पञ्चजनस्वरूपोक्तिः व्यर्थेति न शङ्क्यम् । उत्तरार्थत्वाच्च । न ह्येतदनुक्तौ ज्योतिषेत्या-द्युक्तिर्युक्ता ॥

---

ಪಂಚತ್ವಸಂಖ್ಯೆಗೆ ಆಶ್ರಯವಾದ ರೂಪವಿಶೇಷಗಳು ಯಾವುವು ? ಅವುಗಳು ಬ್ರಹ್ಮನೇ ಎಂದು ಹೇಳಲು ಕಾರಣವೇನು ? ಎಂಬ ಪ್ರಶ್ನೆಗೆ ಸಮಾಧಾನ—

## ಓಂ ಪ್ರಾಣಾದಯೋ ವಾಕ್ಯಶೇಷಾತ್ ಓಂ (೧-೪-೧೩)

**ಸೂತ್ರಾರ್ಥ**

'ಪಂಚಜನಾಃ' ಎಂಬ ಪದಗಳನ್ನು ಅಧ್ಯಾಹಾರ ಮಾಡಿಕೊಳ್ಳಬೇಕು. 'ಪ್ರಾಣಸ್ಯ ಪ್ರಾಣಮುತ ಚಕ್ಷುಷಶ್ಚಕ್ಷುಃ' ಇತ್ಯಾದಿಯಾಗಿ ದ್ವಿತೀಯಾವಿಭಕ್ತ್ಯಂತ ಪದಗಳಿಂದ ನಿರ್ದೇಶಿಸಲ್ಪಟ್ಟಿರುವ ಪ್ರಾಣ, ಚಕ್ಷುಸ್, ಶ್ರೋತ್ರ, ಅನ್ನ ಮತ್ತು ಮನಶ್ಶಬ್ದಗಳಿಂದ ಉಕ್ತರಾದವರೇ ಪಂಚಜನಶಬ್ದವಾಚ್ಯರು. 'ಪ್ರಾಣಸ್ಯ ಪ್ರಾಣಂ' ಇತ್ಯಾದಿ ವಾಕ್ಯಶೇಷದಿಂದ ಎಂದು ಅರ್ಥ.

**ಈ ಸೂತ್ರದಲ್ಲಿ ಪಂಚಜನರು ಯಾರೆಂದು ಹೇಳಿದ್ದು ವ್ಯರ್ಥವಲ್ಲ**

ಇಲ್ಲಿ ಪ್ರಾಣನಿಗೂ ಪ್ರಾಣಪ್ರದತ್ವ ಮೊದಲಾದ ಲಿಂಗದಿಂದ ಪಂಚಜನರು ಬ್ರಹ್ಮನ ರೂಪವಿಶೇಷಗಳೆಂದು ಅರ್ಥಾತ್ ಹೇಳಲಾಗಿದೆ. ಇದರಿಂದಾಗಿ ಪಂಚಜನರ ಸ್ವರೂಪವನ್ನು ಇಲ್ಲಿ ಹೇಳಿರುವುದು ವ್ಯರ್ಥ ಎಂಬ ಶಂಕೆಗೆ ಅವಕಾಶವಿಲ್ಲ. ಅಲ್ಲದೆ, ಮುಂದಿನ ಸೂತ್ರಕ್ಕೋಸ್ಕರವಾಗಿಯೂ ಇಲ್ಲಿ ಪಂಚಜನರ ಸ್ವರೂಪವನ್ನು ಹೇಳ

वाजसनेये वाक्यशेषे पञ्चजना न श्रूयन्त इत्यत आह—

## ॥ ॐ ज्योतिषैकेषामसत्यन्ने ॐ ॥ १-४-१४

एकेषां काण्वानां शाखायामन्ने अन्नाख्यरूपे असत्यपि ज्योतिषां ज्योतिरिति प्रागुक्तज्योतिषा पञ्चत्वं बोध्यमित्यर्थः । ज्योतिषेत्येकवचनोक्त्या न षष्ठ्यन्तज्योतिरादेः पञ्चजनत्वमिति सूचितम् । द्वयोरेकार्थत्वं वा अधिकारिभेदात् पञ्चकद्वयं वेति भावः ॥ ३ ॥

---

ಬೇಕಾಗುವುದು. ಈ ಸೂತ್ರದಲ್ಲಿ ಪಂಚಜನರ ಸ್ವರೂಪವನ್ನು ಹೇಳದಿದ್ದಲ್ಲಿ 'ಜ್ಯೋತಿಷಾ' ಇತ್ಯಾದಿ ಮುಂದಿನ ಸೂತ್ರವು ಯುಕ್ತವಾಗಲಾರದಷ್ಟೇ.[1]

ಬೃಹದಾರಣ್ಯಕದ ವಾಕ್ಯಶೇಷದಲ್ಲಿ ಪಂಚಜನರು ಶ್ರುತರಾಗಿಲ್ಲ ಎಂಬ ಆಶಂಕೆಗೆ ಸಮಾಧಾನ—

## ಓಂ ಜ್ಯೋತಿಷೈಕೇಷಾಮಸತ್ಯನ್ನೇ ಓಂ (೧-೪-೧೪)

**ಸೂತ್ರಾರ್ಥ**

ಕೆಲವರ ಅಂದರೆ ಕಾಣ್ವರ ಶಾಖೆಯಲ್ಲಿ ಅನ್ನಾಖ್ಯರೂಪವು ಇಲ್ಲದಿದ್ದರೂ 'ಜ್ಯೋತಿಷಾಂ ಜ್ಯೋತಿಃ' ಎಂದು ಹಿಂದೆ ಹೇಳಿದ ಜ್ಯೋತಿಸ್ಸನ್ನು ಸೇರಿಸುವುದರಿಂದ ಪಂಚತ್ವವನ್ನು ತಿಳಿಯಬೇಕು. ಸೂತ್ರದಲ್ಲಿ 'ಜ್ಯೋತಿಷಾ' ಎಂದು ಏಕವಚನವಿರುವುದರಿಂದ ಷಷ್ಠೀವಿಭಕ್ತ್ಯಂತ ಜ್ಯೋತಿರಾದಿಶಬ್ದವಾಚ್ಯಗಳು ಪಂಚಜನರಲ್ಲ ಎಂದು ಸೂಚಿತವಾಗುವುದು.[2]

---

1. "ಪ್ರಾಣಸ್ಯ ಪ್ರಾಣಮುತ ಚಕ್ಷುಷಶ್ಚಕ್ಷುರುತ ಶ್ರೋತ್ರಸ್ಯ ಶ್ರೋತ್ರಂ ಮನಸೋ ಮನೋ ಯೇ ವಿದುಃ ..." ಎಂದು ಕಾಣ್ವಶಾಖೆಯ ಪಾಠ. ಇಲ್ಲಿ ಅನ್ನಾಖ್ಯರೂಪವನ್ನು ಹೇಳದೇ ಕೇವಲ ನಾಲ್ಕು ರೂಪಗಳನ್ನು ಹೇಳಿದೆ. ಆದ್ದರಿಂದ ಪ್ರಾಣಾದಿ ಪಂಚಜನರು ಬ್ರಹ್ಮನ ರೂಪವಿಶೇಷವೆಂದು ಹೇಳಿದ್ದು ಸರಿಯಲ್ಲ ಎಂಬ ಆಕ್ಷೇಪವನ್ನು ಪರಿಹರಿಸಲು 'ಜ್ಯೋತಿಷಾ' ಇತ್ಯಾದಿ ಮುಂದಿನ ಸೂತ್ರ ಬಂದಿದೆ. ಪ್ರಕೃತಸೂತ್ರದಲ್ಲಿ ಪ್ರಾಣಾದಿಗಳೇ ಪಂಚಜನರು ಎಂದು ಹೇಳಿದಲ್ಲಿ ಮಾತ್ರ ಈ ಆಕ್ಷೇಪ-ಸಮಾಧಾನಗಳು ಯುಕ್ತವಾಗುವುವು. ಆದ್ದರಿಂದ ಈ ಸೂತ್ರದಲ್ಲಿ ಪ್ರಾಣಾದಿಗಳನ್ನು ಪಂಚಜನಶಬ್ದವಾಚ್ಯರೆಂದು ಹೇಳಬೇಕಾಗುವುದು ಎಂದು ಭಾವ.

2. "ಜ್ಯೋತಿಷಾಂ ಜ್ಯೋತಿಃ" (ಬೃ. ೬—೪—೧೬) ಎಂಬಲ್ಲಿ 'ಜ್ಯೋತಿಷಾಂ' ಎಂಬ ಷಷ್ಠ್ಯಂತಪದವು ಬಹುವಚನದಲ್ಲಿದೆ. ಸೂತ್ರದಲ್ಲಿ 'ಜ್ಯೋತಿಷಾ' ಎಂದು ಏಕವಚನಪ್ರಯೋಗವಿರುವುದರಿಂದ ಬಹುವಚನಾಂತಶಬ್ದವಾಚ್ಯ ಜ್ಯೋತಿಸ್ಸು ಪಂಚಜನರಲ್ಲಿ ಸೇರುವುದಿಲ್ಲವೆಂದು ಸೂಚಿತವಾಗುವುದು.

आकाशाधिकरणम्——४

## ॥ ॐ कारणत्वेन चाकाशादिषु यथाव्यपदिष्टोक्तेः ॐ ॥ १-४-१५

अत्रावान्तरकारणत्वलिङ्गं वा तादृशाकाशादिनाम वा समन्वीयते । आकाशादिसमुच्चायकश्चः । कार्यत्वसमुच्चायको वा । आकाशादिष्वित्यावृत्तिः । तत्त्वित्यस्ति । न विरोध इति च । "आत्मन आकाशः

---

**ವಿಭಿನ್ನಶಾಖೆಗಳಲ್ಲಿ ಐದು ವಿಭಿನ್ನರೂಪಗಳನ್ನು ಪಂಚಜನರೆಂದು ಹೇಳಿದ್ದರಲ್ಲಿ ವಿರೋಧವಿಲ್ಲ**

[1] ಜ್ಯೋತಿಶ್ಶಬ್ದ ಮತ್ತು ಅನ್ನಶಬ್ದಗಳಿಗೆ ಒಂದೇ ಅರ್ಥವಿರುವುದು ಅಥವಾ ಅಧಿಕಾರಿಭೇದದಿಂದ ಎರಡು ಬಗೆಯ ಪಂಚರೂಪಗಳನ್ನು ಹೇಳಿದೆ ಎಂದು ಭಾವ.

[2] ಆಕಾಶಾಧಿಕರಣ—೪

## ಓಂ ಕಾರಣತ್ವೇನ ಚಾಕಾಶಾದಿಷು ಯಥಾ ವ್ಯಪದಿಷ್ಟೋಕ್ತೇಃ ಓಂ (೧-೪-೧೫)

**ಅಧಿಕರಣದ ಉದ್ದೇಶ ಮತ್ತು ಸೂತ್ರಾರ್ಥ**

ಈ ಅಧಿಕರಣದಲ್ಲಿ ಅವಾಂತರಕಾರಣತ್ವವೆಂಬ ಲಿಂಗವನ್ನು ಅಥವಾ ಅವಾಂತರ ಕಾರಣವಾಚಿಯಾದ ಆಕಾಶಾದಿ ನಾಮಾತ್ಮಕ ಶಬ್ದವನ್ನು ಸಮನ್ವಯಮಾಡಲಾಗುವುದು. 'ಚ'ಕಾರವು ಆಕಾಶಾದಿಗಳನ್ನು ಸಮುಚ್ಚಯ ಮಾಡುವುದು. ಅಥವಾ ಕಾರ್ಯತ್ವವೆಂಬ ಧರ್ಮದ ಸಮುಚ್ಚಯವನ್ನು ಹೇಳುವುದು. 'ಆಕಾಶಾದಿಷು' ಎಂಬ ಪದವು ಆವೃತ್ತಿಗೊಳ್ಳುವುದು. 'ತತ್ತು' ಎಂಬ ಪದಗಳು ಅನುವೃತ್ತಿಗೊಳ್ಳುವುವು 'ನ ವಿರೋಧಃ' ಎಂಬ ಪದಗಳೂ ಅನುವೃತ್ತಿಗೊಳ್ಳುವುವು. 'ಆತ್ಮನ

---

1 ಮಾಧ್ಯಂದಿನಾಯನ ಶಾಖೆಯಲ್ಲಿ ಪ್ರಾಣ, ಚಕ್ಷುಸ್, ಶ್ರೋತ್ರ, ಮನಸ್ ಮತ್ತು ಅನ್ನ ಎಂಬ ಐದು ರೂಪಗಳನ್ನು ಹೇಳಿದೆ. ಕಾಣ್ವಶಾಖೆಯಲ್ಲಿ ಈ ಐದರಲ್ಲಿ ಅನ್ನಕ್ಕೆ ಬದಲಾಗಿ ಜ್ಯೋತಿಸ್ಸನ್ನು ಹೇಳಿದೆ. ಹೀಗೆ ವಿಭಿನ್ನ ಐದು ರೂಪಗಳನ್ನು ಹೇಳಿದಂತೆ ತೋರಿದರೂ ವಿರೋಧವಿಲ್ಲ ಎಂದು ಅಭಿಪ್ರಾಯ.

2. "ಆತ್ಮನ ಆಕಾಶಃ ಸಂಭೂತಃ ಆಕಾಶಾದ್ವಾಯುಃ" (ತೈ. ೨-೨) ಇತ್ಯಾದಿ ಶ್ರುತಿ ಇಲ್ಲಿ ವಿಷಯವಾಕ್ಯ. ಆಕಾಶ, ವಾಯು ಮೊದಲಾದವುಗಳ ಉತ್ಪತ್ತಿಗೆ ಮೂಲಕಾರಣನಾದ ಆತ್ಮನು ಮಾತ್ರ ಪರಬ್ರಹ್ಮನೆಂದೂ ಅವಾಂತರಕಾರಣವಾಚಿಯಾದ ಆಕಾಶ, ವಾಯು ಮೊದಲಾದ ಶಬ್ದಗಳು ಬ್ರಹ್ಮಪರವಲ್ಲವೆಂದು ಪೂರ್ವಪಕ್ಷ. ಸಿದ್ಧಾಂತ ಸ್ಪಷ್ಟ.

*

सम्भूत" इत्यादौ कारणत्वेन कार्यत्वेन चोक्ताकाशादिश्च परममुख्य-वृत्त्या ब्रह्मैव न केवलं मूलकारणात्मेत्यर्थः । न तु भूतादिः । कुतः? प्रागुक्तहेतुभ्य इत्यर्थः । न च कार्यकारणभावस्य द्युभ्वादिनयरीत्या व्यङ्ग्यव्यञ्जकरूपत्वेऽप्येकस्य विरोध इति शङ्क्यम् । आकाशादिषु स्थितत्वादिति शेषः । न विरोध इत्यर्थः । आकाशाद्युत्पत्तौ तदन्तस्थ-त्वेन तस्याप्यभिव्यक्त्या कार्यत्वं, वाय्वादिस्वरूपव्यक्तिहेतुत्वेन कारणत्वं च युक्तमिति भावः । आकाशादिषु स्थितत्वमेव कुत इत्यत उक्तम्—यथेति । यथा येन प्रकारेणाविदितत्वादिना "स योऽतोऽश्रुत" इत्यादौ व्यपदिष्टस्तस्योक्तेराकाशादिषु "य आकाशे तिष्ठन् यो वायौ तिष्ठन्" इत्यादावित्यर्थः । उक्तेरित्येव वाच्ये यथा व्यपदिष्टेत्युक्तिः

---

ಆಕಾಶಃ ಸಂಭೂತಃ' ಇತ್ಯಾದಿ ಶ್ರುತಿಯಲ್ಲಿ ಮೂಲಕಾರಣನಾದ ಆತ್ಮಮಾತ್ರವಲ್ಲದೇ ಕಾರಣವೆಂದೂ ಕಾರ್ಯವೆಂದೂ ಹೇಳಲಾಗಿರುವ ಆಕಾಶ ಮೊದಲಾದವುಗಳೂ ಪರಮ ಮುಖ್ಯವೃತ್ತಿಯಿಂದ ಬ್ರಹ್ಮನೇ ಎಂದು ಅರ್ಥ ಈ ಆಕಾಶಾದಿಗಳು ಭೂತಾಕಾಶ ಮೊದಲಾದುವಲ್ಲ. ಏಕೆಂದರೆ, ಹಿಂದೆ ಹೇಳಿದ ಹೇತುಗಳಿಂದ ಎಂದು ಅರ್ಥ.

**ಒಬ್ಬನೇ ವ್ಯಂಗ್ಯನೂ ವ್ಯಂಜಕನೂ ಆಗಿರುವುದರಲ್ಲಿ ವಿರೋಧವಿಲ್ಲ**

ಕಾರ್ಯಕಾರಣಭಾವವು, ದ್ಯುಭ್ವಾದ್ಯಧಿಕರಣದಲ್ಲಿ ಹೇಳಿರುವಂತೆ, ವ್ಯಂಗ್ಯ-ವ್ಯಂಜಕಭಾವರೂಪವೆಂದು ಹೇಳಿದರೂ ಒಬ್ಬನಲ್ಲೇ ಅದು ವಿರುದ್ಧವಾದುದು ಎಂದು ಶಂಕಿಸಬಾರದು. ಆಕಾಶ ಮೊದಲಾದುವುಗಳಲ್ಲಿ—'ಇರುವುದರಿಂದ' ಎಂಬ ಪದವನ್ನು ಸೇರಿಸಿಕೊಳ್ಳಬೇಕು—ವಿರೋಧವಿಲ್ಲ ಎಂದು ಅರ್ಥ. ಆಕಾಶ ಮೊದಲಾದವುಗಳು ಉತ್ಪನ್ನವಾಗುವಾಗ ಅವುಗಳಲ್ಲಿರುವ ಬ್ರಹ್ಮನಿಗೂ ಅಭಿವ್ಯಕ್ತಿಯಾಗುವುದರಿಂದ ಕಾರ್ಯತ್ವವೂ, ವಾಯು ಮೊದಲಾದವುಗಳಲ್ಲಿರುವ ರೂಪದ ಅಭಿವ್ಯಕ್ತಿಗೆ ಕಾರಣ ವಾದುದರಿಂದ ಕಾರಣತ್ವವೂ ಯುಕ್ತವೆಂದು ಭಾವ ಆಕಾಶಾದಿಗಳಲ್ಲಿ ಬ್ರಹ್ಮನಿರುವನು ಎಂಬುದರಲ್ಲೇ ಏನು ಆಧಾರ ಎಂಬ ಆಶಂಕೆಗೆ ಸಮಾಧಾನ 'ಯಥಾ' ಎಂದು. ಯಥಾ–ಯಾವ ರೀತಿಯಿಂದ ಅಂದರೆ ಅವಿದಿತತ್ವ ಮೊದಲಾದ ಪ್ರಕಾರದಿಂದ 'ಸ ಯೋಽತೋಽಶ್ರುತಃ' ಇತ್ಯಾದಿ ಶ್ರುತಿಯಲ್ಲಿ ಹೇಳಲ್ಪಟ್ಟದ್ದಾನೋ ಅದೇ ಧರ್ಮದಿಂದ ಯುಕ್ತನಾದವನನ್ನು 'ಯ ಆಕಾಶೇ ತಿಷ್ಠನ್', 'ಯೋ ವಾಯೌ ತಿಷ್ಠನ್' ಇತ್ಯಾದಿ ಶ್ರುತಿಯಲ್ಲಿ, ಆಕಾಶಾದಿಗಳಲ್ಲಿರುವನೆಂದು ಹೇಳಿರುವುದರಿಂದ ಎಂದು ಅರ್ಥ.

"आकाशे तिष्ठन्" इत्यादावपि आकाशादौ स्थितं ब्रह्मेति कुत इति न शङ्क्यम्, श्रुत्यन्तरोक्ताविदितत्वप्रकारस्य "यमाकाशो न वेद" इत्यादिश्रवणादित्यन्तर्यामिनयोक्तन्यायस्मरणार्था ॥ ४ ॥

समाकर्षाधिकरणम्—५

## ॥ ॐ समाकर्षात् ॐ ॥ १-४-१६

अत्र नये ज्योतिर्नय इव सर्वशब्दा न्यायभेदेन समन्वीयन्ते। तत्त्विति प्रकृतं ब्रह्म तत इत्यन्वेति। न विरोध इत्यस्ति। वक्ष्यमाणं

---

**'ಯಥಾ ವ್ಯಪದಿಷ್ಟ' ಎಂಬ ಪದದ ಸಾರ್ಥಕತೆ**

'ಉಕ್ತೇಃ' ಎಂದಿಷ್ಟೇ ಹೇಳಬಹುದಾಗಿದ್ದರೂ 'ಯಥಾ ವ್ಯಪದಿಷ್ಟ' ಎಂದು ಹೇಳಿರುವುದು, "'ಆಕಾಶೇ ತಿಷ್ಠನ್' ಇತ್ಯಾದಿ ಶ್ರುತಿಯಲ್ಲೂ ಆಕಾಶಾದಿಗಳಲ್ಲಿರುವವನೆಂದು ಹೇಳಲಾಗಿರುವವನು ಬ್ರಹ್ಮನೇ ಎಂಬುದರಲ್ಲಿ ಆಧಾರವೇನು ಎಂದು ಶಂಕಿಸಬಾರದು; [1] ಶ್ರುತ್ಯಂತರದಲ್ಲಿ ಹೇಳಿರುವ ಅವಿದಿತತ್ವ ಮೊದಲಾದ ಧರ್ಮಗಳು 'ಯಮಾಕಾಶೋ ನ ವೇದ' ಇತ್ಯಾದಿ ವಾಕ್ಯದಲ್ಲಿ ಶ್ರುತವಾಗಿರುವುದರಿಂದ"— ಎಂದು ಅಂತರ್ಯಾಮ್ಯಧಿಕರಣದಲ್ಲಿ ಹೇಳಿರುವ ನ್ಯಾಯವನ್ನು ಜ್ಞಾಪಿಸಲು.

ಸಮಾಕರ್ಷಾಧಿಕರಣ—೫

## ಓಂ ಸಮಾಕರ್ಷಾತ್ ಓಂ (೧-೪-೧೬)

**ಅಧಿಕರಣದ ಉದ್ದೇಶ ಮತ್ತು ಸೂತ್ರಾರ್ಥ**

[2] ಜ್ಯೋತಿರಧಿಕರಣದಂತೆ ಈ ಅಧಿಕರಣದಲ್ಲೂ ಯುಕ್ತಿವಿಶೇಷದಿಂದ ಸರ್ವಶಬ್ದಗಳ ಸಮನ್ವಯವನ್ನು ಮಾಡಲಾಗುವುದು. 'ತತ್ತು' ಎಂಬ ಪದಗಳಿಂದ ಪ್ರಕೃತನಾಗಿರುವ ಬ್ರಹ್ಮನು 'ತತಃ' ಎಂಬ ಪದದಿಂದ ಅನ್ವಿತನಾಗುವನು. 'ನ ವಿರೋಧಃ' ಎಂಬ ಪದಗಳು

---

1. 'ಸ ಯೋಽತೋಽಶ್ರುತಃ' ಇತ್ಯಾದಿ ಐತರೇಯ ಶ್ರುತಿಯಲ್ಲಿ ಪರಬ್ರಹ್ಮನನ್ನು ಅವಿದಿತನೆಂದು ಹೇಳಿದೆ. ಪ್ರಕೃತ 'ಯೋ ಆಕಾಶೇ ತಿಷ್ಠನ್' ಇತ್ಯಾದಿ ಬ್ರಹದಾರಣ್ಯಕ ಶ್ರುತಿಯಲ್ಲಿ ಹೇಳಿರುವ ಆಕಾಶಸ್ಥನನ್ನೂ 'ಯಮಾಕಾಶೋ ನ ವೇದ' ಇತ್ಯಾದಿ ಅದೇ ಪ್ರಕರಣದ ಶ್ರುತಿಯಲ್ಲಿ ಅವಿದಿತನೆಂದು ವರ್ಣಿಸಿರುವುದರಿಂದ ಆಕಾಶಸ್ಥನೂ ಬ್ರಹ್ಮನೆಂದು ಸಿದ್ಧವಾಗುವುದೆಂದು ಭಾವ.

2. 'ಜ್ಯೋತಿರುಪಕ್ರಮಾತ್ತು ತಥಾ ಹ್ಯಧೀಯತ ಏಕೇ' (ಬ್ರ. ಸೂ. ೧-೪-೧೦) ಇತ್ಯಾದಿ ಸೂತ್ರಗಳಲ್ಲಿ.

जगत्पदमाकृष्यते । सर्वशब्दानामिति शेषः । पूर्वोक्तहेतुभिः ब्रह्मवाचित्वेऽन्यत्र रूढ्यादिना व्यवहारे च सिद्धे बाधकनिरासार्थमिदं सूत्रम् । सर्वशब्दानां ततो ब्रह्मणः सकाशाज्जगति सम्यगाकर्षान्न वृत्तिसाम्यापत्त्या तत्त्वित्यवधारणविरोध इत्यर्थः । समाकर्षोक्त्या विष्णौ परममुख्यवृत्तिरन्यत्र मुख्यवृत्तिरिति मुख्यतारतम्यसूचनात् तत्त्वित्यवधारणोपपत्तिरिति भावः । समित्युक्तिरन्यत्र मुख्यत्वमेव न लक्षणादि

ಅನುವೃತ್ತಿ ಹೊಂದುವುವು. ಮುಂದಿನ ಸೂತ್ರದಿಂದ 'ಜಗತ್' ಎಂಬ ಪದವನ್ನು ಇಲ್ಲಿಗೆ ತೆಗೆದುಕೊಳ್ಳಬೇಕು. 'ಸರ್ವಶಬ್ದಾನಾಂ' ಎಂಬ ಪದವನ್ನು ಸೇರಿಸಿಕೊಳ್ಳಬೇಕು.

ಹಿಂದೆ ಹೇಳಿರುವ ಯುಕ್ತಿಗಳಿಂದ ಎಲ್ಲ ಶಬ್ದಗಳೂ ಬ್ರಹ್ಮವಾಚಕವೆಂದೂ ಹಾಗೆಯೇ ರೂಢಿ ಮೊದಲಾದವುಗಳಿಂದ ಇತರ ವಸ್ತುಗಳಲ್ಲಿ ಶಬ್ದಗಳ ವ್ಯವಹಾರವೂ ಸಿದ್ಧವಾದ ಮೇಲೆ ಬಾಧಕಪರಿಹಾರಕ್ಕೋಸ್ಕರ ಈ ಸೂತ್ರ ಬಂದಿದೆ ಸಕಲ ಶಬ್ದಗಳನ್ನೂ ಆ ಬ್ರಹ್ಮನಿಂದ ಜಗತ್ತಿನೆಡೆಗೆ ಸಮೀಚೀನವಾಗಿ ಸೆಳೆಯುವುದರಿಂದ,[1] ಬ್ರಹ್ಮ ಮತ್ತು ಜಗತ್ತು ಎರಡರ ವಿಷಯದಲ್ಲೂ ಶಬ್ದಗಳ ವೃತ್ತಿ[2] ಸಮಾನವಾಗಿರುವುದೆಂದು ಆಪಾದಿಸಿ ಬ್ರಹ್ಮನೇ ಸಕಲಶಬ್ದವಾಚ್ಯನೆಂಬ ಅವಧಾರಣಕ್ಕೆ ವಿರೋಧ ಮಾಡಲಾಗದೆಂದು ಅರ್ಥ. ಸಮಾಕರ್ಷವನ್ನು ಹೇಳಿ, ಶಬ್ದಗಳಿಗೆ ವಿಷ್ಣುವಿನಲ್ಲಿ ಪರಮಮುಖ್ಯವೃತ್ತಿ ಇತರ ವಸ್ತುಗಳಲ್ಲಿ ಮುಖ್ಯವೃತ್ತಿ ಎಂದು ಶಬ್ದಗಳ ಮುಖ್ಯವೃತ್ತಿಯಲ್ಲೇ ತಾರತಮ್ಯವನ್ನು ಸೂಚಿಸಿರುವುದರಿಂದ ಬ್ರಹ್ಮನೇ ಸಕಲಶಬ್ದವಾಚ್ಯನೆಂಬ ಅವಧಾರಣ ಉಪಪನ್ನವೆಂದು ಭಾವ. ಬ್ರಹ್ಮನನ್ನುಳಿದು ಇತರ ವಸ್ತುಗಳ ವಿಷಯದಲ್ಲೂ ಶಬ್ದಗಳ ಸಂಬಂಧ ಮುಖ್ಯವೇ ಹೊರತು ಅಮುಖ್ಯವಲ್ಲ ಎಂದು ಸೂಚಿಸಲು 'ಸಮ್' ಶಬ್ದವನ್ನು ಉಪಯೋಗಿಸಲಾಗಿದೆ.

## ಇತರ ಕೆಲವು ಸೂತ್ರಗಳಲ್ಲಿ ಮತ್ತು ಈ ಸೂತ್ರದಲ್ಲಿ ಪ್ರತಿಪಾದಿತವಾಗಿರುವ ಪ್ರಮೇಯಗಳ ಭೇದ

[3] 'ಸಾಕ್ಷಾತ್' ಇತ್ಯಾದಿ ಸೂತ್ರದಲ್ಲಿ ವಿಷ್ಣುವಾಚಕವಾದ ಶಬ್ದಗಳನ್ನು ಜಗತ್ತಿನ ವಿಷಯದಲ್ಲಿ ಪ್ರಯೋಗಮಾಡುವುದಕ್ಕೆ ಹಾನ, ಉಪಾದಾನ ಮೊದಲಾದ

1. ಸಮ್ಯಗ್ ಆಕರ್ಷಃ ಸಮಾಕರ್ಷಃ. ಶಬ್ದಗಳ ಪರಮಮುಖ್ಯಸಂಬಂಧ ಬ್ರಹ್ಮನಲ್ಲಿಯೇ ಇರುವುದು. ಆದರೂ ಶಬ್ದಗಳನ್ನು ಬ್ರಹ್ಮನಿಂದ ಸಮಾಕರ್ಷಿಸಿ—ಸಮೀಚೀನವಾಗಿ ಸೆಳೆದು—ಉಪಯೋಗಿಸಲಾಗುವುದು.

2. ಶಬ್ದಗಳ ಸಂಬಂಧ.

3. 'ಸಾಕ್ಷಾದಪ್ಯವಿರೋಧಂ ಜೈಮಿನಿಃ' (ಬ್ರ. ಸೂ. ೧—೨—೨೮) ಎಂಬ ಸೂತ್ರದಲ್ಲಿ.

रिति सूचनाय । साक्षादित्यत्र विष्णुवाचिनां जगति प्रयोगे हानादि-व्यवहारः फलमिति, शरीरेत्यत्र तत्तच्छब्दवाच्यब्रह्मसम्बन्धस्तत्र निमित्तमिति, कल्पनेत्यत्र रूढ्यादिरस्तीति, अत्र तु मुख्यवृत्ति-तारतम्यमस्तीत्युक्तमिति ध्येयम् ।

विष्णावुत्कृष्टवृत्तौ कथं जगति प्रसिद्धिरित्यत आह—

## ॥ ॐ जगद्वाचित्वात् ॐ ॥ १-४-१७

शब्दानामित्यस्ति । जगद्वाचित्वादित्यावर्तते । द्वितीयं ज्ञान-परम् । शब्दानां जगद्वाचित्वाल्लोकानां जगति व्यवहाराद्धेतो-र्जगद्वाचित्वात् जगद्वाचित्वज्ञानात्तत्र प्रसिद्धिरिति शेषः । लोकानां

ವ್ಯವಹಾರವೇ ಫಲವೆಂದು ಹೇಳಲಾಗಿದೆ [1]'ಶರೀರ' ಇತ್ಯಾದಿ ಸೂತ್ರದಲ್ಲಿ ಆಯಾಯಾ ಶಬ್ದವಾಚ್ಯನಾದ ಬ್ರಹ್ಮನ ಸಂಬಂಧವಿರುವುದೇ ಆಯಾಯಾ ವಸ್ತುವಿನಲ್ಲಿ ಆಯಾಯಾ ಶಬ್ದಗಳನ್ನು ಉಪಯೋಗಿಸಲು ನಿಮಿತ್ತವೆಂದು ಪ್ರತಿಪಾದಿಸಲಾಗಿದೆ. [2]'ಕಲ್ಪನ' ಇತ್ಯಾದಿ ಸೂತ್ರದಲ್ಲಿ ಇತರ ವಸ್ತುಗಳಲ್ಲೂ ಶಬ್ದಗಳಿಗೆ ರೂಢಿ ಮೊದಲಾದವುಗಳಿರುವುದೆಂದು ನಿರೂಪಿಸಲಾಗಿದೆ. ಈ ಅಧಿಕರಣದಲ್ಲಾದರೋ ಮುಖ್ಯವೃತ್ತಿಯಲ್ಲೂ ತಾರತಮ್ಯವಿದೆಯೆಂದು ಹೇಳಲಾಗಿದೆ ಎಂದು ತಿಳಿಯತಕ್ಕದ್ದು.

ಶಬ್ದಗಳಿಗೆ ವಿಷ್ಣುವಿನಲ್ಲಿ ಉತ್ಕೃಷ್ಟಸಂಬಂಧವಿರುವುದಾದರೆ ಜಗತ್ತಿನ ವಿಷಯದಲ್ಲಿ ಆ ಶಬ್ದಗಳಿಗೆ ಪ್ರಸಿದ್ಧಿ ಇರುವುದು ಹೇಗೆ ಎಂಬ ಆಕ್ಷೇಪಕ್ಕೆ ಸಮಾಧಾನ—

## ಓಂ ಜಗದ್ವಾಚಿತ್ವಾತ್ ಓಂ (೧-೪-೧೭)

**ಸೂತ್ರಾರ್ಥ**

'ಶಬ್ದಾನಾಂ' ಎಂಬ ಪದವನ್ನು ಅಧ್ಯಾಹಾರಮಾಡಿಕೊಳ್ಳಬೇಕು. 'ಜಗದ್ವಾಚಿತ್ವಾತ್' ಎಂಬ ಪದವನ್ನು ಆವೃತ್ತಿಮಾಡಿಕೊಳ್ಳಬೇಕು. ಎರಡನೆಯ ಜಗದ್ವಾಚಿತ್ವ ಶಬ್ದಕ್ಕೆ ಜಗದ್ವಾಚಿತ್ವಜ್ಞಾನವೆಂದು ಅರ್ಥ. ಶಬ್ದಗಳಿಗೆ, ಜಗದ್ವಾಚಿತ್ವಾತ್–ಜಗತ್ತಿನ ವಿಷಯದಲ್ಲಿ ಜನಗಳ ವ್ಯವಹಾರವಿರುವುದರಿಂದ, ಜಗದ್ವಾಚಿತ್ವಾತ್–ಶಬ್ದಗಳು ಜಗದ್ವಾಚಕವೆಂಬ ಜ್ಞಾನವುಂಟಾಗುವುದರಿಂದ 'ಜಗತ್ತಿನ ವಿಷಯದಲ್ಲಿ ಶಬ್ದಗಳ ಪ್ರಸಿದ್ಧಿ ಇರುವುದು' ಎಂಬ ಪದಗಳನ್ನು ಸೇರಿಸಿಕೊಳ್ಳಬೇಕು. ಜನರು ಜಗತ್ತಿನ

1. '.....ಶರೀರರೂಪಕವಿನ್ಯಸ್ತಗೃಹೀತೇಃ ದರ್ಶಯತಿ ಚ' (ಬ್ರ. ಸೂ. ೧–೪–೧)
2. 'ಕಲ್ಪನೋಪದೇಶಾಚ್ಚ ಮಧ್ವಾದಿವದವಿರೋಧಃ' (ಬ್ರ. ಸೂ. ೧–೪–೧)

जगत्येव शब्दव्यवहारेण तत्रैव व्युत्पत्तिबलात्तत्र प्रसिद्धिर्ब्रह्मणि मुख्यत्वाज्ञानमूलेति भावः ।

उक्तमाक्षिप्याह—

॥ ॐ जीवमुख्यप्राणलिङ्गादिति चेत्तद्व्याख्यातम् ॐ ॥ १-४-१८

तदधीनत्वादर्थवदिति नेति च मण्डूकप्लुत्याऽनुवर्तते। शब्दजातं सर्वस्य तदधीनत्वात्तत्रार्थवदिति न युक्तम् । "अस्य यदेकां शाखां जीवो जहात्यथ सा शुष्यति" इति जीवे क्वचित्, "वायुनैव हि लोका नेनीयन्ते" इति वायौ सर्वत्र तदधीनत्वरूपलिङ्गं श्रूयते। तस्माल्लिङ्गा-

---

ವಿಷಯದಲ್ಲೇ ಶಬ್ದಗಳನ್ನು ವ್ಯವಹರಿಸುವ ಕಾರಣದಿಂದ ಜಗತ್ತಿನ ವಿಷಯದಲ್ಲೇ ಶಬ್ದಗಳ ವ್ಯುತ್ಪತ್ತಿಯಾಗುವುದು. ಇದರಿಂದಾಗಿ ಬ್ರಹ್ಮನಲ್ಲಿ ಶಬ್ದಗಳು ಮುಖ್ಯವಾಗಿವೆ ಎಂಬ ತಿಳುವಳಿಕೆ ಇಲ್ಲದೇ ಜಗತ್ತಿನ ವಿಷಯದಲ್ಲೇ ಶಬ್ದಗಳ ಪ್ರಸಿದ್ಧಿಯುಂಟಾಗುವುದು ಎಂದು ಭಾವ.

ಹೇಳಿದುದನ್ನು ಆಕ್ಷೇಪಿಸಿ ಸಮಾಧಾನ ನೀಡುವ ಸೂತ್ರ—

ಓಂ ಜೀವಮುಖ್ಯಪ್ರಾಣಲಿಂಗಾದಿತಿ ಚೇತ್ ತದ್ವ್ಯಾಖ್ಯಾತಮ್ ಓಂ (೧--೪--೧೮)

**ಸೂತ್ರಾರ್ಥ**

'ತದಧೀನತ್ವಾದರ್ಥವತ್' ಎಂಬ ಪದಗಳು ಮತ್ತು 'ನ' ಎಂಬ ಪದ ಮಂಡೂಕಪ್ಲುತಿಯಿಂದ ಅನುವೃತ್ತಿಗೊಳ್ಳುತ್ತವೆ. ಸರ್ವವೂ ಭಗವದಧೀನವಾದ್ದರಿಂದ ಸಕಲಶಬ್ದಗಳೂ ಭಗವಂತನನ್ನೇ ಹೇಳುವುವು ಎನ್ನುವುದು ಯುಕ್ತವಲ್ಲ. "ಅಸ್ಯ ಯದೇಕಾಂ ಶಾಖಾಂ ಜೀವೋ ಜಹಾತ್ಯಥ ಸಾ ಶುಷ್ಯತಿ"[1] ಎಂಬ ಶ್ರುತಿಯಲ್ಲಿ ಜೀವನಿಗೆ ಕೆಲವು ವಿಷಯದಲ್ಲಿ "ವಾಯುನೈವ ಹಿ ಲೋಕಾ ನೇನೀಯಂತೇ"[2] ಎಂಬುದಾಗಿ

---

1. ಜೀವ ಅಂದರೆ ಅನಿರುದ್ಧಾಖ್ಯ ಭಗವಂತನು ಜೀವವೃಕ್ಷದ ಯಾವ ಶಾಖೆಯನ್ನು ತ್ಯಜಿಸುವನೋ ಆ ಶಾಖೆಯು ಒಣಗುವುದು ಎಂದು ಸಿದ್ಧಾಂತರೀತ್ಯಾ ಈ ಛಂದೋಗಶ್ರುತಿಯ ಅರ್ಥ. ಪೃಥಿವ್ಯಾದ್ಯಭಿಮಾನಿ ಜೀವನೇ ಜೀವಶಬ್ದದ ಅರ್ಥವೆಂದು ಭಾವಿಸಿ ಪೂರ್ವಪಕ್ಷಿಯ ಆಶಂಕೆ.

2. ಮುಖ್ಯಪ್ರಾಣನಿಂದಲೇ ಎಲ್ಲ ಜನರು ತಮ್ಮ ತಮ್ಮ ಕರ್ಮಗಳಲ್ಲಿ ಅತಿಶಯವಾಗಿ ಪ್ರೇರಿತರಾಗುವರು ಎಂದು ಶ್ರುತ್ಯರ್ಥ. ಮುಖ್ಯಪ್ರಾಣನಿಗೇ ಸ್ವಾತಂತ್ರ್ಯವಿದೆ ಎಂದು ಭಾವಿಸಿ ಇಲ್ಲಿ ಆಕ್ಷೇಪ.

त्तयोरपि शब्दजातमर्थवत् । मुख्यतस्तयोरपि वाचकमिति चेन्न । यतस्तल्लिङ्गं व्याख्यातं तदन्तर्यामिसम्बन्धितयेत्यर्थः ।

ननु न वैदिकशब्दानां मुमुक्षुं प्रति कर्मदेवतादौ समाकर्षेण फलं तस्य फलान्तरानिच्छुत्वात् मोक्षस्य ब्रह्मज्ञानादेव सिद्धेरत आह—

## ॥ ॐ अन्यार्थं तु जैमिनिः प्रश्नव्याख्यानाभ्यामपि चैवमेके ॐ ॥ १-४-१९

जगद्वाचित्वमित्यस्ति । शब्दानामिति च । अन्येति प्रकृतजीवाद्यन्यब्रह्मवाची सन् तज्ज्ञानपरः । तुरेव । शब्दानां जगद्वाचित्वं

---

ಮುಖ್ಯಪ್ರಾಣನಿಗೆ ಸರ್ವ ವಿಷಯದಲ್ಲಿಯೂ ತದಧೀನತ್ವಲಿಂಗವು ಶ್ರುತವಾಗಿದೆ. ಆ ಲಿಂಗದಿಂದಾಗಿ ಅವರಲ್ಲಿಯೂ ಸಕಲ ಶಬ್ದಗಳೂ ಅರ್ಥವತ್ತಾಗುವುವು ಅಂದರೆ ಮುಖ್ಯವಾಗಿ ಜೀವ-ವಾಯುಗಳಿಗೂ ಶಬ್ದಗಳು ವಾಚಕವಾಗುವುವು ಎಂದರೆ ಅದು ಸರಿಯಲ್ಲ. ಏಕೆಂದರೆ, ಅಂತರ್ಯಾಮಿಗೆ ಸಂಬಂಧಿಸಿದಂತೆ ಆ ಲಿಂಗವನ್ನು ವ್ಯಾಖ್ಯಾನಮಾಡಲಾಗಿದೆ[1] ಎಂದು ಅರ್ಥ.

ಮೋಕ್ಷವು ಬ್ರಹ್ಮಜ್ಞಾನದಿಂದಲೇ ಸಿದ್ಧವಾಗುವುದರಿಂದ, ಮುಮುಕ್ಷುವಿಗೆ ಮೋಕ್ಷವನ್ನುಳಿದು ಇತರ ಪ್ರಯೋಜನಗಳಲ್ಲಿ ಇಚ್ಛೆಯೇ ಇಲ್ಲ. ಆದುದರಿಂದ ವೈದಿಕ ಶಬ್ದಗಳನ್ನು ಕರ್ಮದೇವತೆ ಮೊದಲಾದ ವಿಷಯಗಳಲ್ಲಿ ಸಮಾಕರ್ಷಿಸುವುದರಿಂದ ಮುಮುಕ್ಷುವಿಗೆ ಯಾವ ಫಲವೂ ಇಲ್ಲ ಎಂಬ ಆಶಂಕೆಗೆ ಸಮಾಧಾನ—

## ಓಂ ಅನ್ಯಾರ್ಥಂ ತು ಜೈಮಿನಿಃ ಪ್ರಶ್ನವ್ಯಾಖ್ಯಾನಾಭ್ಯಾಮಪಿ ಚೈವಮೇಕೇ ಓಂ (೧-೪-೧೯)

**ಸೂತ್ರಾರ್ಥ**

'ಜಗದ್ವಾಚಿತ್ವಂ' ಎಂಬ ಪದವನ್ನು ಅನುವೃತ್ತಿಮಾಡಿಕೊಳ್ಳಬೇಕು. 'ಶಬ್ದಾನಾಂ' ಎಂಬ ಪದವನ್ನು ಸೇರಿಸಿಕೊಳ್ಳಬೇಕು. 'ಅನ್ಯ'ಶಬ್ದವು ಪ್ರಸಕ್ತರಾಗಿರುವ ಜೀವ ಮೊದಲಾದವರಿಗಿಂತ ಅನ್ಯನಾದ ಬ್ರಹ್ಮನನ್ನು ಹೇಳುವುದಾದರೂ ಪ್ರಕೃತ ಬ್ರಹ್ಮಜ್ಞಾನಪರವಾದುದು. 'ತು' ಶಬ್ದಕ್ಕೆ 'ಏವ' ಎಂದು ಅರ್ಥ. ಶಬ್ದಾನಾಂ

---

1. . . . . ಉಪಾಸಾತ್ರೈವಿಧ್ಯಾದಾಶ್ರಿತತ್ವಾದಿಹ ತದ್ಯೋಗಾಚ್ಚ (ಬ್ರ. ಸೂ. ೧-೧-೩೧) ಎಂಬ ಸೂತ್ರದಲ್ಲಿ.

वैदिकशब्दानां मुमुक्षुं प्रति कर्मदेवतादिजगद्वाचित्वं अन्यार्थं तु ब्रह्मज्ञानार्थमेव । कुतः ? "कस्मिन्नु भगवो विज्ञाते सर्वमिदं विज्ञातं भवति" इति शौनकप्रश्नात् । "तस्मै स होवाच द्वे विद्ये वेदितव्ये" इत्यङ्गिरसो व्याख्यानात्ताभ्यां हेतुभ्यामित्यर्थः । तथा "कथं नु भगवस्स आदेशः" इति, "यथा सौम्यैकेन" इति श्वेतकेतूद्दालकप्रश्नव्याख्यानाभ्यामित्यर्थः । कस्मिन् ज्ञाते सर्वज्ञानं सफलं भवतीति प्रश्ने परविद्याविषयब्रह्मज्ञानेन भवतीति व्याख्यानतात्पर्यादिति भावः । अपि च न केवलमर्थादेतत्सिद्ध्यति । किन्तु स्पष्टं चैवमेके शाखिनो "यस्तन्न वेद किमृचा करिष्यति" इति पठन्तीत्यर्थः ।

---

ಜಗದ್ವಾಚಿತ್ವಂ–ಮುಮುಕ್ಷುವನ್ನು ಕುರಿತು ವೈದಿಕಶಬ್ದಗಳು ಕರ್ಮ, ದೇವತೆ ಮೊದಲಾದ ಜಗತ್ತನ್ನು ಹೇಳುವುದು, ಅನ್ಯಾರ್ಥಂ ತು–ಬ್ರಹ್ಮಜ್ಞಾನಕ್ಕಾಗಿಯೇ. ಏಕೆಂದರೆ, "ಕಸ್ಮಿನ್ನು ಭಗವೋ ವಿಜ್ಞಾತೇ ಸರ್ವಮಿದಂ ವಿಜ್ಞಾತಂ ಭವತಿ" (ಮು.೦ ೧–೧೩–೪) ಎಂದು ಶೌನಕನ ಪ್ರಶ್ನೆಯಿಂದ ಮತ್ತು "ತಸ್ಮೈ ಸ ಹೋವಾಚ ದ್ವೇ ವಿದ್ಯೇ ವೇದಿತವ್ಯೇ" [1] ಎಂದು ಅಂಗಿರಸನ ವ್ಯಾಖ್ಯಾನದಿಂದ—ಈ ಹೇತುಗಳಿಂದ ಎಂದು ಅರ್ಥ. ಹಾಗೆಯೇ, "ಕಥಂ ನು ಭಗವಃ ಸ ಆದೇಶೋ ಭವತಿ" ಎಂದು, "ಯಥಾ ಸೋಮ್ಯೈಕೇನ" (ಛಾಂ: ೬–೧–೩–೪) ಎಂದು ಶ್ವೇತಕೇತು-ಉದ್ದಾಲಕರ ಪ್ರಶ್ನವ್ಯಾಖ್ಯಾನಗಳಿಂದ ಎಂದು ಅರ್ಥ. ಯಾವುದನ್ನು ತಿಳಿದರೆ ಎಲ್ಲ ಜ್ಞಾನವು ಸಫಲವಾಗುವುದು ಎಂಬ ಪ್ರಶ್ನೆಗೆ ಪರವಿದ್ಯಾವಿಷಯನಾದ ಬ್ರಹ್ಮನ ಜ್ಞಾನದಿಂದ ಸಫಲವಾಗುವುದು ಎಂದು ಉತ್ತರದ ತಾತ್ಪರ್ಯವಿರುವುದರಿಂದ ಎಂದು ಭಾವ. ಮತ್ತು ಮುಮುಕ್ಷುವನ್ನು ಕುರಿತು ವೈದಿಕಶಬ್ದಗಳು ಕರ್ಮದೇವತಾದಿಗಳನ್ನು ಹೇಳುವುದು ಬ್ರಹ್ಮಜ್ಞಾನಕ್ಕೋಸ್ಕರವಾಗಿ ಎಂಬುದು ಅರ್ಥಾತ್ ಸಿದ್ಧವಾಗುವುದಷ್ಟೇ ಅಲ್ಲ, ಕೆಲವು ಶಾಖೆಯವರು ಸ್ಪಷ್ಟವಾಗಿಯೇ [2] "ಯಸ್ತನ್ನ ವೇದ ಕಿಮೃಚಾ ಕರಿಷ್ಯತಿ" (ಋ ೧–೧೬೪–೩೯) ಎಂದು ಪಠಿಸುತ್ತಾರೆ ಎಂದು ಅರ್ಥ

---

1. "ಹೇ ಭಗವನ್ ! ಯಾವುದನ್ನು ತಿಳಿದರೆ ಕರ್ಮಾದಿಗಳ ಜ್ಞಾನವು ಸಫಲವಾಗುವುದು" ಎಂದು ಶೌನಕರ ಪ್ರಶ್ನೆ. ಇದಕ್ಕುತ್ತರವಾಗಿ ಅಂಗಿರಸರು "ಅಪರವಿದ್ಯೆಯಿಂದ ಕರ್ಮಾದಿಗಳೆಲ್ಲವೂ ತಿಳಿದುಬರುವುದು. ಈ ಜ್ಞಾನವು ಪರವಿದ್ಯಾವಿಷಯನಾದ ಬ್ರಹ್ಮನ ಜ್ಞಾನದಿಂದ ಸಫಲವಾಗುವುದು" ಎಂದು ಹೇಳುವ ಅಭಿಪ್ರಾಯದಿಂದ ಪರಾಪರವಿದ್ಯೆಗಳ ಸ್ವರೂಪವನ್ನು ಹೇಳಲುಪಕ್ರಮಿಸುವರು.

2. ಪರಬ್ರಹ್ಮನೇ ಸರ್ವವೇದಗಳ ಮುಖ್ಯಾರ್ಥ ಎಂದು ತಿಳಿಯದವರು ಕೇವಲ ಕರ್ಮಾದಿ ಪರವಾದ ವೇದಗಳ ಅಧ್ಯಯನ ಮಾಡುವುದರಿಂದ ಫಲವೇನು ?—ಎಂದು ಶ್ರುತ್ಯರ್ಥ.

वैदिकशब्दानां जगद्वाचित्वमन्यार्थमिति न युक्तम् । प्रतिपदं ब्रह्मपरत्वोक्त्याऽपि ब्रह्मज्ञानसिद्धेरत आह—

## ॥ ॐ वाक्यान्वयात् ॐ ॥ १-४-२०

निमित्तपञ्चमीयम् । वैदिकशब्दानामन्यार्थं जगद्वाचित्वमित्यस्ति । कुतः? वाक्यान्वयान्निमित्तादित्यर्थः । कर्मदेवतादिवाचितया स्थितवाक्यानामन्ततो ब्रह्मपरत्वमित्येवंरूपवाक्यान्वयाभावे मन्दानां प्रतिपदान्वयायोग्यतया तत्र वैमुख्यमित्यादिदोषः स्यादिति भावः ॥

---

ಪ್ರತಿಯೊಂದು ವೈದಿಕಪದವೂ ಬ್ರಹ್ಮಪರವೆಂದು ಹೇಳುವುದರಿಂದಲೇ ವೇದದಿಂದ ಬ್ರಹ್ಮಜ್ಞಾನವು ಸಿದ್ಧಿಸುವುದರಿಂದ, ಬ್ರಹ್ಮಜ್ಞಾನಕ್ಕೋಸ್ಕರವಾಗಿ ವೈದಿಕಶಬ್ದಗಳು ಜಗತ್ತಿನ ಪದಾರ್ಥಗಳನ್ನು ಹೇಳುವುವು ಎಂಬ ವಾದ ಯುಕ್ತವಲ್ಲ ಎಂಬ ಆಶಂಕೆಗೆ ಸಮಾಧಾನ—

## ಓಂ ವಾಕ್ಯಾನ್ವಯಾತ್ ಓಂ (೧-೪-೨೦)

**ಸೂತ್ರಾರ್ಥ**

ಇಲ್ಲಿ ಪಂಚಮೀವಿಭಕ್ತಿಯು 'ನಿಮಿತ್ತ' ಎಂಬ ಅರ್ಥದಲ್ಲಿ ಬಂದಿದೆ. 'ವೈದಿಕಶಬ್ದಾನಾಂ ಅನ್ಯಾರ್ಥಂ ಜಗದ್ವಾಚಿತ್ವಂ' ಎಂಬ ಪದಗಳನ್ನು ಅಧ್ಯಾಹಾರಮಾಡಿ ಕೊಳ್ಳಬೇಕು. ವೈದಿಕಶಬ್ದಗಳು ಬ್ರಹ್ಮಜ್ಞಾನಕ್ಕೋಸ್ಕರವಾಗಿ ಜಗತ್ತಿನ ಇತರ ಪದಾರ್ಥಗಳ ವಾಚಕವಾಗಿವೆ ಎಂಬುದು ಯುಕ್ತವಾದುದು. ವಾಕ್ಯಾನ್ವಯದ ನಿಮಿತ್ತದಿಂದ ಎಂದು ಅರ್ಥ ವಾಕ್ಯಾನ್ವಯವೆಂದರೆ ಕರ್ಮ, ದೇವತಾ ಮೊದಲಾದವುಗಳನ್ನು ಹೇಳುವವೆಂದು ಸಿದ್ಧವಾಗಿರುವ ವಾಕ್ಯಗಳಿಗೆ ಅಂತಿಮವಾಗಿ ಬ್ರಹ್ಮನಲ್ಲೇ ತಾತ್ಪರ್ಯವನ್ನು ಹೇಳುವುದು. ಇಂತಹ ವಾಕ್ಯಾನ್ವಯವಿಲ್ಲದಿದ್ದಲ್ಲಿ, ಪ್ರತಿಪದವನ್ನೂ ಬ್ರಹ್ಮನಲ್ಲಿ ಸಮನ್ವಯಮಾಡುವ ಯೋಗ್ಯತೆ ಇಲ್ಲದಿರುವ ಮಂದರಿಗೆ ಸಮನ್ವಯ ವಿಷಯದಲ್ಲಿ ವಿಮುಖತೆಯುಂಟಾಗುವುದು ಇತ್ಯಾದಿ ದೋಷಗಳು ಬಂದೀತು ಎಂದು ಭಾವ.

अन्यार्थं जगद्वाचित्वमित्युक्तम् । तत्कथमित्यत आह—

**॥ ॐ प्रतिज्ञासिद्धेर्लिङ्गमाश्मरथ्यः ॐ ॥ १-४-२१**

जगद्वाचित्वमन्यार्थमित्यस्ति । प्रतिज्ञासिद्धेः "नान्यः पन्था अयनाय" इति ज्ञानमेव मुक्तिहेतुरिति प्रतिज्ञातार्थनिश्चयस्य लिङ्गं शब्दानां जगद्वाचित्वं लिङ्गं जनकं सत् अन्यार्थं भवतीत्याश्मरथ्यो मन्यत इत्यर्थः । सविस्तरं कर्मादिस्वरूपे प्रतिपादिते सति कर्मणां क्षुद्रफलकत्वज्ञानात् तज्ज्ञानेनाक्षुद्रफलकं ज्ञानमेवोपादेयमिति वैराग्य-जननद्वारा ब्रह्मज्ञानार्थं भवतीति भावः ॥

जगद्वाचित्वमन्यार्थमित्येतत् प्रकारान्तरेणाप्याह—

**॥ ॐ उत्क्रमिष्यत एवं भावादित्यौडुलोमिः ॐ ॥ १-४-२२**

---

ವೈದಿಕಶಬ್ದಗಳು ಬ್ರಹ್ಮಜ್ಞಾನಕ್ಕೋಸ್ಕರ ಜಗದ್ವಾಚಕವಾಗಿವೆ ಎಂಬುದು ಹೇಗೆ ಎಂಬ ಆಶಂಕೆಗೆ ಸಮಾಧಾನ—

**ಓಂ ಪ್ರತಿಜ್ಞಾಸಿದ್ಧೇರ್ಲಿಂಗಮಾಶ್ಮರಥ್ಯಃ ಓಂ (೧-೪-೨೧)**

**ಸೂತ್ರಾರ್ಥ**

'ಜಗದ್ವಾಚಿತ್ವಂ ಅನ್ಯಾರ್ಥಂ' ಎಂಬ ಪದಗಳನ್ನು ಅಧ್ಯಾಹಾರಮಾಡಿಕೊಳ್ಳಬೇಕು. ಪ್ರತಿಜ್ಞಾಸಿದ್ಧೇಃ–'ನಾನ್ಯಃ ಪಂಥಾ ಅಯನಾಯ' ಎಂದು ಶ್ರುತಿಯಲ್ಲಿ ಜ್ಞಾನವೇ ಮೋಕ್ಷಸಾಧನವೆಂದು ಪ್ರತಿಜ್ಞೆಮಾಡಲ್ಪಟ್ಟಿರುವ ವಿಷಯದ ನಿರ್ಣಯಕ್ಕೆ, ಲಿಂಗಂ–ಕಾರಣವಾಗುವ ಮೂಲಕ ವೈದಿಕಶಬ್ದಗಳ ಜಗದ್ವಾಚಕತ್ವವು ಬ್ರಹ್ಮಜ್ಞಾನವನ್ನುಂಟುಮಾಡುವುದೆಂದು ಆಶ್ಮರಥ್ಯರು ಅಭಿಪ್ರಾಯಪಡುವರು ಎಂದು ಅರ್ಥ. ಸವಿಸ್ತರವಾಗಿ ಕರ್ಮ ಮೊದಲಾದವುಗಳ ಸ್ವರೂಪವನ್ನು ಪ್ರತಿಪಾದಿಸಿದಾಗ ಕರ್ಮಗಳ ಫಲವು ಕ್ಷುದ್ರವೆಂದೂ, ಬ್ರಹ್ಮಜ್ಞಾನವೇ ಉಪಾದೇಯವೆಂದೂ ವೈರಾಗ್ಯವನ್ನು ಉಂಟುಮಾಡುವ ಮೂಲಕ ವೈದಿಕಶಬ್ದಗಳ ಜಗದ್ವಾಚಕತ್ವವು ಬ್ರಹ್ಮಜ್ಞಾನಸಾಧನವಾಗುವುದೆಂದು ಭಾವ.

ವೈದಿಕಶಬ್ದಗಳು ಜಗತ್ತಿನ ವಸ್ತುಗಳನ್ನು ಹೇಳುವುದು ಬ್ರಹ್ಮಜ್ಞಾನಕ್ಕಾಗಿಯೇ ಎಂಬುದನ್ನು ಪ್ರಕಾರಾಂತರದಿಂದಲೂ ನಿರೂಪಿಸುವ ಸೂತ್ರ—

**ಓಂ ಉತ್ಕ್ರಮಿಷ್ಯತ ಏವಂಭಾವಾದಿತ್ಯೌಡುಲೋಮಿಃ ಓಂ (೧-೪-೨೨)**

शब्दानां जगद्वाचित्वमन्यार्थं ब्रह्मज्ञानार्थम् । कथम् ? उत्क्रमिष्यतः बन्धात् ज्ञानेनोत्क्रमणमिच्छतः पुंसः मुमुक्षोरेवं ज्ञानहेतुतया कर्मादेर्भावादवश्यम्भावात् । आवश्यकत्वादिति यावत् । इत्यौडुलोमिर्मन्यत इत्यर्थः । " विविदिषन्ति यज्ञेन " इत्यादेर्मनश्शुद्ध्यर्थतयोपादेयत्वात् कर्मणस्तद्वाचित्वम् । मनश्शुद्धिद्वारा ज्ञानार्थमिति भावः ॥

अन्यार्थं जगद्वाचित्वमित्येतदन्यथाप्याह—

## ॥ ॐ अवस्थितेरिति काशकृत्स्नः ॐ ॥ १-४-२३

ब्रह्मणीति प्रकृतं ब्रह्मान्वेति । कर्मदेवतादिजगतो ब्रह्मण्यवस्थितेः, अन्यार्थम् " एष सेतुर्विधारणः " इत्यादिना सर्वाधारत्वप्रकारक-

---

**ಸೂತ್ರಾರ್ಥ**

ಶಬ್ದಗಳ ಜಗದ್ವಾಚಿತ್ವವು ಬ್ರಹ್ಮಜ್ಞಾನೋಪಯೋಗಿಯಾಗಿರುವುದು ಹೇಗೆಂದರೆ, ಉತ್ಕ್ರಮಿಷ್ಯತಃ-ಬ್ರಹ್ಮಜ್ಞಾನದ ಸಹಾಯದಿಂದ ಸಂಸಾರಬಂಧದಿಂದ ಮೋಕ್ಷವನ್ನು ಬಯಸುವ ಮುಮುಕ್ಷುಪುರುಷನಿಗೆ, ಏವಂ–ಕರ್ಮಾದಿಗಳು ಜ್ಞಾನಹೇತುವಾಗಿ, ಭಾವಾತ್–ಆವಶ್ಯಕವಾದುದರಿಂದ ಎಂದು ಔಡುಲೋಮಿಗಳು ಅಭಿಪ್ರಾಯಪಡುತ್ತಾರೆ ಎಂದು ಅರ್ಥ. 'ವಿವಿದಷಂತಿ ಯಜ್ಞೇನ' ಇತ್ಯಾದಿ ಶ್ರುತಿಗಳಿಂದ ಮನಃಶುದ್ಧ್ಯರ್ಥವಾಗಿ ಕರ್ಮಗಳು ಅನುಷ್ಠೇಯವಾದುದರಿಂದ ಅಂತಹ ಕರ್ಮವಾಚಕತ್ವವು ಮನಃಶುದ್ಧಿಯ ಮೂಲಕ ಬ್ರಹ್ಮಜ್ಞಾನಕ್ಕೆ ಉಪಯೋಗಿಯಾಗುವುದೆಂದು ಭಾವ.

ವೈದಿಕಶಬ್ದಗಳು ಜಗದ್ವಾಚಿಯಾಗಿರುವುದು ಬ್ರಹ್ಮಜ್ಞಾನೋಪಯೋಗಿ ಎಂಬುದನ್ನು ಬೇರೊಂದು ರೀತಿಯಿಂದಲೂ ಹೇಳುವ ಸೂತ್ರ—

## ಓಂ ಅವಸ್ಥಿತೇರಿತಿ ಕಾಶಕೃತ್ಸ್ನಃ ಓಂ (೧-೪-೨೩)

**ಸೂತ್ರಾರ್ಥ**

ಪ್ರಕೃತನಾದ ಬ್ರಹ್ಮನು 'ಬ್ರಹ್ಮಣಿ' ಎಂಬ ಪದದ ಮೂಲಕ ಅನ್ವಿತನಾಗುವನು. ಕರ್ಮ, ದೇವತೆ ಮೊದಲಾದ ಜಗತ್ತು ಬ್ರಹ್ಮನಲ್ಲಿ ಆಶ್ರಿತವಾಗಿರುವುದರಿಂದ, ಅನ್ಯಾರ್ಥಂ – 'ಏಷ ಸೇತುರ್ವಿಧಾರಣಃ' ಇತ್ಯಾದಿ ಶ್ರುತಿಯಿಂದ, 'ಬ್ರಹ್ಮನು ಸರ್ವಾಧಾರನಾಗಿದ್ದಾನೆ' ಎಂಬ ಜ್ಞಾನ ಉತ್ಪನ್ನವಾಗಲು ವೈದಿಕಶಬ್ದಗಳು ಆಶ್ರಿತ

ब्रह्मज्ञानोत्पत्त्यर्थम् आधेयरूपकर्मादिजगद्वाचित्वमिति काशकृत्स्नो मन्यत इत्यर्थः । शिष्यप्रसिद्ध्यर्थं जैमिन्याद्युक्तिः ॥ ५ ॥

प्रकृत्यधिकरणम्—६

## ॥ ॐ प्रकृतिश्च प्रतिज्ञादृष्टान्तानुपरोधात् ॐ ॥ १-४-२४

अत्र स्त्रीलिङ्गाः शब्दाः समन्वीयन्ते । श्रीवाचितया प्राधान्यात् प्रकृतिपदस्यान्योपलक्षणत्वात् । तत्त्वित्यस्ति । "सैषा प्रकृतिः" इत्याद्युक्तप्रकृत्यादि मुख्यतो ब्रह्मैव । न तु श्रीतत्वादि । कुतः ?

---

ವಾದ ಜಗತ್ತನ್ನು ಹೇಳುವವು ಎಂದು ಕಾಶಕೃತ್ಸ್ನರು ಅಭಿಪ್ರಾಯಪಡುವರೆಂದು ಭಾವ. ಸೂತ್ರಗಳಲ್ಲಿ ಜೈಮಿನ್ಯಾದಿಗಳನ್ನು ಉಲ್ಲೇಖಿಸಿರುವುದು ಅವರಿಗೆ ಪ್ರಸಿದ್ಧಿಯನ್ನು ತಂದುಕೊಡಲು.

ಪ್ರಕೃತ್ಯಧಿಕರಣ—೬

## ಓಂ ಪ್ರಕೃತಿಶ್ಚ ಪ್ರತಿಜ್ಞಾದೃಷ್ಟಾಂತಾನುಪರೋಧಾತ್ ಓಂ (೧-೪-೨೪)

**ಅಧಿಕರಣದ ಉದ್ದೇಶ ಮತ್ತು ಸೂತ್ರಾರ್ಥ**

ಈ ಅಧಿಕರಣದಲ್ಲಿ ಸ್ತ್ರೀಲಿಂಗಶಬ್ದಗಳನ್ನು ಸಮನ್ವಯಮಾಡಲಾಗುವುದು. ಲಕ್ಷ್ಮೀವಾಚಕವಾಗಿರುವ ಪ್ರಯುಕ್ತ ಪ್ರಾಧಾನ್ಯವಿರುವುದರಿಂದ ಇತರ ಸ್ತ್ರೀಲಿಂಗ ಶಬ್ದಗಳಿಗೆ ಉಪಲಕ್ಷಣವಾಗಿ ಪ್ರಕೃತಿಶಬ್ದವನ್ನು ಗ್ರಹಿಸಲಾಗಿದೆ. 'ತತ್ತು' ಎಂಬ ಪದಗಳು ಅನುವೃತ್ತವಾಗುವವು.

'ಸೈಷಾ ಪ್ರಕೃತಿಃ' ಇತ್ಯಾದಿ ಶ್ರುತಿಯಲ್ಲಿ ಹೇಳಿರುವ ಪ್ರಕೃತ್ಯಾದಿಗಳು ಮುಖ್ಯವಾಗಿ ಬ್ರಹ್ಮನೇ, ಶ್ರೀತತ್ತ್ವ ಮೊದಲಾದವುಗಳಲ್ಲ. ಏಕೆಂದರೆ, [1] 'ಹಂತ ಏತಮೇವ ಪುರುಷಂ ಸರ್ವಾಣಿ ನಾಮಾನಿ ಅಭಿವದಂತಿ' ಎಂಬ ಪ್ರತಿಜ್ಞೆ ಮತ್ತು

---

1. "ಪೂರ್ಣನಾದ ಭಗವಂತನನ್ನೇ ಎಲ್ಲ ಶಬ್ದಗಳು ಪರಮಮುಖ್ಯವೃತ್ತಿಯಿಂದ ಹೇಳುವವು" ಎಂದು ಪ್ರತಿಜ್ಞಾಭಾಗದ ಅಭಿಪ್ರಾಯ. "ಹರಿಯುವ ನದಿಗಳು ಹೇಗೆ ಸಮುದ್ರಾಭಿಮುಖವಾಗಿಯೇ ಹರಿದು ಸಮುದ್ರವನ್ನೇ ಪ್ರವೇಶಿಸುವವೋ ಹಾಗೆ ಎಲ್ಲ ಶಬ್ದಗಳು ಇತರ ಪದಾರ್ಥಗಳನ್ನು ಹೇಳಿದರೂ ಅಂತತಃ ಭಗವಂತನನ್ನೇ ಹೇಳುವವು" ಎಂದು ದೃಷ್ಟಾಂತಭಾಗದ ಅಭಿಪ್ರಾಯ.

"हन्तैतमेव पुरुषं सर्वाणि नामान्यभिवदन्ति" इति प्रतिज्ञा, "यथा नद्यः स्यन्दमानाः समुद्रायणाः समुद्रमभिविशन्ति एवमेवैतानि नामानि" इति दृष्टान्तः। तयोरनुपरोधात्तदनुसारादित्यर्थः। अन्यथा तदुपरोधः स्यादिति भावः। सर्वस्त्रीशब्दसमुच्चायकः च इति तत्त्वप्रदीपे। न केवलं पुमान् किन्त्वव्यवहितसूतिहेतुत्वरूपस्त्रीत्वात् प्रकृत्यादिसर्वशब्दवाच्यो विष्णुरिति समुच्चिनोति । तेन स्त्रीत्वं चेत् पुंस्त्वं न स्यादिति न शङ्क्यमिति टीकाचन्द्रिकयोरुक्तम् । प्रागुक्तहेतुभिरेव पूर्वत्रैव प्रकृत्यादि ब्रह्मेति सिद्धावपि "नामानि सर्वाणि" इत्यत्र सर्वशब्दे सङ्कोचशङ्कानिरासाय पुनः साधकोक्तिः ॥

---

"ಯಥಾ ನದ್ಯಃ ಸ್ಯಂದಮಾನಾಃ ಸಮುದ್ರಾಯಣಾಃ ಸಮುದ್ರಮೇವಾಭಿವಿಶಂತಿ ಏವಮೇವ ಏತಾನಿ ನಾಮಾನಿ" ಎಂಬ ದೃಷ್ಟಾಂತ ಇವುಗಳಿಗೆ ಅನುಸಾರವಾಗಿ ಎಂದು ಅರ್ಥ. ಸ್ತ್ರೀಲಿಂಗಶಬ್ದಗಳು ಭಗವದ್ವಾಚಕ ಅಲ್ಲದಿದ್ದಲ್ಲಿ ಈ ಪ್ರತಿಜ್ಞೆ-ದೃಷ್ಟಾಂತಗಳ ವಿರೋಧ ಬಂದೀತು ಎಂದು ಭಾವ.

### ಸೂತ್ರದ 'ಚ' ಶಬ್ದದ ವ್ಯಾಖ್ಯಾನಭೇದ

ತತ್ತ್ವಪ್ರದೀಪದಲ್ಲಿ 'ಚ' ಶಬ್ದವು ಸರ್ವಸ್ತ್ರೀಶಬ್ದಗಳ ಸಮುಚ್ಚಯವನ್ನು ಹೇಳುವುದು ಎಂದು ಹೇಳಲಾಗಿದೆ ತತ್ತ್ವಪ್ರಕಾಶಿಕಾ ಮತ್ತು ಚಂದ್ರಿಕಾಗಳಲ್ಲಿ —ಭಗವಂತನು ಕೇವಲ ಪುರುಷನಷ್ಟೇ ಅಲ್ಲ ವ್ಯವಧಾನವೇ ಇಲ್ಲದೇ ಪ್ರಸವಹೇತುವಾಗಿ ಸ್ತ್ರೀತ್ವವನ್ನೂ ಪಡೆದಿದ್ದಾನೆ. ಆದ್ದರಿಂದ ವಿಷ್ಣುವು ಪ್ರಕೃತಿ ಮೊದಲಾದ ಸರ್ವಶಬ್ದವಾಚ್ಯನಾಗಿದ್ದಾನೆ ಎಂದು 'ಚ' ಶಬ್ದವು ಸಮುಚ್ಚಯವನ್ನು ಹೇಳುವುದು. ಇದರಿಂದಾಗಿ ಭಗವಂತನಲ್ಲಿ ಸ್ತ್ರೀತ್ವವಿದ್ದಲ್ಲಿ ಪುಂಸ್ತ್ವವಿರಲಾರದು ಎಂಬ ಶಂಕೆಗೆ ಅವಕಾಶವಿಲ್ಲ—ಎಂದು ಹೇಳಲಾಗಿದೆ.

### ಈ ಅಧಿಕರಣ ವ್ಯರ್ಥವಲ್ಲ

ಹಿಂದೆ ಹೇಳಿರುವ ಯುಕ್ತಿಗಳಿಂದ ಹಿಂದೆಯೇ ಭಗವಂತನು ಪ್ರಕೃತಿ ಮೊದಲಾದ ಸರ್ವಶಬ್ದವಾಚ್ಯನೆಂದು ಸಿದ್ಧವಾಗಿದ್ದರೂ 'ನಾಮಾನಿ ಸರ್ವಾಣಿ' ಎಂಬಲ್ಲಿ ಸರ್ವ ಶಬ್ದಕ್ಕೆ ಸಂಕೋಚವನ್ನು ಮಾಡಬೇಕಾಗಬಹುದು ಎಂಬ ಸಂದೇಹವನ್ನು ನಿವಾರಿಸಲು ಸರ್ವಶಬ್ದವಾಚ್ಯತ್ವದಲ್ಲಿ ಪುನಃ ಸಾಧಕಪ್ರಮಾಣವನ್ನು ಹೇಳಲಾಗಿದೆ.

इतश्चैवमित्याह—

॥ ॐ अभिध्योपदेशाच्च ॐ ॥ १–४–२५

प्रकृतिरित्यनुवर्तमानमावर्तते । द्वितीयं भावप्रधानम् । योग्यतयाऽभिध्येत्यनेनान्वेति । अभिध्येत्यप्यावर्तते । द्वितीयं भावप्रधानम् । प्रकृतिर्ब्रह्मैव । कुतः ? प्रकृतित्वेन प्रकृतिशब्दवाच्यत्वेनाभिध्यायाः इच्छाया उपदेशात् । "प्रकृतिर्वासनेत्येवं तवेच्छाऽनन्त" इति स्मृतौ तथा ब्रह्मणोऽभिध्यात्वोपदेशादिच्छारूपत्वोपदेशात् । "सोऽभिध्या स जूतिः" इति श्रुतावित्यर्थः । प्रकृतिशब्दवाच्येच्छात्मकत्वाच्च प्रकृतिशब्दं ब्रह्मेति भावः ॥

---

ಮುಂದೆ ಹೇಳುವ ಕಾರಣದಿಂದಲೂ ಬ್ರಹ್ಮನು ಪ್ರಕೃತಿ ಮೊದಲಾದ ಸ್ತ್ರೀಲಿಂಗ ಶಬ್ದವಾಚ್ಯನೆಂದು ಹೇಳುವ ಸೂತ್ರ—

ಓಂ ಅಭಿಧ್ಯೋಪದೇಶಾಚ್ಚ ಓಂ (೧-೪-೨೫)

ಹಿಂದಿನ ಸೂತ್ರದಿಂದ ಅನುವೃತ್ತಿಗೊಳ್ಳುವ ಪ್ರಕೃತಿಶಬ್ದವನ್ನು ಆವೃತ್ತಿಮಾಡಿ ಕೊಳ್ಳಬೇಕು. ಆವೃತ್ತಿಗೊಂಡ ಪ್ರಕೃತಿಶಬ್ದಗಳಲ್ಲಿ ಎರಡನೆಯದು ಭಾವಪ್ರಧಾನ ವಾದುದು. ಅನ್ವಯಯೋಗ್ಯವಾದ 'ಅಭಿಧ್ಯಾ' ಎಂಬ ಪದದೊಡನೆ ಅನ್ವಿತವಾಗು ವುದು. 'ಅಭಿಧ್ಯಾ' ಎಂಬ ಪದವೂ ಆವೃತ್ತಿಗೊಳ್ಳುತ್ತದೆ. ಎರಡನೆಯ 'ಅಭಿಧ್ಯಾ' ಪದವು ಭಾವಪ್ರಧಾನವಾದುದು.[1] ಪ್ರಕೃತಿಶಬ್ದವಾಚ್ಯನು ಬ್ರಹ್ಮನೇ. ಏಕೆಂದರೆ, 'ಪ್ರಕೃತಿರ್ವಾಸನೇತ್ಯೇವಂ ತವೇಚ್ಛಾನಂತ'[2] ಎಂಬ ಸ್ಮೃತಿಯಲ್ಲಿ ಪ್ರಕೃತಿತ್ವೇನ– ಪ್ರಕೃತಿಶಬ್ದವಾಚ್ಯನೆಂದು, ಅಭಿಧ್ಯೆಯನ್ನು ಅಂದರೆ ಇಚ್ಛೆಯ ಉಪದೇಶವಿರುವುದ ರಿಂದ. ಅಂತೆಯೇ, 'ಸೋಽಭಿಧ್ಯಾ ಸ ಜೂತಿಃ'[3] ಎಂಬ ಶ್ರುತಿಯಲ್ಲಿ ಬ್ರಹ್ಮನಿಗೆ,

---

1. ಅಭಿಧ್ಯಾತ್ವ ಎಂಬ ಧರ್ಮವನ್ನು ಹೇಳುವುದು.

2. ಮಹಾಮಾಯೇತ್ಯವಿದ್ಯೇತಿ ನಿಯತಿರ್ಮೋಹಿನೀತಿ ಚ ।
ಪ್ರಕೃತಿರ್ವಾಸನೇತ್ಯೇವಂ ತವೇಚ್ಛಾನಂತ ಕಥ್ಯತೇ ॥

ಎಂದು ಭಾಷ್ಯದಲ್ಲಿ ಉದಾಹರಿಸಿರುವ ಸ್ಮೃತಿ. "ಹೇ ಅನಂತ! ನಿನ್ನ ಇಚ್ಛೆಯನ್ನು ಮಹಾ ಮಾಯಾ, ಅವಿದ್ಯಾ, ನಿಯತಿ, ಮೋಹಿನೀ, ಪ್ರಕೃತಿ, ವಾಸನಾ ಇತ್ಯಾದಿ ಶಬ್ದಗಳಿಂದ ಕರೆಯು ವರು" ಎಂದು ಸ್ಮೃತಿಯ ಅಭಿಪ್ರಾಯ.

3. "ಸೋಽಭಿಧ್ಯಾ ಸ ಜೂತಿಃ ಸ ಪ್ರಜ್ಞಾ ಸ ಆನಂದಃ" ಎಂದು ಭಾಷ್ಯೋದಾಹೃತ ಶ್ರುತಿ. "ಪರಮಾತ್ಮನು ಇಚ್ಛಾ, ಪ್ರೇರಣೆ, ಪ್ರಜ್ಞೆ, ಆನಂದ—ಇವುಗಳ ಸ್ವರೂಪವಾಗಿದ್ದಾನೆ" ಎಂದು ಶ್ರುತ್ಯರ್ಥ.

आद्योक्तं सामान्यरूपं द्वितीयोक्तं पारम्पर्यरूपं च मानं विना विशिष्य मानाभावात् कथं प्रकृत्यादिशब्दं ब्रह्मेत्यत आह—

॥ ॐ साक्षाच्चोभयाम्नानात् ॐ ॥ १-४-२६

च एव । प्रकृत्यादिर्ब्रह्मैव । साक्षादेव सामान्यपारम्पर्ये विनोभयस्य प्रकृत्यादिशब्दत्वस्य पुरुषत्वस्य चाम्नानात् । "एष स्त्री एष पुरुषः" इति श्रुतावित्यर्थः ॥

निमित्ताभावान्न प्रकृतिशब्दं ब्रह्मेत्यत आह—

॥ ॐ आत्मकृतेः परिणामात् ॐ ॥ १-४-२७

---

ಅಭಿಧ್ಯಾತ್ಯೋಪದೇಶಾತ್–ಇಚ್ಛಾರೂಪತ್ವವನ್ನು ಹೇಳಿರುವುದರಿಂದ ಎಂದು ಅರ್ಥ. ಪ್ರಕೃತಿಶಬ್ದವಾಚ್ಯವಾದ ಇಚ್ಛೆಯು ಬ್ರಹ್ಮರೂಪವಾದುದರಿಂದ ಬ್ರಹ್ಮನು ಪ್ರಕೃತಿ ಶಬ್ದವಾಚ್ಯನೆಂದು ಭಾವ.

ಮೊದಲನೆಯ ಸೂತ್ರದಲ್ಲಿ ಹೇಳಿದ ಸಾಮಾನ್ಯ ಪ್ರಮಾಣ, ಎರಡನೆಯ ಸೂತ್ರದಲ್ಲಿ ಹೇಳಿದ ಪರಂಪರೆಯ ಪ್ರಮಾಣ ಇವುಗಳನ್ನು ಬಿಟ್ಟು ಪ್ರತ್ಯೇಕ ಪ್ರಮಾಣ ವಿಲ್ಲವಾದ್ದರಿಂದ ಬ್ರಹ್ಮನು ಪ್ರಕೃತ್ಯಾದಿಶಬ್ದವಾಚ್ಯನೆನ್ನುವುದು ಹೇಗೆಂಬ ಆಕ್ಷೇಪಣೆಗೆ ಸಮಾಧಾನ—

ಓಂ ಸಾಕ್ಷಾಚ್ಚೋಭಯಾಮ್ನಾನಾತ್ ಓಂ (೧-೪-೨೬)

**ಸೂತ್ರಾರ್ಥ**

'ಚ' ಶಬ್ದಕ್ಕೆ ಏವ ಎಂದು ಅರ್ಥ. ಬ್ರಹ್ಮನೇ ಪ್ರಕೃತ್ಯಾದಿ ಶಬ್ದವಾಚ್ಯನು. ಸಾಕ್ಷಾತ್ತಾಗಿಯೇ ಅಂದರೆ ಸಾಮಾನ್ಯ ಅಥವಾ ಪರಂಪರೆಯ ಪ್ರಮಾಣಗಳನ್ನು ಬಿಟ್ಟು 'ಏಷ ಸ್ತ್ರೀ ಏಷ ಪುರುಷಃ'[1] ಎಂಬ ಶ್ರುತಿಯಲ್ಲಿ ಎರಡನ್ನೂ ಅಂದರೆ ಪ್ರಕೃತ್ಯಾದಿ ಶಬ್ದವಾಚ್ಯತ್ವವನ್ನೂ ಪುರುಷತ್ವವನ್ನೂ ಹೇಳಿರುವುದರಿಂದ ಎಂದು ಅರ್ಥ.

ಪ್ರಕೃತಿ ಶಬ್ದದ ಪ್ರವೃತ್ತಿನಿಮಿತ್ತವಿಲ್ಲದುದರಿಂದ ಬ್ರಹ್ಮನು ಪ್ರಕೃತಿಶಬ್ದವಾಚ್ಯ ನಾಗಲಾರನು ಎಂಬ ಆಶಂಕೆಗೆ ಸಮಾಧಾನ—

ಓಂ ಆತ್ಮಕೃತೇಃ ಪರಿಣಾಮಾತ್ ಓಂ (೧-೪-೨೭)

---

1. "ಏಷ ಸ್ತ್ರೀ ಏಷ ಪುರುಷ ಏಷ ಪ್ರಕೃತಿರೇಷ ಆತ್ಮೈಷ ಬ್ರಹ್ಮೈಷ ಲೋಕ ಏಷ ಆಲೋಕೋ ಯೋಽಸೌ ಹರಿರಾದಿರನಾದಿರನಂತೋಽನಂತಃ ಪರಮಃ ಪರಾದ್ವಿಶ್ವರೂಪಃ" ಎಂದು ಪೈಂಗೀ ಶ್ರುತಿ.

योग्यतया प्रकृतेरित्यन्वेति । परिणामादिति ल्यब्लोपे पञ्चमी । प्रकृतेः परिणामं विधाय तत्प्रेरणायाऽत्मनः प्रकृतेर्बहुधा करणात् प्रकृतिर्ब्रह्मेत्यर्थः । प्रकृष्टा कृतिर्यस्येति योगसम्भवात् । तदधीनत्वे सत्यपि तदनादरेण गुणपूर्त्यर्थं निमित्तान्तरोक्तिः । परिणामादित्युक्तिरात्मप्रकृतेस्तत्प्रेरणरूपफलोक्त्यर्था ॥

कथं प्रकृत्यादिस्त्रीलिङ्गशब्दवाच्यत्वं विष्णोः, स्त्रीत्वरूपनिमित्ताभावादत आह—

॥ ॐ योनिश्च हि गीयते ॐ ॥ १-४-२८

**ಸೂತ್ರಾರ್ಥ**

ಅನ್ವಯಯೋಗ್ಯವಾದ 'ಪ್ರಕೃತೇಃ' ಎಂಬ ಪದವು ಅನ್ವಿತವಾಗುತ್ತದೆ. 'ಪರಿಣಾಮಾತ್' ಎಂಬಲ್ಲಿ ಪಂಚಮೀವಿಭಕ್ತಿಯು ಲ್ಯಪ್ ಪ್ರತ್ಯಯದ ಲೋಪದ ನಿಮಿತ್ತದಿಂದಾಗಿ ಬಂದಿದೆ. ಪ್ರಕೃತಿಗೆ ವಿಕಾರವನ್ನುಂಟುಮಾಡಿ ಆ ಪ್ರಾಕೃತ ವಿಕಾರಗಳನ್ನು ಪ್ರೇರಿಸುವುದಕ್ಕೋಸ್ಕರ ತನ್ನ ಸ್ವರೂಪವನ್ನು ಬಹುವಿಧವಾಗಿ ಮಾಡಿ ಕೊಳ್ಳುವುದರಿಂದ, ಪ್ರಕೃಷ್ಟವಾದ ಕೃತಿಯುಳ್ಳವನು ಎಂಬ ಯೋಗವು ಉಪಪನ್ನ ವಾಗುವುದು. ಆದ್ದರಿಂದ ಬ್ರಹ್ಮನು ಪ್ರಕೃತಿಶಬ್ದವಾಚ್ಯನೆಂದು ಅರ್ಥ

**ಈ ಸೂತ್ರದ, ಅದರಲ್ಲೂ 'ಪರಿಣಾಮಾತ್' ಎಂಬ ಪದದ ಉಪಯುಕ್ತತೆ**

ಪ್ರಕೃತಿಶಬ್ದದ ಪ್ರವೃತ್ತಿನಿಮಿತ್ತವು ಭಗವದಧೀನವಾದುದರಿಂದಲೇ ಭಗವಂತನು ಪ್ರಕೃತಿಶಬ್ದವಾಚ್ಯನೆಂದು ಹೇಳಬಹುದಾಗಿದ್ದರೂ ಅದನ್ನು ಆದರಿಸದೆ ಆತ್ಮಕೃತಿಯೆಂಬ ನಿಮಿತ್ತಾಂತರವನ್ನು ಹೇಳಿರುವುದು ಗುಣಪೂರ್ಣತ್ವಸಿದ್ಧಿಗಾಗಿ. ಭಗವಂತನು ತನ್ನ ಸ್ವರೂಪವನ್ನು ಅನೇಕವನ್ನಾಗಿ ಮಾಡಿಕೊಳ್ಳುವುದರ ಪ್ರಯೋಜನ ಅನೇಕವಸ್ತು ಗಳನ್ನು ಪ್ರೇರಿಸುವುದೇ ಆಗಿದೆ ಎಂದು ತಿಳಿಸಲು 'ಪರಿಣಾಮಾತ್' ಎಂಬ ಪದವನ್ನು ಪ್ರಯೋಗಿಸಲಾಗಿದೆ.

ಸ್ತ್ರೀತ್ವವೆಂಬ ನಿಮಿತ್ತವೇ ಇಲ್ಲದಿರುವಾಗ ಬ್ರಹ್ಮನು ಪ್ರಕೃತ್ಯಾದಿ ಸ್ತ್ರೀಲಿಂಗ ಶಬ್ದವಾಚ್ಯನಾಗುವುದು ಹೇಗೆ ಎಂಬ ಆಶಂಕೆಗೆ ಸಮಾಧಾನ—

ಓಂ ಯೋನಿಶ್ಚ ಹಿ ಗೀಯತೇ ಓಂ (೧-೪-೨೮)

हि यस्माद्योनिश्च स्वदेहादुत्पादकं ब्रह्म गीयते "यद्भूतयोनिं परिपश्यन्ति" इति श्रुतौ अतः प्रकृत्यादिशब्दं ब्रह्मेत्यर्थः । "सूतिरव्यवधानेन" इति स्मृतेरव्यवधानेन स्वदेहादेवोत्पादकत्वरूप-योनिशब्दतः स्त्रीत्वसम्भवादिति भावः । प्रकृतिशब्दनिमित्तेन सह तदुपलक्षितस्त्रीशब्दमात्रनिमित्तसमुच्चये चः ॥ ६ ॥

सर्वव्याख्यानाधिकरणम्—७

## ॥ ॐ एतेन सर्वे व्याख्याता व्याख्याताः ॐ ॥ १-४-२९

अत्र नये निषेधार्थाः शब्दाः समन्वीयन्ते । एतेन तदधीन-

---

**ಸೂತ್ರಾರ್ಥ**

ಹಿ–ಯಾವ ಕಾರಣದಿಂದ, ಯೋನಿಶ್ಚ- ತನ್ನ ದೇಹದಿಂದಲೇ ಉತ್ಪಾದಕನೆಂದೂ, 'ಯದ್ಭೂತಯೋನಿಂ ಪರಿಪಶ್ಯಂತಿ' ಎಂಬ ಶ್ರುತಿಯಲ್ಲಿ ಬ್ರಹ್ಮನು ಹೇಳಲ್ಪಟ್ಟಿದ್ದಾನೋ ಆ ಕಾರಣದಿಂದ ಬ್ರಹ್ಮನು ಪ್ರಕೃತಿಶಬ್ದವಾಚ್ಯನೆಂದು ಅರ್ಥ. [1]'ಸೂತಿರವ್ಯವಧಾನೇನ' ಎಂದು ಸ್ಮೃತಿಯಿರುವುದರಿಂದ ಸ್ವದೇಹದಿಂದಲೇ ಉತ್ಪಾದಕತ್ವರೂಪವಾದ ಯೋನಿ ಪದಾರ್ಥವಾದ ಸ್ತ್ರೀತ್ವವು ಬ್ರಹ್ಮನಲ್ಲಿ ಇರುವುದರಿಂದ ಎಂದು ಭಾವ. 'ಚ' ಶಬ್ದವು ಪ್ರಕೃತಿಶಬ್ದದ ನಿಮಿತ್ತದೊಂದಿಗೆ ಪ್ರಕೃತಿಶಬ್ದದಿಂದ ಉಪಲಕ್ಷಿತವಾಗುವ ಸಕಲ ಸ್ತ್ರೀ ಶಬ್ದಗಳ ನಿಮಿತ್ತಗಳ ಸಮುಚ್ಚಯವನ್ನು ಹೇಳುವುದು.

### ಸರ್ವವ್ಯಾಖ್ಯಾನಾಧಿಕರಣ—೭

## ಓಂ ಏತೇನ ಸರ್ವೇ ವ್ಯಾಖ್ಯಾತಾ ವ್ಯಾಖ್ಯಾತಾಃ ಓಂ (೧–೪–೨೯)

**ಈ ಅಧಿಕರಣದ ಉದ್ದೇಶ ಮತ್ತು ಸೂತ್ರಾರ್ಥ**

ಈ ನಯದಲ್ಲಿ ನಿಷೇಧಾರ್ಥಕವಾದ ಶಬ್ದಗಳ ಸಮನ್ವಯವನ್ನು ಮಾಡಲಾಗು

---

1. ವ್ಯವಧಾನೇನ ಸೂತಿಸ್ತು ಪುಂಸ್ತ್ವಂ ವಿದ್ವದ್ಭಿರುಚ್ಯತೇ ।
ಸೂತಿರವ್ಯವಧಾನೇನ ಪ್ರಕೃತಿತ್ವಮಿತಿ ಸ್ಥಿತಿಃ ॥
ಉಭಯಾತ್ಮಕಸೂತಿತ್ವಾತ್ ವಾಸುದೇವಃ ಪರಃ ಪುಮಾನ್ ।
ಪ್ರಕೃತಿಃ ಪುರುಷಶ್ಚೇತಿ ಶಬ್ದೈರೇಕೋಽಭಿಧೀಯತೇ ॥ (ಬ್ರಹ್ಮಾಂಡಪುರಾಣ)

*

त्वादिप्रागुक्तहेतुजातेन सर्वे शून्यासदादिशब्दास्तत्तु मुख्यवृत्त्या ब्रह्मैवेति व्याख्याताः प्रतिपादिता इत्यर्थः । प्रागुक्तसर्वप्रमेयावधारणार्था द्विरुक्तिः । "अवधारणार्थं सर्वस्य" इत्यादेः ॥ ७ ॥

अत्राद्यनये तत्तन्निष्ठेशसम्बन्धादन्यत्र व्यवहारः स्वातन्त्र्यस्य शब्दप्रवृत्तौ निमित्तत्वं मुख्यत्वं च । ज्योतिर्नये शब्दानां पदवर्णरूपेणेशे वृत्तिरन्यत्र रूढिश्च । नसङ्ख्येति नये ईशस्य रूपभेदेनाधाराधेयभावः । कारणत्वेनेति नये ईशस्य रूपभेदेन व्यङ्ग्यव्यञ्जकत्व-

ವುದು. ಏತೇನ–ತದಧೀನತ್ವ ಮೊದಲಾದ ಹಿಂದೆ ಹೇಳಿರುವ ಹೇತುಗಳ ಸಮೂಹ ದಿಂದ, ಸರ್ವೇ–ಶೂನ್ಯ, ಅಸತ್ ಮೊದಲಾದ ಶಬ್ದಗಳು, ತತ್ತು–ಮುಖ್ಯವೃತ್ತಿಯಿಂದ ಬ್ರಹ್ಮನನ್ನೇ ಹೇಳುವವೆಂದು, ವ್ಯಾಖ್ಯಾತಾಃ–ಪ್ರತಿಪಾದಿತವಾಗಿವೆ ಎಂದು ಅರ್ಥ. 1 'ಅವಧಾರಣಾರ್ಥಂ ಸರ್ವಸ್ಯ' ಇತ್ಯಾದಿ ಪ್ರಮಾಣಾನುಸಾರ ಹಿಂದೆ ಪ್ರತಿಪಾದಿಸಿರುವ ಎಲ್ಲ ಪ್ರಮೇಯಗಳ ಅವಧಾರಣವೇ ವ್ಯಾಖ್ಯಾತಾಃ ವ್ಯಾಖ್ಯಾತಾಃ ಎಂಬ ದ್ವಿರುಕ್ತಿಯ ಪ್ರಯೋಜನ.

## ಈ ಪಾದದ ಅಧಿಕರಣಗಳ ಸಾರಸಂಗ್ರಹ

ಈ ಪಾದದ ಮೊದಲನೆಯ ಅಧಿಕರಣದಲ್ಲಿ ಆಯಾಯಾ ವಸ್ತುಗಳಲ್ಲಿರುವ ಭಗವಂತನ ಸಂಬಂಧದಿಂದಲೇ ಪದಗಳು ಇತರ ವಸ್ತುಗಳಲ್ಲಿ ವ್ಯವಹರಿಸಲ್ಪಡುತ್ತವೆಂದೂ, ಸ್ವಾತಂತ್ರ್ಯವೇ ಶಬ್ದಗಳ ಪ್ರವೃತ್ತಿನಿಮಿತ್ತವೆಂದೂ ಮತ್ತು ಅದೇ ಮುಖ್ಯವೆಂದೂ ಪ್ರತಿಪಾದಿಸಲಾಗಿದೆ. ಜ್ಯೋತಿರಧಿಕರಣದಲ್ಲಿ ಪದ, ವರ್ಣ ರೂಪವಾದ ಶಬ್ದಗಳು ಭಗವದ್ವಾಚಕವೆಂದೂ, ಆದರೂ ಇತರ ಪದಾರ್ಥಗಳಲ್ಲಿ ಶಬ್ದಗಳಿಗೆ ರೂಢಿಯೂ ಇರುವುದೆಂದು ನಿರೂಪಿಸಲಾಗಿದೆ. ನಸಂಖ್ಯಾಧಿಕರಣದಲ್ಲಿ ಭಗವಂತನು ರೂಪಭೇದದಿಂದ ಆಧಾರನೂ ಆಧೇಯನೂ ಆಗಿರುವನೆಂದು ಹೇಳಲಾಗಿದೆ. ಕಾರಣತ್ವೇನ ಎಂಬ ಅಧಿಕರಣದಲ್ಲಿ ಭಗವಂತನಿಗೆ ರೂಪಭೇದದಿಂದ ವ್ಯಂಗ್ಯವ್ಯಂಜಕ ಭಾವರೂಪವಾದ ಕಾರ್ಯಕಾರಣಭಾವವನ್ನು ಹೇಳಲಾಗಿದೆ. ಸಮಾಕರ್ಷಾಧಿಕರಣ ದಲ್ಲಿ ವೃತ್ತಿಗಳ ತಾರತಮ್ಯವನ್ನು ಸಮರ್ಥಿಸಲಾಗಿದೆ. ಪ್ರಕೃತಿನಯದಲ್ಲಿ ಒಂದೇ

1. ಅವಧಾರಣಾರ್ಥಂ ಸರ್ವಸ್ಯಾಪ್ಯುಕ್ತಸ್ಯಾಧ್ಯಾಯಮೂಲತಃ ।
ದ್ವಿರುಕ್ತಿಂ ಕುರ್ವತೇ ಪ್ರಾಜ್ಞಾ ಅಧ್ಯಾಯಾಂತೇ ವಿನಿರ್ಣಯಃ ॥ (ವಾರಾಹಸಂಹಿತೆ)
ಅಧ್ಯಾಯದ ಆರಂಭದಿಂದ ಹೇಳಿದ ಎಲ್ಲವನ್ನೂ ದೃಢಪಡಿಸಲು ಪ್ರಾಜ್ಞರು ಅಧ್ಯಾಯದ ಅಂತ್ಯದಲ್ಲಿ ದ್ವಿರುಕ್ತಿಯನ್ನು ಉಪಯೋಗಿಸುವರು ಎಂದು ಭಾವ.

रूपकार्यकारणत्वम् । समाकर्षनये वृत्तितारतम्यम् । प्रकृतिनये एकस्मिन्नपि रूपे स्त्रीत्वपुंस्त्वसमावेशः । अन्त्यनये तुच्छनियन्तृत्वमिति ध्येयम् ॥

शब्दा द्विधा गुणावद्यवाचित्वेन व्यवस्थिताः ।
अन्त्याः स्वातन्त्र्यतोऽन्ये तु तद्गतत्वाच्च विष्णुगाः ॥

अध्यायपादसङ्गत्यादि गुरुपादकृतन्यायसङ्ग्रहे बोध्यम् ॥

इति श्रीमद्राघवेन्द्रयतिकृतायां तन्त्रदीपिकायां प्रथमाध्यायस्य
चतुर्थः पादः ॥ श्रीकृष्णार्पणमस्तु ॥

**इति श्रीमद्राघवेन्द्रयतिकृतायां तन्त्रदीपिकायां**
**प्रथमाध्यायः समाप्तः**

---

ಭಗವದ್ರೂಪದಲ್ಲೂ ಸ್ತ್ರೀತ್ವ ಮತ್ತು ಪುಂಸ್ತ್ವಗಳ ಸಮಾವೇಶವಿರುವುದೆಂದು ಉಕ್ತವಾಗಿದೆ. ಕೊನೆಯ ಅಧಿಕರಣದಲ್ಲಿ ಭಗವಂತನಿಗೆ ಅಸನ್ನಿಯಾಮಕತ್ವವನ್ನು ಪ್ರತಿಪಾದಿಸಲಾಗಿದೆ ಎಂದು ತಿಳಿಯಬೇಕು.

**ಈ ಪಾದದ ಮಥಿತಾರ್ಥ**

ಗುಣವಾಚಕವೆಂದೂ ದೋಷವಾಚಕವೆಂದೂ ಶಬ್ದಗಳು ಎರಡು ವಿಧವಾಗಿ ವ್ಯವಸ್ಥೆಗೊಳಿಸಲ್ಪಟ್ಟಿವೆ. ಎರಡನೆ ರೀತಿಯ ಶಬ್ದಗಳು ತಮ್ಮ ಪ್ರವೃತ್ತಿನಿಮಿತ್ತವನ್ನು ಕುರಿತು ಭಗವಂತನಿಗೆ ಸ್ವಾತಂತ್ರ್ಯವಿರುವುದರಿಂದಲೂ, ಉಳಿದ ಶಬ್ದಗಳು ತಮ್ಮ ಪ್ರವೃತ್ತಿನಿಮಿತ್ತಗಳು ಭಗವಂತನಲ್ಲಿ ಇರುವುದರಿಂದಲೂ ಭಗವಂತನನ್ನು ಹೇಳುವುವು.

ಅಧ್ಯಾಯಸಂಗತಿ, ಪಾದಸಂಗತಿ ಮೊದಲಾದವುಗಳನ್ನು ಗುರುಪಾದರು ರುವ ನ್ಯಾಯಸಂಗ್ರಹದಲ್ಲಿ ತಿಳಿಯಬೇಕು.

ಶ್ರೀಮದ್ರಾಘವೇಂದ್ರಯತಿಗಳು ರಚಿಸಿರುವ ತಂತ್ರದೀಪಿಕೆಯಲ್ಲಿ
ಪ್ರಥಮಾಧ್ಯಾಯದ ಚತುರ್ಥಪಾದವು ಸಮಾಪ್ತವಾಯಿತು.

ಶ್ರೀಕೃಷ್ಣಾರ್ಪಣಮಸ್ತು

# अथ द्वितीयाध्यायस्य प्रथमः पादः

स्मृत्यधिकरणम्—१

पूर्वेणोक्तसमन्वयेऽनेनाध्यायेन विरोधो निरस्यते । युक्ति-समय-श्रुति-युक्त्युपेतश्रुतिविरोधाः पादेषु क्रमेण निरस्यन्ते । आद्यपादे प्रबलत्वाद्युक्तिविरोधः, स्मृतिविरोधश्चतूरूपत्वादाद्यनये निरस्यते ॥

## ॥ ॐ स्मृत्यनवकाशदोषप्रसङ्ग इति चेन्नाऽन्य-स्मृत्यनवकाशदोषप्रसङ्गात् ॐ ॥ २-१-१

अत्र स्मार्तास्तावद्वेदप्रामाण्यवादिनस्तदवादिन इति द्वेधा ।

---

# ದ್ವಿತೀಯಾಧ್ಯಾಯ ಪ್ರಥಮಪಾದ

**ಈ ಅಧ್ಯಾಯದ, ಪ್ರಥಮಪಾದದ ಮತ್ತು ಪ್ರಥಮಾಧಿಕರಣದ ಪ್ರತಿಪಾದ್ಯ ವಿಷಯ—**

ಹಿಂದಿನ ಅಧ್ಯಾಯದಿಂದ ಹೇಳಿದ ಸಮನ್ವಯದ ವಿಷಯದಲ್ಲಿ ವಿರೋಧವನ್ನು ಈ ಅಧ್ಯಾಯದಿಂದ ನಿರಾಕರಿಸಲಾಗುವುದು. ಯುಕ್ತಿವಿರೋಧ, ಸಮಯವಿರೋಧ, ಶ್ರುತಿವಿರೋಧ, ಯುಕ್ತಿಸಹಿತವಾದ ಶ್ರುತಿಯ ವಿರೋಧ–ಇವುಗಳನ್ನು ಈ ಅಧ್ಯಾಯದ ನಾಲ್ಕು ಪಾದಗಳಲ್ಲಿ ಕ್ರಮವಾಗಿ ನಿರಾಕರಿಸಲಾಗುವುದು. ಯುಕ್ತಿವಿರೋಧವು ಪ್ರಬಲವಾದುದರಿಂದ ಮೊದಲನೆ ಪಾದದಲ್ಲಿ ನಿರಾಕರಿಸಲ್ಪಟ್ಟಿದೆ. ಸ್ಮೃತಿ ವಿರೋಧವು ಯುಕ್ತಿವಿರೋಧ ಮೊದಲಾದ ನಾಲ್ಕು ವಿರೋಧಗಳ ಸ್ವರೂಪವಾದುದರಿಂದ ಮೊದಲನೆಯ ಅಧಿಕರಣದಲ್ಲಿ ಸ್ಮೃತಿವಿರೋಧವನ್ನು ನಿರಾಕರಿಸಲಾಗುವುದು.

ಸ್ಮೃತ್ಯಧಿಕರಣ—೧

## ಓಂ ಸ್ಮೃತ್ಯನವಕಾಶದೋಷಪ್ರಸಂಗ ಇತಿ ಚೇನ್ನಾನ್ಯ-ಸ್ಮೃತ್ಯನವಕಾಶದೋಷಪ್ರಸಂಗಾತ್ ಓಂ (೨-೧-೧)

**ವಿರೋಧಿಗಳಾದ ಸ್ಮೃತಿಗಳು**

ಸ್ಮೃತಿಯನ್ನು ಅನುಸರಿಸುವವರಲ್ಲಿ ಎರಡು ಬಗೆ—ವೇದಪ್ರಾಮಾಣ್ಯವನ್ನು ಒಪ್ಪುವವರು ಮತ್ತು ಒಪ್ಪದಿರುವವರು. ವೇದಪ್ರಾಮಾಣ್ಯವಾದಿಗಳೂ ವೇದಕ್ಕೆ

आद्येऽपि तदपौरुषेयत्ववादिनस्तद्वादिन इति द्वेधा । तत्सर्वस्मृत्यविरोधोऽत्रोच्यते । स्मृतीनां शैवसाङ्ख्यकाणादादिस्मृतीनां अन्यपरत्वाभावरूपानवकाशेन विष्णुकर्तृत्वादिबोधकश्रुतेरप्रामाण्यदोषप्रसङ्ग इति तदनुरोधेन श्रुतिर्नेयेति चेन्न । अन्यासां पञ्चरात्रस्मृतीनां विष्णुकर्तृत्वादर्थान्तरपरत्वाभावरूपानवकाशेन तद्विरुद्धत्वादितरस्मृतीनामेवाप्रामाण्यदोषप्रसङ्गात् । एवञ्च शैवादिस्मृतिषु श्रौतस्मृतिभिः प्रतिरुद्धास्वप्रतिबद्धश्रुतिभिरेव विष्णुकर्तृत्वादिसिद्धिरिति भावः । यद्वा अन्यासां श्रौतस्मृतीनां श्रुतिसंवादेन बलवत्त्वादनवकाशेन शैवादिस्मृतीनामप्रामाण्याख्यदोषस्य प्रकर्षेण सङ्गात् सम्बन्धा-

---

ಅಪೌರುಷೇಯತ್ವವನ್ನು ಹೇಳುವವರು ಮತ್ತು ಹೇಳದವರು ಎಂದು ಎರಡು ವಿಧ. ಅವರೆಲ್ಲರ ಸ್ಮೃತಿಗಳ ಅವಿರೋಧವನ್ನು ಈ ಅಧಿಕರಣದಲ್ಲಿ ಹೇಳಲಾಗುವುದು.

**ಸೂತ್ರಾರ್ಥ**

ಶೈವ, ಸಾಂಖ್ಯ, ಕಾಣಾದ ಮೊದಲಾದ ಸ್ಮೃತಿಗಳಿಗೆ ಅನವಕಾಶದಿಂದಾಗಿ ಅಂದರೆ ಶಿವ, ಪ್ರಕೃತಿ ಮೊದಲಾದವುಗಳನ್ನು ಬಿಟ್ಟು ಅನ್ಯತ್ರ ತಾತ್ಪರ್ಯವೇ ಇಲ್ಲದಿರುವ ಕಾರಣದಿಂದ ವಿಷ್ಣುವಿಗೇ ಜಗತ್ಕರ್ತೃತ್ವ ಮೊದಲಾದವುಗಳನ್ನು ಬೋಧಿಸುವ ಶ್ರುತಿಗಳಿಗೆ ಅಪ್ರಾಮಾಣ್ಯವೆಂಬ ದೋಷ ಬರುವ ಪ್ರಸಂಗವಿರುವುದು. ಆದ್ದರಿಂದ ಆ ಸ್ಮೃತಿಗಳಿಗೆ ಅನುಸಾರವಾಗಿಯೇ ಶ್ರುತಿಗಳನ್ನು ವ್ಯಾಖ್ಯಾನಿಸತಕ್ಕದ್ದು ಎಂದರೆ ಅದು ಸರಿಯಲ್ಲ. ಮೇಲೆ ಹೇಳಿದ ಸ್ಮೃತಿಗಳಿಗಿಂತ ಭಿನ್ನವಾದ ಪಂಚರಾತ್ರ ಸ್ಮೃತಿಗಳು ಅನವಕಾಶವಾಗಿವೆ ಅಂದರೆ ವಿಷ್ಣುಕರ್ತೃತ್ವವನ್ನು ಬಿಟ್ಟು ಇತರ ವಿಷಯದಲ್ಲಿ ತಾತ್ಪರ್ಯವನ್ನು ಪಡೆದಿಲ್ಲ. ಆದ್ದರಿಂದ ಅಂತಹ ಪಂಚರಾತ್ರಸ್ಮೃತಿ ವಿರುದ್ಧವಾದುದರಿಂದ ಶೈವಾದಿಸ್ಮೃತಿಗಳಿಗೇ ಅಪ್ರಾಮಾಣ್ಯದೋಷ ಬರುವ ಪ್ರಸಂಗವಿದೆ. ಹೀಗೆ ಶ್ರುತಿಗೆ ಅನುಗುಣವಾದ ಸ್ಮೃತಿಗಳಿಂದ ಶೈವಾದಿಸ್ಮೃತಿಗಳು ಪ್ರತಿರೋಧವನ್ನು ಪಡೆದಾಗ ಪ್ರತಿಬಂಧವೇ ಇಲ್ಲದ ಶ್ರುತಿಗಳಿಂದಲೇ ವಿಷ್ಣುವಿಗೆ ಜಗತ್ಕರ್ತೃತ್ವ ಮೊದಲಾದವು ಸಿದ್ಧಿಸುತ್ತವೆ ಎಂದು ಭಾವ.

**' ಅನ್ಯಸ್ಮೃತ್ಯನವಕಾಶದೋಷಪ್ರಸಂಗಾತ್ ' ಎಂಬ ಭಾಗಕ್ಕೆ ಅರ್ಥಾಂತರ**

ಅಥವಾ, ಅನ್ಯಸ್ಮೃತಿಗಳು ಅಂದರೆ ಶ್ರುತ್ಯನುಸಾರಿಯಾದ ಸ್ಮೃತಿಗಳು ಶ್ರುತಿಸಂವಾದ ಪ್ರಯುಕ್ತ ಪ್ರಾಬಲ್ಯದಿಂದ ನಿರವಕಾಶವಾಗಿವೆ. ಆದ್ದರಿಂದ ಶೈವಾದಿ ಸ್ಮೃತಿಗಳಿಗೆ ಅಪ್ರಾಮಾಣ್ಯವೆಂಬ ದೋಷದ ಪ್ರಸಂಗ ಅಂದರೆ ಪ್ರಕರ್ಷದಿಂದ

दत्यन्ताप्रामण्यादित्यर्थः । तन्त्वित्यत्रोपक्रमाद्यैरेव वेदार्थो निर्णय इति सिद्धावपीहोपक्रमादयोऽपि स्मृत्यनुरोधेन नेया इति शङ्केति ध्येयम् । वृत्त्यन्तरं तु बौद्धार्हतादिस्मृतीनामन्यपरत्वाभावरूपानवकाशेन तासामेवाप्तोक्तानामप्रामाण्यदोषप्रसङ्ग इति तद्विरुद्धश्रुतिर्न मानमिति चेन्न । अन्यस्मृतीनां श्रौतस्मृतीनामनवकाशेन श्रौतस्मृतीनामेवाप्रामाण्यदोषप्रसङ्गादिति । तात्पर्यं तु पूर्ववत् ।

श्रौतस्मृतिविरोधेऽप्याप्तोक्तानामवैदिकस्मृतीनां कथमप्रामाण्यमित्यत आह—

॥ ॐ इतरेषां चानुपलब्धेः ॐ ॥ २-१-२

---

ಸಂಬಂಧವು ಆಗುವುದು. ಅತ್ಯಂತ ಅಪ್ರಾಮಾಣ್ಯ ಬರುವುದು ಎಂದು ಅರ್ಥ. 'ತತ್ತು' ಎಂಬ ಸೂತ್ರದಲ್ಲಿ ಉಪಕ್ರಮಾದಿಗಳಿಂದಲೆ ವೇದಾರ್ಥವನ್ನು ನಿರ್ಣಯಿಸತಕ್ಕದ್ದು ಎಂದು ಸಿದ್ಧವಾಗಿದ್ದರೂ, ಉಪಕ್ರಮಾದಿಗಳನ್ನೂ ಸ್ಮೃತಿಗಳಿಗನುಸಾರವಾಗಿಯೇ ವ್ಯಾಖ್ಯಾನಿಸಬೇಕು ಎಂದು ಇಲ್ಲಿ ಶಂಕಿಸಲಾಗಿದೆಯೆಂದು ತಿಳಿಯಬೇಕು.

**ಸೂತ್ರಕ್ಕೆ ವ್ಯಾಖ್ಯಾನಾಂತರ**

ಬೌದ್ಧ, ಜೈನ ಮೊದಲಾದ ಸ್ಮೃತಿಗಳು ಅನವಕಾಶವಾಗಿವೆ ಅಂದರೆ ಅನ್ಯತ್ರ ತಾತ್ಪರ್ಯವನ್ನು ಪಡೆದಿಲ್ಲ. ಆದ್ದರಿಂದ ಆಪ್ತರಿಂದ ರಚಿತವಾದ ಅವುಗಳಿಗೆ ಅಪ್ರಾಮಾಣ್ಯದ ಪ್ರಸಂಗ ಬರುವುದು. ಆ ಕಾರಣದಿಂದ ಅಂತಹ ಸ್ಮೃತಿಗಳಿಂದ ವಿರುದ್ಧವಾದ ಶ್ರುತಿಗಳು ಪ್ರಮಾಣವಲ್ಲ ಎಂದರೆ ಅದು ಸರಿಯಲ್ಲ. ಏಕೆಂದರೆ, ಅನ್ಯ ಸ್ಮೃತಿಗಳೂ ಅಂದರೆ ಶ್ರುತ್ಯನುಸಾರಿಯಾದ ಸ್ಮೃತಿಗಳೂ ಅನವಕಾಶವಾಗಿವೆ. ಆದ್ದರಿಂದ ಇಂತಹ ಸ್ಮೃತಿಗಳಿಗೇ ಅಪ್ರಾಮಾಣ್ಯ ಉಂಟಾಗುವ ಪ್ರಸಂಗವಿದೆ— ಎಂದು ವ್ಯಾಖ್ಯಾನಾಂತರ. ಹಿಂದಿನಂತೆ ತಾತ್ಪರ್ಯ.

ಶ್ರುತ್ಯನುಸಾರಿ ಸ್ಮೃತಿಗಳ ವಿರೋಧವಿದ್ದರೂ ಆಪ್ತೋಕ್ತವಾದ ಅವೈದಿಕ ಸ್ಮೃತಿಗಳು ಅಪ್ರಮಾಣವೇಕಾಗಬೇಕು ಎಂಬ ಆಶಂಕೆಗೆ ಸಮಾಧಾನ—

ಓಂ ಇತರೇಷಾಂ ಚಾನುಪಲಬ್ಧೇಃ ಓಂ (೨-೧-೨)

नास्त्युपलब्धिर्यस्य तदनुपलब्धिः उपलब्ध्ययोग्यं फलं तस्मादितरेषां उपलब्धियोग्यानां फलानां, तृतीयादिष्विति पुंवद्भावः, अनुपलब्धेरनुपलम्भादित्यावृत्त्या योज्यम् । यद्वा पूर्वसूत्रे यस्मिन् प्रत्यक्षायोग्ये विश्वकर्तृत्वादौ स्मृतिविरोधः शङ्कितः तदितरेषां प्रत्यक्षयोग्यानां फलानामनुपलब्धेरित्यर्थः । प्रत्यक्षफलविसंवादादाप्तोक्तत्वमेव नेत्यवैदिकस्मृतीनामप्रामाण्यमिति भावः । चशब्दः किञ्चित् फलोपलब्ध्यङ्गीकारार्थः ॥

---

**ಸೂತ್ರಾರ್ಥ**

ಯಾವುದರ ಉಪಲಬ್ಧಿ ಇಲ್ಲವೋ ಅದು ಅನುಪಲಬ್ಧಿ ಅಂದರೆ ಹೊಂದಲರ್ಹವಲ್ಲದ ಫಲ. ಅದಕ್ಕಿಂತ ಭಿನ್ನವಾದ ಅಂದರೆ ಹೊಂದಲರ್ಹವಾದ ಫಲಗಳನ್ನೂ ಪಡೆಯದಿರುವುದರಿಂದ. 'ಅನುಪಲಬ್ಧೇಃ' ಎಂಬ ಪದವನ್ನು ಆವೃತ್ತಿ[1] ಮಾಡಿಕೊಂಡು ಯೋಜಿಸಿಕೊಳ್ಳಬೇಕು. 'ಅನುಪಲಬ್ಧೇಃ' ಎಂಬಲ್ಲಿ ಪುಂವದ್ಭಾವವು 'ತೃತೀಯಾದಿಷು'[2] ಇತ್ಯಾದಿ ಸೂತ್ರದಿಂದ ಬಂದಿದೆ. ಅಥವಾ, ಹಿಂದಿನ ಸೂತ್ರದಲ್ಲಿ ಪ್ರತ್ಯಕ್ಷಯೋಗ್ಯವಲ್ಲದ ಯಾವ ವಿಶ್ವಕರ್ತೃತ್ವ ಮೊದಲಾದ ವಿಷಯದಲ್ಲಿ ಸ್ಮೃತಿವಿರೋಧವನ್ನು ಶಂಕಿಸಲಾಯಿತೋ ಅವುಗಳಿಂದ ಭಿನ್ನವಾದ ಅಂದರೆ ಪ್ರತ್ಯಕ್ಷಯೋಗ್ಯವಾದ ಫಲಗಳೂ ಕಾಣಿಸದಿರುವುದರಿಂದ ಎಂದು ಅರ್ಥ. ಪ್ರತ್ಯಕ್ಷಫಲ ವಿಸಂವಾದವಿರುವುದರಿಂದ ಅವೈದಿಕ ಸ್ಮೃತಿಗಳು ಆಪ್ತೋಕ್ತಗಳೇ ಅಲ್ಲ. ಆದ್ದರಿಂದ ಅವುಗಳು ಅಪ್ರಮಾಣವೆಂದು ಭಾವ. 'ಚ' ಶಬ್ದವು ಕೆಲವು ಫಲಗಳು ಉಂಟಾಗುವುದೆಂದು ಅಂಗೀಕರಿಸಿರುವುದನ್ನು ಸೂಚಿಸುವುದು.

---

1. ಆವೃತ್ತಿ ಮಾಡಿಕೊಂಡಾಗ 'ಅನುಪಲಬ್ಧೇಃ ಇತರೇಷಾಂ ಅನುಪಲಬ್ಧೇಃ' ಎಂಬ ವಾಕ್ಯವು ಲಭಿಸುತ್ತದೆ. ಹೊಂದಲರ್ಹವಲ್ಲದ ಫಲಗಳಿಂದ ಇತರವಾದ ಅಂದರೆ ಹೊಂದಲರ್ಹವಾದ ಫಲಗಳನ್ನು ಪಡೆಯದಿರುವುದರಿಂದ ಎಂದು ಒಟ್ಟು ಅರ್ಥ.

2. 'ನ ವಿದ್ಯತೇ ಉಪಲಬ್ಧಿಃ ಯಸ್ಯ ತತ್' ಎಂಬ ವಿಗ್ರಹ ಮಾಡಿದಾಗ ಅನುಪಲಬ್ಧಿ ಎಂದು ನಪುಂಸಕಲಿಂಗದ ರೂಪವಾಗುವುದು. ಪಂಚಮೀವಿಭಕ್ತಿಯಲ್ಲಿ ಈ ಶಬ್ದವು ಅನುಪಲಬ್ಧಿನಃ ಎಂದಿರಬೇಕು. ಆದರೆ 'ತೃತೀಯಾದಿಷು ಭಾಷಿತಪುಂಸ್ಕಂ ಪುಂವದ್ಗಾಲವಸ್ಯ' (ಪಾ. ಸೂ. ೭-೧-೭೪) ಎಂಬ ಸೂತ್ರದ ಪ್ರಕಾರ ಅನುಪಲಬ್ಧಿ ಶಬ್ದಕ್ಕೆ ಪುಂವದ್ಭಾವ ಬಂದಿರುವುದರಿಂದ 'ಅನುಪಲಬ್ಧೇಃ' ಎಂದು ಪುಲ್ಲಿಂಗದಂತೆ ರೂಪವಾಗುವುದೆಂದು ಭಾವ.

नन्ववैदिकस्मृतीनां मध्ये योगस्मृत्युक्तफले विसंवादाभावान्नाप्रामाण्यमित्यधिकाशङ्कायामाह—

॥ ॐ एतेन योगः प्रत्युक्तः ॐ ॥ २-१-३

एतेन प्रागुक्तफलानुपलम्भेन योगशास्त्रमपि प्रत्युक्तं निरस्तमित्यर्थः । प्रथमं स्वेदनं द्वितीयं गात्रभञ्जनमित्याद्युक्ताभ्यासावस्थोत्कर्षकाल एव स्वेदनादीनामदृष्टेरित्यर्थः ॥ १ ॥

न विलक्षणत्वाधिकरणम्—२

॥ ॐ न विलक्षणत्वादस्य तथात्वं च शब्दात् ॐ ॥
२-१-४

अत्र युक्त्यविरोध उच्यते । अस्य श्रुतिस्मृतिरूपस्य शास्त्रस्य

---

ಅವೈದಿಕಸ್ಮೃತಿಗಳ ಮಧ್ಯೆ ಯೋಗಸ್ಮೃತಿಯಲ್ಲಿ ಹೇಳಿರುವ ಫಲಗಳು ಆಗಿಯೇ ತೀರುವುದರಿಂದ ಯೋಗಸ್ಮೃತಿಗೆ ಅಪ್ರಾಮಾಣ್ಯವಿಲ್ಲ ಎಂಬ ಅಧಿಕಾಶಂಕೆಗೆ ಉತ್ತರ.

ಓಂ ಏತೇನ ಯೋಗಃ ಪ್ರತ್ಯುಕ್ತಃ ಓಂ (೨-೧-೩)

**ಸೂತ್ರಾರ್ಥ**

ಏತೇನ ಅಂದರೆ ಹಿಂದೆ ಹೇಳಿದ ಫಲಾನುಪಲಬ್ಧಿಯೆಂಬ ಹೇತುವಿನಿಂದಲೇ ಯೋಗಶಾಸ್ತ್ರವೂ ಕೂಡ, ಪ್ರತ್ಯುಕ್ತಂ-ನಿರಾಕೃತವಾಗುವುದು ಎಂದು ಅರ್ಥ. ಮೊದಲು ಬೆವರುವಿಕೆ, ಅನಂತರ ಮೈಮುರಿಯುವಿಕೆ ಇತ್ಯಾದಿಯಾಗಿ ಹೇಳಿದ ಫಲಗಳು ಯೋಗಾಭ್ಯಾಸಾವಸ್ಥೆಯು ಉತ್ಕರ್ಷವನ್ನು ಪಡೆದ ಕಾಲದಲ್ಲಿಯೇ ಕಾಣದಿರುವುದರಿಂದ ಎಂದು ಅರ್ಥ.

ನ ವಿಲಕ್ಷಣತ್ವಾಧಿಕರಣ—೨

ಓಂ ನ ವಿಲಕ್ಷಣತ್ವಾದಸ್ಯ ತಥಾತ್ವಂ ಚ ಶಬ್ದಾತ್ ಓಂ
(೨-೧-೪)

**ಅಧಿಕರಣದ ಉದ್ದೇಶ ಮತ್ತು ಸೂತ್ರಾರ್ಥ**

ಈ ಅಧಿಕರಣದಲ್ಲಿ ಯುಕ್ತಿವಿರೋಧವಿಲ್ಲವೆಂಬುದನ್ನು ಹೇಳಲಾಗುವುದು. ಅಸ್ಯ-ಶ್ರುತಿ ಮತ್ತು ಶ್ರುತ್ಯನುಸಾರಿಯಾದ ಸ್ಮೃತಿರೂಪವಾದ ಶಾಸ್ತ್ರಕ್ಕೆ, ತಥಾತ್ವಂ-

तथात्वं शैवादिस्मृतिवदप्रामाण्यं नास्ति । श्रुतेरपौरुषेयत्वेन श्रौतस्मृतेस्तदनुसारित्वेन विलक्षणत्वात्, स्वतःप्रामाण्यरूपवैलक्षण्याच्च । तथात्वं चापौरुषेयत्वं तदनुसारित्वरूपं वैलक्षण्यं संवादानपेक्षत्वरूपं स्वतःप्रामाण्यरूपं च यथाक्रमं "वाचा विरूप नित्यया" इति, "भारतं पञ्चरात्रं च वेदा" इति, "न चक्षुर्न श्रोत्रं न तर्को न स्मृतिर्वेदा ह्येवैनं वेदयन्ति" इति शब्दात् सिद्धमित्यर्थः । तथात्वमित्यस्योभयत्रान्वयः । एवं च शैवादिस्मृतिवैलक्षण्यान्न फलविसंवादरूपयुक्त्या श्रुत्यादेस्तद्वदप्रामाण्यमिति भावः ॥

ननु श्रुत्यादेः स्वतःप्रामाण्येऽपि विसंवादरूपापवादेनाप्रामाण्यं स्यादित्यत आह—

## ॥ ॐ दृश्यते तु ॐ ॥ २-१-५

---

ಶೈವಾದಿಸ್ಮೃತಿಗಳಿಗಿರುವಂತೆ ಅಪ್ರಾಮಾಣ್ಯವು, ನಾಸ್ತಿ–ಇಲ್ಲ. ಏಕೆಂದರೆ ವಿಲಕ್ಷಣತ್ವಾತ್–ಶ್ರುತಿಗಳು ಅಪೌರುಷೇಯವಾಗಿರುವ ಪ್ರಯುಕ್ತ, ಶ್ರೌತಸ್ಮೃತಿಗಳು ಅಂತಹ ಶ್ರುತ್ಯನುಸಾರಿಯಾಗಿರುವ ಪ್ರಯುಕ್ತ ಅವೈದಿಕ ಸ್ಮೃತಿಗಳಿಗಿಂತ ವಿಲಕ್ಷಣ ವಾಗಿವೆ. ಅಲ್ಲದೆ, ಸ್ವತಃ ಪ್ರಾಮಾಣ್ಯರೂಪ ವೈಲಕ್ಷಣ್ಯವನ್ನು ಪಡೆದಿವೆ. ತಥಾತ್ವಂ ಚ—ಅಪೌರುಷೇಯತ್ವ, ಅಪೌರುಷೇಯಶ್ರುತ್ಯನುಸಾರಿತ್ವ ಮತ್ತು ಸಂವಾದಾನಪೇಕ್ಷತ್ವರೂಪ ಸ್ವತಃಪ್ರಾಮಾಣ್ಯವೆಂಬ ವೈಲಕ್ಷಣ್ಯವೂ ಕೂಡ ಕ್ರಮವಾಗಿ, 'ವಾಚಾ ವಿರೂಪ ನಿತ್ಯಯಾ', 'ಭಾರತಂ ಪಂಚರಾತ್ರಂ ಚ ವೇದಾಃ' ಮತ್ತು 'ನ ಚಕ್ಷುರ್ನ ಶ್ರೋತ್ರಂ ನ ತರ್ಕೋ ನ ಸ್ಮೃತಿಃ ವೇದಾ ಹ್ಯೇವೈನಂ ವೇದಯಂತಿ' ಎಂಬ ಆಗಮದಿಂದ ಸಿದ್ಧವಾಗಿದೆ ಎಂದು ಅರ್ಥ. 'ತಥಾತ್ವಂ' ಎಂಬ ಪದವು ಎರಡೂ ಕಡೆ ಅನ್ವಯವನ್ನು ಪಡೆಯುವುದು. ಹೀಗೆ ಶೈವಾದಿಸ್ಮೃತಿಗಳಿಂದ ವಿಲಕ್ಷಣವಾಗಿರುವುದರಿಂದ ಶ್ರುತಿ ಮೊದಲಾದವುಗಳು ಅವೈದಿಕ ಸ್ಮೃತಿಗಳಂತೆ ಫಲವಿಸಂವಾದವೆಂಬ ಯುಕ್ತಿಯಿಂದಾಗಿ ಅಪ್ರಮಾಣವಾಗುವುದಿಲ್ಲವೆಂದು ಭಾವ.

ಶ್ರುತಿ ಮೊದಲಾದವುಗಳು ಸ್ವತಃ ಪ್ರಮಾಣಗಳಾಗಿದ್ದರೂ ವಿಸಂವಾದರೂಪ ಅಪವಾದ ಪ್ರಯುಕ್ತ ಅಪ್ರಮಾಣವೇಕಾಗಬಾರದು ಎಂಬ ಆಶಂಕೆಗೆ ಉತ್ತರ—

## ಓಂ ದೃಶ್ಯತೇ ತು ಓಂ (೨-೧-೫)

तुशब्दोऽधिकारिविशेषद्योतकः । इतरेषामित्यत्र प्रसक्तं फलं अधिकारिणां दृश्यते । क्वचिद्विसंवादः कर्तृवैगुण्यनिमित्तक इति भावः ॥ २ ॥

अभिमान्यधिकरणम्—३

## ॥ ॐ अभिमानिव्यपदेशस्तु विशेषानुगतिभ्याम् ॐ ॥ २-१-६

अत्र दृढयुक्त्यविरोध उच्यते । तुरेव । योग्यतयाऽभिमानिपदेनान्वेति । "मृदब्रवीत्", "ता आप ऐक्षन्त" इत्यादिश्रुतावभिमानिनश्चेतनस्यैव व्यपदेशः न तु जडस्य । येन मृन्न वक्त्री जडत्वादित्यादियुक्तिविरोधः स्यादिति भावः । नन्वभिमानिनः प्रादेशिकत्वविदेहत्वयोर्वैयर्थ्यं वक्तृत्वाद्ययोगो व्याप्तत्वसदेहत्वयोरनुपलम्भबाध

---

**ಸೂತ್ರಾರ್ಥ**

'ತು' ಶಬ್ದವು ಅಧಿಕಾರಿವಿಶೇಷವನ್ನು ಸೂಚಿಸುವುದು. 'ಇತರೇಷಾಂ' ಎಂಬಲ್ಲಿ ಪ್ರಸಕ್ತವಾಗಿರುವ ಫಲವು ಅಧಿಕಾರಿಗಳಿಗೆ ಲಭಿಸುವುದು ಕಂಡಿದೆ. ಕೆಲವೆಡೆ ಫಲ ಲಭಿಸದಿರುವುದಕ್ಕೆ ಕಾರಣ ಕರ್ತೃವಿನಲ್ಲಿರುವ ನ್ಯೂನತೆ ಎಂದು ಭಾವ.

ಅಭಿಮಾನ್ಯಧಿಕರಣ—೩

## ಓಂ ಅಭಿಮಾನಿವ್ಯಪದೇಶಸ್ತು ವಿಶೇಷಾನುಗತಿಭ್ಯಾಮ್ ಓಂ (೨-೧-೬)

**ಅಧಿಕರಣದ ಉದ್ದೇಶ ಮತ್ತು ಸೂತ್ರಾರ್ಥ**

ಈ ಅಧಿಕರಣದಲ್ಲಿ ದೃಢಯುಕ್ತಿಗಳಿಂದ ಅವಿರೋಧವನ್ನು ಹೇಳಲಾಗಿದೆ. 'ತು' ಶಬ್ದಕ್ಕೆ ಏವ ಎಂದು ಅರ್ಥ. ಇದು ಅನ್ವಯಯೋಗ್ಯವಾದ 'ಅಭಿಮಾನಿ' ಪದದೊಂದಿಗೆ ಅನ್ವಯವನ್ನು ಪಡೆಯುತ್ತದೆ. 'ಮೃದಬ್ರವೀತ್', 'ತಾ ಆಪ ಐಕ್ಷಂತ' ಇತ್ಯಾದಿ ಶ್ರುತಿಯಲ್ಲಿ ಅಭಿಮಾನಿಚೇತನವನ್ನು ಹೇಳಲಾಗಿದೆ ಹೊರತು ಜಡವನ್ನಲ್ಲ. ಜಡವನ್ನು ಹೇಳಿದ್ದರೆ 'ಮಣ್ಣು ಮಾತನಾಡುವುದಿಲ್ಲ, ಜಡವಾದ್ದರಿಂದ' ಎಂಬಿವೇ ಮೊದಲಾದ ಯುಕ್ತಿವಿರೋಧ ಬರುತ್ತಿತ್ತು ಎಂದು ಭಾವ.

इत्यत उक्तम्—विशेषेति । विशिष्यत इति विशेषः शक्तिः । अनुगतिर्व्याप्तिः, ताभ्याम् । व्याप्तत्वसदेहत्वयोरङ्गीकारेऽप्यन्तर्धानशक्त्या अदर्शनोपपत्तेरिति भावः । अत्राकाङ्क्षाक्रमोल्लङ्घनेऽल्पाक्षरत्वं प्रयोजकम् । यद्वा कथमभिमानिनः पृथिव्यादिवस्त्वन्तरमधिष्ठाय वचनादि-

---

**'ವಿಶೇಷಾನುಗತಿಭ್ಯಾಂ' ಎಂಬ ಸೂತ್ರಭಾಗಕ್ಕೆ ಅವತರಣಿಕೆ ಮತ್ತು ವ್ಯಾಖ್ಯಾನ**

ಅಭಿಮಾನಿದೇವತೆಯು ತನ್ನಿಂದ ಅಭಿಮನ್ಯಮಾನವಾದ ವಸ್ತುವಿನ ಒಂದು ಭಾಗದಲ್ಲಿ ಮಾತ್ರವಿರುವುದು ಮತ್ತು ದೇಹರಹಿತವಾಗಿರುವುದು ಎಂದು ಹೇಳಿದಲ್ಲಿ ಅಭಿಮಾನಿದೇವತೆಯನ್ನೊಪ್ಪುವುದೇ ವ್ಯರ್ಥವಾಗುವುದು[1] ಮತ್ತು ಆ ದೇವತೆಗೆ ವಕ್ತೃತ್ವವಿರಲಾರದು. ಇದರ ಬದಲು, ಅಭಿಮಾನಿಯು ಅಭಿಮನ್ಯಮಾನವಸ್ತುವನ್ನು ವ್ಯಾಪಿಸಿರುವುದು ಮತ್ತು ದೇಹಸಹಿತವಾದುದು ಎಂದು ಹೇಳುವುದು ಅಂತಹ ಅಭಿಮಾನಿಯು ಕಾಣದಿರುವುದರಿಂದ ಬಾಧಿತವಾಗುವುದು ಎಂಬ ಆಕ್ಷೇಪಕ್ಕೆ ಸಮಾಧಾನ—'ವಿಶೇಷ' ಎಂದು. ಯಾವುದರಿಂದ ಅಭಿಮಾನಿದೇವತೆಯು ಅತಿಶಯವನ್ನು ಪಡೆಯುವುದೋ ಆ ಶಕ್ತಿಯೇ ವಿಶೇಷ. ಅನುಗತಿಯೆಂದರೆ ವ್ಯಾಪ್ತಿ, ಇವೆರಡರಿಂದಾಗಿ. ಅಭಿಮಾನಿದೇವತೆಯು ಅಭಿಮನ್ಯಮಾನ ವಸ್ತುವನ್ನು ವ್ಯಾಪಿಸಿದೆಯೆಂದೂ ದೇಹವನ್ನು ಪಡೆದಿದೆ ಎಂದೂ ಒಪ್ಪಿದರೂ ಕಾಣಿಸದಿರುವುದು ಅಂತರ್ಧಾನಶಕ್ತಿಯಿಂದ ಯುಕ್ತವೆಂದು ಭಾವ.

**ಅನುಗತಿಯನ್ನು ಹೇಳಿ ವಿಶೇಷವನ್ನು ಹೇಳಬೇಕಾಗಿತ್ತು ಎಂಬ ಶಂಕೆಗೆ ಸಮಾಧಾನ**

ಆಕಾಂಕ್ಷಾಕ್ರಮವನ್ನು[2] ಅನುಸರಿಸಿ ಮೊದಲು ಅನುಗತಿಯನ್ನು ಹೇಳಬೇಕಾಗಿದ್ದರೂ ಆಕಾಂಕ್ಷಾಕ್ರಮವನ್ನು ಉಲ್ಲಂಘಿಸಲು 'ವಿಶೇಷ' ಪದವು [1]ಅಲ್ಪಾಕ್ಷರವುಳ್ಳದ್ದಾಗಿರುವುದೇ ಕಾರಣ. ಅಥವಾ ಪೃಥಿವೀ ಮೊದಲಾದ ಬೇರೊಂದು ವಸ್ತುವನ್ನು ಆಶ್ರಯಿಸಿ ಅಭಿಮಾನಿಯು ಮಾತನಾಡುವುದೇ ಮೊದಲಾದವು ಹೇಗೆ ಸಾಧ್ಯ? ಅಲ್ಪ ಪ್ರದೇಶದಲ್ಲಿ ಮಾತ್ರ ಇರುವ ಅಭಿಮಾನಿಯು ಅನೇಕ ಅಭಿಮನ್ಯಮಾನ ವಸ್ತುಗಳನ್ನು

---

1. ಅಭಿಮನ್ಯಮಾನವೆಂದು ಹೇಳಲಾದ ವಸ್ತುವಿನ ಕೆಲವು ಭಾಗಗಳು ಅಭಿಮಾನಿದೇವತೆಯಿಲ್ಲದಿದ್ದರೂ ಇರುವಂತೆ ಇತರ ಭಾಗಗಳೂ ಅಭಿಮಾನಿರಹಿತವಾಗಿ ಇರಬಹುದಾದ್ದರಿಂದ ಅಭಿಮಾನಿದೇವತೆಯನ್ನಂಗೀಕರಿಸುವುದು ವ್ಯರ್ಥ ಎಂದು ಭಾವ.

2. ಅಭಿಮಾನಿಯು ಪ್ರಾದೇಶಿಕವೋ–ವ್ಯಾಪ್ತವೋ, ವಿದೇಹವೋ–ಸದೇಹವೋ ಎಂಬ ಆಕಾಂಕ್ಷೆಗೆ ಅನುಸಾರವಾಗಿ ಮೊದಲು ಅನುಗತಿಯನ್ನು ಹೇಳಿ ಅನಂತರ ಸದೇಹವಾದರೂ ಕಾಣಿಸದಿರಲು ಅಂತರ್ಧಾನಶಕ್ತಿಯೇ ಕಾರಣ ಎಂದು ಹೇಳಲು ವಿಶೇಷವನ್ನು ಹೇಳಬೇಕಾಗಿತ್ತೆಂದು ಭಾವ.

कम् । कथं च परिच्छिन्नस्यानेकाभिमन्यमानाधिष्ठातृत्वमित्यत उक्तं विशेषेति । तस्य तथा सामर्थ्यादभिमन्यमाने सर्वत्रांशतो व्याप्तत्वाच्चेत्यर्थः । अत्र चेतनेति वाच्येऽभिमानीत्युक्तिरभिमन्यमानगतमृत्त्वादिमृच्छब्दप्रवृत्तिनिमित्तस्याभिमान्यधीनत्वादिति न्यायो मृदादिशब्दानां मृदादिभ्योऽप्यभिमानिनि तुशब्दसूचितमुख्यत्वोपपादनायानुसन्धेय इति सूचनाय । तेन कथं युक्तिविरोधमात्रेण श्रुतेः प्रतीतार्थप्रच्यावनमिति निरस्तम् । चेतनग्रहणे मुख्यार्थलाभेन श्रुत्यर्थाबाधनादिति हेतोः । मुख्यत्वसूचकत्वं चान्यनिरासार्थकत्वादिति ध्येयम् । सर्वथाऽन्यनिरासायोगात् । शरीररूपकविन्यस्तगृहीतेरिति

---

ಅಧಿಷ್ಠಿಸಿ ಇರುವುದಾದರೂ ಹೇಗೆ ಎಂಬ ಆಶಂಕೆಗೆ ಸಮಾಧಾನ—'ವಿಶೇಷ' ಎಂದು. ಅಭಿಮಾನಿದೇವತೆಗೆ ಅಂತಹ ಸಾಮರ್ಥ್ಯವಿರುವುದರಿಂದ ಮತ್ತು ಅಭಿಮನ್ಯಮಾನ ವಸ್ತುಗಳಲ್ಲೆಲ್ಲ ತನ್ನ ಅಂಶದ ಮೂಲಕ ವ್ಯಾಪ್ತಿ ಇರುವುದರಿಂದ ಈ ಆಶಂಕೆಗೆ ಅವಕಾಶ ವಿಲ್ಲವೆಂದು ಅರ್ಥ.

**ಸೂತ್ರದಲ್ಲಿ 'ಅಭಿಮಾನಿ', 'ವಿಶೇಷ' ಪದಗಳ ಸ್ವಾರಸ್ಯ**

ಅಭಿಮನ್ಯಮಾನವಾದ ಮಣ್ಣು ಮೊದಲಾದವುಗಳಲ್ಲಿರುವ, 'ಮೃತ್' ಮೊದಲಾದ ಶಬ್ದಗಳ ಪ್ರವೃತ್ತಿನಿಮಿತ್ತಗಳಾದ ಮೃತ್ತ್ವ ಮೊದಲಾದ ಧರ್ಮಗಳು ಅಭಿಮಾನಿಗೆ ಅಧೀನವಾದುದರಿಂದ ಮೃದಾದಿ ಶಬ್ದಗಳು ಮೃದಾದಿ ವಸ್ತುಗಳನ್ನು ಹೇಳುವುದಕ್ಕಿಂತ ಹೆಚ್ಚು ಮುಖ್ಯವಾಗಿ ಅಭಿಮಾನಿದೇವತೆಯನ್ನು ಹೇಳುವವು ಎಂಬುದಾಗಿ 'ತು' ಶಬ್ದವು ಸೂಚಿಸುವುದು. ಈ ಮುಖ್ಯತ್ವವನ್ನು ಉಪಪಾದಿಸಲು 'ತದಧೀನತ್ವಾತ್' ಎಂಬ ಸೂತ್ರದಲ್ಲಿ ಹೇಳಿರುವ ನ್ಯಾಯವನ್ನು[2] ಅನುಸಂಧಾನ ಮಾಡಬೇಕು ಎಂದು ಸೂಚಿಸಲು ಇಲ್ಲಿ 'ಚೇತನ' ಎಂದು ಹೇಳಬೇಕಾಗಿದ್ದರೂ 'ಅಭಿಮಾನಿ' ಎಂದು ಹೇಳಲಾಗಿದೆ. ಇದರಿಂದ, ಯುಕ್ತಿವಿರೋಧಮಾತ್ರದಿಂದ ಶ್ರುತಿಯು ಹೇಳುವಂತೆ ತೋರುವ ಅರ್ಥವನ್ನು ಬಿಡುವುದು ಹೇಗೆ ಎಂಬ ಆಶಂಕೆಗೆ ಅವಕಾಶ

---

1. ದ್ವಂದ್ವಸಮಾಸದಲ್ಲಿ ಅಲ್ಪಾಕ್ಷರವಾದ ಪದವನ್ನೇ ಮೊದಲು ಪ್ರಯೋಗಿಸಬೇಕೆಂಬ ನಿಯಮಕ್ಕನುಗುಣವಾಗಿ 'ವಿಶೇಷಾನುಗತಿ' ಎಂಬ ದ್ವಂದ್ವದಲ್ಲಿ ವಿಶೇಷಪದ ಮೊದಲು ಬಂದಿದೆ ಎಂದು ಭಾವ.

2. ಪದಗಳ ಪ್ರವೃತ್ತಿನಿಮಿತ್ತ ಧರ್ಮಗಳು ಯಾರ ಅಧೀನವೋ ಅವರೇ ಆ ಪದಗಳ ಮುಖ್ಯಾರ್ಥ ಎಂಬ ನ್ಯಾಯ.

न्यायाद्वाक्यशेषे त्रिवृत्करणाद्युक्तेश्च । शक्तीति वाच्ये विशेषेत्युक्त्याऽस्मदादिभ्यो विशिष्टाऽतिशयिता सेति सूचयति । सुधायां त्वभिमानितद्विग्रहतदन्तर्धानशक्त्यादेः मृत्त्वादियुक्तिमृदादिवक्तृत्वश्रुत्युभयान्यथानुपपत्तिरूपार्थापत्त्यैव सिद्धेर्विशेषानुगतिपदेन तत्प्रतिपादकं

---

ವಿಲ್ಲ. ಏಕೆಂದರೆ, ಮೃದಾದಿಶಬ್ದಗಳಿಂದ ಚೇತನವನ್ನು ಗ್ರಹಿಸಿದಲ್ಲಿ ಮುಖ್ಯಾರ್ಥವೇ ಲಭಿಸುವುದರಿಂದ ಶ್ರುತಿಯ ಅರ್ಥವನ್ನು ಬಿಟ್ಟಂತಾಗುವುದಿಲ್ಲ. 'ತು' ಶಬ್ದವು ಅಭಿಮಾನಿಯನ್ನು ಬಿಟ್ಟು ಬೇರೆ ಅರ್ಥವನ್ನು ಮೃದಾದಿಶಬ್ದಗಳಿಗೆ ನಿರಾಕರಿಸುವುದು. ಆದರೆ 'ಶರೀರರೂಪಕ ವಿನ್ಯಸ್ತಗೃಹೀತೇಃ' ಎಂಬಲ್ಲಿ ಹೇಳಿರುವ ನ್ಯಾಯ[1]ದಿಂದ ಮತ್ತು [2]ವಾಕ್ಯಶೇಷದಲ್ಲಿ ತ್ರಿವೃತ್ಕರಣ[3]ವನ್ನು ಹೇಳಿರುವುದರಿಂದ ಸರ್ವಥಾ ಇತರ ಅರ್ಥವನ್ನು ಅಂದರೆ ಮಣ್ಣು ಮೊದಲಾದ ಅರ್ಥವನ್ನು ನಿರಾಕರಿಸಲಾಗುವುದಿಲ್ಲ. ಆದ್ದರಿಂದ, 'ತು' ಶಬ್ದವು ಅಭಿಮಾನಿಯು ಮುಖ್ಯವಾದ ಅರ್ಥವೆಂದು ಸೂಚಿಸುವುದು ಎಂದು ತಿಳಿಯಬೇಕು. 'ಶಕ್ತಿ' ಎಂದು ಹೇಳಬೇಕಿದ್ದಾಗ 'ವಿಶೇಷ' ಎಂದು ಹೇಳುವ ಮೂಲಕ ನಮಗಿಂತಲೂ ಆ ಅಭಿಮಾನಿದೇವತೆಯು ವಿಶಿಷ್ಟವಾದುದು ಅಂದರೆ ಅತಿಶಯಿತ ವಾದದ್ದು ಎಂದು ಸೂತ್ರಕಾರರು ಸೂಚಿಸುತ್ತಿದ್ದಾರೆ.

### 'ವಿಶೇಷಾನುಗತಿಭ್ಯಾಂ' ಎಂಬುದಕ್ಕೆ ಸುಧಾರೀತ್ಯಾ ವ್ಯಾಖ್ಯಾನಾಂತರ

ಸುಧಾದಲ್ಲಾದರೋ—ಮಣ್ಣಿಗೆ ವಕ್ತೃತ್ವವಿಲ್ಲವೆಂದು ಸಾಧಿಸುವ ಮೃತ್ತ್ವವೆಂಬ ಯುಕ್ತಿ ಮತ್ತು 'ಮೃದಬ್ರವೀತ್' ಎಂಬ ಮಣ್ಣಿಗೆ ವಕ್ತೃತ್ವವನ್ನು ಹೇಳುವ ಶ್ರುತಿ ಇವೆರಡೂ ಮೃದಭಿಮಾನಿದೇವತೆಯನ್ನು ಅಂಗೀಕರಿಸದಿದ್ದಲ್ಲಿ ಉಪಪನ್ನವಾಗುವುದಿಲ್ಲವೆಂಬ ಅರ್ಥಾಪತ್ತಿಯಿಂದಲೇ ಮೃದಭಿಮಾನಿದೇವತೆ, ಅದರ ಶರೀರ, ಅದಕ್ಕೆ ಅಂತರ್ಧಾನಶಕ್ತಿ ಇತ್ಯಾದಿಗಳು ಸಿದ್ಧವಾಗುವುದರಿಂದ 'ವಿಶೇಷಾನುಗತಿ' ಪದದಿಂದ

---

1. ಬ್ರಹ್ಮನ ಸಂಬಂಧವಿರುವ ಕಾರಣದಿಂದ, ಬ್ರಹ್ಮನ ಶರೀರದಂತಿರುವ ವಸ್ತುಗಳಲ್ಲೂ ಬ್ರಹ್ಮನಲ್ಲೇ ಮುಖ್ಯವಾದ ಪದಗಳನ್ನು ವ್ಯವಹರಿಸಲಾಗುವುದು ಎಂಬ ನ್ಯಾಯ.

2. 'ತಾಸಾಂ ತ್ರಿವೃತಂ ತ್ರಿವೃತಂ ಏಕೈಕಾಮಕರೋತ್' (ಛಾಂ. ೬. ೨.) ಎಂಬ ವಾಕ್ಯಶೇಷದಲ್ಲಿ.

3. ತ್ರಿವೃತ್ಕರಣವೆಂದರೆ ತೇಜಸ್ಸು, ಅಪ್ ಮತ್ತು ಪೃಥಿವೀ ಈ ಮೂರರ ಮಿಶ್ರಣ. ತೇಜಸ್ ಅಪ್ ಮೊದಲಾದ ಶಬ್ದಗಳು ಜಡ ತೇಜಸ್ಸು, ಜಲ ಇತ್ಯಾದಿಗಳನ್ನೂ ಹೇಳಿದಲ್ಲಿ ಮಾತ್ರ ಇಂತಹ ತ್ರಿವೃತ್ಕರಣ ಸಾಧ್ಯ. ಆದ್ದರಿಂದ 'ತೇಜ ಐಕ್ಷತ' ಇತ್ಯಾದಿ ವಾಕ್ಯದಲ್ಲಿ ತೇಜಸ್ ಮೊದಲಾದ ಶಬ್ದಗಳು ಅಭಿಮಾನಿದೇವತೆಯನ್ನು ಹೇಳುವುದಲ್ಲದೇ, ಜಡವನ್ನೂ ಹೇಳುವವು ಎಂದು ಭಾವ.

पृथिव्याद्यभिमानिन्य इत्यादिवचनं गृह्यते । तथा च न केवलं अभिमान्यादिकमर्थापत्त्यैव सिद्धमागमसिद्धं चेत्युक्तम् ॥

विशेषेत्यादेराद्येऽर्थे अदर्शनमुपेत्य पूर्वं शक्त्या समाहितम् इदानीं तदेव नेति वा नास्त्येवाभिमानी अदर्शनादित्यतो वाह—

॥ ॐ दृश्यते च ॐ ॥ २-१-७

योगिभिरुपलभ्यते च । अभिमानीति बुद्धिविभागेनानुवर्तते । एतच्च "दृश्यन्ते मुनिभिश्च ताः" इत्यादिनाऽवसेयमिति भावः । सूत्रयोरेकवचनं समुदायाभिप्रायम् ॥ ३ ॥

---

ಶಕ್ತಿ ಮತ್ತು ವ್ಯಾಪ್ತಿಗಳನ್ನು ಪ್ರತಿಪಾದಿಸುವ 'ಪೃಥಿವ್ಯಾದ್ಯಭಿಮಾನಿನಃ' ಇತ್ಯಾದಿ ವಾಕ್ಯಗಳನ್ನು ಗ್ರಹಿಸಬೇಕು. ಆದ್ದರಿಂದ, ಅಭಿಮಾನ್ಯಾದಿಗಳು ಅರ್ಥಾಪತ್ತಿ ಪ್ರಮಾಣದಿಂದ ಮಾತ್ರವೇ ಸಿದ್ಧಿಸುವುದಿಲ್ಲ, ಆಗಮದಿಂದಲೂ ಸಿದ್ಧವಾಗುವುವು ಎಂದು ಹೇಳಿದೆ.

'ವಿಶೇಷ' ಇತ್ಯಾದಿಗಳಿಗೆ ಮೇಲೆ ಹೇಳಿದ ಎರಡು ಅರ್ಥಗಳಲ್ಲಿ ಮೊದಲನೆಯ ಅರ್ಥವನ್ನು ಹೇಳಿದಾಗ ಅಭಿಮಾನಿದೇವತೆಗಳು ಕಾಣಿಸುವುದಿಲ್ಲ ಎಂಬುದನ್ನು ಒಪ್ಪಿ, ಶಕ್ತಿಯನ್ನು ಹೇಳಿ ಹಿಂದೆ ಸಮಾಧಾನ ನೀಡಲಾಯಿತು. ಈಗ ಅದರ್ಶನವೇ ಇಲ್ಲ ಎಂದು ಹೇಳುವುದಕ್ಕೆ ಅಥವಾ ಅಭಿಮಾನಿದೇವತೆಯೇ ಇಲ್ಲ, ಕಾಣಿಸದಿರುವುದರಿಂದ ಎಂಬ ಆಕ್ಷೇಪವನ್ನು ನಿರಾಕರಿಸುವುದಕ್ಕೆ ಬಂದಿರುವ ಸೂತ್ರ—

ಓಂ ದೃಶ್ಯತೇ ಚ ಓಂ (೨-೧-೭)

**ಸೂತ್ರಾರ್ಥ**

ಯೋಗಿಗಳಿಗೆ ಕಾಣಿಸುವುದೂ ಉಂಟು. 'ಅಭಿಮಾನಿ' ಎಂಬುದನ್ನು ಬುದ್ಧಿಯಿಂದಲೇ ವಿಭಾಗಿಸಿ ಅನುವೃತ್ತಿಮಾಡಿಕೊಳ್ಳಬೇಕು. ಈ ವಿಷಯವನ್ನು '[1]ದೃಶ್ಯಂತೇ ಮುನಿಭಿಶ್ಚ ತಾಃ' ಎಂಬ ಪ್ರಮಾಣದಿಂದ ತಿಳಿಯತಕ್ಕದ್ದೆಂದು ಭಾವ. ಎರಡು ಸೂತ್ರಗಳಲ್ಲೂ ಏಕವಚನವು ಸಮುದಾಯದ ಅರ್ಥವುಳ್ಳದ್ದು.

---

1. ಪೃಥಿವ್ಯಾದ್ಯಭಿಮಾನಿನ್ಯೋ ದೇವತಾಃ ಪ್ರಥಿತೌಜಸಃ । ಅಚಿಂತ್ಯಾಃ ಶಕ್ತಯಸ್ತಾಸಾಂ ದೃಶ್ಯಂತೇ ಮುನಿಭಿಶ್ಚ ತಾಃ । ತಾಶ್ಚ ಸರ್ವಗತಾ ನಿತ್ಯಂ ವಾಸುದೇವೈಕಸಂಶ್ರಯಾಃ ॥' ಎಂಬ ಭವಿಷ್ಯತ್ ಪುರಾಣದ ವಾಕ್ಯ.

असदधिकरणम्—४

## ॥ ॐ असदिति चेन्न प्रतिषेधमात्रत्वात् ॐ ॥
## २-१-८

अत्र श्रुत्युपसर्जनकप्रागभावकर्तृत्वसाधकयुक्त्यविरोध उच्यते। श्रुतेर्ब्रह्मपरत्वोक्तावप्यन्यत्रापि वृत्तेस्सत्त्वात्। अत्रासच्छब्दः प्रागभावपरः अभावप्रतियोगिपरश्च। अस्तेर्भावे कर्तरि च शतृप्रत्यये श्नसोरल्लोपे नञ्समासे असदभवनमिति नास्तीत्यसदिति च रूपसम्भवात्।

---

ಅಸದಧಿಕರಣ—೪

## ಓಂ ಅಸದಿತಿ ಚೇನ್ನ ಪ್ರತಿಷೇಧಮಾತ್ರತ್ವಾತ್ ಓಂ
## (೨-೧-೮)

### ಅಧಿಕರಣದ ಉದ್ದೇಶ

ಈ ಅಧಿಕರಣದಲ್ಲಿ ಪ್ರಾಗಭಾವಕ್ಕೆ ಜಗತ್ಕರ್ತೃತ್ವವನ್ನು ಸಾಧಿಸುವ [1]ಶ್ರುತ್ಯುಪಸರ್ಜನಕವಾದ ಯುಕ್ತಿಯ ಅವಿರೋಧವನ್ನು ಹೇಳಲಾಗುವುದು. ಶ್ರುತಿಗಳಿಗೆ ಬ್ರಹ್ಮನಲ್ಲೇ ತಾತ್ಪರ್ಯವನ್ನು ಸಮನ್ವಯಾಧ್ಯಾಯದಲ್ಲಿ ಹೇಳಿದ್ದರೂ, ಇತರ ಪದಾರ್ಥಗಳನ್ನು ಹೇಳುವ ಸಾಮರ್ಥ್ಯವೂ ಇರುವುದರಿಂದ ಇಲ್ಲಿ ಪೂರ್ವಪಕ್ಷಕ್ಕೆ ಅವಕಾಶವಿದೆ.

### ಸೂತ್ರದಲ್ಲಿರುವ 'ಅಸತ್' ಶಬ್ದದ ಅರ್ಥ

ಅಸ್ ಧಾತುವಿಗೆ ಭಾವಾರ್ಥದಲ್ಲಿ ಮತ್ತು ಕರ್ತ್ರರ್ಥದಲ್ಲಿ ಶತೃಪ್ರತ್ಯಯವನ್ನು ಸೇರಿಸಿದಾಗ 'ಶ್ನಸೋರಲ್ಲೋಪಃ' ಎಂಬ ಸೂತ್ರದಿಂದ ಅಸ್ ಧಾತುವಿನ ಅಕಾರಕ್ಕೆ ಲೋಪವಾಗುತ್ತದೆ. ಅನಂತರ ನಞ್ಸಮಾಸವನ್ನು ಮಾಡಿದಾಗ 'ಅಭವನ', 'ನಾಸ್ತಿ' ಎಂಬ ಎರಡು ಅರ್ಥಗಳಲ್ಲೂ 'ಅಸತ್' ಎಂಬ ರೂಪ ಲಭಿಸುವುದರಿಂದ ಈ ಸೂತ್ರದಲ್ಲಿ ಅಸತ್ ಶಬ್ದವು ಪ್ರಾಗಭಾವ ಮತ್ತು ಅಭಾವಪ್ರತಿಯೋಗಿ ಎಂಬ ಎರಡೂ ಅರ್ಥಗಳನ್ನು ಹೇಳುವುದು. ಯದ್ಯಪಿ ಶತೃ ಪ್ರತ್ಯಯವು ಕರ್ತೃ ಎಂಬ ಅರ್ಥದಲ್ಲೇ ಬರುವುದು. ಆದರೂ ಇಲ್ಲಿ ಭಾವಾರ್ಥಕವಾದ ಶತೃಪ್ರತ್ಯಯವು ವೈದಿಕಪ್ರಯೋಗ

---

1. ಪೂರ್ವಪಕ್ಷದಲ್ಲಿ ಯುಕ್ತಿಗೇ ಪ್ರಾಧಾನ್ಯ. ಅದಕ್ಕೆ ಸಂವಾದ ನೀಡುವ ಮೂಲಕ ಬಲವನ್ನು ಕೊಡುವ ಶ್ರುತಿ ಉಪಸರ್ಜನ ಅಥವಾ ಗೌಣ.

यद्यपि शतृ कर्तर्येव । तथापि छान्दसो भावसाधनः । कर्तृसाधनत्वं तु युक्तिसूचनार्थम् । अत एवाभाव इति वाच्ये असदित्युक्तिः, श्रुत्यनुगमसूचनार्था च । अपीताविर्तीहाप्यन्वेति । अपीतौ असत् लयवृत्तिर्विश्वप्रागभावः जगत्कारणमित्यस्ति । अनन्यथासिद्धपूर्वक्षणवृत्तित्वात् । सामान्यव्याप्त्या घटप्रागभाववत् । "असदेवेदमग्र आसीत्" इति श्रुतेश्चेत्येका वृत्तिः । अन्या तु भावजातं अपीतौ लये असत् अविद्यमानं, भावत्वात् कार्यवदिति । एवं लये भावमात्रासिद्धौ कार्यस್य सकर्तृकत्व-

---

ವಾದ್ದರಿಂದ ಸಾಧುವಾಗಿದೆ. ಪ್ರಕೃತ, ಪೂರ್ವಪಕ್ಷಯುಕ್ತಿಯನ್ನು ಸೂಚಿಸುವ ಸಲುವಾಗಿ ಅಸತ್ ಶಬ್ದದ ಶತೃ ಪ್ರತ್ಯಯಕ್ಕೆ ಕರ್ತೃ ಎಂಬ ಅರ್ಥವನ್ನೂ ಹೇಳಲಾಗಿದೆ. ಹೀಗೆ ಪೂರ್ವಪಕ್ಷಯುಕ್ತಿಯನ್ನು ಸೂಚಿಸುವ ಉದ್ದೇಶದಿಂದಲೇ ಮತ್ತು ಶ್ರುತಿಯ ಅನುಗಮಕ್ಕೋಸ್ಕರವೂ, ಸೂತ್ರದಲ್ಲಿ 'ಅಭಾವ' ಎಂಬ ಪದವನ್ನು ಪ್ರಯೋಗಿಸಬಹುದಾಗಿದ್ದರೂ 'ಅಸತ್' ಶಬ್ದವನ್ನೇ ಪ್ರಯೋಗಿಸಲಾಗಿದೆ.

### 'ಅಸದಿತಿ ಚೇನ್ನ' ಎಂಬ ಸೂತ್ರಭಾಗಕ್ಕೆ ಎರಡು ಅರ್ಥ

'ಅಪೀತೌ' ಎಂಬ ಪದವು ಇಲ್ಲಿಯೂ ಅನ್ವಯವನ್ನು ಪಡೆಯುತ್ತದೆ. ಅಪೀತೌ ಅಸತ್—ಪ್ರಲಯಕಾಲದಲ್ಲಿರುವ ವಿಶ್ವಪ್ರಾಗಭಾವವು—'ಜಗತ್ತಿಗೆ ಕಾರಣ' ಎಂಬ ಪದಗಳನ್ನು ಇಲ್ಲಿ ಸೇರಿಸಿಕೊಳ್ಳಬೇಕು — ಅನ್ಯಥಾಸಿದ್ಧವಾಗದೆ ಜಗದುತ್ಪತ್ತಿಯ ಪೂರ್ವಕ್ಷಣದಲ್ಲಿರುವುದರಿಂದ, 'ಯಾವುದು ಯಾವುದನ್ನು ಕುರಿತು ಅನ್ಯಥಾಸಿದ್ಧವಾಗದೇ ಪೂರ್ವಕ್ಷಣದಲ್ಲಿರುವುದೋ ಅದು ಅದಕ್ಕೆ ಕಾರಣ' ಎಂಬ ಸಾಮಾನ್ಯವ್ಯಾಪ್ತಿಯನ್ನನುಸರಿಸಿ ಘಟಪ್ರಾಗಭಾವವು ಘಟದ ಉತ್ಪತ್ತಿಗೆ ಕಾರಣವಾಗಿರುವಂತೆ ಜಗದುತ್ಪತ್ತಿಗೆ ಕಾರಣವಾಗಿರುವುದು. ಅಲ್ಲದೆ, ವಿಶ್ವಪ್ರಾಗಭಾವವು ಜಗತ್ತಿನ ಸೃಷ್ಟಿಗೆ ಪೂರ್ವದಲ್ಲಿತ್ತು ಎಂದು ಹೇಳುವ 'ಅಸದೇವೇದಮಗ್ರ ಆಸೀತ್' ಎಂಬ ಶ್ರುತಿಯ ಆಧಾರದಿಂದಲೂ ವಿಶ್ವಪ್ರಾಗಭಾವವು ಜಗತ್ತಿಗೆ ಕಾರಣವೆಂದು ಸಿದ್ಧವಾಗುವುದು— ಎಂದು ಮೊದಲನೆಯ ವ್ಯಾಖ್ಯಾನ. ಇನ್ನೊಂದು, ಭಾವಪದಾರ್ಥಗಳ ಸಮೂಹವು, ಅಪೀತೌ–ಪ್ರಲಯದಲ್ಲಿ, ಅಸತ್–ಇರುವುದಿಲ್ಲ, ಭಾವಪದಾರ್ಥವಾದುದರಿಂದ, ಜನ್ಯಪದಾರ್ಥಗಳಂತೆ—ಎಂಬುದಾಗಿ ಹೀಗೆ ಪ್ರಲಯದಲ್ಲಿ ಭಾವಪದಾರ್ಥಗಳಾವುದೂ ಇರುವುದಿಲ್ಲವೆಂದು ಸಿದ್ಧವಾದ ಮೇಲೆ, ಕಾರ್ಯಕ್ಕೆ ಕರ್ತೃವಿರಲೇಬೇಕು ಎಂಬ ನಿಯಮವಿರುವುದರಿಂದ ಉಳಿದಿರುವ ಪ್ರಾಗಭಾವವೇ ಜಗತ್ತಿನ ಸೃಷ್ಟಿಗೆ ಕರ್ತೃ

नियमात् परिशेषादभावस्यैव कर्तृत्वं सिद्ध्यति । "असदेव तन्मनोऽकुरुत" इति श्रुतेरिति चेन्न । प्रागभावः कर्तेति न । प्रतिषेधमात्रत्वादभावधर्मतां विना स्वरूपत एव निषेधरूपत्वात् । घटप्रागभाववदित्यर्थः । भावेषु कुलालादिषु अन्योन्याभावधर्मात्मना प्रतिषेधरूपत्वमस्तीति व्यभिचारनिरासाय मात्रपदम् । कर्तृत्वाभावे विश्वकर्तृत्वं दूरेऽपास्तमिति भावः । यद्यपि निषेधमात्रेत्युक्त्या निषेधैकस्वरूपत्वं लभ्यते । तच्च पक्षे असिद्धं दृष्टान्ताद् व्यावृत्तं च । सर्वस्य धर्मात्मना

---

ಎಂದು ಸಿದ್ಧವಾಗುವುದು. 'ಅಸದೇವ ತನ್ಮನೋಽಕುರುತ' ಎಂಬ ಶ್ರುತಿಯೂ ಈ ವಿಷಯದಲ್ಲಿ ಪ್ರಮಾಣವಾಗಿರುವುದು—ಎಂದರೆ ಅದು ಸರಿಯಲ್ಲ.

### 'ಪ್ರತಿಷೇಧಮಾತ್ರತ್ವಾತ್' ಎಂಬ ಸೂತ್ರಭಾಗದ ವ್ಯಾಖ್ಯಾನ

ಪ್ರಾಗಭಾವವೇ ಜಗತ್ಕರ್ತೃವೆಂಬ ವಾದ ಸರಿಯಲ್ಲ. ಪ್ರತಿಷೇಧಮಾತ್ರತ್ವಾತ್—ಅಭಾವರೂಪವಾದ ತನ್ನ ಧರ್ಮವೇ ತಾನಾಗಿರುವುದರಿಂದ ಮಾತ್ರವಲ್ಲದೇ ಸ್ವರೂಪದಿಂದಲೂ ನಿಷೇಧಾತ್ಮಕವಾಗಿರುವುದರಿಂದ, ಘಟಪ್ರಾಗಭಾವದಂತೆ ಎಂದು ಅರ್ಥ. ಕುಂಬಾರನೇ ಮೊದಲಾದ ಭಾವಪದಾರ್ಥಗಳಲ್ಲಿ ತಮ್ಮಲ್ಲಿರುವ ಅನ್ಯೋನ್ಯಾಭಾವರೂಪವಾದ ಧರ್ಮವೇ ತಾವಾಗಿರುವುದರಿಂದ ನಿಷೇಧರೂಪತ್ವವಿದೆ. ಆದರೆ ಕರ್ತೃತ್ವಾಭಾವವಿಲ್ಲ. ಆದ್ದರಿಂದ ಸಿದ್ಧಾಂತಿಗಳ ಅನುಮಾನಕ್ಕೆ ವ್ಯಭಿಚಾರದೋಷ ಬರುವುದು ಎಂಬ ಆಶಂಕೆಯನ್ನು ಪರಿಹರಿಸಲು 'ಮಾತ್ರ' ಪದವನ್ನು ಪ್ರಯೋಗಿಸಲಾಗಿದೆ. ಕರ್ತೃತ್ವವೇ ಇಲ್ಲದಿದ್ದಾಗ ವಿಶ್ವಕರ್ತೃತ್ವವು ದೂರದಲ್ಲೇ ನಿರಸ್ತವೆಂದು ಭಾವ.

### 'ಪ್ರತಿಷೇಧಮಾತ್ರತ್ವಾತ್' ಎಂಬ ಸೂತ್ರಭಾಗಕ್ಕೆ ನೀಡಿದ ವ್ಯಾಖ್ಯಾನದ ಸಮರ್ಥನೆ

ಯದ್ಯಪಿ 'ನಿಷೇಧಮಾತ್ರ' ಎಂಬ ಪದದಿಂದ 'ಕೇವಲ ನಿಷೇಧಸ್ವರೂಪತ್ವ' ಎಂಬ ಅರ್ಥವು ಲಭಿಸುವುದು. ಎಲ್ಲ ವಸ್ತುಗಳೂ ತಮ್ಮ ಧರ್ಮಗಳ ಮೂಲಕ ಭಾವ ಮತ್ತು ನಿಷೇಧ—ಈ ಎರಡೂ ರೂಪವನ್ನು ಪಡೆದಿರುವುದರಿಂದ ಈ ಅರ್ಥವು ಪಕ್ಷವಾದ ವಿಶ್ವಪ್ರಾಗಭಾವದಲ್ಲೂ ಇಲ್ಲ, ದೃಷ್ಟಾಂತವಾದ ಘಟಪ್ರಾಗಭಾವದಲ್ಲೂ ಇಲ್ಲ.[1]

1. ವಿಶ್ವಪ್ರಾಗಭಾವ ಮತ್ತು ಘಟಪ್ರಾಗಭಾವಗಳು ತಮ್ಮಲ್ಲಿರುವ 'ಪ್ರಮೇಯತ್ವ' ಮೊದಲಾದ ಭಾವಧರ್ಮಗಳಿಂದ ಅಭಿನ್ನವಾಗಿರುವುದರಿಂದ ಭಾವರೂಪವೂ ಆಗಿವೆ. ಕೇವಲ ನಿಷೇಧಸ್ವರೂಪವಾಗಿಲ್ಲವೆಂದು ಭಾವ.

*

द्विरूपत्वात् । तथापि प्रतिषेधमात्रपदेनान्नमात्रं भुक्तमितिवत् प्रतिषेध-सामान्यं गम्यते । धर्मधर्मिणोश्च धर्मी प्रधान इति धर्मात्मतां विना धर्मित एव निषेधत्वादिति गम्यत इति बोध्यम् ॥

ननु श्रुतिबलादन्यत्रादृष्टमपि कर्तृत्वं विश्वप्रागभावस्य स्यादित्यत आह—

॥ ॐ अपीतौ तद्वत्प्रसङ्गादसमञ्जसम् ॐ ॥
२-१-९

तच्छब्दः प्राक् प्रवृत्तासत्परः सावधारणः । वदिति मतुप्प्रत्ययो न तु वतिः । भावप्रधानोऽयम् । अपीतौ प्रलये तद्वत्प्रसङ्गात् अभावमात्रत्वप्रसङ्गाद् असमञ्जसम् अभावकर्तृत्वमतमित्यर्थः। कार्यनाशे उपादानमात्रावशेषनियमादिति भावः । कर्त्रुपादानयोस्त्वैकत्वात् ।

---

ಆದರೂ, 'ಅನ್ನಮಾತ್ರಂ ಭುಕ್ತಂ' ಎಂಬ ಮಾತಿನಿಂದ ಭೋಜನದಲ್ಲಿ ಅನ್ನಕ್ಕೆ ಪ್ರಾಧಾನ್ಯವಿತ್ತು ಎಂದು ತಿಳಿದುಬರುವಂತೆ 'ಪ್ರತಿಷೇಧಮಾತ್ರ' ಎಂಬ ಪದದಿಂದ ಪ್ರತಿಷೇಧಕ್ಕೆ ಪ್ರಾಧಾನ್ಯವು ತಿಳಿದುಬರುವುದು. ಧರ್ಮ-ಧರ್ಮಿಗಳಲ್ಲಿ ಧರ್ಮಿಯೇ ಪ್ರಧಾನವಾದುದರಿಂದ 'ಧರ್ಮದ ಮೂಲಕವಲ್ಲದೆ, ಧರ್ಮಿರೂಪದಿಂದಲೇ ನಿಷೇಧವಾಗಿರುವುದರಿಂದ' ಎಂಬ ಅರ್ಥವು ಲಭಿಸುವುದು ಎಂದು ತಿಳಿಯಬೇಕು.

ಇತರ ಪ್ರಾಗಭಾವಗಳಲ್ಲಿ ಕರ್ತೃತ್ವವು ಕಂಡುಬರದಿದ್ದರೂ ಶ್ರುತಿಯ ಆಧಾರದಿಂದ ವಿಶ್ವಪ್ರಾಗಭಾವದಲ್ಲಿ ಕರ್ತೃತ್ವವನ್ನು ಅಂಗೀಕರಿಸಬೇಕು ಎಂಬ ಆಶಂಕೆಗೆ ಉತ್ತರ—

ಓಂ ಅಪೀತೌ ತದ್ವತ್ಪ್ರಸಂಗಾದಸಮಂಜಸಮ್ ಓಂ
(೨-೧-೯)

**ಸೂತ್ರಾರ್ಥ**

'ತದ್ವತ್' ಎಂಬಲ್ಲಿ ತತ್‌ಶಬ್ದವು ಹಿಂದಿನ ಸೂತ್ರದಲ್ಲಿ ಪ್ರಕೃತವಾದ ಅಸತ್ತನ್ನು ಹೇಳುವುದು ಮತ್ತು ಅವಧಾರಣಸಹಿತವಾದುದು. 'ವತ್' ಎಂಬುದು ಮತುಪ್ ಪ್ರತ್ಯಯ, ವತಿ ಪ್ರತ್ಯಯವಲ್ಲ. ಈ ಪದವು ಭಾವಪ್ರಧಾನವಾದುದು. ಅಪೀತೌ—ಪ್ರಲಯಕಾಲದಲ್ಲಿ, ತದ್ವತ್‌ಪ್ರಸಂಗಾತ್—ಕೇವಲ ಅಭಾವವು ಉಳಿಯುವ

अपीताविथ्यनेन प्रलये भावमात्रासत्त्वे कालोऽपि न स्यादिति सूचयति ॥

नेदमनिष्टमित्यत आह—

॥ ॐ न तु दृष्टान्तभावात् ॐ ॥ २-१-१०

तुरेव । अत्र दृष्टान्तपदेन तत्रावधारितव्याप्तिमूलकमनुमानमुच्यते । तन्मात्रस्यासाधकत्वात् । व्याप्तिसत्त्वसूचनायैवमुक्तिः । प्रलये सर्वासत्त्वमिष्टमिति न युज्यते । तदा पदार्थसत्त्वसाधने

---

ಪ್ರಸಂಗ ಬರುವುದರಿಂದ ಅಭಾವವೇ ಕರ್ತೃವೆಂಬ ಮತವು ಸಮಂಜಸವಲ್ಲವೆಂದು ಅರ್ಥ. ಪೂರ್ವಪಕ್ಷಿಯ ದೃಷ್ಟಿಯಲ್ಲಿ ಕರ್ತೃ ಮತ್ತು ಉಪಾದಾನಕಾರಣಗಳು ಒಂದೇ ಆದುದರಿಂದ, ಕಾರ್ಯವು ನಾಶಹೊಂದಿದಾಗ ಕೇವಲ ಉಪಾದಾನಕಾರಣ ಉಳಿಯುವುದು ಎಂಬ ನಿಯಮವಿರುವುದರಿಂದ ಪ್ರಲಯದಲ್ಲಿ ಕೇವಲ ಅಭಾವವು ಉಳಿಯಬೇಕಾಗುವುದು ಎಂದು ಭಾವ. 'ಅಪೀತೌ' ಎಂಬ ಪದದಿಂದ, ಪ್ರಲಯದಲ್ಲಿ ಯಾವುದೇ ಭಾವಪದಾರ್ಥವಿಲ್ಲವೆಂದಾದಲ್ಲಿ ಕಾಲವೂ ಇಲ್ಲದಂತಾದೀತು ಎಂದು ಸೂಚಿಸಲಾಗಿದೆ.

ಪ್ರಲಯಕಾಲದಲ್ಲಿ ಕೇವಲ ಅಭಾವ ಉಳಿಯಬೇಕಾಗುವುದು ಎಂಬ ಆಪಾದನೆ ಅನಿಷ್ಟವಲ್ಲ ಎಂಬ ಆಶಂಕೆಗೆ ಸಮಾಧಾನ—

ಓಂ ನ ತು ದೃಷ್ಟಾಂತಭಾವಾತ್ ಓಂ (೨-೧-೧೦)

**ಸೂತ್ರಾರ್ಥ**

'ತು' ಶಬ್ದಕ್ಕೆ ಏವ ಎಂದು ಅರ್ಥ. ಕೇವಲ ದೃಷ್ಟಾಂತವು ಏನನ್ನೂ ಸಾಧಿಸಲಾರದಾದ್ದರಿಂದ ಈ ಸೂತ್ರದಲ್ಲಿ ದೃಷ್ಟಾಂತ' ಪದವನ್ನು ದೃಷ್ಟಾಂತದಲ್ಲಿ ನಿರ್ಣಯಿಸಲಾದ ವ್ಯಾಪ್ತಿಯ ಆಧಾರವುಳ್ಳ ಅನುಮಾನ ಎಂಬ ಅರ್ಥದಲ್ಲಿ ಉಪಯೋಗಿಸಲಾಗಿದೆ. ವ್ಯಾಪ್ತಿ ಇದೆ ಎಂಬುದನ್ನು ಸೂಚಿಸುವ ಸಲುವಾಗಿ ಅನುಮಾನ ಪದದ ಬದಲಾಗಿ ದೃಷ್ಟಾಂತಪದವನ್ನು ಪ್ರಯೋಗಿಸಲಾಗಿದೆ. ಪ್ರಲಯದಲ್ಲಿ ಯಾವ ಪದಾರ್ಥವೂ ಇಲ್ಲದಿರುವುದು ಇಷ್ಟವೇ ಎಂಬ ವಾದ ಯುಕ್ತವಲ್ಲ. ಆಗಲೂ ಪದಾರ್ಥಗಳ ಅಸ್ತಿತ್ವವನ್ನು ಸಾಧಿಸಲು, ದೃಷ್ಟಾಂತಭಾವಾತ್—ಅನುಮಾನ ಪ್ರಮಾಣವಿರುವುದರಿಂದ ಎಂದು ಅರ್ಥ. ವಿವಾದಗ್ರಸ್ತವಾದ ಜಗತ್ತಿನ ಉತ್ಪತ್ತಿಯು ಭಾವಪದಾರ್ಥಗಳಿಗೆ ಅಧೀನವಾದುದು. ಉತ್ಪತ್ತಿಯಾದ್ದರಿಂದ, ಘಟದ ಉತ್ಪತ್ತಿಯಂತೆ.

दृष्टान्तभावादनुमानसत्त्वादित्यर्थः । विमतोत्पत्तिर्भावाधीना उत्पत्तित्वाद् घटोत्पत्तिवत् । विमतो विनाशः सशेषो विनाशत्वाद् घटविनाशवत् । विमतः कालो भाववान् कालत्वादन्यकालवदित्यादियुक्तिविरुद्धत्वाद् अनिष्टापादनमेवेति भावः ॥

लये सर्वासत्त्वाङ्गीकारोऽप्रामाणिकत्वाच्च नेष्ट इत्याह—

॥ ॐ स्वपक्षदोषाच्च ॐ ॥ २-१-११

स्वपक्षे सर्वासत्त्वपक्षे दृष्टान्ताभावरूपदोषाच्चेत्यर्थः । प्रत्यक्षागमौ न स्तः । अदर्शनात् । भावत्वं तु दुष्टम् । श्रुती चान्यपरे इति भावः ॥

तर्केण सदसतोः कारणत्वसाधनबाधने आक्षिप्य समाधत्ते—

---

ವಿವಾದಗ್ರಸ್ತವಾದ ವಿನಾಶವು ಸಶೇಷವಾದುದು ವಿನಾಶವಾದುದರಿಂದ; ಘಟವಿನಾಶದಂತೆ. 'ವಿವಾದಗ್ರಸ್ತವಾದ ಪ್ರಲಯಕಾಲವು ಭಾವಪದಾರ್ಥಗಳಿಂದ ಯುಕ್ತವಾಗಿದೆ. ಕಾಲವಾದ್ದರಿಂದ; ಇತರ ಕಾಲಗಳಂತೆ'—ಇತ್ಯಾದಿ ಯುಕ್ತಿಗಳ ವಿರೋಧವಿರುವುದರಿಂದ ಪ್ರಲಯದಲ್ಲಿ ಕೇವಲ ಅಭಾವ ಉಳಿಯಬೇಕಾದೀತು ಎಂಬ ಆಪಾದನೆ ಅನಿಷ್ಟವೆಂದು ಭಾವ.

ಪ್ರಮಾಣವಿಲ್ಲದಿರುವ ಕಾರಣದಿಂದಲೂ, ಪ್ರಲಯದಲ್ಲಿ ಯಾವ ಪದಾರ್ಥವೂ ಇಲ್ಲವೆಂದೊಪ್ಪುವುದು ಅನಿಷ್ಟವೆಂದು ಹೇಳಲು ಸೂತ್ರ—

ಓಂ ಸ್ವಪಕ್ಷದೋಷಾಚ್ಚ ಓಂ (೨-೧-೧೧)

**ಸೂತ್ರಾರ್ಥ**

ಸ್ವಪಕ್ಷೇ—ಪ್ರಲಯದಲ್ಲಿ ಯಾವ ಪದಾರ್ಥವೂ ಇಲ್ಲ ಎಂಬ ಪಕ್ಷದಲ್ಲಿ, ದೃಷ್ಟಾಂತವನ್ನು ಆಧರಿಸಿದ ಅನುಮಾನಪ್ರಮಾಣವಿಲ್ಲದಿರುವ ದೋಷದಿಂದಲೂ ಕೂಡ ಎಂದು ಅರ್ಥ. ಪ್ರತ್ಯಕ್ಷ ಮತ್ತು ಆಗಮಪ್ರಮಾಣಗಳು ಉಪಲಬ್ಧವಾಗದಿರುವುದರಿಂದ ಇಲ್ಲ. ಭಾವತ್ವವೆಂಬ ಯುಕ್ತಿಯಂತೂ ದುಷ್ಟವಾದುದು. ಉದಾಹರಿಸಿದ ಎರಡು ಶ್ರುತಿಗಳಿಗೂ ತಾತ್ಪರ್ಯ ಬೇರೆಡೆಯಲ್ಲಿ ಎಂದು ಭಾವ.

ತರ್ಕದ ಬಲದಿಂದ ಭಾವಪದಾರ್ಥಗಳಿಗೆ ಕಾರಣತ್ವವನ್ನು ಸಾಧಿಸುವುದು, ಅಭಾವಕ್ಕೆ ಕಾರಣತ್ವವನ್ನು ನಿರಾಕರಿಸುವುದು ಯುಕ್ತವಲ್ಲ ಎಂದು ಆಕ್ಷೇಪಿಸಿ ಸಮಾಧಾನ ನೀಡುವ ಸೂತ್ರ—

॥ ॐ तर्काप्रतिष्ठानादप्यन्यथाऽनुमेयमिति चेदेवमप्यनिर्मोक्षप्रसङ्गः ॐ ॥ २–१–१२

अन्यथा पूर्वसूत्रद्वयोक्ताद् अभावाकारणत्वभावकारणत्वरूपात् प्रमेयाद्वैपरीत्येनाभावकारणत्वभावाकारणत्वरूपेणाप्यनुमातुं शक्यम् । तर्कस्याप्रतिष्ठानाद् अप्रतिष्ठितत्वाद् अव्यवस्थितत्वेनाप्रामाण्यात् । न हि प्रतितर्कः एतावानेवैतादृशं तर्कं प्रति विरोधितया प्रवर्तते नैतादृशमिति नियामकमस्ति । अतस्सर्वानुमानेषु प्रतितर्कस्यावारणीयत्वेन तेषामप्रामाण्यात्, अतोऽनुमानेन तद्द्वयसाधनं पूर्वसूत्रद्वये न युक्तमिति चेन्न । एवमप्येवं सति तर्कस्याप्रामाण्ये सति, यद्वा एवमपि "यावदेव प्रमाणेन" इत्यादिस्मृतौ प्रमाणमूलतर्कस्य प्रतिष्ठा अन्यस्य तु

---

ಓಂ ತರ್ಕಾಪ್ರತಿಷ್ಠಾನಾದಪ್ಯನ್ಯಥಾಽನುಮೇಯಮಿತಿ ಚೇದೇವಮಪ್ಯನಿರ್ಮೋಕ್ಷಪ್ರಸಂಗಃ ಓಂ (೨-೧-೧೨)

**ಸೂತ್ರಾರ್ಥ**

ಅನ್ಯಥಾ—ಹಿಂದಿನ ಎರಡು ಸೂತ್ರಗಳಲ್ಲಿ ಹೇಳಿದ, ಅಭಾವಕ್ಕೆ ಕಾರಣತ್ವವಿಲ್ಲದಿರುವುದು ಮತ್ತು ಭಾವಕ್ಕೆ ಕಾರಣತ್ವವಿರುವುದು ಎಂಬ ಪ್ರಮೇಯಕ್ಕೆ ವಿಪರೀತವಾಗಿ ಅಭಾವಕ್ಕೇ ಕಾರಣತ್ವವಿರುವುದು, ಭಾವಕ್ಕೆ ಕಾರಣತ್ವವಿಲ್ಲ ಎಂದೂ ಅನುಮಾನಮಾಡಲು ಶಕ್ಯ. ಏಕೆಂದರೆ, ತರ್ಕಸ್ಯ ಅಪ್ರತಿಷ್ಠಾನಾತ್—ತರ್ಕವು ಅಪ್ರತಿಷ್ಠಿತ ಅಂದರೆ ಅವ್ಯವಸ್ಥಿತವಾದುದರಿಂದ ಅಪ್ರಮಾಣವಾಗಿದೆ. 'ಇಷ್ಟೇ ಪ್ರತಿತರ್ಕಗಳು ಇಂತಹ ತರ್ಕವನ್ನು ಕುರಿತು ವಿರೋಧಿಯಾಗಿವೆ, ಇಂತಹ ತರ್ಕವನ್ನು ಕುರಿತು ವಿರೋಧಿಯಾಗಿಲ್ಲ' ಎಂದು ಹೇಳಲು ಯಾವುದೇ ನಿಯಾಮಕವಿಲ್ಲವಷ್ಟೇ. ಆದ್ದರಿಂದ, ಯಾವುದೇ ಅನುಮಾನಕ್ಕೆ ಪ್ರತಿತರ್ಕವನ್ನು ನಿವಾರಿಸಲು ಸಾಧ್ಯವಿಲ್ಲದ್ದರಿಂದ ಅನುಮಾನಗಳು ಅಪ್ರಮಾಣವಾಗುವವು. ಈ ಕಾರಣದಿಂದ, ಹಿಂದಿನ ಎರಡು ಸೂತ್ರಗಳಲ್ಲಿ ಅನುಮಾನದಿಂದ ಭಾವಕ್ಕೇ ಕಾರಣತ್ವ, ಅಭಾವಕ್ಕೆ ಕಾರಣತ್ವವಿಲ್ಲವೆಂಬ ಎರಡು ವಿಷಯಗಳನ್ನು ಸಾಧಿಸಿದ್ದು ಯುಕ್ತವಲ್ಲವೆಂದರೆ ಅದು ಸರಿಯಲ್ಲ. ಏವಮಪಿ—ಹೀಗಾದಲ್ಲಿ ಅಂದರೆ ತರ್ಕವು ಅಪ್ರಮಾಣವಾಗುವುದಾದಲ್ಲಿ ; ಅಥವಾ, ಏವಮಪಿ—

नेत्युक्तावपि तर्कमात्राप्रामाण्येऽनिर्मोक्षप्रसङ्गो मोक्षाभावप्रसङ्ग इत्यर्थः। त्वयापि शास्त्रफलत्वेनाङ्गीकृतमोक्षस्य विप्रतिपन्नं चार्वाकं प्रति तर्केणैव साधनीयत्वात्। विप्रतिपन्ने चार्थे स्वस्यापि केवलागमेन अनध्यवसायेन स्वमते मोक्षाभावप्रसङ्गात् । अतो यावत्प्रमितं तावन्मात्रसाधकतर्कः प्रतिष्ठितोऽन्यस्तु नेति भावः । सुधायां तु तर्कमात्राप्रामाण्ये स्वव्याघातदोषादनिर्मोक्षप्रसङ्ग इत्यर्थ उक्तः । तर्काप्रतिष्ठानादन्यथा तर्क्यमिति वाच्ये अनुमेयमित्युक्तिः न तर्कोऽनुमानाद् भिद्यत इति सूचयितुम् ॥

---

'ಯಾವದೇವ ಪ್ರಮಾಣೇನ[1]' ಇತ್ಯಾದಿ ಸ್ಮೃತಿಯಲ್ಲಿ ಪ್ರಮಾಣದ ಆಧಾರವುಳ್ಳ ತರ್ಕಕ್ಕೆ ಪ್ರಾಮಾಣ್ಯ, ಬೇರೆಯದಕ್ಕಲ್ಲ ಎಂದು ಹೇಳಿದ್ದರೂ ತರ್ಕವೆಲ್ಲವೂ ಅಪ್ರಮಾಣವಾಗುವುದಾದಲ್ಲಿ, ಅನಿರ್ಮೋಕ್ಷಪ್ರಸಂಗಃ—ಮೋಕ್ಷವೇ ಇಲ್ಲವೆಂದಾಗುವ ಪ್ರಸಂಗ ಬರುವುದು—ಎಂದು ಅರ್ಥ. ನೀನೂ ಕೂಡ, ವೇದಾಂತಶಾಸ್ತ್ರದ ಫಲ ವೆಂದೊಪ್ಪಿರುವ ಮೋಕ್ಷವನ್ನು, ಆ ವಿಷಯದಲ್ಲಿ ವಿವಾದ ಮಾಡುವ ಚಾರ್ವಾಕನನ್ನು ಕುರಿತು ತರ್ಕದಿಂದಲೇ ಸಾಧಿಸಬೇಕಾಗುವುದು. ವಿವಾದಗ್ರಸ್ತವಾದ ವಿಷಯದಲ್ಲಿ ನಿರ್ಣಯವು ಕೇವಲ ಆಗಮದಿಂದ ನಿನಗೂ ಬರಲಾರದು. ಆದ್ದರಿಂದ ನಿನ್ನ ಮತದಲ್ಲಿ ಮೋಕ್ಷವಿಲ್ಲವೆಂದಾದೀತು. ಆ ಕಾರಣದಿಂದ, ಯಾವುದು ಪ್ರಮಾಣಸಿದ್ಧವೋ ಅದೆಲ್ಲವನ್ನು ಸಾಧಿಸುವ ತರ್ಕ ಪ್ರಮಾಣವಾಗಿದೆ, ಇತರ ತರ್ಕಗಳು ಪ್ರಮಾಣವಲ್ಲ ಎಂದು ಭಾವ. ಸುಧಾದಲ್ಲಾದರೋ—ತರ್ಕವೆಲ್ಲವೂ ಅಪ್ರಮಾಣವಾಗುವುದಾದಲ್ಲಿ ಸ್ವವ್ಯಾಹತಿದೋಷದಿಂದ ಮೋಕ್ಷವಿಲ್ಲವಾದೀತು ಎಂದು ಸೂತ್ರಾರ್ಥವನ್ನು ಹೇಳಲಾಗಿದೆ.

**ತರ್ಕ–ಅನುಮಾನಗಳು ಭಿನ್ನವಲ್ಲ**

'ತರ್ಕವು ಅವ್ಯವಸ್ಥಿತವಾದುದರಿಂದ ಈಗ ಹೇಳಿರುವುದಕ್ಕಿಂತ ವಿಪರೀತ ವಾಗಿಯೂ, ತರ್ಕ ಮಾಡಲು ಶಕ್ಯ' ಎಂದು ಹೇಳುವ ಬದಲು 'ಅನುಮಾನ ಮಾಡುವುದು ಶಕ್ಯ' ಎಂದು ಹೇಳಿರುವುದು ತರ್ಕವು ಅನುಮಾನದಿಂದ ಭಿನ್ನವಲ್ಲ ಎಂದು ಸೂಚಿಸಲು.

---

1. ಯಾವದೇವ ಪ್ರಮಾಣೇನ ಸಿದ್ಧಂ ತಾವದಹಾಪಯನ್ ।
ಸ್ವೀಕುರ್ಯಾನ್ನೈವ ಚಾನ್ಯತ್ರ ಶಕ್ಯಂ ಮಾನವ್ಯತೇ ಕ್ವಚಿತ್ ॥
—ವಾಮನಪುರಾಣ.

नन्वभावस्य निषेधमात्रत्वेनाकर्तृत्वेऽपि जीवस्य तदभावात् तत्कारणकमस्तु, निष्कारणकं वाऽस्तु कूलपतनवदिदं जगदिति विशेषशङ्कायामाह—

॥ ॐ एतेन शिष्टा अपरिग्रहा अपि व्याख्याताः ॐ ॥
२-१-१३

एतेन सत्कारणत्वे दृष्टान्तभावेन जीवादिकारणत्वे दृष्टान्ताभावेन च शिष्टाः प्राङ् निरस्तादभावकर्तृत्वादवशिष्टाः, यद्वा शिष्टा अवशिष्टतया प्रतीताः न तु पूर्वेणैवानिरस्ता इत्यर्थः, अपरिग्रहा वेदपरिग्रहशून्याः तद्विरुद्धाश्च जीवप्रधानशून्यकालस्वभावादिवादा निरस्ता इत्यर्थः। अत्र शिष्टा इत्येवोक्ते ब्रह्मवादोऽपि प्राप्नोतीत्यपरिग्रहा इत्युक्तम्। तन्मात्रे तूक्ते अभावकर्तृत्ववादोऽपि गृह्येत। अतः शिष्टा

---

ಅಭಾವವು ಕೇವಲ ನಿಷೇಧರೂಪವಾಗಿರುವುದರಿಂದ ಜಗತ್ಕರ್ತೃವಾಗದಿದ್ದರೂ ಜೀವನು ಕೇವಲ ನಿಷೇಧರೂಪವಲ್ಲವಾದ್ದರಿಂದ ಜಗತ್ತಿನ ಕಾರಣವಾಗಬಹುದು. ಅಥವಾ, ನದಿಯ ದಡವು ತಾನಾಗಿಯೇ ಬೀಳುವಂತೆ ಜಗತ್ತಿನ ಸೃಷ್ಟಿಯೂ ಕಾರಣ ವಿಲ್ಲದೇ ಆಗಬಹುದು ಎಂಬ ವಿಶೇಷ ಶಂಕೆಗೆ ಸಮಾಧಾನ—

ಓಂ ಏತೇನ ಶಿಷ್ಟಾ ಅಪರಿಗ್ರಹಾ ಅಪಿ ವ್ಯಾಖ್ಯಾತಾಃ ಓಂ
(೨--೧--೧೩)

**ಸೂತ್ರಾರ್ಥ**

ಏತೇನ—ಭಾವಪದಾರ್ಥಗಳೇ ಕಾರಣ ಎಂಬ ವಿಷಯದಲ್ಲಿ ದೃಷ್ಟಾಂತವಿರುವುದರಿಂದ ಮತ್ತು ಜೀವ ಮೊದಲಾದವರು ಕಾರಣರೆಂಬ ವಿಷಯದಲ್ಲಿ ದೃಷ್ಟಾಂತ ವಿಲ್ಲದಿರುವುದರಿಂದ, ಶಿಷ್ಟಾಃ-ಹಿಂದೆ ನಿರಾಕರಿಸಲಾದ ಅಭಾವಕರ್ತೃತ್ವವಾದವನ್ನು ಬಿಟ್ಟು ಉಳಿದ, ಅಥವಾ, ಶಿಷ್ಟಾಃ ಉಳಿದಿದೆಯೆಂದು ತೋರುವ—ಹಿಂದಿನ ಯುಕ್ತಿಯಿಂದಲೇ ನಿರಾಕೃತವಾಗದೆ ಇರದ ಎಂದು ಅರ್ಥ—ಅಪರಿಗ್ರಹಾಃ-ವೇದದ ಸ್ವೀಕಾರವನ್ನು ಪಡೆಯದ ಮತ್ತು ವೇದವಿರುದ್ಧವಾದ ಜೀವ, ಪ್ರಕೃತಿ, ಶೂನ್ಯ, ಕಾಲ, ಸ್ವಭಾವ ಇವುಗಳೇ ಜಗತ್ತಿನ ಕಾರಣಗಳೆಂದು ಹೇಳುವ ವಾದಗಳು ನಿರಾಕೃತವಾದವು ಎಂದು ಅರ್ಥ.

इत्युक्तम् । उक्तरीत्या विशेषशङ्कासूचनाय वेति । प्रत्युक्ता इति वाच्ये व्याख्याता इति वचनं "जीवाद्भवन्ति भूतानि", "अकस्मादिदमाविरासीत्" इत्यादिपूर्ववाद्यनुकूलश्रुतीनां प्रागुक्तब्रह्मपरत्वस्मारणाय ॥ ४ ॥

भोक्त्रापत्त्यधिकरणम्—५

## ॥ ॐ भोक्त्रापत्तेरविभागश्चेत् स्याल्लोकवत् ॐ ॥ २-१-१४

अत्र बहुश्रुतिसिद्धतया प्रबलयुक्त्यविरोध उच्यते । भोक्तृजीवस्य मोक्षे ब्रह्मत्वापत्तेः "परेऽव्यये सर्व एकीभवन्ति" इत्यादिषु श्रवणात् तयोरविभागो भेदाभावः । ततश्चासर्वकर्तृजीवाभिन्नत्वान्न

---

**ಸೂತ್ರದ ಪದಗಳ ಸಾರ್ಥಕತೆ**

ಇಲ್ಲಿ 'ಶಿಷ್ಟಾಃ' ಎಂದಿಷ್ಟೇ ಹೇಳಿದರೆ ಬ್ರಹ್ಮವಾದವೂ ನಿರಾಕರಿಸಲ್ಪಡುವುದು ಎಂದಾಗುವುದು. ಅದಕ್ಕಾಗಿ 'ಅಪರಿಗ್ರಹಾಃ' ಎಂದು ಹೇಳಲಾಗಿದೆ. 'ಅಪರಿಗ್ರಹಾಃ' ಎಂದಿಷ್ಟೇ ಹೇಳಿದರೆ ಅಭಾವಕರ್ತೃತ್ವವಾದದ ಸಂಗ್ರಹವೂ ಆಗುವುದು. ಆದ್ದರಿಂದ 'ಶಿಷ್ಟಾಃ' ಎಂದು ಹೇಳಲಾಗಿದೆ. ಅಥವಾ ಮೇಲೆ ಹೇಳಿದಂತೆ ವಿಶೇಷ ಶಂಕೆಯನ್ನು ಸೂಚಿಸಲು 'ಶಿಷ್ಟಾಃ' ಎಂದು ಹೇಳಲಾಗಿದೆ. 'ಜೀವಾದ್ಭವಂತಿ ಭೂತಾನಿ', 'ಅಕಸ್ಮಾದಿದಮಾವಿರಾಸೀತ್' ಇತ್ಯಾದಿಯಾದ ಪೂರ್ವಪಕ್ಷಿಗೆ ಅನುಕೂಲಗಳಾದ ಶ್ರುತಿಗಳೂ ಬ್ರಹ್ಮಪರವೆಂದು ಹಿಂದೆ ಹೇಳಿದುದನ್ನು ಜ್ಞಾಪಿಸಲು 'ನಿರಾಕೃತವಾದವು' ಎಂದು ಹೇಳುವ ಬದಲು 'ವ್ಯಾಖ್ಯಾತವಾದವು' ಎಂದು ಹೇಳಲಾಗಿದೆ.

ಭೋಕ್ತ್ರಾಪತ್ತ್ಯಧಿಕರಣ—೫

## ಓಂ ಭೋಕ್ತ್ರಾಪತ್ತೇರವಿಭಾಗಶ್ಚೇತ್ ಸ್ಯಾಲ್ಲೋಕವತ್ ಓಂ (೨-೧-೧೪)

**ಅಧಿಕರಣದ ಉದ್ದೇಶ ಮತ್ತು ಸೂತ್ರಾರ್ಥ**

ಈ ಅಧಿಕರಣದಲ್ಲಿ ಬಹುಶ್ರುತಿಗಳಿಂದ ಸಿದ್ಧವಾದ ಕಾರಣ ಪ್ರಬಲವಾದ ಯುಕ್ತಿಯ ಅವಿರೋಧವನ್ನು ಹೇಳಲಾಗುವುದು. ಭೋಕ್ತೃವಾದ ಜೀವನು ಮೋಕ್ಷ

ब्रह्मणः सर्वकर्तृतेति चेत् नेति शेषः। ब्रह्मणो जीवाभेद एव नास्ति। श्रौतस्त्वेकीभावप्रयोगः स्याल्लोकवत्। यथा लोके उदके उदकस्यैकीभावव्यवहारो, यथा वा प्राग्विभिन्ना ब्राह्मणाः साम्प्रतमेकीभूता इति व्यपदेशस्तथा प्राग्भिन्नस्थाना भिन्नमतयो जीवाः मुक्तौ ब्रह्मणैकस्थाना एकमतय इति स्थानैक्यादिनिमित्तक इत्यर्थः। कुत एवं लक्षितलक्षणाश्रयणं श्रुतेरित्यतोऽपि स्याल्लोकवत्। लोकेऽप्यन्यद्वस्तु वस्त्वन्तरेणाभेदमापन्नं न दृष्टम्। अतः प्राग्भिन्नतया प्रतीतस्य जीवस्य मुक्तावभेदायोगाद् बाधकादेवमाश्रयणं युक्तम्। न च प्राग्भेदप्रतीतिर्भ्रमः। बाधकाभावादिति भावः ॥ ५ ॥

---

ದಲ್ಲಿ ಬ್ರಹ್ಮತ್ವವನ್ನು ಪಡೆಯುವವನು ಎಂಬುದು 'ಪರೇಽವ್ಯಯೇ ಸರ್ವ ಏಕೀಭವಂತಿ' ಇತ್ಯಾದಿ ಶ್ರುತಿಗಳಲ್ಲಿ ಶ್ರುತವಾಗಿರುವುದರಿಂದ ಜೀವಬ್ರಹ್ಮರಿಗೆ, ಅವಿಭಾಗಃ—ಭೇದವಿಲ್ಲ. ಆದ್ದರಿಂದ ಸರ್ವಕರ್ತೃವಲ್ಲದ ಜೀವನಿಂದ ಅಭಿನ್ನನಾದ ಬ್ರಹ್ಮನೂ ಸರ್ವಕರ್ತೃವಲ್ಲ ಎಂದರೆ—'ನ' ಎಂಬ ಪದವನ್ನು ಸೇರಿಸಿಕೊಳ್ಳಬೇಕು—ಬ್ರಹ್ಮನಿಗೆ ಜೀವಾಭೇದವೇ ಇಲ್ಲ. ಶ್ರುತಿಯಲ್ಲಿರುವ 'ಏಕೀಭಾವ' ಪದಪ್ರಯೋಗವು, ಸ್ಯಾಲ್ಲೋಕವತ್—ಲೋಕದಲ್ಲಿ ಹೇಗೆ ನೀರಿಗೆ ನೀರಿನ ಏಕೀಭಾವವ್ಯವಹಾರವಿದೆಯೋ, ಅಥವಾ ಹೇಗೆ 'ಮೊದಲು ವಿಭಿನ್ನರಾಗಿದ್ದ ಬ್ರಾಹ್ಮಣರು ಈಗ ಏಕೀಭೂತರಾದರು' ಎಂಬ ವ್ಯವಹಾರವಿದೆಯೋ ಹಾಗೆ ಮೊದಲು ಭಿನ್ನಸ್ಥಾನದಲ್ಲಿದ್ದ, ಭಿನ್ನಮತಿಯನ್ನು ಪಡೆದಿದ್ದ ಜೀವರು ಮುಕ್ತಿಯಲ್ಲಿ ಬ್ರಹ್ಮನೊಂದಿಗೆ ಏಕಸ್ಥಾನವನ್ನು ಪಡೆದರು, ಏಕಮತಿಯನ್ನು ಪಡೆದರು ಎಂಬುದಾಗಿ ಸ್ಥಾನೈಕ್ಯವೇ ಮೊದಲಾದ ನಿಮಿತ್ತದಿಂದ ಉಂಟಾದುದು ಎಂದು ಅರ್ಥ.

ಶ್ರುತಿಯಲ್ಲಿರುವ 'ಏಕೀಭವಂತಿ' ಎಂಬ ಪದಕ್ಕೆ ಹೀಗೆ ಲಕ್ಷಿತಲಕ್ಷಣಾವನ್ನು ಆಶ್ರಯಿಸುವುದೇಕೆ ಎಂಬ ಆಶಂಕೆಗೂ 'ಸ್ಯಾಲ್ಲೋಕವತ್' ಎಂದೇ ಉತ್ತರ. ಲೋಕದಲ್ಲೂ ಒಂದು ವಸ್ತು ಮತ್ತೊಂದು ವಸ್ತುವಿನೊಂದಿಗೆ ಅಭೇದವನ್ನು ಪಡೆಯುವುದು ಎಲ್ಲೂ ಕಂಡಿಲ್ಲ. ಆದ್ದರಿಂದ, ಮೊದಲು ಸಂಸಾರದಲ್ಲಿ ಬ್ರಹ್ಮನಿಂದ ಭಿನ್ನನೆಂದು ಅನುಭವಸಿದ್ಧನಾದ ಜೀವನಿಗೆ ಮುಕ್ತಿಯಲ್ಲಿ ಬ್ರಹ್ಮನಿಂದ ಅಭೇದವು ಯುಕ್ತವಲ್ಲ. ಹೀಗೆ ಬಾಧಕವಿರುವುದರಿಂದಲೇ ಲಕ್ಷಿತಲಕ್ಷಣಾವನ್ನು ಆಶ್ರಯಿಸಿರುವುದು ಯುಕ್ತವಾಗಿದೆ. ಸಂಸಾರಕಾಲದಲ್ಲಿ ಬರುವ ಭೇದದ ಅನುಭವವು ಬಾಧವೇ ಇಲ್ಲದಿರುವುದರಿಂದ ಸರ್ವಥಾ ಭ್ರಾಂತಿಯಾಗಲಾರದು ಎಂದು ಭಾವ.

आरम्भणाधिकरणम्—६

## ॥ ॐ तदनन्यत्वमारम्भणशब्दादिभ्यः ॐ ॥
## २-१-१५

अत्र बहुयुक्तिविरोधो निरस्यते । अवरस्येत्यग्रे अभिधानात् स्वतन्त्रसाधनस्येति शेषः । स्वतन्त्रसाधनस्य तदनन्यत्वं ब्रह्मानन्यत्वं, न ततोऽन्यत्वम् । स्वरूपसामर्थ्यादेव तस्य सर्वकर्तृत्वमिति यावत् । न त्वन्यत् स्वतन्त्रसाधनमपेक्ष्येति भावः । कुतः ? आरभ्यते येन तदारम्भणमुपादानम् । आरम्भणपदेनाधिष्ठानादिसाधनजातं लक्षयित्वा तदाक्षेपो लक्षणीयः । तथा च "किं स्विदासीदधिष्ठानमारम्भणं

---

ಆರಂಭಣಾಧಿಕರಣ—೬

## ಓಂ ತದನನ್ಯತ್ವಮಾರಂಭಣಶಬ್ದಾದಿಭ್ಯಃ ಓಂ
## (೨--೧--೧೫)

**ಅಧಿಕರಣದ ಉದ್ದೇಶ ಮತ್ತು 'ತದನನ್ಯತ್ವಂ' ಎಂಬ ಸೂತ್ರಭಾಗದ ಅರ್ಥ.**

ಈ ಅಧಿಕರಣದಲ್ಲಿ ವಿಷ್ಣುವಿನ ಜಗತ್ಕರ್ತೃತ್ವಕ್ಕೆ ಬಹುಯುಕ್ತಿಗಳ ವಿರೋಧವನ್ನು ನಿರಾಕರಿಸಲಾಗುವುದು. [1]ಮುಂದೆ, ಅಧೀನವಾದ ಸಾಧನವಿದೆಯೆಂದು ಹೇಳುವುದರಿಂದ ಇಲ್ಲಿ 'ಸ್ವತಂತ್ರವಾದ ಸಾಧನಕ್ಕೆ' ಎಂಬ ಪದಗಳನ್ನು ಸೇರಿಸಿಕೊಳ್ಳಬೇಕು. ಜಗತ್ಸೃಷ್ಟ್ಯಾದಿಗಳಿಗೆ ಕಾರಣವಾದ ಸ್ವತಂತ್ರಸಾಧನಕ್ಕೆ, ತದನನ್ಯತ್ವಂ—ಬ್ರಹ್ಮಾನನ್ಯತ್ವವಿದೆ ಅಂದರೆ ಬ್ರಹ್ಮನ ಭೇದವಿಲ್ಲ. ತನ್ನಿಂದ ಭಿನ್ನವಲ್ಲದ ಸಾಮರ್ಥ್ಯದಿಂದಲೇ ಬ್ರಹ್ಮನಿಗೆ ಸರ್ವಕರ್ತೃತ್ವವೆಂದು ತಾತ್ಪರ್ಯ. ಇನ್ನೊಂದು ಸ್ವತಂತ್ರವಾದ ಸಾಧನವನ್ನು ಅವಲಂಬಿಸಿದ್ದಲ್ಲವೆಂದು ಭಾವ. ಏಕೆಂದರೆ—

**'ಆರಂಭಣಶಬ್ದಾದಿಭ್ಯಃ' ಎಂಬ ಸೂತ್ರಭಾಗದ ವ್ಯಾಖ್ಯಾನ**

ಯಾವುದರಿಂದ ಪದಾರ್ಥದ ಉತ್ಪತ್ತಿಯಾಗುವುದೋ ಅದು ಆರಂಭಣ ಅಂದರೆ ಉಪಾದಾನ. ಆರಂಭಣಪದದಿಂದ ಅಧಿಷ್ಠಾನ ಮೊದಲಾದ ಸಾಧನ ಸಮೂಹವನ್ನು ಲಕ್ಷಣಯಾ ಗ್ರಹಿಸಿ ಅದರಿಂದ ಅವುಗಳ ಆಕ್ಷೇಪವನ್ನು ಲಕ್ಷಣಯಾ ತೆಗೆದುಕೊಳ್ಳಬೇಕು. ತಥಾಚ—'ಕಿಂ ಸ್ವಿದಾಸೀತ್ ಅಧಿಷ್ಠಾನಮಾರಂಭಣಂ ಕಥಮಾತ್ಸ್ವಿತ್

---

1. ಸತ್ತ್ವಾಚ್ಚಾವರಸ್ಯ (ಬ್ರ. ಸೂ. ೨–೧–೧೬)

कतमत्स्वित्कथासीत्" इति स्वतन्त्राधिष्ठानाद्याक्षेपकशब्दात् अपरतन्त्रत्वात् स्वतन्त्रत्वात् साधनसत्ताप्रदत्वादिति आदिपदोक्तव्यतिरेकिहेतुभ्यश्चेत्यर्थः । अत्र स्वतन्त्रसाधनाभाव इत्युक्ते ब्रह्मणोऽपि स्वातन्त्र्यं नेति स्यात् । तदनन्यत्वं स्वतन्त्रसाधनस्येत्युक्ते तदेव स्वतन्त्रसाधनं नान्यदिति लभ्यत इत्येवमुक्तम् । श्रुतावधिष्ठानस्यादित्वेऽपि आरम्भणशब्दस्य साधकतमरूपकारणवाचितया अर्थप्राधान्यात्तस्योक्तिः । श्रुतावधिष्ठानादिमात्राक्षेपश्रवणेऽपि साधनसत्त्वावेदक

---

ಕಥಾಸೀತ್'[1] ಎಂಬುದಾಗಿ ಸ್ವತಂತ್ರವಾದ ಅಧಿಷ್ಠಾನ ಮೊದಲಾದವುಗಳು ಯಾವುದಿತ್ತು ಎಂದು ಮೊದಲಾಗಿ ಆಕ್ಷೇಪಿಸುವ ಶಬ್ದದಿಂದ, ಪರಾಧೀನವಲ್ಲದ್ದರಿಂದ, ಸ್ವತಂತ್ರವಾದುದರಿಂದ ಮತ್ತು ಸಾಧನಗಳಿಗೆ ಸತ್ತಾಪ್ರದವಾದುದರಿಂದ—ಹೀಗೆ 'ಆದಿ' ಪದದಿಂದ ಹೇಳಲ್ಪಟ್ಟ ವ್ಯತಿರೇಕಿಹೇತುಗಳಿಂದ ಎಂದು ಅರ್ಥ.

**ಸೂತ್ರದ ಪದಗಳ ಸ್ವಾರಸ್ಯ**

ಸೂತ್ರದಲ್ಲಿ 'ಸ್ವತಂತ್ರಸಾಧನಾಭಾವಃ' ಎಂದು ಹೇಳಿದಲ್ಲಿ ಬ್ರಹ್ಮನಿಗೂ ಜಗತ್ಸೃಷ್ಟಿಯ ವಿಷಯದಲ್ಲಿ ಸ್ವಾತಂತ್ರ್ಯವಿಲ್ಲವೆಂದು ಅರ್ಥವಾದೀತು 'ತದನನ್ಯತ್ವಂ ಸ್ವತಂತ್ರಸಾಧನಸ್ಯ' ಎಂದು ಹೇಳಿದರೆ ಬ್ರಹ್ಮನೇ ಸ್ವತಂತ್ರಸಾಧನ, ಇನ್ನೊಂದಲ್ಲ ಎಂಬ ಅರ್ಥವು ಲಭಿಸುವುದು ಆದ್ದರಿಂದ 'ತದನನ್ಯತ್ವಂ' ಎಂದೇ ಹೇಳಲಾಗಿದೆ

**ಸೂತ್ರದಲ್ಲಿ 'ಆರಂಭಣ' ಶಬ್ದವನ್ನು ಗ್ರಹಿಸಲು ಕಾರಣ**

ಶ್ರುತಿಯಲ್ಲಿ 'ಅಧಿಷ್ಠಾನ' ಶಬ್ದವೇ ಮೊದಲಿದ್ದರೂ ಸಾಧಕತಮವಾದ ಕರಣ ಎಂಬ ಅರ್ಥವುಳ್ಳ 'ಆರಂಭಣ' ಶಬ್ದಕ್ಕೆ ಅರ್ಥತಃ ಪ್ರಾಧಾನ್ಯವಿರುವುದರಿಂದ ಅದನ್ನೇ ಸೂತ್ರದಲ್ಲಿ ಹೇಳಲಾಗಿದೆ.

---

1. ಕಿಂ ಸ್ವಿದಾಸೀತ್ ಅಧಿಷ್ಠಾನಮಾರಂಭಣಂ ಕತಮತ್ಸ್ವಿತ್ ಕಥಾಽಸೀತ್ ।
ಯತೋ ಭೂಮಿಂ ಜನಯನ್ ವಿಶ್ವಕರ್ಮಾ ವಿದ್ಯಾಮೌರ್ಣೋನ್ಮಹಿನಾ ವಿಶ್ವಚಕ್ಷಾಃ ॥ (ಋ. ೧೦-೮೧-೨)

"ಜಗತ್ಕರ್ತೃವಾದ ಹರಿಯು ಸೃಷ್ಟಿಕಾಲದಲ್ಲಿ ಯಾವ ಅಧಿಷ್ಠಾನ ಮೊದಲಾದವುಗಳಿಂದ ಭೂಮಿಯನ್ನೂ ದ್ಯುಲೋಕವನ್ನೂ ಸೃಷ್ಟಿಸಿದನು! ತನ್ನ ಮಹಿಮೆಯಿಂದ ತನ್ನ ಸರ್ವಾವಯವಗಳಿಂದಲೂ ನೋಡುವ ಶಕ್ತಿಯುಳ್ಳ ಹರಿಯು ಯಾವ ಅಧಿಷ್ಠಾನಾದಿಗಳಿಂದ ಭೂಮಿಯನ್ನೂ ದ್ಯುಲೋಕವನ್ನೂ ಪ್ರಲಯಕಾಲದಲ್ಲಿ ಆವರಿಸಿದನು! ಆ ಅಧಿಷ್ಠಾನ ಯಾವುದಿತ್ತು! ಉಪಾದಾನವಾಗಲಿ ಸಾಧನವಾಗಲಿ ಯಾವುದಿತ್ತು! ಹೇಗಿತ್ತು!" ಎಂದು ಶ್ರುತ್ಯರ್ಥ. ಕಿಂ ಆಸೀತ್, ಕಥಮತ್ ಸ್ವಿತ್ ಕಥಾಽಸೀತ್" ಮೊದಲಾದ ಆಕ್ಷೇಪವನ್ನು ಧ್ವನಿಸುವ ಶಬ್ದಗಳಿಂದ ಸೃಷ್ಟಿಕಾಲದಲ್ಲಿ ಹರಿಗೆ ಸಹಾಯಕವಾದ ಸ್ವತಂತ್ರಸಾಧನಾದಿಗಳಾವುದೂ ಇರಲಿಲ್ಲವೆಂದು ಸಿದ್ಧಿಸುವುದು.

"अद्भ्यः सम्भूतः" इत्यादिश्रुत्यन्तरबलात् स्वातन्त्र्येणाधिष्ठानाद्याक्षेपपरत्वं लभ्यते । अग्रे परिहारानुक्तेः किंशब्दो न प्रश्नार्थक इति ध्येयम् । विद्यारण्येनाप्याक्षेपार्थत्वस्यैवोक्तेः ।

विपक्षे बाधकाच्चैवमित्याह—

॥ ॐ भावे चोपलब्धेः ॐ ॥ २-१-१६

स्वतन्त्रसाधनस्येत्यास्ति । प्रसङ्ग इति शेषः । उक्तवैपरीत्ये बाधकोक्तित्वात् तदन्येति लभ्यते । तदन्यस्वतन्त्रसाधनस्य भावे

---

**ಶ್ರುತಿಯಲ್ಲಿ 'ಕಿಂ' ಇತ್ಯಾದಿ ಶಬ್ದಗಳು ಸ್ವತಂತ್ರವಾದ ಅಧಿಷ್ಠಾನಾದಿಗಳ ಆಕ್ಷೇಪವನ್ನು ಸೂಚಿಸುವುದು; ಪ್ರಶ್ನೆ ಇವುಗಳ ಅರ್ಥವಲ್ಲ.**

ಶ್ರುತಿಯಲ್ಲಿ 'ಯಾವುದೇ ಅಧಿಷ್ಠಾನಾದಿಗಳು ಇರಲಿಲ್ಲ' ಎಂಬ ಅಭಿಪ್ರಾಯದ ಕೇವಲ ಅಧಿಷ್ಠಾನಾದಿಗಳ ಆಕ್ಷೇಪವಿದೆ. ಆದರೂ, 'ಅದ್ಭ್ಯಃ ಸಂಭೂತಃ' (ತೈ. ಆ. ೩-೧೩) ಇತ್ಯಾದಿ ಶ್ರುತ್ಯಂತರಗಳಿಂದ ಜಲವೇ ಮೊದಲಾದ ಸಾಧನಗಳು ಸೃಷ್ಟಿಗೆ ಮುಂಚಿತವಾಗಿ ಇದ್ದವೆಂದು ತಿಳಿದುಬರುವುದರಿಂದ ಸ್ವತಂತ್ರವಾಗಿ ಯಾವುದೇ ಅಧಿಷ್ಠಾನಾದಿಗಳು ಇರಲಿಲ್ಲ ಎಂದು ಸೂಚಿಸುವ ಆಕ್ಷೇಪದಲ್ಲೇ ತಾತ್ಪರ್ಯವೆಂದು ಲಭಿಸುವುದು. ಮುಂದೆ ಶ್ರುತಿಯಲ್ಲಿ ಉತ್ತರವನ್ನು ಹೇಳದಿರುವುದರಿಂದ 'ಕಿಂ' ಶಬ್ದಕ್ಕೆ ಪ್ರಶ್ನೆ ಅರ್ಥವಲ್ಲವೆಂದು ತಿಳಿಯಬೇಕು. ವಿದ್ಯಾರಣ್ಯರೂ ಇಲ್ಲಿ ಆಕ್ಷೇಪಾರ್ಥವನ್ನೇ ಹೇಳಿದ್ದಾರೆ.

ವಿಷ್ಣುವಿನಿಂದ ಅನ್ಯವಾದ ಸ್ವತಂತ್ರಸಾಧನವಿದೆ ಎಂದು ಒಪ್ಪಿದಲ್ಲಿ ಬಾಧಕವಿರುವುದರಿಂದಲೂ ಸ್ವತಂತ್ರಸಾಧನವು ವಿಷ್ಣುವಿನಿಂದ ಅನನ್ಯವಾದುದು ಎಂದು ಹೇಳುವ ಸೂತ್ರ—

ಓಂ ಭಾವೇ ಚೋಪಲಬ್ಧೇಃ ಓಂ (೨-೧-೧೬)

**ಸೂತ್ರಾರ್ಥ**

'ಸ್ವತಂತ್ರಸಾಧನಸ್ಯ' ಎಂಬ ಪದವನ್ನು ಅಧ್ಯಾಹಾರಮಾಡಿಕೊಳ್ಳಬೇಕು. 'ಪ್ರಸಂಗಃ' ಎಂದು ಶೇಷವನ್ನು ಸೇರಿಸಿಕೊಳ್ಳಬೇಕು ಹಿಂದಿನ ಸೂತ್ರದಲ್ಲಿ ಹೇಳಿದ್ದಕ್ಕೆ ವಿಪರೀತವಾಗಿ ಹೇಳಿದಲ್ಲಿ ಬಾಧಕವನ್ನು ಹೇಳುವ ಸೂತ್ರವಾದ್ದರಿಂದ 'ತದನ್ಯ' ಎಂಬ ಪದವೂ ಲಭಿಸುತ್ತದೆ. ವಿಷ್ಣುವಿನಿಂದ ಅನ್ಯವಾದ ಸ್ವತಂತ್ರ ಸಾಧನವಿದ್ದಲ್ಲಿ ಅದು ಉಪಲಬ್ಧವಾಗಬೇಕಾಗಿತ್ತು. ಪ್ರಮಾಣಗಳಿಂದ ತಿಳಿಯಲ್ಪಡಬೇಕಾಗಿತ್ತು ಎಂದು ಭಾವ. ಆದರೆ, ಅದು ಉಪಲಬ್ಧವಾಗಿಲ್ಲ. ಆದ್ದರಿಂದ,

उपलब्धेः प्रसङ्गः । प्रमाणैरुपलभ्येतेति यावत् । नोपलभ्यते । अतश्च तदनन्यत्वमित्यर्थः । प्रत्यक्षश्रुत्योरभावाद् युक्तेश्चान्ते निरासादिति भावः ।

ननु "अद्भ्यः सम्भूतः पृथिव्यै रसाच्च" इत्यादावबाद्युपलक्षितभूतादियुक्ततया हिरण्यगर्भस्य हरेः सकाशादुत्पत्त्युक्त्या कथं साधनान्तरानुपलम्भ इत्यत आह—

## ॥ ॐ सत्वाच्चावरस्य ॐ ॥ २-१-१७

चोऽवधारणे । साधनस्येत्यस्ति । अवरस्य तदधीनस्य साधनस्य सत्त्वादेव "अद्भ्य" इत्यादिवचनं, न स्वतन्त्रस्य सत्त्वादित्यर्थः ॥

---

ಸ್ವತಂತ್ರಸಾಧನವು ವಿಷ್ಣುವಿನಿಂದ ಅನ್ಯವಲ್ಲ ಎಂದು ಅರ್ಥ. ವಿಷ್ಣುಭಿನ್ನವಾದ ಸ್ವತಂತ್ರಸಾಧನದ ವಿಷಯದಲ್ಲಿ ಪ್ರತ್ಯಕ್ಷವಾಗಲೀ ಶ್ರುತಿಯಾಗಲೀ ಇಲ್ಲ, ಯುಕ್ತಿಯನ್ನು ಕೊನೆಯಲ್ಲಿ ನಿರಾಕರಿಸಲಾಗುವುದು ಎಂದು ಭಾವ.

1 'ಅದ್ಭ್ಯಃ ಸಂಭೂತಃ ಪೃಥಿವ್ಯೈ ರಸಾಚ್ಚ' ಇತ್ಯಾದಿ ಶ್ರುತಿಯಲ್ಲಿ ಜಲವೇ ಮೊದಲಾದ ಪಂಚಮಹಾಭೂತಗಳಿಂದ ಸಹಿತನಾಗಿ ಹಿರಣ್ಯಗರ್ಭನು ಹರಿಯಿಂದ ಹುಟ್ಟಿದನೆಂದು ಹೇಳುವುದರಿಂದ ವಿಷ್ಣುಭಿನ್ನ ಸಾಧನವೇ ಪ್ರಮಾಣಗಳಿಂದ ಉಪಲಬ್ಧವಾಗಿಲ್ಲವೆಂದು ಹೇಳುವುದು ಹೇಗೆ ಎಂಬ ಆಕ್ಷೇಪಕ್ಕೆ ಸಮಾಧಾನ—

## ಓಂ ಸತ್ತ್ವಾಚ್ಚಾವರಸ್ಯ ಓಂ (೨-೧-೧೭)

**ಸೂತ್ರಾರ್ಥ**

'ಚ' ಶಬ್ದವು ಅವಧಾರಣಾರ್ಥಕವಾದುದು. 'ಸಾಧನಸ್ಯ' ಎಂಬ ಪದವನ್ನು ಅಧ್ಯಾಹಾರ ಮಾಡಿಕೊಳ್ಳಬೇಕು. ಅವರಸ್ಯ ಅಂದರೆ ವಿಷ್ಣುವಿಗೆ ಅಧೀನವಾದ ಸಾಧನವು ಇರುವುದರಿಂದಲೇ 'ಅದ್ಭ್ಯಃ ಸಂಭೂತಃ' ಇತ್ಯಾದಿ ವಚನವಿರುವುದು ಹೊರತು ಸ್ವತಂತ್ರವಾದ ಸಾಧನವಿರುವುದರಿಂದಲ್ಲ ಎಂದು ಅರ್ಥ.

---

1. ಅದ್ಭ್ಯಃ ಸಂಭೂತಃ ಪೃಥಿವ್ಯೈ ರಸಾಚ್ಚ ವಿಶ್ವಕರ್ಮಣಃ ಸಮವರ್ತತಾಧಿ ।
ತಸ್ಯ ತ್ವಷ್ಟಾ ವಿದಧದ್ರೂಪಮೇತಿ ತತ್ಪುರುಷಸ್ಯ ವಿಶ್ವಮಾಜಾನಮಗ್ರೇ ॥
(ತೈ. ಆ. ೩-೧೩)

"ತತ್ಪುರುಷಾಖ್ಯ ಹಿರಣ್ಯಗರ್ಭನು ಜಗತ್ಕರ್ತೃವಾದ ಹರಿಯಿಂದ ಪಂಚಮಹಾಭೂತಗಳಿಂದಲೂ, ಪಂಚತನ್ಮಾತ್ರೆಗಳಿಂದಲೂ ಸಹಿತನಾಗಿ ಜನಿಸಿ ಸರ್ವಾಧಿಕನಾಗಿದ್ದನು. ಆ ತತ್ಪುರುಷನ ಉತ್ಪತ್ತಿಗೆ ಮುಂಚಿತವಾಗಿಯೇ ಹುಟ್ಟಿದ ಬ್ರಹ್ಮಾಂಡವನ್ನೂ, ಚತುರ್ಮುಖನ ವಿಗ್ರಹವನ್ನೂ ಮಹಾದೀಪ್ತಿಯುಕ್ತನಾದ ಭಗವಂತನು ಧಾರಣ ಮಾಡಿದ್ದನು" ಎಂದು ಶ್ರುತ್ಯರ್ಥ.

साधनान्तरसत्त्वमुपेत्य तस्येशाधीनत्वमुक्तं, तन्नेत्याक्षिप्याह—

॥ ॐ असद्व्यपदेशान्नेति चेन्न धर्मान्तरेण वाक्यशेषात् ॐ ॥ २-१-१८

भावनिर्देशोऽयम् । साधनस्येत्यस्ति । "नासदासीन्नो सदासीत्तदानीं नासीद्रजो नो व्योम" इति श्रुतौ साधनस्याऽसत्त्वव्यपदेशान्नोक्तं युक्तमिति चेन्न । स्वतन्त्रत्वाव्यक्तत्वाविकृतत्वादिधर्मान्तरेणैवासत्त्वव्यपदेशो न स्वरूपेणेत्यर्थः । कुतो मुख्यार्थत्यागः । वाक्यशेषात् । तम आसीदिति प्रकृत्यादिसत्त्वपरवाक्यशेषान्यथाऽनुपपत्त्येत्यर्थः । यद्वा "तस्माद्धान्यन्न परः किञ्चनास" इति

---

ಜಗತ್ಸೃಷ್ಟಿಗೆ ಸಾಧನಾಂತರವನ್ನು ಅಂಗೀಕರಿಸಿ ಅದು ಭಗವದಧೀನವೆಂದು ಹೇಳಲಾಯಿತು. ಅದು ಯುಕ್ತವಲ್ಲ ಎಂದು ಆಕ್ಷೇಪಿಸಿ ಸಮಾಧಾನ ನೀಡುವ ಸೂತ್ರ—

ಓಂ ಅಸದ್ವ್ಯಪದೇಶಾನ್ನೇತಿ ಚೇನ್ನ ಧರ್ಮಾಂತರೇಣ ವಾಕ್ಯಶೇಷಾತ್ ಓಂ (೨-೧-೧೮)

**ಸೂತ್ರಾರ್ಥ**

'ಅಸತ್' ಶಬ್ದವು ಭಾವಪ್ರಧಾನ ನಿರ್ದೇಶವಾಗಿದೆ. 'ಸಾಧನಸ್ಯ' ಎಂಬ ಪದವನ್ನು ಅಧ್ಯಾಹಾರಮಾಡಿಕೊಳ್ಳಬೇಕು. 'ನಾಸದಾಸೀನ್ನೋ ಸದಾಸೀತ್ತದಾನೀಂ ನಾಸೀದ್ರಜೋ ನೋ ವ್ಯೋಮ' ಇತ್ಯಾದಿ ಶ್ರುತಿಯಲ್ಲಿ ಸಾಧನವೇ ಇರಲಿಲ್ಲವೆಂದು ಹೇಳಿರುವುದರಿಂದ ಅಸ್ವತಂತ್ರ ಸಾಧನವಿತ್ತು ಎಂದು ಹೇಳುವುದು ಯುಕ್ತವಲ್ಲ ಎಂದರೆ ಅದು ಸರಿಯಲ್ಲ. ಸ್ವಾತಂತ್ರ್ಯ, ಅವ್ಯಕ್ತತ್ವ, ಅವಿಕಾರ ಮೊದಲಾದ ಧರ್ಮವಿಶಿಷ್ಟವಾದ ಸಾಧನವು ಇರಲಿಲ್ಲವೆಂದು ಆ ಶ್ರುತಿಯಲ್ಲಿ ಹೇಳಲಾಗಿದೆಯೇ ಹೊರತು ಸಾಧನವೇ ಇರಲಿಲ್ಲವೆಂದು ಹೇಳಿಲ್ಲ ಎಂದು ಅರ್ಥ. ಮುಖ್ಯಾರ್ಥವನ್ನು ತ್ಯಾಗಮಾಡಲು ಕಾರಣ ವಾಕ್ಯಶೇಷ. 'ತಮ ಆಸೀತ್' ಎಂದು ಪ್ರಕೃತ್ಯಾದಿಗಳ ಅಸ್ತಿತ್ವದಲ್ಲಿ ತಾತ್ಪರ್ಯವಿರುವ ವಾಕ್ಯಶೇಷವು ಸಾಧನಗಳೇ ಇರಲಿಲ್ಲವೆಂದು ಹೇಳಿದಲ್ಲಿ ಉಪಪನ್ನವಾಗುವುದಿಲ್ಲವೆಂದು ಅರ್ಥ. ಅಥವಾ 'ತಸ್ಮಾದ್ಧಾನ್ಯನ್ನ ಪರಃ ಕಿಂಚನಾಸ' ಎಂಬುದಾಗಿ ಸ್ವಾತಂತ್ರ್ಯವನ್ನು ನಿಷೇಧಿಸುವ ವಾಕ್ಯಶೇಷದಿಂದ ಎಂದು ಅರ್ಥ. ಯಾವ ಸಾಧನವೂ ಇರಲಿಲ್ಲವೆಂದು ಹೇಳುವ ಅಭಿಪ್ರಾಯವಿದ್ದಲ್ಲಿ 'ಪರ' ಶಬ್ದವು ವ್ಯರ್ಥವಾಗುವುದೆಂದು ಭಾವ.

स्वातन्त्र्यनिषेधवाक्यशेषादित्यर्थः । अन्यथा पर इति व्यर्थमिति भावः । अत्रेशमुपेत्यान्यस्यासत्त्वशङ्कनात् न असदिति चेदित्यनेन पौनरुक्त्यम् ॥

ननु तस्यैव स्वतन्त्रत्वे साधनान्तरोपादानमयुक्तमित्यत आह—

॥ ॐ युक्तेः शब्दान्तराच्च ॐ ॥ २-१-१९

स्वेच्छया लीलया स्वाधीनसाधनान्तरोपादानेन सृष्टेर्युक्तत्वात् लीलया दण्डमालम्ब्य गच्छतोऽपङ्गुत्ववत्, ईशत्वाविरोधित्वादिति

---

**ಈ ಸೂತ್ರದಲ್ಲಿ ಪುನರುಕ್ತಿಯಿಲ್ಲ**

ಈ ಸೂತ್ರದಲ್ಲಿ ಭಗವಂತನನ್ನು ಅಂಗೀಕರಿಸಿ ಇತರ ವಸ್ತುಗಳಿಲ್ಲವೆಂದು ಶಂಕಿಸುತ್ತಿರುವುದರಿಂದ 'ಅಸದಿತಿ ಚೇನ್ನ ಪ್ರತಿಷೇಧಮಾತ್ರತ್ವಾತ್' (ಬ್ರ. ಸೂ. ೨-೧-೮) ಎಂಬ ಸೂತ್ರದಿಂದ ಪುನರುಕ್ತಿಯಿಲ್ಲ.[1]

ಭಗವಂತನೊಬ್ಬನೇ ಸ್ವತಂತ್ರವಾಗಿದ್ದಲ್ಲಿ ಸೃಷ್ಟಿಗಾಗಿ ಅವನು ಇತರ ಸಾಧನಗಳನ್ನು ಪರಿಗ್ರಹಿಸುವುದು ಯುಕ್ತವಾಗಲಾರದು ಎಂಬ ಆಕ್ಷೇಪಕ್ಕೆ ಸಮಾಧಾನ—

ಓಂ ಯುಕ್ತೇಃ ಶಬ್ದಾಂತರಾಚ್ಚ ಓಂ (೨–೧–೧೯)

**ಸೂತ್ರಾರ್ಥ**

ತನ್ನ ಇಚ್ಛೆಯಂತೆ ಲೀಲೆಯಿಂದಲೇ ಭಗವಂತನು ತನಗೆ ಅಧೀನವಾದ ಸಾಧನಾಂತರವನ್ನು ಪರಿಗ್ರಹಿಸಿ ಸೃಷ್ಟಿಸುವುದು ಯುಕ್ತವೇ ಆಗಿದೆ. ಲೀಲೆಗಾಗಿ ಕೋಲನ್ನು ಹಿಡಿದು ಹೋಗುವವನಿಗೆ ಕುಂಟತನ ಹೇಗಿಲ್ಲವೋ ಹಾಗೆ ಲೀಲೆಗಾಗಿ ಸಾಧನಾಂತರವನ್ನು ಪರಿಗ್ರಹಿಸುವುದು ಭಗವಂತನ ಈಶತ್ವಕ್ಕೆ ವಿರೋಧಿಯಲ್ಲವೆಂದು ಭಾವ. ಸಾಧನಾಂತರವನ್ನು ಪರಿಗ್ರಹಿಸುವುದು ಲೀಲೆಯಿಂದ ಎನ್ನುವುದು ಹೇಗೆ ತಿಳಿಯುವುದು ಎಂಬ ಪ್ರಶ್ನೆಗೆ ಉತ್ತರ—'ಶಬ್ದಾಂತರಾಚ್ಚ'. ಶಬ್ದಾಂತರವೆಂದರೆ ಶಬ್ದವಿಶೇಷ.

1. ವಿಶ್ವದ ಸೃಷ್ಟಿಗೆ ಮುಂಚೆ ಅದರ ಪ್ರಾಗಭಾವವನ್ನುಳಿದು ಈಶ್ವರನೂ ಸೇರಿದಂತೆ ಯಾವ ಭಾವಪದಾರ್ಥವೂ ಇಲ್ಲವೆಂದು ಅಸದಧಿಕರಣದಲ್ಲಿ ಆಶಂಕೆ. ಈ ಸೂತ್ರದಲ್ಲಿ ಸೃಷ್ಟಿಯ ಪೂರ್ವದಲ್ಲಿ ಭಗವಂತನ ಅಸ್ತಿತ್ವವನ್ನು ಅಂಗೀಕರಿಸಿ ಇತರ ಯಾವುದೇ ವಸ್ತುವಿಲ್ಲವೆಂದು ಆಶಂಕೆ. ಆದ್ದರಿಂದ ಪುನರುಕ್ತಿಯಿಲ್ಲವೆಂದು ಭಾವ.

यावत् । लीलयेति कुतो ज्ञायते ? शब्दान्तराच्च । शब्दविशेषः शब्दान्तरम् । विवक्षितार्थप्रतिपादकः शब्द इति यावत् । तस्मात् "शक्तोऽपि भगवान्विष्णुरकर्तुं कर्तुमन्यथा । स्वभिन्नं कारणाभिन्नं भिन्नं विश्वं करोत्यजः" इति शब्दान्तरादित्यर्थः । यद्वा साधनान्तरमेव सृष्टौ मास्त्वित्यत उक्तं शब्देति । "अद्भ्यः सम्भूतो हिरण्यगर्भः" इति तत्सत्त्वबोधकशब्दान्तराच्च । न केवलं प्रागुक्त "अद्भ्यः सम्भूतः पृथिव्यै रसाच्च" "तम आसीत्" इत्यादिशब्दात् किन्तु शब्दान्तरादपि साधनसत्त्वमुपेयमित्यर्थः । पूर्वश्रुतिसङ्ग्रहायैव शब्दान्तरादित्युक्तम् ।

---

ಅಭಿಪ್ರೇತವಾದ ವಿಷಯವನ್ನು ಪ್ರತಿಪಾದಿಸುವ ಶಬ್ದ ಎಂದು ಭಾವ. ಅಂತಹ ಶಬ್ದದಿಂದ ಅಂದರೆ—

ಶಕ್ತೋಽಪಿ ಭಗವಾನ್ ವಿಷ್ಣುಃ ಅಕರ್ತುಂ ಕರ್ತುಮನ್ಯಥಾ |
ಸ್ವಭಿನ್ನಂ ಕಾರಣಾಭಿನ್ನಂ ಭಿನ್ನ ವಿಶ್ವಂ ಕರೋತ್ಯಜಃ ||

(ಮಾಡದಿರಲು ಅಥವಾ ಅನ್ಯಥಾ ಮಾಡಲು ಭಗವಾನ್ ವಿಷ್ಣುವು ಸಮರ್ಥನಾದರೂ ತನ್ನಿಂದ ಭಿನ್ನವಾದ ಪ್ರಕೃತ್ಯಾದಿ ಕಾರಣದಿಂದ ಅಭಿನ್ನವೂ ಭಿನ್ನವೂ ಆದ ವಿಶ್ವವನ್ನು ಸೃಜಿಸುವನು.) ಎಂಬ ಶಬ್ದವಿಶೇಷದಿಂದ ಎಂದು ಅರ್ಥ.

**'ಶಬ್ದಾಂತರಾತ್' ಎಂಬ ಸೂತ್ರಭಾಗಕ್ಕೆ ವ್ಯಾಖ್ಯಾನಾಂತರ**

ಅಥವಾ, ಸೃಷ್ಟಿಗಾಗಿ ಸಾಧನಾಂತರವೇ ಭಗವಂತನಿಗೆ ಬೇಕಾಗಿಲ್ಲವೆಂಬ ಆಕ್ಷೇಪಕ್ಕೆ ಸಮಾಧಾನ—'ಶಬ್ದಾಂತರಾಚ್ಚ' ಎಂದು. 'ಅದ್ಭ್ಯಃ ಸಂಭೂತೋ ಹಿರಣ್ಯಗರ್ಭಃ' (ಮಹಾ. ನಾ. ೧-೧೧) ಎಂಬುದಾಗಿ ಸಾಧನಾಂತರದ ಅಸ್ತಿತ್ವವನ್ನು ತಿಳಿಸುವ ಶಬ್ದಾಂತರದಿಂದಲೂ. ಹಿಂದೆ ಹೇಳಿದ 'ಅದ್ಭ್ಯಃ ಸಂಭೂತಃ ಪೃಥಿವ್ಯೈ ರಸಾಚ್ಚ', 'ತಮ ಆಸೀತ್' ಇತ್ಯಾದಿ ಶ್ರುತಿಗಳು ಮಾತ್ರವಲ್ಲದೇ ಮತ್ತೊಂದು ಶ್ರುತಿಯಿಂದಲೂ ಭಗವಂತನಿಂದ ವ್ಯತಿರಿಕ್ತವಾದ ಸಾಧನಗಳು ಇದ್ದವೆಂದು ಅಂಗೀಕರಿಸಬೇಕೆಂದು ಅರ್ಥ. ಹಿಂದೆ ಉದಾಹರಿಸಿದ ಶ್ರುತಿಗಳನ್ನು ಸಂಗ್ರಹಿಸುವುದಕ್ಕಾಗಿಯೇ 'ಶಬ್ದಾಂತರಾತ್' ಅಂದರೆ 'ಮತ್ತೊಂದು ಶ್ರುತಿಯಿಂದ' ಎಂದು ಹೇಳಲಾಗಿದೆ.

**ಶಬ್ದಾಂತರವನ್ನು ಉದಾಹರಿಸುವುದರ ಆವಶ್ಯಕತೆ**

ಹಿಂದೆ ಉದಾಹರಿಸಿದ ಎರಡು ಶ್ರುತಿಗಳಲ್ಲಿ ಮೊದಲನೆಯದಾದ 'ಅದ್ಭ್ಯಃ ಸಂಭೂತಃ ಪೃಥಿವ್ಯೈ ರಸಾಚ್ಚ' ಎಂಬ ಶ್ರುತಿಯು ಈಶ್ವರನಲ್ಲದ ದೇವತೆಯು ಮಾಡಿದ ಅವಾಂತರ ಸೃಷ್ಟಿಯನ್ನು ಹೇಳುವುದೆಂದೂ, ಎರಡನೆಯದಾದ 'ತಮ ಆಸೀತ್'

आद्यश्रुतेरनीश्वरकर्तृकावान्तरसृष्टिविषयत्वेन अन्त्यश्रुतेः तमःप्रभृतेर्लये सत्त्वोक्तावपीशसृष्टौ कारणत्वं नेत्येवमन्यथानयनसम्भवात् श्रुत्यन्तरोक्तिः । अत्राजस्येशादेव सृष्टतया तत्राबादेर्हेतुत्वोक्तेः ॥

साधनसत्वेऽनुमानं चाह—

॥ ॐ पटवच्च ॐ ॥ २-१-२०

विमता सृष्टिः कर्तृभिन्नसाधनसाध्या । सृष्टित्वात्पटसृष्टिवदित्यर्थः ॥

नन्वेवं कर्तृभिन्नस्वतन्त्रसाधनसाध्येत्यपि सुसाध्यमित्यत आह—

॥ ॐ यथा प्राणादिः ॐ ॥ २-१-२१

---

ಎಂಬ ಶ್ರುತಿಯು ಪ್ರಲಯದಲ್ಲಿ ಪ್ರಕೃತಿ ಮೊದಲಾದವುಗಳ ಅಸ್ತಿತ್ವವನ್ನು ಹೇಳುವುದಾದರೂ ಈಶ್ವರನು ಮಾಡುವ ಸೃಷ್ಟಿಯಲ್ಲಿ ಪ್ರಕೃತ್ಯಾದಿಗಳಿಗೆ ಕಾರಣತ್ವವನ್ನು ಹೇಳುವುದಿಲ್ಲವೆಂದೂ ಪ್ರಕಾರಾಂತರದಿಂದ ವ್ಯಾಖ್ಯಾನಮಾಡುವ ಸಂಭವವಿರುವುದರಿಂದ ಶ್ರುತ್ಯಂತರವನ್ನು ಹೇಳಲಾಗಿದೆ. ಈ ಶ್ರುತಿಯಲ್ಲಿ ಚತುರ್ಮುಖನು ಭಗವಂತನಿಂದಲೇ ಸೃಷ್ಟಿಸಲ್ಪಟ್ಟನೆಂದೂ, ಆ ಸೃಷ್ಟಿಯಲ್ಲಿ ಅಪ್ ಮೊದಲಾದವುಗಳು ಕಾರಣವಾಗಿದ್ದವೆಂದೂ ಹೇಳಲಾಗಿದೆ.

ಸೃಷ್ಟಿಯ ಪೂರ್ವದಲ್ಲಿ ಭಗವದಿತರ ಸಾಧನಗಳ ಅಸ್ತಿತ್ವದಲ್ಲಿ ಯುಕ್ತಿಯನ್ನು ಹೇಳಲು ಸೂತ್ರ—

ಓಂ ಪಟವಚ್ಚ ಓಂ (೨-೧-೨೦)

**ಸೂತ್ರಾರ್ಥ**

ವಿವಾದಗ್ರಸ್ತವಾದ ಸೃಷ್ಟಿಯು ಕರ್ತೃಭಿನ್ನವಾದ ಸಾಧನಗಳಿಂದ ಉಂಟಾದುದು, ಸೃಷ್ಟಿಯಾದ್ದರಿಂದ. ಪಟದ ಸೃಷ್ಟಿಯಂತೆ ಎಂದು ಅರ್ಥ.

ಹಾಗಾದಲ್ಲಿ, 'ಕರ್ತೃಭಿನ್ನವಾದ ಸ್ವತಂತ್ರಸಾಧನಗಳಿಂದ ಉಂಟಾದುದು' ಎಂದೂ ಸುಲಭವಾಗಿ ಸಾಧಿಸಬಹುದು ಎಂಬ ಆಕ್ಷೇಪಕ್ಕೆ ಸಮಾಧಾನ—

ಓಂ ಯಥಾ ಪ್ರಾಣಾದಿಃ ಓಂ (೨-೧-೨೧)

*

यथा प्राणदेहादिकं "प्राणे तिष्ठन्" इत्यादिनेशानुप्रविष्टत्वान्न स्वतन्त्रम् । अन्यथा प्रवेशवैय्यर्थ्यात् तथा "प्रकृतिं पुरुषं चैव प्रविश्य" इत्युक्त्या साधनमपीशानुप्रविष्टत्वात् न स्वतन्त्रमिति तत्साधनं बाधितमित्यर्थः ॥ ६ ॥

इतरव्यपदेशाधिकरणम्—७

॥ ॐ इतरव्यपदेशाद्धिताकरणादिदोषप्रसक्तिः ॐ ॥
२-१-२२

अत्र श्रुत्यनुभवसंवादियुक्तिविरोधो निरस्यते । असद्व्यपदेशादित्यतश्चेदित्यस्ति । स च यद्यर्थे । यदितद्योश्च नित्यान्वयः । इतरस्य

---

**ಸೂತ್ರಾರ್ಥ**

'ಪ್ರಾಣೇ ತಿಷ್ಠನ್' ಇತ್ಯಾದಿ ಶ್ರುತಿಯಲ್ಲಿ ಹೇಳಿರುವಂತೆ ಪ್ರಾಣ, ದೇಹ ಮೊದಲಾದವುಗಳನ್ನು ಭಗವಂತನು ಪ್ರವೇಶಿಸುವುದರಿಂದ ಅವುಗಳು ಸ್ವತಂತ್ರವಲ್ಲ. ಹಾಗಿಲ್ಲದಿದ್ದಲ್ಲಿ ಭಗವಂತನ ಪ್ರವೇಶವೇ ವ್ಯರ್ಥವಾಗುವುದು. ಪ್ರಾಣದೇಹಾದಿಗಳನ್ನು ಹೇಗೋ ಹಾಗೆ ಸೃಷ್ಟಿಸಾಧನಗಳನ್ನೂ ಭಗವಂತನು ಪ್ರವೇಶಿಸುವನೆಂದು 'ಪ್ರಕೃತಿಂ ಪುರುಷಂ ಚೈವ ಪ್ರವಿಶ್ಯ' ಇತ್ಯಾದಿ ಆಗಮಗಳಲ್ಲಿ ಹೇಳಿರುವುದರಿಂದ ಸಾಧನಗಳೂ ಸ್ವತಂತ್ರವಲ್ಲವಾದ್ದರಿಂದ ಅಂತಹ ಸಾಧನಗಳನ್ನು ಸಾಧಿಸುವುದು ಪ್ರಮಾಣಬಾಧಿತ ವಾಗುವುದೆಂದು ಅರ್ಥ.

ಇತರವ್ಯಪದೇಶಾಧಿಕರಣ—೭

ಓಂ ಇತರವ್ಯಪದೇಶಾದ್ಧಿತಾಕರಣಾದಿದೋಷಪ್ರಸಕ್ತಿಃ ಓಂ
(೨--೧--೨೨)

**ಅಧಿಕರಣದ ಉದ್ದೇಶ**

ಈ ಅಧಿಕರಣದಲ್ಲಿ ಶ್ರುತಿ ಮತ್ತು ಅನುಭವಗಳ ಸಂವಾದ ಪಡೆದ ಯುಕ್ತಿಯ ವಿರೋಧವನ್ನು ನಿರಾಕರಿಸಲಾಗುವುದು.

**ಸೂತ್ರಾರ್ಥ**

'ಅಸದ್ವ್ಯಪದೇಶಾತ್' ಎಂಬ ಸೂತ್ರದಿಂದ 'ಚೇತ್' ಎಂಬ ಪದವು ಇಲ್ಲಿ ಅನುವೃತ್ತವಾಗುವುದು. ಆ 'ಚೇತ್' ಪದವು ಇಲ್ಲಿ 'ಯದಿ' ಎಂಬ ಅರ್ಥದಲ್ಲಿರು ವುದು. ಯದಿ ಮತ್ತು ತರ್ಹಿ ಪದಗಳಿಗೆ ನಿತ್ಯವಾದ ಸಂಬಂಧವಿರುವುದರಿಂದ 'ತರ್ಹಿ'

प्रस्तुतब्रह्मकर्तृत्वादितरस्य जीवकर्तृत्वस्य "जीवाद्भवन्ति भूतानि" इति श्रुतौ व्यपदेशात्, यदि जीवः स्वतन्त्रकर्तेति शेषः, तर्हि हिताकरणस्यादिपदोक्ताहितकरणस्य च दोषस्य प्रसक्तिः । तौ दोषौ प्रसज्येयातामिति यावत् । ते न स्याताम् । न हि स्वतन्त्रस्य तद्द्वयं युज्यत इति यावत् । श्रुतिस्तु ब्रह्मपरेत्याकूतम् । तत्त्वप्रदीपे तु इतरस्य जीवस्य स्वतन्त्रकर्तृत्वव्यपदेशादित्युक्तम् । व्यपदेशादित्युक्तिश्चेतनत्वयुक्तेः श्रुतिसंवादोक्त्यर्था । एतेन शिष्टेत्यस्य प्रपञ्चत्वान्न पौनरुक्त्यम् ॥

यदि बाधकाज्जीवस्य स्वतन्त्रकर्तृत्वत्यागस्तर्हीशस्यापि कर्तृत्वे श्रमचिन्तादिदोषापत्तिबाधकसाम्येन तन्न स्यादित्यत आह—

---

ಎಂಬ ಪದವೂ ಇಲ್ಲಿ ಲಬ್ಧವಾಗುವುದು. ಇತರಸ್ಯ–ಪ್ರಸ್ತುತವಾದ ಬ್ರಹ್ಮಕರ್ತೃತ್ವಕ್ಕಿಂತ ಇತರವಾದ ಜೀವಕರ್ತೃತ್ವವನ್ನು 'ಜೀವಾದ್ಭವಂತಿ ಭೂತಾನಿ' ಎಂಬ ಶ್ರುತಿಯಲ್ಲಿ ಹೇಳಿರುವುದರಿಂದ ಜೀವನೇ ಸ್ವತಂತ್ರಕರ್ತೃವೆಂದಾದಲ್ಲಿ—ಇಲ್ಲಿ 'ಸ್ವತಂತ್ರಕರ್ತೃ' ಎಂಬ ಶೇಷವನ್ನು ಸೇರಿಸಲಾಗಿದೆ—ತನಗೆ ಹಿತವಾದುದನ್ನು ಮಾಡದಿರುವುದು ಮತ್ತು ಆದಿಪದದಿಂದ ಹೇಳಿದ 'ತನಗೆ ಅಹಿತವಾದದ್ದನ್ನು ಮಾಡುವುದು'—ಈ ದೋಷಗಳ ಪ್ರಸಂಗ ಬರುವುದು. ಇವೆರಡೂ ದೋಷಗಳಾದೀತು ಎಂದು ಭಾವ. ಹಿತಾಕರಣ–ಅಹಿತಕರಣಗಳು ಜೀವನಿಗೆ ಇಲ್ಲದಿರಬೇಕಾಗಿತ್ತು. ಸ್ವತಂತ್ರನಿಗೆ ಈ ಎರಡು ದೋಷಗಳು ಯುಕ್ತವಲ್ಲವಷ್ಟೇ ಎಂದು ಅಭಿಪ್ರಾಯ. 'ಜೀವಾದ್ಭವಂತಿ ಭೂತಾನಿ' ಎಂಬ ಶ್ರುತಿಯು ಬ್ರಹ್ಮಪರವಾದುದೆಂದು ಆಶಯ.

**ತತ್ತ್ವಪ್ರದೀಪರೀತ್ಯಾ ವ್ಯಾಖ್ಯಾನಾಂತರ**

ತತ್ತ್ವಪ್ರದೀಪದಲ್ಲಾದರೋ, ಇತರಸ್ಯ-ಬ್ರಹ್ಮಭಿನ್ನನಾದ ಜೀವನಿಗೆ ಸ್ವತಂತ್ರಕರ್ತೃತ್ವವನ್ನು ಹೇಳಿರುವುದರಿಂದ—ಎಂದು ವ್ಯಾಖ್ಯಾನಮಾಡಲಾಗಿದೆ.

ಜೀವನಿಗೆ ಸ್ವತಂತ್ರಕರ್ತೃತ್ವವನ್ನು ಸಾಧಿಸಲು ಪೂರ್ವಪಕ್ಷಿಯು ಹೇಳಬಹುದಾದ 'ಚೇತನತ್ವ' ಎಂಬ ಯುಕ್ತಿಗೆ ಶ್ರುತಿಯ ಸಂವಾದವನ್ನು ಸೂಚಿಸಲು 'ವ್ಯಪದೇಶಾತ್' ಎಂದು ಹೇಳಲಾಗಿದೆ. 'ಏತೇನ ಶಿಷ್ಟಾ' (ಬ್ರ.ಸೂ. ೨–೧) ಎಂಬ ಸೂತ್ರದ ವಿವರಣೆಯೇ ಇದಾಗಿರುವುದರಿಂದ ಪುನರುಕ್ತಿಯಿಲ್ಲ.

ಬಾಧಕವಿರುವುದರಿಂದ ಜೀವನಿಗೆ ಸ್ವತಂತ್ರಕರ್ತೃತ್ವವಿಲ್ಲವೆಂದು ಹೇಳಿದಲ್ಲಿ ಈಶ್ವರನಿಗೆ ಕರ್ತೃತ್ವವನ್ನು ಒಪ್ಪಿದರೂ ಅವನಿಗೆ ಶ್ರಮ, ಚಿಂತೆ ಮೊದಲಾದ ದೋಷ

॥ ॐ अधिकं तु भेदनिर्देशात् ॐ ॥ २–१–२३

तुः साम्यव्यावर्तकः । भेदशब्दोऽतिशयाख्यविशेषवाची । तदनन्यत्वमित्यतस्तदित्यस्ति । तद्ब्रह्म त्वधिकशक्त्यादिमत्त्वेनोत्कृष्टम् । "श्रोता मन्ता" इत्यादिना सर्वेभ्योऽखिलश्रोतृत्वान्तर्यामित्वादि-विशेषस्य निर्देशादित्यर्थः । एवंविधस्य ते दोषा न शङ्क्या इति भावः ।

यद्येवं तर्हि चेतनत्वादीशवज्जीवोऽपि स्वतन्त्रकर्ता स्यादित्यत आह—

॥ ॐ अश्मादिवच्च तदनुपपत्तिः ॐ ॥ २-१-२४

---

ಬಂದೀತು ಎಂಬ ಬಾಧಕವು ಸಮಾನವಾಗಿರುವುದರಿಂದ ಈಶ್ವರನಿಗೂ ಸ್ವತಂತ್ರಕರ್ತೃತ್ವ ವಿಲ್ಲವೆಂದಾದೀತು ಎಂಬ ಆಕ್ಷೇಪಕ್ಕೆ ಸಮಾಧಾನ—

ಓಂ ಅಧಿಕಂ ತು ಭೇದನಿರ್ದೇಶಾತ್ ಓಂ (೨-೧-೨೩)

**ಸೂತ್ರಾರ್ಥ**

'ತು' ಶಬ್ದವು ಬಾಧಕವು ಸಮಾನವಲ್ಲವೆಂದು ತಿಳಿಸುವುದು. 'ಭೇದ' ಶಬ್ದವು ಅತಿಶಯರೂಪವಾದ ವಿಶೇಷವನ್ನು ಹೇಳುವುದು. 'ತದನನ್ಯತ್ವಂ' ಎಂಬ ಸೂತ್ರದಿಂದ 'ತತ್' ಎಂಬ ಪದವು ಅನುವೃತ್ತಿಗೊಳ್ಳುವುದು. ತತ್ ತು–ಆ ಬ್ರಹ್ಮವಾದರೋ, ಅಧಿಕಂ–ಶಕ್ತಿ ಮೊದಲಾದವುಗಳನ್ನು ಪಡೆದಿರುವುದರಿಂದ ಉತ್ಕೃಷ್ಟವಾದುದು. 'ಶ್ರೋತಾ ಮಂತಾ' ಇತ್ಯಾದಿ ಶ್ರುತಿಯಿಂದ ಆ ಬ್ರಹ್ಮನಿಗೆ ಎಲ್ಲರಿಗಿಂತಲೂ ಅಖಿಲ ಶ್ರೋತೃತ್ವ, ಅಂತರ್ಯಾಮಿತ್ವ ಮೊದಲಾದ ವಿಶೇಷವನ್ನು ಹೇಳಿರುವುದರಿಂದ ಎಂದು ಅರ್ಥ. ಇಂತಹ ವಿಶೇಷವನ್ನು ಪಡೆದಿರುವ ಬ್ರಹ್ಮನಿಗೆ ಶ್ರಮ, ಚಿಂತೆ ಮೊದಲಾದ ಆ ದೋಷಗಳನ್ನು ಶಂಕಿಸಲೇ ಸಾಧ್ಯವಿಲ್ಲವೆಂದು ಭಾವ.

ಹಾಗಾದಲ್ಲಿ, ಈಶ್ವರನಂತೆ ಜೀವನೂ ಚೇತನನಾಗಿರುವುದರಿಂದ ಸ್ವತಂತ್ರ ಕರ್ತೃವಾಗಲಿ ಎಂಬ ಆಶಂಕೆಗೆ ಉತ್ತರ—

ಓಂ ಅಶ್ಮಾದಿವಚ್ಚ ತದನುಪಪತ್ತಿಃ ಓಂ (೨-೧-೨೪)

चोऽप्यर्थः । चेतनत्वेऽपि जीवस्याश्मादेरिवास्वतन्त्रत्वात् स्वतः कर्तृत्वानुपपत्तिः । आदिपदेन स्तम्भाद्यनेकदृष्टान्तोक्तिरस्वातन्त्र्यहेतोरव्यभिचारदर्शनाय । एवमग्रेऽपि । तत एव योग्यहेतुलाभोऽपि । अस्वातन्त्र्यं च । हिताक्रियादिना मृतिसुप्त्यादौ सार्वजनीनानुभवेन सिद्धमिति भावः । चेतनत्वयुक्तिश्चाप्रयोजिकेत्याशयः ।

उक्तमनुभवविरोधेनाक्षिप्य तस्य गतिमाह—

॥ ओँ उपसंहारदर्शनान्नेति चेत् क्षीरवद्धि ओँ ॥
२-१-२५

तदनुपपत्तिरित्यस्ति । नञ् आवर्तते । जीव उपसंहारस्यारब्धकार्यसमापनस्यानुभवान्न स्वतन्त्रकर्तृत्वानुपपत्तिरिति चेन्न । क्षीरवत् ।

---

ಸೂತ್ರಾರ್ಥ

'ಚ' ಶಬ್ದಕ್ಕೆ 'ಅಪಿ' ಎಂದು ಅರ್ಥ. ಜೀವನು ಚೇತನನಾಗಿದ್ದರೂ ಶಿಲೆ ಮೊದಲಾದವುಗಳಂತೆ ಅಸ್ವತಂತ್ರನಾದ್ದರಿಂದ ಅವನಿಗೆ ಸ್ವತಂತ್ರಕರ್ತೃತ್ವವು ಯುಕ್ತ ವಲ್ಲ. ಜೀವರಿಗೆ ಸ್ವತಂತ್ರಕರ್ತೃತ್ವವಿಲ್ಲವೆಂದು ಸಾಧಿಸುವ ಅಸ್ವಾತಂತ್ರ್ಯಹೇತುವು ವ್ಯಭಿಚಾರಿಯಲ್ಲ ಎನ್ನುವುದನ್ನು ತಿಳಿಸಲು 'ಅಶ್ಮಾದಿ' ಎಂಬಲ್ಲಿ ಆದಿಪದದಿಂದ ಸ್ತಂಭ ಮೊದಲಾದ ಅನೇಕ ದೃಷ್ಟಾಂತಗಳನ್ನು ಹೇಳಲಾಗಿದೆ. ಹೀಗೆಯೇ ಮುಂದೂ ತಿಳಿಯಬೇಕು. ಸೂತ್ರದಲ್ಲಿ ಅನೇಕ ದೃಷ್ಟಾಂತಗಳನ್ನು ಹೇಳಿರುವುದರಿಂದಲೇ ಜೀವರಿಗೆ ಸ್ವತಂತ್ರಕರ್ತೃತ್ವವಿಲ್ಲವೆಂದು ಸಾಧಿಸಲು ಯೋಗ್ಯವಾದ ಹೇತುವೂ ಲಭಿಸುವುದು. ಜೀವರಿಗೆ ಅಸ್ವಾತಂತ್ರ್ಯವಿದೆ ಎನ್ನುವುದು ತನಗೆ ಹಿತವಾದುದನ್ನು ಮಾಡದಿರುವುದರಿಂದ ಮತ್ತು ಮರಣ, ನಿದ್ರೆ ಮೊದಲಾದ ಅವಸ್ಥೆಗಳಲ್ಲಿ ಎಲ್ಲರ ಅನುಭವದಿಂದ ಸಿದ್ಧವಾಗಿದೆಯೆಂದು ಭಾವ. ಜೀವನಿಗೆ ಸ್ವತಂತ್ರಕರ್ತೃತ್ವವನ್ನು ಸಾಧಿಸಲು ಹೇಳಿದ ಚೇತನತ್ವ ಯುಕ್ತಿಯು ಅಪ್ರಯೋಜಕವೆಂದು ಆಶಯ.

ಜೀವನಿಗೆ ಸ್ವತಂತ್ರಕರ್ತೃತ್ವವಿಲ್ಲವೆಂದು ಹೇಳಿದುದನ್ನು ಅನುಭವವಿರುದ್ಧವೆಂದು ಆಕ್ಷೇಪಿಸಿ, ಆ ಅನುಭವಕ್ಕೆ ಬೇರೆ ವಿವರಣೆಯನ್ನು ನೀಡುವ ಸೂತ್ರ—

ಓಂ ಉಪಸಂಹಾರದರ್ಶನಾನ್ನೇತಿ ಚೇತ್ ಕ್ಷೀರವದ್ಧಿ ಓಂ
(೨--೧--೨೫)

यथा गोषु दृश्यमानं क्षीरं गोभिन्नकर्त्रधीनं तथा जीवे दृश्यमानमपि कार्यावसानं जीवभिन्नेशाख्यकर्त्रधीनम् । "य आत्मानम्" इति श्रुतेरित्यर्थः । "अन्नं रसादिरूपेण प्राणः परिणयत्यसौ" इति वचनात् क्षीरस्यान्याधीनत्वप्रसिद्धिं हिशब्देनाह । अनुभवादिसिद्धास्वातन्त्र्यस्य जीवस्य स्वतन्त्रकर्तृत्वानुपपत्तेरेव बाधकादनुभवो भ्रम इति भावः । दर्शनादित्युक्तिर्युक्तेः प्रत्यक्षसंवादोक्त्यर्था ॥

नन्वीश एवानुपलम्भान्नास्ति । कुतस्तदधीनतेत्यत आह—

॥ ॐ देवादिवदपि लोके ॐ ॥ २-१ २६

---

**ಸೂತ್ರಾರ್ಥ**

ಹಿಂದಿನ ಸೂತ್ರದಿಂದ 'ತದನುಪಪತ್ತೇಃ' ಎಂಬ ಪದವು ಅನುವೃತ್ತಿಗೊಳ್ಳುವುದು. ಈ ಸೂತ್ರದ 'ನಞ್' ಪದವು ಆವೃತ್ತಿಗೊಳ್ಳುವುದು. ಜೀವನಲ್ಲಿ ಉಪಸಂಹಾರವು ಅಂದರೆ ಆರಂಭಿಸಿದ ಕಾರ್ಯವು ಸಮಾಪ್ತಿಯಾಗುವುದು ಅನುಭವಕ್ಕೆ ಬಂದಿರುವುದರಿಂದ ಸ್ವತಂತ್ರಕರ್ತೃತ್ವವು ಅನುಪಪನ್ನವಲ್ಲ ಎಂದರೆ ಅದು ಸರಿಯಲ್ಲ. ಕ್ಷೀರವತ್-ಹೇಗೆ ಗೋವುಗಳಲ್ಲಿ ನಾವು ನೋಡುವ ಕ್ಷೀರ ಗೋವಿನಿಂದ ಭಿನ್ನನಾದ ಒಬ್ಬ ಕರ್ತೃವಿಗೆ ಅಧೀನವಾಗಿದೆಯೋ ಹಾಗೆಯೇ ಜೀವನಲ್ಲಿ ನಾವು ನೋಡುವ ಕಾರ್ಯಗಳ ಸಮಾಪ್ತಿಯೂ ಜೀವಭಿನ್ನನಾದ ಈಶ್ವರನೆಂಬ ಕರ್ತೃವಿಗೆ ಅಧೀನವಾದುದು. "ಯ ಆತ್ಮಾನಂ ಅಂತರೋ ಯಮಯತಿ" ಎಂಬ ಶ್ರುತಿಯು ಈ ವಿಷಯದಲ್ಲಿ ಆಧಾರವಾಗಿದೆ ಎಂದು ಅರ್ಥ.

**ಸೂತ್ರದಲ್ಲಿರುವ 'ಹಿ' ಮತ್ತು 'ದರ್ಶನ' ಪದಗಳ ಆಶಯ**

"ಅನ್ನಂ ರಸಾದಿ ರೂಪೇಣ ಪ್ರಾಣಃ ಪರಿಣಯತ್ಯಸೌ" ಎಂಬ ಪ್ರಮಾಣದಿಂದ ಕ್ಷೀರವು ಗೋಭಿನ್ನವಾದ ಕರ್ತೃವಿಗೆ ಅಧೀನವಾಗಿದೆ ಎಂಬುದು ಪ್ರಸಿದ್ಧವಾಗಿದೆಯೆಂದು 'ಹಿ' ಶಬ್ದವು ಹೇಳುವುದು. ಅನುಭವ ಮೊದಲಾದ ಪ್ರಮಾಣಗಳಿಂದ ಜೀವನಿಗೆ ಅಸ್ವಾತಂತ್ರ್ಯವು ಸಿದ್ಧವಾಗಿರುವುದರಿಂದ ಸ್ವತಂತ್ರಕರ್ತೃತ್ವವು ಯುಕ್ತವಲ್ಲ. ಈ ಬಾಧಕದಿಂದಲೇ ಜೀವನಲ್ಲಿ ಸ್ವತಂತ್ರಕರ್ತೃತ್ವದ ಅನುಭವವು ಭ್ರಮವೆಂದು ಭಾವ. ಪೂರ್ವಪಕ್ಷಿಯ ಯುಕ್ತಿಗೆ ಪ್ರತ್ಯಕ್ಷಸಂವಾದವನ್ನು ಹೇಳುವ ಸಲುವಾಗಿ 'ದರ್ಶನಾತ್' ಎಂದು ಹೇಳಲಾಗಿದೆ.

ಕಾಣಿಸದಿರುವ ಈಶ್ವರ ಇಲ್ಲವೇ ಇಲ್ಲ. ಅಂದ ಬಳಿಕ ಅವನಿಗೆ ಅಧೀನವಾಗಿರುವುದೆಂದರೇನು ಎಂಬ ಆಕ್ಷೇಪಕ್ಕೆ ಸಮಾಧಾನ ನೀಡುವ ಸೂತ್ರ—

ಓಂ ದೇವಾದಿವದಪಿ ಲೋಕೇ ಓಂ (೨-೧-೨೬)

देवादीनामिव सतोऽपीशस्यानुपलम्भो युक्तः । तेषां प्रागुक्तदिशा अदृश्यत्वशक्तिमत्त्वे ईशस्यापि तथात्वात् । तथात्वं कुत इत्यत उक्तम्—अपि लोक इति । लोके पिशाचादीनामनीशानामपिता दृशशक्तिरस्ति किम्वीश्वरस्येत्यर्थः । अदृश्यस्यापि श्रुत्यादिना सद्भावे देवादिदृष्टान्तः । अदृश्यत्वशक्तिमत्त्वोपपादनायापि लोक इत्युक्तिरिति विवेकः । यद्वा देवादौ विप्रतिपन्नं प्रत्यपि लोक इत्येकार्थ एव दृष्टान्तद्वयम् । उक्तं चैवमेव सुधायामभिमानिनये ॥

हिताक्रियादिना जीवस्य स्वतः कर्तृत्वं नेत्युक्तम् । युक्त्यन्तरेणापि नेत्याह—

---

**ಸೂತ್ರಾರ್ಥ**

ಈಶ್ವರನಿಗೆ ಅಸ್ತಿತ್ವವಿದ್ದರೂ ದೇವತೆಗಳಂತೆ ಅವನು ಕಾಣಿಸದಿರುವುದು ಯುಕ್ತವೇ ಆಗಿದೆ ಹಿಂದೆ ಹೇಳಿದಂತೆ ದೇವತೆಗಳಿಗೆ ಅದೃಶ್ಯರಾಗಿರುವ ಶಕ್ತಿ ಇರುವುದಾದಲ್ಲಿ ಈಶನಿಗೂ ಅಂತಹ ಶಕ್ತಿ ಇದೆ. ಈಶ್ವರನಿಗೆ ಆ ಶಕ್ತಿ ಇರುವುದರಲ್ಲಿ ಆಧಾರವೇನು ಎಂಬ ಆಶಂಕೆಗೆ ಉತ್ತರ—'ಅಪಿ ಲೋಕೇ' ಎಂದು ಲೋಕದಲ್ಲಿ ಈಶರಲ್ಲದ (ಅಸಮರ್ಥರಾದ) ಪಿಶಾಚ ಮೊದಲಾದವುಗಳಿಗೂ ಅಂತಹ ಶಕ್ತಿ ಇದೆ. ಈಶ್ವರನಿಗೆ ಅಂತಹ ಸಾಮರ್ಥ್ಯವಿದೆಯೆಂದು ಹೇಳುವುದೇನು ! ಎಂದು ಅರ್ಥ

**ಸೂತ್ರದಲ್ಲಿ ಎರಡು ದೃಷ್ಟಾಂತಗಳನ್ನು ನೀಡಿರುವ ಉದ್ದೇಶ**

ಅದೃಶ್ಯನಾಗಿದ್ದರೂ ಶ್ರುತ್ಯಾದಿ ಪ್ರಮಾಣಗಳ ಆಧಾರದಿಂದ ಈಶ್ವರನ ಅಸ್ತಿತ್ವವನ್ನು ಒಪ್ಪಬೇಕಾಗುವುದು ಎಂಬಲ್ಲಿ ದೇವಾದಿಗಳ ದೃಷ್ಟಾಂತವನ್ನು ನೀಡಲಾಗಿದೆ. ಈಶ್ವರನಿಗೆ ಅದೃಶ್ಯತ್ವಶಕ್ತಿ ಇರುವುದನ್ನು ಸಮರ್ಥಿಸಲು 'ಅಪಿ ಲೋಕೇ' ಎಂದು ಹೇಳಲಾಗಿದೆ ಎನ್ನುವುದನ್ನು ವಿವೇಚಿಸಿ ತಿಳಿಯಬೇಕು. ಅಥವಾ ದೇವಾದಿಗಳ ಅಸ್ತಿತ್ವದಲ್ಲೇ ವಿವಾದ ಮಾಡುವವನನ್ನು ಕುರಿತು 'ಅಪಿ ಲೋಕೇ' ಎಂದು ಹೇಳಲಾಗಿದೆ. ಹೀಗೆ ಒಂದೇ ವಿಷಯದಲ್ಲಿ ಎರಡು ದೃಷ್ಟಾಂತಗಳನ್ನು ಕೊಡಲಾಗಿದೆ. ಸುಧಾದಲ್ಲಿ ಅಭಿಮಾನ್ಯಧಿಕರಣದಲ್ಲಿ ಹೀಗೆಯೇ ಹೇಳಲಾಗಿದೆ.

ಹಿತಾಕರಣ ಮೊದಲಾದ ಯುಕ್ತಿಗಳಿಂದ ಜೀವನಿಗೆ ಸ್ವತಂತ್ರಕರ್ತೃತ್ವವಿಲ್ಲವೆಂದು ಹೇಳಲಾಯಿತು. ಯುಕ್ತ್ಯಂತರದಿಂದಲೂ ಜೀವನಿಗೆ ಸ್ವತಂತ್ರಕರ್ತೃತ್ವವಿಲ್ಲವೆಂದು ಹೇಳುವ ಸೂತ್ರ—

## ॥ ॐ कृत्स्नप्रसक्तिर्निरवयवत्वशब्दकोपो वा ॐ ॥
## २-१-२७

यदि जीवः स्वतन्त्रकर्ता तर्हीत्यस्ति । जीवः सर्वकार्येषु सर्वसामर्थ्येन प्रवर्ततेंऽशेन वा नाद्यः । तृणादानादावपि कृत्स्नसामर्थ्यप्रसक्तिः । सा चानुभवविरुद्धा । नान्त्यः । अंशाभावात् । तदङ्गीकारे च "अथ यः स जीवः स नित्यो निरवयव" इति निरवयवत्वश्रुतिव्याकोपः स्यादित्यर्थः । वा शब्दः पक्षभेदेनापादनसूचनार्थः । अतो न जीवः स्वतन्त्रकर्ता । किन्त्वीशाधीनकर्ता । यद्धि युक्त्या विरुद्ध्येत तदीशकृतमेव हीत्युक्तेरिति भावः । व्यतिरेको गन्धवदिति

---

## ಓಂ ಕೃತ್ಸ್ನಪ್ರಸಕ್ತಿಃ ನಿರವಯುವತ್ವಶಬ್ದಕೋಪೋ ವಾ ಓಂ
## (೨-೧-೨೭)

**ಸೂತ್ರಾರ್ಥ**

'ಜೀವನು ಸ್ವತಂತ್ರಕರ್ತೃವಾಗಿದ್ದಲ್ಲಿ' ಎಂಬ ಪದಗಳನ್ನು ಸೇರಿಸಿಕೊಳ್ಳಬೇಕು. ಜೀವನು ಎಲ್ಲ ಕಾರ್ಯಗಳಲ್ಲೂ ತನ್ನೆಲ್ಲ ಸಾಮರ್ಥ್ಯದಿಂದ ಪ್ರವರ್ತಿಸುವನೋ ಅಥವಾ ಒಂದು ಅಂಶದಿಂದಲೋ ? ಮೊದಲನೆಯದು ಸರಿಯಲ್ಲ. ಹಾಗಾದಲ್ಲಿ, ಒಂದು ಹುಲ್ಲನ್ನು ತರುವುದಕ್ಕೂ ಸರ್ವಸಾಮರ್ಥ್ಯ ಬೇಕಾದೀತು. ಹುಲ್ಲನ್ನು ತರಲು ಸರ್ವ ಸಾಮರ್ಥ್ಯದ ವಿನಿಯೋಗವಂತೂ ಅನುಭವವಿರುದ್ಧವಾದುದು. ಜೀವನಿಗೆ ಅಂಶವೇ ಇಲ್ಲದ್ದರಿಂದ ಎರಡನೆಯದೂ ಯುಕ್ತವಲ್ಲ. ಜೀವನಿಗೆ ಅಂಶಗಳನ್ನು ಅಂಗೀಕರಿಸಿದಲ್ಲಿ "ಅಥ ಯಃ ಸ ಜೀವಃ ಸ ನಿತ್ಯೋ ನಿರವಯುವಃ" ಎಂದು ಜೀವನಿಗೆ ಅವಯುವಗಳಿಲ್ಲವೆಂದು ಹೇಳುವ ಶ್ರುತಿಗಳ ವಿರೋಧ ಬಂದೀತು ಎಂದು ಅರ್ಥ. ಸೂತ್ರದಲ್ಲಿ 'ವಾ' ಶಬ್ದವು ಆಪಾದನೆಗಳು ಎರಡು ವಿಭಿನ್ನ ಪಕ್ಷಗಳಿಗೆ ಸಂಬಂಧಿಸಿದುದೆಂದು ಸೂಚಿಸುವುದು. ಮೇಲೆ ಸೂಚಿಸಿದ ದೋಷಗಳು ಬರುವ ಕಾರಣದಿಂದ ಜೀವನು ಸ್ವತಂತ್ರಕರ್ತೃವಲ್ಲ, ಭಗವಂತನಿಗೆ ಅಧೀನನಾದ ಕರ್ತೃವು. "ಯದ್ಧಿ ಯುಕ್ತ್ಯಾ ವಿರುದ್ಧ್ಯೇತ ತದೀಶಕೃತಮೇವ ಹಿ" ಎಂಬ ಉಕ್ತಿಯೇ ಈ ವಿಷಯದಲ್ಲಿ ಆಧಾರ ಎಂದು ಭಾವ.

जीवस्यानेकरूपतोक्त्या सांशत्वसिद्धावपीह निरवयवत्वशब्दकोपापादनं भिन्नांशशून्यत्वाद् युक्तमित्यादि सुधोक्तं बोध्यम् ॥ ७ ॥

शब्दमूलत्वाधिकरणम्—८

## ॥ ॐ श्रुतेस्तु शब्दमूलत्वात् ॐ ॥ २-१-२८

अत्रानन्तांशस्यापीशस्यैकदेशेन व्यापारे अणीयस्त्वादियुक्तस्य महीयस्त्वादौ व्याघातपर्यवसायिप्रबलयुक्त्यविरोध उच्यते । तुरेव । जीवाद्विशेषे वा । नेश्वरकर्तृत्वे कृत्स्नप्रसक्त्यादियुक्तिविरोध इति प्रकृतं

---

**ಜೀವನಿಗೆ ಸ್ವರೂಪಾಂಶಗಳೇ ಹೊರತು ಭಿನ್ನಾಂಶಗಳಿಲ್ಲ**

'ವ್ಯತಿರೇಕೋ ಗಂಧವತ್' (ಬ್ರ.ಸೂ. ೨-೩-೨೬) ಎಂಬ ಸೂತ್ರದಲ್ಲಿ ಜೀವನಿಗೆ ಅನೇಕ ರೂಪಗಳಿರುವುವೆಂದು ಹೇಳಿರುವುದರಿಂದ ಅಂಶಗಳಿರುವುವೆಂದು ಸಿದ್ಧವಾಗುವುದಾದರೂ ಭಿನ್ನಾಂಶಗಳಿಲ್ಲದಿರುವುದರಿಂದ "ಜೀವನಿಗೆ ಅಂಶಗಳನ್ನು ಒಪ್ಪಿದಲ್ಲಿ ನಿರವಯವತ್ವ ಶ್ರುತಿವಿರೋಧ ಬರುವುದು" ಎಂಬ ಆಪಾದನೆಯು ಯುಕ್ತವೆಂದು ಸುಧಾದಲ್ಲಿ ಹೇಳಿರುವುದನ್ನು ಗಮನಿಸಬೇಕು.

ಶಬ್ದಮೂಲತ್ವಾಧಿಕರಣ—೮

## ಓಂ ಶ್ರುತೇಸ್ತು ಶಬ್ದಮೂಲತ್ವಾತ್ ಓಂ (೨-೧-೨೮)

**ಅಧಿಕರಣದ ಉದ್ದೇಶ**

ಈ ಅಧಿಕರಣದಲ್ಲಿ, ಈಶ್ವರನಿಗೆ ಅನಂತ ಅಂಶಗಳನ್ನು ಒಪ್ಪಿ ಏಕದೇಶದಲ್ಲಿ ಕ್ರಿಯೆಯನ್ನು ಹೇಳುವುದಾದರೆ ಅವನಿಗೆ ಅಣುತ್ವವನ್ನು ಹೇಳಬೇಕಾಗುವುದು. ಇದರೊಂದಿಗೆ ಅವನಿಗೆ ಮಹತ್ತ್ವವನ್ನೂ ಹೇಳಿದಲ್ಲಿ ವ್ಯಾಹತಿಯುಂಟಾದೀತು ಎಂದು ಪರ್ಯವಸಾನಗೊಳ್ಳುವ ಪ್ರಬಲ ಯುಕ್ತಿಯ ವಿರೋಧವನ್ನು ಪರಿಹರಿಸಲಾಗುವುದು.

**ಸೂತ್ರಾರ್ಥ**

'ತು' ಶಬ್ದವು 'ಏವ' ಎಂಬ ಅರ್ಥವನ್ನು ಕೊಡುವುದು. ಅಥವಾ, ಈಶ್ವರನಿಗೆ ಜೀವನ ವೈಲಕ್ಷಣ್ಯವನ್ನು ಸೂಚಿಸುವುದು. "ಈಶ್ವರನಿಗೆ ಕರ್ತೃತ್ವ ಒಪ್ಪಿದಲ್ಲಿ 'ಕೃತ್ಸ್ನಪ್ರಸಕ್ತಿ' ಮೊದಲಾದ ಯುಕ್ತಿಗಳ ವಿರೋಧವಿಲ್ಲ" ಎಂಬುದಾಗಿ ಹಿಂದಿನ

लभ्यते । "योऽसौ विरुद्धोऽविरुद्धो मनुरमनुः" इत्यादिना लोकविरुद्धधर्माणामीशेऽविरुद्धत्वश्रवणादेव । ननु श्रौतमपि युक्तिविरुद्धं कथमुपेयमिति चेत् । शब्दमूलत्वात् । शब्दो मूलं प्रमाणं यस्य तत्त्वात् शब्दैकगम्यत्वादित्यर्थः । केवलयुक्त्ययोग्यत्वान्न तत्र युक्तिविरोध इति भावः ।

इतश्च नेश्वरे युक्तिविरोध इत्याह—

॥ ॐ आत्मनि चैवं विचित्राश्च हि ॐ ॥
२-१-२९

आद्यश्चोऽवधारणे । अन्त्यः समुच्चये । आत्मनि च ईश्वर एव एवंविधा युक्तिविरोधनिरासकाः विचित्राः अघटितघटकाः शक्तय-

---

ಸೂತ್ರದಲ್ಲಿ ಪ್ರಕೃತವಾಗಿರುವ ವಾಕ್ಯ ಇಲ್ಲಿ ಲಭಿಸುತ್ತದೆ. "ಯೋಽಸೌ ವಿರುದ್ಧೋಽವಿರುದ್ಧೋ ಮನುರಮನುಃ" ಇತ್ಯಾದಿ ಶ್ರುತಿಯಲ್ಲಿ ಲೋಕದಲ್ಲಿ ವಿರುದ್ಧಗಳೆಂದು ಪರಿಗಣಿಸಲಾದ ಧರ್ಮಗಳಿಗೆ ಈಶ್ವರನಲ್ಲಿ ವಿರೋಧವಿಲ್ಲವೆಂದು ಶ್ರುತವಾಗಿರುವುದರಿಂದ ಯುಕ್ತಿವಿರೋಧವಿಲ್ಲ ಶ್ರುತಿಯಲ್ಲಿ ಹೇಳಿದ್ದರೂ ಯುಕ್ತಿವಿರುದ್ಧವಾದುದನ್ನು ಹೇಗೆ ಅಂಗೀಕರಿಸುವುದು ಎಂಬ ಆಶಂಕೆಗೆ ಉತ್ತರ—'ಶಬ್ದಮೂಲತ್ವಾತ್'. ಶಬ್ದವೇ ಯಾವುದಕ್ಕೆ ಮೂಲ ಅಂದರೆ ಪ್ರಮಾಣವೋ ಅದು ಶಬ್ದಮೂಲ. ಶಬ್ದಪ್ರಮಾಣದಿಂದ ಮಾತ್ರವೇ ಜ್ಞೇಯವಾದುದರಿಂದ ಎಂದು ಅರ್ಥ ಬ್ರಹ್ಮನು ಕೇವಲ ಯುಕ್ತಿಗೆ ಗೋಚರವಲ್ಲವಾದ್ದರಿಂದ ಬ್ರಹ್ಮನ ವಿಷಯದಲ್ಲಿ ಯುಕ್ತಿವಿರೋಧವಿಲ್ಲವೆಂದು ಭಾವ.

ಈ ಮುಂದಿನ ಕಾರಣದಿಂದಲೂ ಈಶ್ವರನ ವಿಷಯದಲ್ಲಿ ಯುಕ್ತಿವಿರೋಧವಿಲ್ಲವೆಂದು ಹೇಳುವ ಸೂತ್ರ—

ಓಂ ಆತ್ಮನಿ ಚೈವಂ ವಿಚಿತ್ರಾಶ್ಚ ಹಿ ಓಂ (೨-೧-೨೯)

**ಸೂತ್ರಾರ್ಥ**

ಮೊದಲನೆಯ 'ಚ'ಶಬ್ದವು ಅವಧಾರಣಾರ್ಥಕವಾದುದು. ಕೊನೆಯ 'ಚ' ಶಬ್ದವು ಸಮುಚ್ಚಯವನ್ನು ಹೇಳುವುದು. ಆತ್ಮನಿ ಚ—ಈಶ್ವರನಲ್ಲಿಯೇ, ಏವಂ—ಯುಕ್ತಿವಿರೋಧವನ್ನು ಪರಿಹರಿಸುವ ಇಂತಹ, ವಿಚಿತ್ರಾಃ—ಅಘಟಿತವಾದುದನ್ನೂ

स्सन्ति । न जीवे । "विचित्रशक्तिः पुरुषः पुराणो न चान्येषां शक्तयस्तादृशास्युः" इत्यादि हिशब्दसूचितश्रुतिसिद्धा इत्यर्थः । अतश्च न युक्तिविरोध इति योज्यम् । अधिकन्त्वित्यत्र श्रमादिदोष-निरासायाखिलश्रोतृत्वाद्यतिशये मानोक्तिः । इह तु कृत्स्नप्रसक्त्यादि-दोषनिरासकविचित्रशक्तिसत्त्व इति भेदः ।

ननु जीवेऽपीशवच्चेतनत्वादिना कृत्स्नप्रसक्त्यादियुक्तिविरोधोऽविरोधतां नीयतामित्यत आह—

॥ ॐ स्वपक्षदोषाच्च ॐ ॥ २-१-३०

चोऽवधारणे। जीवपक्षे कृत्स्नप्रसक्त्यादिदोषादेव युक्तिविरोधो

---

ಘಟಿಸುವ ಶಕ್ತಿಗಳಿವೆ, ಜೀವನಲ್ಲಿಲ್ಲ 'ವಿಚಿತ್ರಶಕ್ತಿಃ ಪುರುಷಃ ಪುರಾಣೋ', 'ನ ಚಾನ್ಯೇಷಾಂ ಶಕ್ತಯಃ ತಾದೃಶಾಃ ಸ್ಯುಃ' ಇವೇ ಮೊದಲಾದ, ಸೂತ್ರದ 'ಹಿ' ಶಬ್ದದಿಂದ ಸೂಚಿತವಾಗುವ ಶ್ರುತಿಗಳಿಂದ ಈಶ್ವರನಲ್ಲೇ ಶಕ್ತಿಗಳು ಸಿದ್ಧವಾಗಿವೆ ಎಂದು ಅರ್ಥ. 'ಆದ್ದರಿಂದಲೂ ಯುಕ್ತಿವಿರೋಧವಿಲ್ಲ' ಎಂಬ ವಾಕ್ಯವನ್ನು ಯೋಜಿಸಿ ಕೊಳ್ಳಬೇಕು.

**ಈ ಸೂತ್ರದಲ್ಲಿ ಪುನರುಕ್ತಿಯಿಲ್ಲ**

'ಅಧಿಕಂ ತು ಭೇದನಿರ್ದೇಶಾತ್' (ಬ್ರ. ಸೂ. ೨-೧-೨೨) ಎಂಬ ಸೂತ್ರದಲ್ಲಿ ಬ್ರಹ್ಮನಿಗೆ ಶ್ರಮ ಮೊದಲಾದ ದೋಷಗಳನ್ನು ನಿರಾಕರಿಸಲು ಅಖಿಲ ಶ್ರೋತೃತ್ವ ಮೊದಲಾದ ಅತಿಶಯಗಳು ಬ್ರಹ್ಮನಲ್ಲಿವೆ ಎಂಬ ವಿಷಯದಲ್ಲಿ ಪ್ರಮಾಣಗಳನ್ನು ಹೇಳ ಲಾಗಿದೆ. ಈ ಸೂತ್ರದಲ್ಲಾದರೋ ಕೃತ್ಸ್ನಪ್ರಸಕ್ತಿ ಮೊದಲಾದ ದೋಷಗಳನ್ನು ನಿರಾಕರಿಸುವ ವಿಚಿತ್ರಶಕ್ತಿಗಳು ಬ್ರಹ್ಮನಲ್ಲಿವೆ ಎಂಬ ವಿಷಯದಲ್ಲಿ ಪ್ರಮಾಣಗಳನ್ನು ಹೇಳಲಾಗಿದೆ. ಹೀಗೆ ಎರಡೂ ಸೂತ್ರಗಳಿಗೆ ಭೇದವಿದೆ.

ಕೃತ್ಸ್ನಪ್ರಸಕ್ತಿ ಮೊದಲಾದ ಯುಕ್ತಿಗಳ ವಿರೋಧವು ಈಶ್ವರನ ವಿಷಯದಲ್ಲಿ ಹೇಗೆ ವಿರೋಧವೇ ಅಲ್ಲವೋ ಹಾಗೆ ಈಶ್ವರನಂತೆ ಚೇತನನಾದ ಜೀವನ ವಿಷಯದಲ್ಲೂ ಅಲ್ಲ ಎಂಬ ಆಕ್ಷೇಪವನ್ನು ಪರಿಹರಿಸುವ ಸೂತ್ರ—

ಓಂ ಸ್ವಪಕ್ಷದೋಷಾಚ್ಚ ಓಂ (೨-೧-೩೦)

**ಸೂತ್ರಾರ್ಥ**

'ಚ' ಶಬ್ದವು ಅವಧಾರಣಾರ್ಥಕವಾಗಿದೆ. ಜೀವಪಕ್ಷದಲ್ಲಿ ಕೃತ್ಸ್ನಪ್ರಸಕ್ತಿ ಮೊದಲಾದ ದೋಷಗಳಿರುವುದರಿಂದಲೇ ಯುಕ್ತಿವಿರೋಧವನ್ನು ವಿರೋಧವಲ್ಲವೆಂದು

नाविरोधतां नेतव्यः । ईशवच्छ्रौतत्वशब्दैकगम्यत्वविचित्रशक्तिमत्त्वानां अविरोधताकल्पकानामभावादिति भावः ।

नन्वीशेऽपि विचित्रशक्तिर्यदाऽविषया भवति यदा च नश्यति तदा विरोध एवेत्यत आह—

॥ ॐ सर्वोपेता च तद्दर्शनात् ॐ ॥ २-१-३१

चशब्दः समुच्चये । देवतेति श्रुतिबलाल्लभ्यते । सर्वशब्दो लक्षणया सर्वविषयकसार्वकालिकशक्तिपरः । तथा च सर्वाभिस्तादृशशक्तिभिरुपेता चात्माख्यदेवता न केवलं सामान्यतः शक्तिमतीति

---

ಹೇಳಲಾಗದು. ಶ್ರುತಿಪ್ರಮಾಣದಿಂದ ಸಿದ್ಧಿ, ಶಬ್ದಪ್ರಮಾಣದಿಂದ ಮಾತ್ರವೇ ಜ್ಞೇಯವಾಗಿರುವಿಕೆ, ವಿಚಿತ್ರಶಕ್ತಿಗಳನ್ನು ಪಡೆದಿರುವುದು ಮೊದಲಾದ, ಯುಕ್ತಿ ವಿರೋಧವು ವಿರೋಧವೇ ಅಲ್ಲವೆಂದು ಸಮರ್ಥಿಸುವ ಅಂಶಗಳು ಈಶ್ವರನಲ್ಲಿರುವಂತೆ ಜೀವನ ವಿಷಯದಲ್ಲೂ ಇಲ್ಲದಿರುವುದರಿಂದ ಎಂದು ಭಾವ.

ಈಶ್ವರನಲ್ಲೂ, ಯಾವಾಗ ವಿಚಿತ್ರಶಕ್ತಿಗಳಿಗೆ ವಿಷಯವೇ ಇಲ್ಲವೋ, ಅಥವಾ ಯಾವಾಗ ಆ ಶಕ್ತಿಗಳು ನಾಶಹೊಂದುತ್ತವೋ ಆಗ ಯುಕ್ತಿವಿರೋಧವು ವಿರೋಧವೇ ಆಗುವುದು ಎಂಬ ಆಶಂಕೆಗೆ ಉತ್ತರ—

## ಓಂ ಸರ್ವೋಪೇತಾ ಚ ತದ್ದರ್ಶನಾತ್ (೨-೧-೩೧)

**ಸೂತ್ರಾರ್ಥ**

'ಚ' ಶಬ್ದವು ಸಮುಚ್ಚಯಾರ್ಥಕವಾಗಿದೆ. ಇಲ್ಲಿ ಉದಾಹರಿಸಿರುವ [1]ಶ್ರುತಿಯಿಂದಾಗಿ 'ದೇವತಾ' ಎಂಬ ಪದವು ಲಭಿಸುತ್ತದೆ. 'ಸರ್ವ' ಶಬ್ದವು ಲಕ್ಷಣಾವೃತ್ತಿಯಿಂದ 'ಸರ್ವವಿಷಯಕವೂ ಸಾರ್ವಕಾಲಿಕವೂ ಆದ ಶಕ್ತಿ' ಎಂಬ ಅರ್ಥವನ್ನು ಕೊಡುವುದು. ಒಟ್ಟಿನಲ್ಲಿ ಆತ್ಮನೆಂದು ಕರೆಯಲ್ಪಡುವ ಬ್ರಹ್ಮರೂಪಿಯಾದ ಆ ದೇವತೆಯು ಅಂತಹ ಎಲ್ಲ ಶಕ್ತಿಗಳನ್ನೂ ಪಡೆದಿದೆ ಎಂದು ಅರ್ಥ. ಸಾಮಾನ್ಯವಾಗಿ 'ಶಕ್ತಿಯನ್ನು ಪಡೆದಿದೆ' ಎಂದಿಷ್ಟು ಮಾತ್ರವಲ್ಲ ಎಂದು 'ಚ' ಶಬ್ದದ ಅರ್ಥ. ತದ್ದರ್ಶನಾತ್–ಸರ್ವವಿಷಯಕವೂ, ಸಾರ್ವಕಾಲಿಕವೂ ಆದ ಶಕ್ತಿ ಬ್ರಹ್ಮನಲ್ಲಿದೆ

---

1. "ಸರ್ವೈರ್ಯುಕ್ತಾ ಶಕ್ತಿಭಿರ್ದೇವತಾ ಸಾ ಪರೇತಿ ಯಾಂ ಪ್ರಾಹುರಜಸ್ರಶಕ್ತಿಮ್ ।
ನಿತ್ಯಾನಂದಾ ನಿತ್ಯರೂಪಾಽಜರಾ ಚ ಯಾ ಶಾಶ್ವತಾತ್ಮೇತಿ ಚ ಯಾಂ ವದಂತಿ ॥ "
ಎಂಬ ಚತುರ್ವೇದಶಿಖಾ ಶ್ರುತಿ.

चार्थः । तद्दर्शनात् तादृशशक्तिमत्त्वावेदकात् "सर्वैर्युक्ता शक्तिभिर्देवता सा परेति यां प्राहुरजस्रशक्तिम्" इति श्रुतिवाक्यादित्यर्थः । आत्मनीत्युपक्रमात् उपेत इति वाच्ये "उपेता" इत्युक्तिः श्रुतिविशेषसूचनाय ।

ईशकर्तृत्वमाक्षिप्याह—

॥ ॐ विकरणत्वान्नेति चेत्तदुक्तम् ॐ ॥ २-१-३२

नेत्यावर्तते । "अचक्षुःश्रोत्रं तदपाणिपादम्" इत्यादिश्रुत्याऽक्ष्यादिकरणशून्यत्वान्नेशस्य कर्तृत्वमिति चेन्न । तत्करणराहित्यं प्राकृतपाण्यादिविषयमिति "न तस्य कार्यं करणं च विद्यत" इति तत्रैवोक्तम् । यतोऽत इति योज्यम् । विचित्राश्च हीत्यनेन अशेष-

---

ಎಂಬುದನ್ನು ತಿಳಿಸುವ "ಸರ್ವೈರ್ಯುಕ್ತಾ ಶಕ್ತಿಭಿರ್ದೇವತಾ ಸಾ ಪರೇತಿ ಯಾಂ ಪ್ರಾಹುರಜಸ್ರಶಕ್ತಿಮ್" ಎಂಬ ಶ್ರುತಿವಾಕ್ಯವಿರುವುದರಿಂದ ಎಂದು ಸೂತ್ರದ ಅರ್ಥ. ಪ್ರಾರಂಭದಲ್ಲಿ 'ಆತ್ಮನಿ' ಎಂದು ಪುಲ್ಲಿಂಗಶಬ್ದವಿರುವುದರಿಂದ 'ಉಪೇತಃ' ಎಂದಿರಬೇಕಾಗಿದ್ದರೂ 'ಸರ್ವೈರ್ಯುಕ್ತಾ' ಇತ್ಯಾದಿ ಶ್ರುತಿವಿಶೇಷವನ್ನು ಸೂಚಿಸಲು 'ಉಪೇತಾ' ಎಂದು ಸ್ತ್ರೀಲಿಂಗಪ್ರಯೋಗವನ್ನು ಮಾಡಲಾಗಿದೆ.

ಈಶ್ವರನಿಗೆ ಕರ್ತೃತ್ವವನ್ನು ಆಕ್ಷೇಪಿಸಿ ಸಮಾಧಾನ ನೀಡುವ ಸೂತ್ರ—

ಓಂ ವಿಕರಣತ್ವಾನ್ನೇತಿ ಚೇತ್ತದುಕ್ತಮ್ ಓಂ
(೨–೧–೩೨)

**ಸೂತ್ರಾರ್ಥ**

'ನ' ಎಂಬ ಪದವು ಆವೃತ್ತಿಗೊಳ್ಳುತ್ತದೆ 'ಅಚಕ್ಷುಃ ಶ್ರೋತ್ರಂ ತದಪಾಣಿಪಾದಂ' ಇತ್ಯಾದಿಶ್ರುತಿಯಂತೆ ಬ್ರಹ್ಮನು ಚಕ್ಷುಸ್ ಮೊದಲಾದ ಇಂದ್ರಿಯಶೂನ್ಯನಾಗಿರುವುದರಿಂದ ಕರ್ತೃವಾಗಲಾರ ಎಂದರೆ ಅದು ಯುಕ್ತವಲ್ಲ. ಆ ಇಂದ್ರಿಯ ಶೂನ್ಯತೆಯು ಪ್ರಾಕೃತವಾದ ಹಸ್ತ ಮೊದಲಾದ ಇಂದ್ರಿಯಗಳಿಗ ಸಂಬಂಧಪಟ್ಟಿದ್ದೆಂದು 'ನ ತಸ್ಯ ಕಾರ್ಯಂ ಕರಣಂ ಚ ವಿದ್ಯತೇ' ಎಂದು ಶ್ರುತಿಯಲ್ಲಿ ಹೇಳಲಾಗಿದೆ. 'ಯತಃ ಅತಃ' ಎಂಬ ಪದಗಳನ್ನು ಇಲ್ಲಿ ಯೋಜಿಸಿಕೊಳ್ಳಬೇಕು. 'ವಿಚಿತ್ರಾಶ್ಚ ಹಿ'

विरोधनिरासेऽपि चिदानन्दात्मकविग्रहवत्त्वादिविशेषयुक्तिबुभुत्सया पुनः शङ्केति ध्येयम् ॥ ८ ॥

नप्रयोजनाधिकरणम्—९

## ॥ ॐ नप्रयोजनवत्त्वात् ॐ ॥ २-१-३३

अत्र फलमुखदृढयुक्त्यविरोध उच्यते । हेतुविशेषोक्त्या स्वप्रयोजनार्थमिति लभ्यते । प्रकृतमीशस्य कर्तृत्वं न स्वप्रयोजनार्थम् ।

(ಬ್ರ.ಸೂ. ೨–೧–೨೯) ಎಂಬ ಸೂತ್ರದಲ್ಲೇ ಸಮಸ್ತ ವಿರೋಧಗಳನ್ನು ನಿರಾಕರಿಸಿದ್ದರೂ 'ಬ್ರಹ್ಮನು ಚಿದಾನಂದಾತ್ಮಕಶರೀರಿಯಾಗಿದ್ದಾನೆ' ಇತ್ಯಾದಿ ವಿರೋಧನಿರಾಸಕವಾದ ವಿಶೇಷಯುಕ್ತಿಗಳನ್ನು ತಿಳಿಯುವ ಇಚ್ಛೆಯಿಂದ ಇಲ್ಲಿ ಪುನಃ ಆಶಂಕಿಸಲಾಗಿದೆ ಎಂದು ತಿಳಿಯಬೇಕು.

ನಪ್ರಯೋಜನಾಧಿಕರಣ—೯

## ಓಂ ನ ಪ್ರಯೋಜನವತ್ತ್ವಾತ್ ಓಂ (೨-೧-೩೩)

**ಅಧಿಕರಣದ ಉದ್ದೇಶ**

ಈ ಅಧಿಕರಣದಲ್ಲಿ ಈಶ್ವರನ ಕರ್ತೃತ್ವವು ಫಲವುಳ್ಳದ್ದು ಎಂದು ಸಮರ್ಥಿಸುವ, ದೃಢಯುಕ್ತಿಯ ಅವಿರೋಧವನ್ನು ಹೇಳಲಾಗಿದೆ.

**ಸೂತ್ರಾರ್ಥ**

ಸೂತ್ರದಲ್ಲಿ ಹೇಳಿರುವ ಹೇತುವಿಶೇಷದ[1] ಬಲದಿಂದ 'ಸ್ವಪ್ರಯೋಜನಾರ್ಥವಾಗಿ' ಎಂಬ ಪದವು ಲಭಿಸುವುದು. ಹಿಂದಿನ ಸೂತ್ರಗಳಿಂದ ಪ್ರಕೃತವಾಗಿರುವ ಈಶ್ವರನ ಕರ್ತೃತ್ವವು ಸ್ವಪ್ರಯೋಜನೋದ್ದೇಶವುಳ್ಳದ್ದಲ್ಲ. ಏಕೆಂದರೆ, ಪ್ರಯೋಜನವತ್ತ್ವಾತ್–ಜಗತ್ತನ್ನು ಸೃಜಿಸುವುದರಿಂದ ಯಾವ ಫಲವನ್ನು ಪಡೆಯಬಹುದೋ ಆ ಫಲವನ್ನು ಈಶ್ವರನು ಪಡೆದಿರುವುದರಿಂದ ಅಥವಾ, ದಯಾಳುಗಳ ಪ್ರವೃತ್ತಿಯು ಹೇಗೆ ಪರಪ್ರಯೋಜನವುಳ್ಳದ್ದೋ ಹಾಗೆ ಈಶ್ವರನ ಪ್ರವೃತ್ತಿಯೂ ಪರಪ್ರಯೋಜನವುಳ್ಳದ್ದರಿಂದ—ಎಂದು ಅರ್ಥ. ಅಥವಾ, ಸೂತ್ರದಲ್ಲಿರುವ 'ನ' ಶಬ್ದವನ್ನು ಆವೃತ್ತಿಮಾಡಿಕೊಳ್ಳಬೇಕು. ಈಶ್ವರನ ಪ್ರವೃತ್ತಿಯು ಸ್ವಪ್ರಯೋಜನಕ್ಕಾಗಲ್ಲ. ಏಕೆಂದರೆ,

1. ಈಶ್ವರನ ಪ್ರವೃತ್ತಿಗೆ ಪರಪ್ರಯೋಜನವಿದೆಯೆಂದು 'ಪ್ರಯೋಜನವತ್ತ್ವಾತ್' ಎಂಬ ಸೂತ್ರದಲ್ಲಿರುವ ಹೇತುವಿಶೇಷವು ತಿಳಿಸುವುದರಿಂದ ಪ್ರಯೋಜನವೇ ಇಲ್ಲವೆಂದು ಹೇಳಲಾಗದು. ಸ್ವಪ್ರಯೋಜನವಿಲ್ಲವೆಂದಿಷ್ಟೇ ಹೇಳಬಹುದು. ಆದ್ದರಿಂದ 'ಸ್ವಪ್ರಯೋಜನಾರ್ಥಂ' ಎಂಬ ಪದ ಲಭಿಸುವುದೆಂಬ ಭಾವ.

कुतः ? नप्रयोजनवत्त्वात् । नसमासोऽयम् । व्याख्यानादौ हस्त-चालनादाविव प्रयोजनाभावादित्यर्थः ।

फलाभावे कथमीशस्य प्रेक्षावतः प्रवृत्तिरित्यत आह—

॥ ॐ लोकवत्तु लीलाकैवल्यम् ॐ ॥ २-१-३४

तुरेव । मत्तादेर्नृत्तगानादिका क्रिया यथा तथेशस्यापि सृष्टि-क्रिया लीलायाः कैवल्यं केवलं प्रयोजनवत्तां विना लीलैवेत्यर्थः । फलाभावेऽपि सुखोद्रेकात् स्वभावादेव विश्वसृष्टिरिति भावः ॥ ९ ॥

वैषम्यनैर्घृण्याधिकरणम्—१०

॥ ॐ वैषम्यनैर्घृण्ये न सापेक्षत्वात्तथा हि दर्शयति ॐ ॥ २-१-३५

---

ನಪ್ರಯೋಜನವತ್ತ್ವಾತ್–ಈ ಪದವು 'ನ' ಶಬ್ದದೊಂದಿಗೆ ಸಮಾಸಪಡೆದ ಪದವಾಗಿದೆ—ಪ್ರವಚನ ಮಾಡುವ ಸಂದರ್ಭದಲ್ಲಿ ಹಸ್ತಚಲನೆಗೆ ಹೇಗೆ ಪ್ರಯೋಜನವಿಲ್ಲವೋ ಹಾಗೆ ಪ್ರಯೋಜನವಿಲ್ಲದ್ದರಿಂದ ಎಂದು ಅರ್ಥ.

ವಿವೇಕಿಯಾದ ಈಶ್ವರನು ಫಲವೇ ಇಲ್ಲದಿದ್ದಲ್ಲಿ ಪ್ರವರ್ತಿಸುವುದು ಹೇಗೆ ಸಾಧ್ಯ ಎಂಬ ಆಶಂಕೆಗೆ ಉತ್ತರ—

ಓಂ ಲೋಕವತ್ತು ಲೀಲಾಕೈವಲ್ಯಮ್ ಓಂ (೨-೧-೩೪)

**ಸೂತ್ರಾರ್ಥ**

'ತು' ಶಬ್ದಕ್ಕೆ 'ಏವ' ಎಂದು ಅರ್ಥ. ಮತ್ತನಾದವನ ನರ್ತನ, ಗಾನ ಮೊದಲಾದ ಕ್ರಿಯೆಗಳು ಹೇಗೆ ಪ್ರಯೋಜನರಹಿತವೋ ಹಾಗೆ ಈಶ್ವರನ ಸೃಷ್ಟಿಕ್ರಿಯೆಯೂ ಕೇವಲ ಅಂದರೆ ಪ್ರಯೋಜನವಿಲ್ಲದ ಲೀಲೆಯಾಗಿದೆ ಎಂದು ಅರ್ಥ. ಫಲವಿಲ್ಲದಿದ್ದರೂ, ಆನಂದದ ಉತ್ಕಟತೆಯಿಂದಾಗಿ ತನ್ನ ಸ್ವಭಾವವನ್ನನುಸರಿಸಿ ಈಶ್ವರನು ವಿಶ್ವವನ್ನು ಸೃಜಿಸುವನೆಂದು ಭಾವ.

ವೈಷಮ್ಯನೈರ್ಘೃಣ್ಯಾಧಿಕರಣ—೧೦

ಓಂ ವೈಷಮ್ಯನೈರ್ಘೃಣ್ಯೇ ನ ಸಾಪೇಕ್ಷತ್ವಾತ್ ತಥಾಹಿ ದರ್ಶಯತಿ ಓಂ (೨-೧-೩೫)

अत्र कर्मादिसापेक्षत्वेऽनपेक्षत्वे च दोष इति बहुमुखदृढयुक्त्यविरोध उच्यते । युक्तमीशकर्तृत्वमिति प्रकृतम् । तत्तत्कर्मानपेक्ष्य निर्निमित्तं प्राणिनां विभागेन सुखदुःखादिदानेनेशस्य प्राप्ते ये वैषम्यनैर्घृण्ये ते न स्तः । सापेक्षत्वात् । उत्तरसूत्रानुसारात्कर्मेति लभ्यते । सुखदुःखादिफलदाने कर्मसापेक्षत्वात् । निर्निमित्तत्वाभावादित्यर्थः । तथा हि दर्शयति—हि यतस्तथा प्रस्तुतार्थं दर्शयति पुनः शब्दः । "प्रस्तुतार्थे तथाशब्द उदीर्यते" इत्युक्तेः । "पुण्येन पुण्यं लोकं नयति पापेन पापम्" इति श्रुतिः ॥

---

**ಅಧಿಕರಣದ ಉದ್ದೇಶ**

ಈ ಅಧಿಕರಣದಲ್ಲಿ, ಈಶ್ವರನು ಕರ್ಮಾದಿಗಳನ್ನು ಅನುಸರಿಸಿ ಸುಖದುಃಖಗಳನ್ನು ಕೊಡುವನೆಂದೊಪ್ಪಿದರೂ ಅಥವಾ ಕರ್ಮಾದಿಗಳ ಅಪೇಕ್ಷೆ ಅವನಿಗಿಲ್ಲವೆಂದು ಹೇಳಿದರೂ ದೋಷವಿದೆ ಎಂದು ಬಹುಮುಖವಾದ ಮತ್ತು ದೃಢವಾದ ಯುಕ್ತಿಗಳ ವಿರೋಧವನ್ನು ಪರಿಹರಿಸಲಾಗುವುದು.

**ಸೂತ್ರಾರ್ಥ**

"ಈಶನಿಗೆ ಕರ್ತೃತ್ವವು ಯುಕ್ತವಾಗಿದೆ" ಎಂಬ ಪದಗಳು ಸಂದರ್ಭವಶಾತ್ ಲಭಿಸುತ್ತವೆ. ಅವರವರ ಕರ್ಮಗಳನ್ನು ಅಪೇಕ್ಷಿಸದೆ, ನಿಷ್ಕಾರಣವಾಗಿ ಕೆಲವರಿಗೆ ಸುಖ, ಕೆಲವರಿಗೆ ದುಃಖ—ಹೀಗೆ ವಿಭಜಿಸಿ ಜೀವಿಗಳಿಗೆ ಸುಖದುಃಖಗಳನ್ನು ಕೊಡುವುದರಿಂದ ಪ್ರಾಪ್ತವಾಗುವ ಪಕ್ಷಪಾತ-ಕ್ರೌರ್ಯಗಳು ಈಶ್ವರನಿಗಿಲ್ಲ. ಏಕೆಂದರೆ, ಸಾಪೇಕ್ಷತ್ವಾತ್-ಮುಂದಿನ ಸೂತ್ರವನ್ನನುಸರಿಸಿ 'ಕರ್ಮ' ಎಂಬ ಪದವು ಲಭಿಸುವುದು—ಸುಖದುಃಖ ಮೊದಲಾದ ಫಲಗಳನ್ನು ಕೊಡುವಾಗ ಈಶ್ವರನು ಕರ್ಮಗಳನ್ನು ಅನುಸರಿಸಿಯೇ ಫಲವನ್ನು ನೀಡುವನು ಕಾರಣವೇ ಇಲ್ಲದೆ ಕೊಡಲಾರನು ಎಂದು ಅರ್ಥ. ತಥಾ ಹಿ ದರ್ಶಯತಿ-ಹಿ—ಏಕೆಂದರೆ, ತಥಾ—ಪ್ರಸ್ತುತವಾದ ವಿಷಯುವನ್ನು, ಶ್ರುತಿಯೇ ಹೇಳುತ್ತಿದೆ. 'ಪ್ರಸ್ತುತಾರ್ಥೇ ತಥಾಶಬ್ದ ಉದೀರ್ಯತೆ' ಎಂಬ ಕೋಶವಿರುವುದರಿಂದ 'ತಥಾ' ಶಬ್ದಕ್ಕೆ 'ಪ್ರಸ್ತುತಾರ್ಥ' ಎಂದು ಅರ್ಥ. 'ಪುಣ್ಯೇನ ಪುಣ್ಯಂ ನಯತಿ ಪಾಪೇನ ಪಾಪಂ' ಎಂದು ಶ್ರುತಿ.

कर्मापेक्ष्य फलदातृत्वमाक्षिप्याह—

## ॥ ॐ न कर्माविभागादिति चेन्नानादित्वात् ॐ ॥
## २-१-३६

पूर्वसूत्रांशोऽनुवर्तते । ईशस्य कर्मसापेक्षत्वाद्वैषम्यनैर्घृण्ये नेति न युक्तम् । यदपेक्ष्य फलं दद्यात् तदपेक्षणीयं कर्म नास्ति । कुतः ? अविभागात् अस्वातन्त्र्यात् । तस्यापीशकृतत्वादिति यावत् । स्वकृतापेक्षया फलदाने वैषम्याद्यनिस्तारादिति चेन्न । अनादित्वात्कर्मणाम् । प्रवाहतोऽनादित्वादित्यर्थः । पूर्वपूर्वकर्मापेक्ष्य कृतमुत्तरोत्तरं कर्मापेक्ष्य फलं ददातीत्युक्तौ दोषाभावादित्यर्थः । तदनन्यत्वादिनयसिद्धास्वातन्त्र्यजगदविभागादस्वातन्त्र्यमिति सूचनायाविभागादित्युक्तिः । प्रतिज्ञाहानिरन्यतिरेकाच्छब्देभ्य इतिवदित्येके ॥

---

ಕರ್ಮವನ್ನನುಸರಿಸಿ ಈಶ್ವರನು ಫಲ ಕೊಡುವನೆಂಬುದನ್ನು ಆಕ್ಷೇಪಿಸಿ ಸಮಾಧಾನ ನೀಡುವ ಸೂತ್ರ—

## ಓಂ ನ ಕರ್ಮಾವಿಭಾಗಾದಿತಿ ಚೇನ್ನ ಅನಾದಿತ್ವಾತ್ ಓಂ
## (೨--೧--೩೬)

**ಸೂತ್ರಾರ್ಥ**

ಹಿಂದಿನ ಸೂತ್ರದ ಒಂದು ಅಂಶ ಇಲ್ಲಿ ಅನುವೃತ್ತಿಗೊಳ್ಳುತ್ತದೆ. ಈಶ್ವರನು ಕರ್ಮಗಳನ್ನು ಅನುಸರಿಸಿ ಫಲ ನೀಡುವುದರಿಂದ ಅವನಿಗೆ ವೈಷಮ್ಯ–ನೈರ್ಘೃಣ್ಯಗಳಿಲ್ಲವೆಂದು ಹೇಳಿದ್ದು ಯುಕ್ತವಲ್ಲ. ಯಾವುದನ್ನು ಅಪೇಕ್ಷಿಸಿ ಈಶನು ಫಲಗಳನ್ನು ನೀಡಬಹುದೋ ಅಂತಹ ಈಶನು ಅಪೇಕ್ಷಿಸಬಹುದಾದ ಕರ್ಮಗಳೇ ಇಲ್ಲ. ಏಕೆಂದರೆ, ಅವಿಭಾಗಾತ್–ಅಸ್ವತಂತ್ರವಾದ್ದರಿಂದ ; ಆ ಕರ್ಮಗಳೂ ಈಶನಿಂದಲೇ ನಿರ್ಮಿತವಾದ್ದರಿಂದ ಎಂದು ಭಾವ. ತಾನೇ ನಿರ್ಮಿಸಿದ ಕರ್ಮಗಳನ್ನು ಅನುಸರಿಸಿ ಫಲಗಳನ್ನು ಕೊಡುವುದರಿಂದ ವೈಷಮ್ಯ–ನೈರ್ಘೃಣ್ಯಗಳು ಪರಿಹಾರವಾಗಲಾರವು ಎಂದರೆ ಅದು ಸರಿಯಲ್ಲ. ಕರ್ಮಗಳು ಅನಾದಿಯಾದ್ದರಿಂದ ಇಂತಹ ಶಂಕೆಗೆ ಅವಕಾಶವಿಲ್ಲ. ಕರ್ಮಗಳು ಅನಾದಿ ಎಂದರೆ ಪ್ರವಾಹತಃ ಅನಾದಿ ಎಂದು ಅರ್ಥ. ಹಿಂದು ಹಿಂದಿನ ಕರ್ಮಕ್ಕನುಗುಣವಾಗಿ ಮಾಡಿದ ಮುಂದು ಮುಂದಿನ ಕರ್ಮವನ್ನನುಸರಿಸಿ ಈಶ್ವರನು ಫಲವನ್ನು ನೀಡುವನು ಎಂದು ಹೇಳಿದಲ್ಲಿ ಯಾವ ದೋಷವೂ ಇಲ್ಲ ಎಂದು ಅರ್ಥ.

*

तर्हि कर्मादिसापेक्षस्य स्वातन्त्र्यं न स्यादित्यत आह—

## ॥ ॐ उपपद्यते चाप्युपलभ्यते च ॐ ॥ २-१-३७

चोऽवधारणे। स्वातन्त्र्यमिति शेषः। कर्मापेक्षणेऽपि स्वातन्त्र्यमुपपद्यत एव। तस्य स्वाधीनत्वात्। एवं तर्हि तदपेक्षा नामानपेक्षैव। तथा च पुनर्वैषम्याद्यापत्तिरित्यत उक्तम्। उपलभ्यते चेति। वैषम्य-

---

**ಸೂತ್ರದಲ್ಲಿರುವ 'ಅವಿಭಾಗ' ಪದಕ್ಕೆ ಅಸ್ವಾತಂತ್ರ್ಯವೆಂದು ಅರ್ಥ.**

ತದನನ್ಯತ್ವಾಧಿಕರಣದಲ್ಲಿ ಅಸ್ವತಂತ್ರವೆಂದು ಸಿದ್ಧವಾಗಿರುವ ಜಗತ್ತಿನಲ್ಲಿ ಅವಿಭಾಗ ಅಂದರೆ ಅಂತರ್ಭಾವವನ್ನು ಪಡೆದಿರುವುದರಿಂದ ಕರ್ಮಗಳಿಗೂ ಅಸ್ವಾತಂತ್ರ್ಯವೆಂದು ಸೂಚಿಸಲು 'ಅವಿಭಾಗಾತ್' ಎಂಬ ಪದವನ್ನು ಸೂತ್ರದಲ್ಲಿ ಉಪಯೋಗಿಸಲಾಗಿದೆ. 'ಪ್ರತಿಜ್ಞಾಹಾನಿರವ್ಯತಿರೇಕಾತ್ ಶಬ್ದೇಭ್ಯಃ' (ಬ್ರ ಸೂ. ೨-೩-೬) ಎಂಬ ಸೂತ್ರದಲ್ಲಿ ಅವ್ಯತಿರೇಕಶಬ್ದಕ್ಕೆ[1] ವ್ಯಾಖ್ಯಾನಮಾಡಿದಂತೆ ಈ ಸೂತ್ರದಲ್ಲಿ 'ಅವಿಭಾಗ' ಶಬ್ದಕ್ಕೆ ಮೇಲೆ ಹೇಳಿದಂತೆ ವ್ಯಾಖ್ಯಾನ ಮಾಡಬೇಕೆಂದು ಕೆಲವರು ಹೇಳುವರು.

ಹೀಗೆ ಕರ್ಮಾದಿಗಳನ್ನು ಅವಲಂಬಿಸುವ ಈಶ್ವರನಿಗೆ ಸ್ವಾತಂತ್ರ್ಯವಿರಲಾರದು ಎಂಬ ಆಶಂಕೆಗೆ ಸಮಾಧಾನ—

## ಓಂ ಉಪಪದ್ಯತೇ ಚಾಪ್ಯುಪಲಭ್ಯತೇ ಚ ಓಂ (೨-೧-೩೭)

**ಸೂತ್ರಾರ್ಥ**

ಸೂತ್ರದಲ್ಲಿರುವ ಚಶಬ್ದವು ಅವಧಾರಣವನ್ನು ಹೇಳುವುದು 'ಸ್ವಾತಂತ್ರ್ಯ' ಎಂಬ ಶೇಷವನ್ನು ಸೇರಿಸಿಕೊಳ್ಳಬೇಕು. ಕರ್ಮವನ್ನು ಅಪೇಕ್ಷಿಸಿದರೂ ಈಶ್ವರನು ಸ್ವತಂತ್ರನಾಗಿರುವುದು ಯುಕ್ತವೇ ಆಗಿದೆ. ಏಕೆಂದರೆ ಆ ಕರ್ಮವೂ ಅವನಿಗೆ ಅಧೀನವೇ ಆಗಿದೆ. ಹಾಗಾದಲ್ಲಿ, ತನಗೆ ಅಧೀನವಾದ ಕರ್ಮವನ್ನು ಅಪೇಕ್ಷಿಸುವುದೆಂದರೆ ಅಪೇಕ್ಷಿಸದಿದ್ದಂತೆಯೇ. ಆದ್ದರಿಂದ, ಪುನಃ ವೈಷಮ್ಯ ಮೊದಲಾದ ದೋಷಗಳು ಬರುವ ಪ್ರಸಂಗವಿದೆ ಎಂಬ ಆಶಂಕೆಗೆ ಉತ್ತರ—'ಉಪಲಭ್ಯತೇ ಚ' ಎಂದು.

---

1. ಆಕಾಶಕ್ಕೆ ಉತ್ಪತ್ತಿಯೇ ಇಲ್ಲವೆಂದು ಹೇಳಿದರೆ "ಸ ಇದಂ ಸರ್ವಮಸೃಜತ" ಎಂಬ ಪ್ರತಿಜ್ಞೆಯ ಹಾನಿಯಾಗುವುದು. ಅವ್ಯತಿರೇಕಾತ್—"ಇದಂ ಸರ್ವಂ ಅಸೃಜತ" ಎಂಬಲ್ಲಿ ಹೇಳಿರುವ ಸರ್ವದಲ್ಲಿ ಆಕಾಶವೂ ಅಂತರ್ಭಾವವನ್ನು ಹೊಂದಿರುವುದರಿಂದ—ಎಂದು ಅವ್ಯತಿರೇಕ ಶಬ್ದಕ್ಕೆ ವ್ಯಾಖ್ಯಾನ ಮಾಡಿದಂತೆ ಇಲ್ಲೂ ಅವಿಭಾಗ ಶಬ್ದಕ್ಕೆ ವ್ಯಾಖ್ಯಾನಿಸಬೇಕೆಂದು ಭಾವ.

नैर्घृण्ये इत्यस्ति । उपलभ्यते हीदृशं कर्मसापेक्षत्वकृतं वैषम्यं नैर्घृण्यं च । "स कारयेत्पुण्यमथापि पापं न तावता दोषवान्" इत्यादाविति प्रत्येकमन्वयः । अतो नेदमनिष्टम् । वेदाप्रामाण्याहेतुत्वादिति भावः । तत्त्वप्रदीपे तु उपपद्यते स्वातन्त्र्यम् । उपलभ्यते च कर्मादेस्तदधीनत्व-मित्येकमर्थमुक्त्वा उपपद्यते च तादृशं वैषम्यादि उपलभ्यमानत्वात् प्रमाणैरित्याद्यावृत्त्याऽनेकधा योजितम् ॥ १० ॥

---

'ವೈಷಮ್ಯನೈರ್ಘೃಣ್ಯೇ' ಎಂಬ ಪದಗಳನ್ನು ಅನುವೃತ್ತಿ ಮಾಡಿಕೊಳ್ಳಬೇಕು. ಕರ್ಮಗಳನ್ನು ಅಪೇಕ್ಷಿಸುವುದರಿಂದ ಉಂಟಾಗುವ ಇಂತಹ ವೈಷಮ್ಯ ಮತ್ತು ನೈರ್ಘೃಣ್ಯಗಳು ಈಶನಲ್ಲಿವೆ ಎಂದು 'ಸ ಕಾರಯೇತ್ ಪುಣ್ಯಮಥಾಪಿ ಪಾಪಂ ನ ತಾವತಾ ದೋಷವಾನ್'[1] ಇತ್ಯಾದಿ ಪ್ರಮಾಣಗಳಲ್ಲಿ ಉಪಲಬ್ಧವಾಗಿವೆ—'ವೈಷಮ್ಯವು ಉಪಲಬ್ಧವಾಗಿದೆ, ನೈರ್ಘೃಣ್ಯವು ಉಪಲಬ್ಧವಾಗಿದೆ' ಎಂದು ಪ್ರತ್ಯೇಕವಾಗಿ ಅನ್ವಯಿಸಬೇಕು. ಈಶ್ವರನು ಕರ್ಮಗಳನ್ನು ಅವಲಂಬಿಸಿ ಫಲಗಳನ್ನು ಕೊಡುವುದು ವೇದಾಪ್ರಾಮಾಣ್ಯಕ್ಕೆ ಕಾರಣವಲ್ಲವಾದ್ದರಿಂದ ಅನಿಷ್ಟವಲ್ಲವೆಂದು ಭಾವ.

**ತತ್ತ್ವಪ್ರದೀಪದಲ್ಲಿ ಈ ಸೂತ್ರದ ವ್ಯಾಖ್ಯಾನ—**

ತತ್ತ್ವಪ್ರದೀಪದಲ್ಲಾದರೋ, ಈಶ್ವರನಿಗೆ ಸ್ವಾತಂತ್ರ್ಯವು ಉಪಪನ್ನವಾಗಿದೆ ಮತ್ತು ಕರ್ಮಾದಿಗಳಿಗೆ ಈಶಾಧೀನತ್ವವು ಪ್ರಮಾಣಗಳಲ್ಲಿ ಉಪಲಬ್ಧವಾಗಿದೆ ಎಂದು ಒಂದರ್ಥವನ್ನು ಹೇಳಿ, ಈಶ್ವರನಿಗೆ ಕರ್ಮಾದಿಗಳನ್ನು ಅಪೇಕ್ಷಿಸುವುದರಿಂದ ಉಂಟಾಗುವ ವೈಷಮ್ಯಾದಿಗಳು ಯುಕ್ತವಾಗಿವೆ, ಪ್ರಮಾಣಗಳಿಂದ ಉಪಲಬ್ಧವಾಗಿರುವುದರಿಂದ—ಇತ್ಯಾದಿಯಾಗಿ ಪದಗಳನ್ನು ಆವೃತ್ತಿಮಾಡಿಕೊಂಡು ಅನೇಕ ವಿಧವಾಗಿ ಯೋಜನೆ ಮಾಡಲಾಗಿದೆ.

---

1. ಸ ಕಾರಯೇತ್ ಪುಣ್ಯಮಥಾಪಿ ಪಾಪಂ ನ ತಾವತಾ ದೋಷವಾನ್ ಈಶಿತಾಽಪಿ ।
ಈಶೋ ಯತೋ ಗುಣದೋಷಾದಿಸತ್ತ್ವೇ ಸ್ವಯಂ ಪರೋಽನಾದಿರಾದಿಃ ಪ್ರಜಾನಾಮ್ ॥
(ಚತುರ್ವೇದಶಿಖಾ)

ಭಗವಂತನೇ ಹಿಂದಿನ ಕರ್ಮಗಳನ್ನನುಸರಿಸಿ ಪುಣ್ಯ-ಪಾಪ ಕರ್ಮಗಳನ್ನು ಮಾಡಿಸುವವನು. ಹೀಗೆ ಕರ್ಮನಿಯಾಮಕನಾದರೂ ಸ್ವತಂತ್ರನೂ, ಸರ್ವಕರ್ತನೂ, ಜನನರಹಿತನೂ, ಗುಣ-ದೋಷಗಳು ಗುಣದೋಷಗಳಾಗಿರಲು ಕಾರಣನೂ ಆಗಿರುವ ಅವನಿಗೆ ವೈಷಮ್ಯ-ನೈರ್ಘೃಣ್ಯ ದೋಷಗಳಿಲ್ಲ—ಎಂದು ಶ್ರುತಿಯ ಭಾವ.

सर्वधर्मोपपत्त्यधिकरणम्—११

## ॥ ॐ सर्वधर्मोपपत्तेश्च ॐ ॥ २-१-३८

अत्र सर्वगुणपूर्तौ सर्वदोषराहित्ये च युक्त्यविरोध उच्यते। सर्वेषां धर्माणां ज्ञानानन्दादिसद्गुणानां दुःखद्वेषादिदोषाभावानां चेश उपपत्तेः। ब्रह्म सदा प्राप्तसद्गुणं, तत्प्रेप्सुत्वे सति तत्र शक्तत्वात्, सामान्यव्याप्त्या संमतवत्। ब्रह्म सदा त्यक्तसर्वदोषं, तज्जिहासुत्वे सति तत्र शक्तत्वात्, संमतवत् इत्युपपत्तिसिद्धत्वात्। चशब्दात् "गुणाः श्रुताः सुविरुद्धाश्च देवे" इति श्रुतेश्च इत्यर्थः॥ ११॥

---

ಸರ್ವಧರ್ಮೋಪಪತ್ತ್ಯಧಿಕರಣ—೧೧

## ಓಂ ಸರ್ವಧರ್ಮೋಪಪತ್ತೇಶ್ಚ ಓಂ (೨-೧-೩೮)

**ಅಧಿಕರಣದ ಉದ್ದೇಶ**

ಈ ಅಧಿಕರಣದಲ್ಲಿ ಭಗವಂತನ ಸರ್ವಗುಣಪೂರ್ಣತ್ವ ಮತ್ತು ನಿರ್ದೋಷತ್ವಗಳ ವಿಷಯದಲ್ಲಿ ಬರುವ ಯುಕ್ತಿ ವಿರೋಧವನ್ನು ಪರಿಹರಿಸಲಾಗುವುದು.

**ಸೂತ್ರಾರ್ಥ**

ಎಲ್ಲ ಧರ್ಮಗಳೂ ಅಂದರೆ ಜ್ಞಾನ, ಆನಂದ ಮೊದಲಾದ ಸದ್ಗುಣಗಳೂ, ದುಃಖ, ದ್ವೇಷ ಮೊದಲಾದ ದೋಷಗಳ ಅಭಾವಗಳೂ ಭಗವಂತನಲ್ಲಿ ಯುಕ್ತಿಯುಕ್ತವಾಗಿವೆ. "ಭಗವಂತನು ಸರ್ವದಾ ಸದ್ಗುಣಗಳನ್ನು ಪಡೆದಿರುವನು, ಆ ಸದ್ಗುಣಗಳನ್ನು ಹೊಂದಿರಲು ಬಯಕೆಯುಳ್ಳವನಾಗಿರುವುದಲ್ಲದೇ ಅವುಗಳನ್ನು ಪಡೆದಿರಲು ಸಮರ್ಥನೂ ಆಗಿರುವುದರಿಂದ; ಯಾರು ಯಾವುದನ್ನು ಹೊಂದಿರಲು ಇಚ್ಛೆಯುಳ್ಳವರೂ ಶಕ್ತರೂ ಆಗಿರುವರೊ ಅವರು ಅದನ್ನು ಪಡೆದಿರುವರು. ಸಮ್ಮತವಾದ ಅನೇಕ ನಿದರ್ಶನಗಳಂತೆ" ಹಾಗೆಯೇ, "ಬ್ರಹ್ಮನು ಯಾವಾಗಲೂ ಸರ್ವದೋಷಗಳಿಂದ ರಹಿತನಾಗಿದ್ದಾನೆ, ಆ ದೋಷಗಳನ್ನು ತ್ಯಜಿಸುವ ಇಚ್ಛೆಯನ್ನು ಪಡೆದಿರುವುದಲ್ಲದೆ ತ್ಯಜಿಸುವ ಸಾಮರ್ಥ್ಯವನ್ನೂ ಪಡೆದಿರುವುದರಿಂದ; ಸಮ್ಮತವಾದ ದೃಷ್ಟಾಂತಗಳಂತೆ" ಎಂಬ ಯುಕ್ತಿಗಳಿಂದ ಭಗವಂತನ ಸಮಸ್ತಗುಣಪೂರ್ಣತ್ವ ಮತ್ತು ನಿರ್ದೋಷತ್ವಗಳು ಸಿದ್ಧವಾಗುವುವು. ಸೂತ್ರದಲ್ಲಿರುವ 'ಚ' ಶಬ್ದದಿಂದ ಭಗವಂತನಿಗೆ ಸರ್ವಗುಣಪೂರ್ಣತ್ವ

प्रथमपादसारसङ्ग्रहः

स्मृतिनयेऽश्रौतस्मृत्यप्रामाण्यम् । नविलक्षणत्वादिनये श्रुति-श्रौतस्मृत्योः प्रामाण्यं तत्स्वतस्त्वं च । अभिमानिनये अभिमानि-तद्विग्रहतदन्तर्धानशक्त्यादि । असदिति नये लये भावसत्त्वम् । भोक्त्रिति नये मुक्तौ जीवपरैक्यनिरासः । तदनन्यत्वनये सृष्टिसाधनानामीशायत्तत्वम् । इतरेति नये जीवस्य कर्तृत्वेऽप्यस्वातन्त्र्यम्, ईशस्यानुपलम्भेऽपि सत्त्वम् । श्रुतेरिति नये अघटितघटकनित्यशक्तिमत्त्वम् ।

---

ಮತ್ತು ನಿರ್ದೋಷತ್ವಗಳ ವಿಷಯದಲ್ಲಿ 'ಗುಣಾಃ ಶ್ರುತಾಃ ಸುವಿರುದ್ಧಾಶ್ಚ ದೇವೇ[1] ಎಂಬ ಶ್ರುತಿಯೂ ಆಧಾರವೆಂದು ಅರ್ಥವಾಗುವುದು.

**ಈ ಪಾದದ ಅಧಿಕರಣಗಳ ಸಾರ**

ಈ ಪಾದದ ಸ್ಮೃತ್ಯಧಿಕರಣದಲ್ಲಿ ಶ್ರುತಿಮೂಲವಲ್ಲದ ಸ್ಮೃತಿಗಳು ಅಪ್ರಮಾಣವೆಂದು ಸಿದ್ಧವಾಗಿದೆ ನವಿಲಕ್ಷಣತ್ವಾಧಿಕರಣದಲ್ಲಿ ಶ್ರುತಿ ಮತ್ತು ಶ್ರುತಿಮೂಲವಾದ ಸ್ಮೃತಿಗಳ ಪ್ರಾಮಾಣ್ಯ ಹಾಗೂ ಪ್ರಾಮಾಣ್ಯದ ಸ್ವತಸ್ತ್ವವು ನಿರೂಪಿತವಾಗಿದೆ. ಅಭಿಮಾನ್ಯಧಿಕರಣದಲ್ಲಿ ಅಭಿಮಾನಿದೇವತೆ, ಅವರಿಗೆ ಶರೀರ ಮತ್ತು ಅಂತರ್ಧಾನಶಕ್ತಿ ಇತ್ಯಾದಿಗಳಿವೆಯೆಂದು ಸಾಧಿಸಲಾಗಿದೆ ಅಸದಧಿಕರಣದಲ್ಲಿ ಲಯದಲ್ಲಿ ಭಾವಪದಾರ್ಥದ ಅಸ್ತಿತ್ವವನ್ನು ಸಮರ್ಥಿಸಲಾಗಿದೆ. ಭೋಕ್ತ್ರಧಿಕರಣದಲ್ಲಿ, ಮುಕ್ತಿಯಲ್ಲಿ ಜೀವೇಶರಿಗೆ ಐಕ್ಯವನ್ನು ನಿರಾಸಮಾಡಲಾಗಿದೆ. ತದನನ್ಯತ್ವಾಧಿಕರಣದಲ್ಲಿ ಸೃಷ್ಟಿಸಾಧನಗಳಿಗೆ ಈಶಾಧೀನತ್ವವನ್ನು ಪ್ರತಿಪಾದಿಸಲಾಗಿದೆ. ಇತರಾಧಿಕರಣದಲ್ಲಿ ಜೀವನು ಕರ್ತೃವಾಗಿದ್ದರೂ ಅಸ್ವತಂತ್ರನೆಂದೂ, ಈಶ್ವರನು ಕಾಣದಿದ್ದರೂ ಇರುವನೆಂದೂ ನಿರೂಪಿಸಲಾಗಿದೆ. 'ಶ್ರುತೇಃ' ಎಂಬ ಅಧಿಕರಣದಲ್ಲಿ ಭಗವಂತನಿಗೆ ಅಘಟಿತಘಟಕ ನಿತ್ಯಶಕ್ತಿ

---

1. ಗುಣಾಃ ಶ್ರುತಾಃ ಸುವಿರುದ್ಧಾಶ್ಚ ದೇವೇ ಸಂತ್ಯಶ್ರುತಾ ಅಪಿ ನೈವಾತ್ರ ಶಂಕಾ ।
ಚಿಂತ್ಯಾ ಅಚಿಂತ್ಯಾಶ್ಚ ತಥೈವ ದೋಷಾಃ ಶ್ರುತಾಶ್ಚ ನಾಜ್ಞೈರ್ಹಿ ತಥಾ ಪ್ರತೀತಾಃ ॥
(ಸೌಪರ್ಣಶ್ರುತಿ)

ಶ್ರೀಹರಿಯಲ್ಲಿ ಲೋಕದೃಷ್ಟಿಯಿಂದ ಅತಿವಿರುದ್ಧವಾದ ಅಣುತ್ವ ಮಹತ್ತ್ವ ಮೊದಲಾದ ಶ್ರುತಿಪ್ರತಿಪಾದಿತವಾದ ಗುಣಗಳೂ ಇವೆ. ಅಲ್ಲದೆ, ಶ್ರುತಿಯಲ್ಲಿ ಪ್ರತಿಪಾದಿತವಾಗದ ರಮಾ ಬ್ರಹ್ಮಾದಿಗಳು ಚಿಂತಿಸುವ ಗುಣಗಳೂ ಇವೆ. ಈ ವಿಷಯದಲ್ಲಿ ಶಂಕೆಯೇ ಇಲ್ಲ. ಅಷ್ಟೇಕೆ, ರಮಾದಿಗಳೂ ಚಿಂತಿಸದ ಗುಣಗಳೂ ಶ್ರೀಹರಿಯಲ್ಲಿವೆ. ಆದರೆ, ಶ್ರೀಹರಿಯಲ್ಲಿ ದೋಷಗಳನ್ನು ಶ್ರುತಿಯೂ ಹೇಳುವುದಿಲ್ಲ. ರಮಾದಿಗಳು ಚಿಂತಿಸುವುದೂ ಇಲ್ಲ. ರಮಾದಿಗಳು ಚಿಂತಿಸದ ದೋಷಗಳೂ ಇಲ್ಲವೆಂದು ಹೇಳುವ ಆವಶ್ಯಕತೆಯೇ ಇಲ್ಲ. ಕೆಲವು ಶ್ರುತಿಗಳು ಭಗವಂತನಲ್ಲಿ ದೋಷಗಳನ್ನು ಹೇಳುವಂತೆ ತೋರುವುದು ಅಜ್ಞರಿಗೆ ಮಾತ್ರ ; ಜ್ಞಾನಿಗಳಿಗಲ್ಲ—ಎಂದು ಶ್ರುತಿಯ ಭಾವ.

नेति नये स्वभावतः सृष्टिः । वैषम्यनये कर्मापेक्षत्वेऽपि स्वातन्त्र्यम् । अन्त्यनये सर्वगुणपूर्णत्वं सर्वदोषशून्यत्वं चेत्यादि सिद्धम् । एवमग्रेऽपि विवेक्तव्यम् । भीषयत्यस्मांस्तु विस्तरः ॥

इति श्रीमद्राघवेन्द्रयतिकृतायां तन्त्रदीपिकायां द्वितीयाध्यायस्य
प्रथमः पादः समाप्तः ॥ श्रीकृष्णार्पणमस्तु ॥

---

ಇರುವುದೆಂದು ಸಾಧಿಸಲಾಗಿದೆ. ನಪ್ರಯೋಜನಾಧಿಕರಣದಲ್ಲಿ ಸೃಷ್ಟಿಯು ಭಗವಂತನ ಸ್ವಭಾವವೆಂದು ಸಮರ್ಥಿಸಿದೆ. ವೈಷಮ್ಯನೈರ್ಘೃಣ್ಯಾಧಿಕರಣದಲ್ಲಿ ಕರ್ಮಗಳನ್ನು ಅನುಸರಿಸಿಯೇ ಫಲಗಳನ್ನು ಭಗವಂತನು ನೀಡುವುದಾದರೂ ಅವನ ಸ್ವಾತಂತ್ರ್ಯಕ್ಕೆ ಚ್ಯುತಿಯಿಲ್ಲವೆಂದು ನಿರೂಪಿಸಲಾಗಿದೆ. ಅಂತಿಮವಾದ ಸರ್ವಧರ್ಮೋಪಪತ್ತ್ಯಧಿಕರಣದಲ್ಲಿ ಸರ್ವಗುಣಪರಿಪೂರ್ಣತ್ವ, ಸರ್ವದೋಷಶೂನ್ಯತ್ವ ಮೊದಲಾದ ಪ್ರಮೇಯಗಳು ಸಿದ್ಧವಾಗಿವೆ. ಇದೇ ರೀತಿಯಾಗಿ ಮುಂದೆಯೂ ವಿವೇಚಿಸಿ ತಿಳಿಯಬೇಕು. ನಮ್ಮನ್ನು ಮಾತ್ರ ಗ್ರಂಥದ ವಿಸ್ತಾರವು ಭಯಗೊಳಿಸುತ್ತಿದೆ.

ಶ್ರೀಮದ್ರಾಘವೇಂದ್ರಯತಿಗಳು ರಚಿಸಿರುವ ತಂತ್ರದೀಪಿಕೆಯಲ್ಲಿ
ದ್ವಿತೀಯಾಧ್ಯಾಯದ ಪ್ರಥಮಪಾದವು ಸಮಾಪ್ತವಾಯಿತು.

ಶ್ರೀಕೃಷ್ಣಾರ್ಪಣಮಸ್ತು

# अथ द्वितीयाध्यायस्य द्वितीयः पादः

॥ ॐ ॥ इतरेषां चानुपलब्धेरित्युक्तहेतुविस्तररूपत्वात्तदनन्तरं समयाविरोधोऽत्र पादेऽभिधीयते । हैतुकपाषण्डभेदेन समया द्विविधाः पूर्वोत्तराधिकरणषट्कद्वयेन निरस्यन्ते । वेदवादस्य युक्तिपाद एव निरासात् ।

रचनानुपपत्त्यधिकरणम्—१

**॥ ॐ रचनानुपपत्तेश्च नानुमानम् ॐ ॥ २-२-१**

अत्र नये निरीश्वरसाङ्ख्यमतं निरस्यते । प्रस्तावात् कर्त्रिति लभ्यते । अनुमीयत इत्यनुमानम् । "कृत्यल्युटो बहुलम्" इति

---

# ದ್ವಿತೀಯಾಧ್ಯಾಯ—ದ್ವಿತೀಯಪಾದ

**ಹಿಂದಿನ ಪಾದದ ಸಂಗತಿ ಮತ್ತು ಈ ಪಾದ ಪ್ರತಿಪಾದಿಸುವ ವಿಷಯ**

ಇತರೇಷಾಂ ಚಾನುಪಲಬ್ಧೇಃ (ಬ್ರ. ಸೂ. ೨-೧-೨) ಎಂಬ ಸೂತ್ರದಲ್ಲಿ ಹೇಳಿದ ಹೇತುವಿನ ವಿವರಣರೂಪವಾದುದರಿಂದ ಯುಕ್ತಿಪಾದದ ನಂತರ ಸಮಯಗಳ ಅವಿರೋಧವನ್ನು ಈ ಪಾದದಲ್ಲಿ ಹೇಳಲಾಗಿದೆ. ಹೈತುಕ ಮತ್ತು ಪಾಷಂಡ ಎಂದು ಮತಗಳು ಎರಡು ವಿಧವಾಗಿವೆ. ಇವುಗಳನ್ನು ಈ ಪಾದದಲ್ಲಿ ಮೊದಲನೆಯ ಆರು ಅಧಿಕರಣಗಳು ಮತ್ತು ಅನಂತರದ ಆರು ಅಧಿಕರಣಗಳಿಂದ ಕ್ರಮವಾಗಿ ನಿರಾಸ ಮಾಡಲಾಗಿದೆ. ವೈದಿಕ ವಿರೋಧಿಸಮಯಗಳನ್ನು ಯುಕ್ತಿಪಾದದಲ್ಲೇ ನಿರಾಕರಿಸ ಲಾಗಿದೆ.

ರಚನಾನುಪಪತ್ತ್ಯಧಿಕರಣ—೧

**ಓಂ ರಚನಾನುಪಪತ್ತೇಶ್ಚ ನಾನುಮಾನಮ್ ಓಂ**
**(೨-೨-೧)**

**ಅಧಿಕರಣದ ಉದ್ದೇಶ ಮತ್ತು ಸೂತ್ರಾರ್ಥ**

ಈ ಅಧಿಕರಣದಲ್ಲಿ ನಿರೀಶ್ವರ ಸಾಂಖ್ಯಮತವನ್ನು ನಿರಾಕರಿಸಲಾಗುವುದು. ಸಂದರ್ಭಕ್ಕನುಗುಣವಾಗಿ 'ಕರ್ತೃ' ಎಂಬ ಪದವು ಲಭಿಸುವುದು. 'ಅನುಮಾನ'

**कर्मणि ल्युट् । महदादिकार्यं सकारणं कार्यत्वादिति साङ्ख्यानुमान-कल्पितं प्रधानं न कर्तृ । कुतः ? रचनानुपपत्तेर्जडस्य रचयितृत्वा-नुपपत्तेः । चशब्देन साधकमानाभावाच्चेति समुच्चीयते । ननु प्रधानस्य कर्तृत्वे अनुमानं मानमित्यतोऽप्याह । रचनेति । मानमिति शेषः । करणे ल्युट् । अनुमानं न मानम् । कुतः ? अनुमानरचनाया अनुपपत्तेर्दुष्टत्वादित्यर्थः । महदादिकं सकारणकं सजातीयकारणकं सोपादानकारणकं स्वतन्त्रकारणकं चेति रचनायां सिद्धसाधनादिति**

---

ವೆಂದರೆ ಅನುಮಾನದಿಂದ ಸಿದ್ಧವಾದುದು 'ಕೃತ್ಯಲ್ಯುಟೋ ಬಹುಲಂ' (ಪಾ ಸೂ. ೩-೩-೧೧೩) ಎಂಬ ಸೂತ್ರದಿಂದ 'ಅನುಮಾನ' ಎಂಬಲ್ಲಿ ಲ್ಯುಟ್ ಪ್ರತ್ಯಯವು ಕರ್ಮಾರ್ಥದಲ್ಲಿ ಬಂದಿದೆ. 'ಮಹತ್ತತ್ತ್ವ ಮೊದಲಾದ ಕಾರ್ಯಗಳು ಕಾರಣ ಯುಕ್ತವಾಗಿವೆ. ಕಾರ್ಯಗಳಾದುದರಿಂದ' ಎಂದು ಸಾಂಖ್ಯರು ಅನುಮಾನದಿಂದ ಕಲ್ಪಿಸಿರುವ ಪ್ರಧಾನವು ಜಗತ್ತಿನ ಕರ್ತೃವಲ್ಲ. ಏಕೆಂದರೆ-ರಚನಾನುಪಪತ್ತೇಃ-ಜಡಕ್ಕೆ ಸ್ವತಂತ್ರವಾದ ಪ್ರವೃತ್ತಿಯು ಅನುಪಪನ್ನವಾದುದರಿಂದ ಸೂತ್ರದಲ್ಲಿರುವ 'ಚ' ಶಬ್ದವು 'ಸಾಧಕಪ್ರಮಾಣವು ಇಲ್ಲದಿರುವುದರಿಂದಲೂ' ಎಂದು ಸಮುಚ್ಚಯ ವನ್ನು ಹೇಳುವುದು.

**ಸೂತ್ರದ ವ್ಯಾಖ್ಯಾನಾಂತರ**

ಪ್ರಧಾನವು ಜಗತ್ಕರ್ತೃ ಎಂಬ ವಿಷಯದಲ್ಲಿ ಅನುಮಾನವು ಪ್ರಮಾಣವಾಗಿದೆ ಎಂಬ ಆಕ್ಷೇಪಕ್ಕೂ 'ರಚನಾ' ಇತ್ಯಾದಿ ಸೂತ್ರವು ಉತ್ತರವಾಗಿದೆ. 'ಪ್ರಮಾಣ' ಎಂಬ ಪದವು ಶೇಷವಾಗಿದೆ. 'ಅನುಮಾನ' ಪದದಲ್ಲಿರುವ ಲ್ಯುಟ್ ಪ್ರತ್ಯಯವು ಈ ವ್ಯಾಖ್ಯಾನದಲ್ಲಿ ಕರಣಾರ್ಥಕವಾಗಿದೆ. 'ಪ್ರಧಾನವು ಜಗತ್ಕರ್ತೃವೆಂಬ ವಿಷಯ ದಲ್ಲಿ ಅನುಮಾನವು ಪ್ರಮಾಣವಲ್ಲ. ಪ್ರಧಾನವು ಜಗತ್ಕರ್ತೃವೆಂದು ಸಾಧಿಸುವ ಅನುಮಾನದ ರಚನೆಯೇ ಅನುಪಪನ್ನ ಅಂದರೆ ದುಷ್ಟವಾಗಿರುವುದರಿಂದ' ಎಂದು ಅರ್ಥ. 'ಮಹತ್ತತ್ತ್ವ ಮೊದಲಾದವುಗಳು ಕಾರಣಯುಕ್ತವಾಗಿವೆ, ಸಜಾತೀಯ ಕಾರಣವನ್ನು ಪಡೆದಿವೆ, ಉಪಾದಾನಕಾರಣಯುಕ್ತವಾಗಿವೆ, ಸ್ವತಂತ್ರಕಾರಣಯುಕ್ತ ವಾಗಿವೆ' ಇತ್ಯಾದಿಯಾಗಿ ಹೇಗೆ ಅನುಮಾನವನ್ನು ರಚಿಸಿದರೂ ಅದಕ್ಕೆ ಸಿದ್ಧಸಾಧನತಾ ದೋಷವಿರುವುದೆಂದು ಭಾವ.

भावः । एतदर्थमेव रचनेत्यनुमानमिति चोक्तिः । अन्यथा अनुपपत्तेश्च न प्रधानमित्यवक्ष्यत् । कर्तृत्वमिह स्वतःप्रवृत्तिमत्त्वं बोध्यम् ॥

इतश्च जडं न कर्त्रित्याह—

॥ ओं प्रवृत्तेश्च ओं ॥ २-२-२

चेतनस्येति पूर्वत्रार्थात् प्रकृतमन्वेति । नानुमानमित्यस्ति । दर्शनादिति शेषः । पटादिसृष्टौ चेतनप्रवृत्तिदर्शनाच्च नानुमानं प्रधानं कर्त्रित्यर्थः । पटसृष्टिदृष्टान्तेन महदादिसृष्टावपि चेतनाधीनत्वानुमानं

---

**ವ್ಯಾಖ್ಯಾನಾಂತರಕ್ಕೆ ಸೂತ್ರವೇ ಜ್ಞಾಪಕವಾಗಿದೆ**

ಈ ಎರಡನೆಯ ವ್ಯಾಖ್ಯಾನದ ದೃಷ್ಟಿಯಿಂದಲೇ ಸೂತ್ರದಲ್ಲಿ 'ರಚನಾ' ಮತ್ತು 'ಅನುಮಾನ' ಎಂಬ ಪದಗಳನ್ನು ಪ್ರಯೋಗಿಸಲಾಗಿದೆ. ಇಲ್ಲದಿದ್ದಲ್ಲಿ 'ಅನುಪಪತ್ತೇಶ್ಚ ನ ಪ್ರಧಾನಮ್' ಎಂದಿಷ್ಟೇ ಹೇಳಬಹುದಾಗಿತ್ತು. ಇಲ್ಲಿ ಕರ್ತೃತ್ವವೆಂದರೆ ಸ್ವತಂತ್ರವಾದ ಪ್ರವೃತ್ತಿ ಎಂದು ತಿಳಿಯಬೇಕು.

ಈ ಮುಂದಿನ ಕಾರಣದಿಂದಲೂ ಜಡವು ಕರ್ತೃವಲ್ಲ ಎಂದು ಹೇಳಲು ಸೂತ್ರ—

ಓಂ ಪ್ರವೃತ್ತೇಶ್ಚ ಓಂ (೨-೨-೨)

**ಸೂತ್ರಾರ್ಥ**

[1]ಹಿಂದಿನ ಸೂತ್ರದಲ್ಲಿ ಅರ್ಥಾತ್ ಲಬ್ಧವಾಗಿರುವ 'ಚೇತನಸ್ಯ' ಎಂಬ ಪದವು ಇಲ್ಲಿ ಅನ್ವಯವನ್ನು ಪಡೆಯುವುದು. 'ನ ಅನುಮಾನಂ' ಎಂಬ ಪದಗಳು ಅನುವೃತ್ತಿಗೊಳ್ಳುತ್ತವೆ. 'ದರ್ಶನಾತ್' ಎಂಬ ಪದವು ಶೇಷವಾಗಿದೆ. ಪಟ ಮೊದಲಾದ ವಸ್ತುಗಳ ಸೃಷ್ಟಿಯಲ್ಲಿ ಚೇತನರು ಪ್ರವರ್ತಿಸುವುದು ಕಂಡಿರುವುದರಿಂದಲೂ ಸಾಂಖ್ಯರ ಅನುಮಾನದಿಂದ ಸಿದ್ಧವಾಗುವ ಪ್ರಧಾನವು ಜಗತ್ಕರ್ತೃವಲ್ಲವೆಂದು ಭಾವ. ಪಟಸೃಷ್ಟಿಯ ನಿದರ್ಶನದಿಂದ ಮಹದಾದಿ ತತ್ತ್ವಗಳ ಸೃಷ್ಟಿಯೂ ಚೇತನಾಧೀನವೆಂದು ಅನುಮಾನದಿಂದ ಸುಲಭವಾಗಿ ಸಾಧಿಸಲು ಶಕ್ಯವೆಂದು ಭಾವ.

---

1. ಅಚೇತನಕ್ಕೆ ಸ್ವತಃ ಪ್ರವೃತ್ತಿ ಇಲ್ಲವೆಂದು ಹಿಂದಿನ ಸೂತ್ರದಲ್ಲಿ ಹೇಳಿದೆ. ಇದರಿಂದ ಚೇತನಕ್ಕೆ ಮಾತ್ರ ಸ್ವತಃಪ್ರವೃತ್ತಿ ಇರುವುದೆಂದು ಅರ್ಥಾತ್ ಲಭಿಸುವುದು. ಇಲ್ಲಿ ಅರ್ಥಾತ್ ಲಬ್ಧವಾಗಿರುವ 'ಚೇತನಸ್ಯ' ಎಂಬ ಪದವು ಪ್ರಕೃತಸೂತ್ರದೊಂದಿಗೆ ಅನ್ವಯ ಪಡೆಯುವುದೆಂದು ಭಾವ.

सुशकमिति भावः। तत्त्वप्रदीपे तु चेतनस्यापि निर्विकारस्य न प्रवृत्तिरित्यत आह—प्रवृत्तेश्च। योऽहमनुभविता स एष कार्यमारभ इति चेतनस्य प्रवृत्तेरनुभवादित्युक्तम्।

जडत्वान्न कर्तृ प्रधानमित्युक्तमाक्षिप्याह—

## ॥ ॐ पयोम्बुवच्चेत्तत्राऽपि ॐ ॥ २-२-३

अपीत्यनेन चेतनप्रवृत्तेर्दर्शनादित्याकृष्यते। अनुमानं न कर्त्रित्यस्ति। यथा पयः क्षीरं स्वतो दध्यात्मना परिणमते। यथा वा जलं स्वतो गच्छति तथाऽनुमानं कर्त्रिति चेन्न। तत्रापि पयोम्ब्वादावपीशाख्यचेतनप्रवृत्तेर्दर्शनात् "एतेन ह वाव पयो मण्डं भवति।

---

**ತತ್ತ್ವಪ್ರದೀಪರೀತ್ಯಾ ವ್ಯಾಖ್ಯಾನಾಂತರ**

ತತ್ತ್ವಪ್ರದೀಪದಲ್ಲಾದರೋ—"ನಿರ್ವಿಕಾರನಾದ ಚೇತನನಿಗೂ ಜಡದಂತೆ ಪ್ರವೃತ್ತಿಯಿಲ್ಲವೆಂಬ ಆಕ್ಷೇಪವನ್ನು 'ಪ್ರವೃತ್ತೇಶ್ಚ' ಎಂಬ ಸೂತ್ರದಲ್ಲಿ ಪರಿಹರಿಸಲಾಗಿದೆ. 'ಅನುಭವಿಸುವ ನಾನೇ ಕಾರ್ಯವನ್ನು ಆರಂಭಿಸುತ್ತೇನೆ' ಎಂದು ಚೇತನನಿಗೂ ಪ್ರವೃತ್ತಿ ಇರುವ ಅನುಭವವಿರುವುದರಿಂದ ಚೇತನನಿಗೂ ಪ್ರವೃತ್ತಿ ಇದೆ" ಎಂದು ವ್ಯಾಖ್ಯಾನ ಮಾಡಲಾಗಿದೆ.

ಪ್ರಧಾನವು ಜಡವಾದುದರಿಂದ ಕರ್ತೃವಲ್ಲ ಎಂದು ಹೇಳಿದುದನ್ನು ಆಕ್ಷೇಪಿಸಿ ಸಮಾಧಾನ ನೀಡುವ ಸೂತ್ರ—

## ಓಂ ಪಯೋಽಂಬುವಚ್ಚೇತ್ ತತ್ರಾಪಿ ಓಂ (೨-೨-೩)

**ಸೂತ್ರಾರ್ಥ**

'ಅಪಿ' ಪದದ ಸಾಮರ್ಥ್ಯದಿಂದ 'ಚೇತನಪ್ರವೃತ್ತೇಃ ದರ್ಶನಾತ್' ಎಂಬ ಪದಗಳನ್ನು ಹಿಂದಿನ ಸೂತ್ರದಿಂದ ತೆಗೆದುಕೊಳ್ಳಬೇಕು. 'ಅನುಮಾನಂ ನ ಕರ್ತೃ' ಎಂಬ ಪದಗಳೂ ಹಿಂದಿನ ಸೂತ್ರದಿಂದ ಲಭಿಸುವುವು. ಹೇಗೆ, ಪಯಃ–ಕ್ಷೀರವು ತಾನಾಗಿಯೆ ಮೊಸರಾಗಿ ಪರಿಣಮಿಸುವುದೋ, ಅಂತೆಯೇ, ಹೇಗೆ ನೀರು ತಾನಾಗಿಯೆ ಹರಿಯುವುದೋ ಹಾಗೆ ಪ್ರಧಾನವೂ ಜಗತ್ತನ್ನು ಸ್ವತಃ ಸೃಜಿಸಬಹುದು ಎಂದರೆ ಅದು ಸರಿಯಲ್ಲ ತತ್ರಾಪಿ—ಕ್ಷೀರ, ಜಲ ಮೊದಲಾದ ನಿದರ್ಶನಗಳಲ್ಲೂ ಈಶ್ವರನೆಂಬ ಚೇತನನ ಪ್ರವೃತ್ತಿಯು ಇರುವುದೆಂದು 'ಏತೇನ ಹ ವಾವ ಪಯೋ ಮಂಡಂ ಭವತಿ'

एतस्य वाऽक्षरस्य प्रशासने गार्गि प्राच्यो नद्यः स्यन्दन्त” इत्यादा-
वित्यर्थः । ततश्च जडत्वं न व्यभिचारीति भावः । स्वतः परिणामि
पयः, अम्बु तु प्रवृत्तिमात्रे दृष्टान्त इति द्वयोक्तिः ॥

अस्तु श्रुतिबलात्पयोम्बवादावेवम् । अयस्कान्तादिरन्यस्तु
दृष्टान्तः स्यादित्यत आह—

॥ ॐ व्यतिरेकानवस्थितेश्चानपेक्षत्वात् ॐ ॥
२-२-४

प्रकृतेशोऽन्वेति । न ऋते त्वत्क्रियते” इति श्रुत्येशव्यतिरेकेण
कस्यापि कर्मणोऽनवस्थानाच्च न कोऽपि दृष्टान्त इत्यनपेक्षत्वात्

---

'ಏತಸ್ಯ ವಾ ಅಕ್ಷರಸ್ಯ ಪ್ರಶಾಸನೇ ಗಾರ್ಗಿ ಪ್ರಾಚ್ಯೋ ನದ್ಯಃ ಸ್ಯಂದಂತೇ (ಬೃ ೫-೮ ೯) ಇತ್ಯಾದಿ ಶ್ರುತಿಗಳಲ್ಲಿ ದೃಷ್ಟವಾಗಿದೆ ಎಂದು ಅರ್ಥ. ಆದ್ದರಿಂದ ಪ್ರಧಾನವು ಕರ್ತೃವಲ್ಲವೆಂದು ಸಾಧಿಸುವ ಜಡತ್ವಹೇತುವು ವ್ಯಭಿಚಾರಿಯಲ್ಲವೆಂದು ಭಾವ.

ತಾನಾಗಿಯೇ ಪರಿಣಮಿಸುವಿಕೆ ಎಂಬ ಪ್ರವೃತ್ತಿ ವಿಶೇಷಕ್ಕೆ ಕ್ಷೀರದ ದೃಷ್ಟಾಂತ, ಪ್ರವೃತ್ತಿ ಸಾಮಾನ್ಯಕ್ಕೆ ಜಲದ ದೃಷ್ಟಾಂತ ಹೀಗೆ ಎರಡು ದೃಷ್ಟಾಂತಗಳನ್ನು ಇಲ್ಲಿ ಕೊಡಲಾಗಿದೆ.

ಕ್ಷೀರ, ಜಲ ಮೊದಲಾದ ನಿದರ್ಶನಗಳಲ್ಲಿ ಸ್ವತಃ ಪ್ರವೃತ್ತಿ ಇಲ್ಲವೆಂದು ಶ್ರುತಿಯ ಆಧಾರದಿಂದ ಹೇಳುವುದಾದರೆ, ಆಗಲಿ. ಆದರೆ, ಜಡಕ್ಕೂ ಸ್ವತಃ ಪ್ರವೃತ್ತಿ ಇದೆ ಎನ್ನಲು ಸೂಜಿಗಲ್ಲು ಮೊದಲಾದ ಬೇರೆ ವಸ್ತುಗಳು ದೃಷ್ಟಾಂತವಾಗಬಹುದು ಎಂಬ ಆಶಂಕೆಗೆ ಸಮಾಧಾನ—

ಓಂ ವ್ಯತಿರೇಕಾನವಸ್ಥಿತೇಶ್ಚ ಅನಪೇಕ್ಷತ್ವಾತ್ ಓಂ
(೨-೨-೪)

**ಸೂತ್ರಾರ್ಥ**

ಪ್ರಕೃತವಾದ 'ಈಶ' ಪದವು ಇಲ್ಲಿ ಅನ್ವಿತವಾಗುವುದು. 'ನ ಋತೇ ತ್ವತ್ ಕ್ರಿಯತೇ' (ಋ. ೧೦-೧೧೨-೯) ಎಂಬ ಶ್ರುತಿಯಂತೆ ಈಶನಿಲ್ಲದೆ ಯಾವುದೇ ಕ್ರಿಯೆ ನಡೆಯುವುದು ಶಕ್ಯವಿಲ್ಲವಾದುದರಿಂದ ಜಡಕ್ಕೆ ಸ್ವತಃ ಪ್ರವೃತ್ತಿಯನ್ನು ಸಾಧಿಸಲು ಯಾವುದೇ ದೃಷ್ಟಾಂತವಿಲ್ಲ ಹೀಗೆ, ಅನಪೇಕ್ಷತ್ವಾತ್–ಸಜ್ಜನರಿಂದ ಅನಾದರಣೀಯವಾದುದರಿಂದ ಪ್ರಧಾನಕರ್ತೃತ್ವವಾದವು ಉಪಾದೇಯವಲ್ಲವೆಂದು ಅರ್ಥ.

सद्भिरनादरणीयत्वादनुमानकर्तृत्वस्येत्यर्थः । यद्वाऽयस्कान्तादेरपि पूर्वेणैव निरासासम्भवात् कैमुत्येनोक्तार्थं साधयति—व्यतिरेकेति । चेतनप्रवृत्तेरित्यस्ति । ईशव्यतिरेकेण चेतनप्रवृत्तेरप्यनवस्थानान्नानुमानं स्वतः प्रवृत्तिमदिति किमु वाच्यमित्यर्थः । अप्रमाणकं प्रमाणविरुद्धं च तन्मतं नोपादेयमिति भावः ॥ १ ॥

अन्यत्राभावाधिकरणम्—२

## ॥ ॐ अन्यत्राभावाच्च न तृणादिवत् ॐ ॥
## २-२-५

अत्र "न ऋत" इति श्रुतेर्गुणभूतेशपरत्वसम्भवान्न मे प्रागुक्तदोष इति पूर्वाक्षेपेण प्रवृत्तमीशगुणकप्रधानकर्तृमतं निरस्यते । ईशः

---

**ಈ ಸೂತ್ರದ ವ್ಯಾಖ್ಯಾನಾಂತರ**

ಅಥವಾ, ಸೂಜಿಗಲ್ಲು ಮೊದಲಾದ ನಿದರ್ಶನಗಳನ್ನೂ ಹಿಂದಿನ ಸೂತ್ರದಿಂದಲೇ ನಿರಾಕರಿಸಲು ಸಾಧ್ಯವಿರುವುದರಿಂದ, ಕೈಮುತ್ಯನ್ಯಾಯದಿಂದ ಪ್ರಧಾನಕ್ಕೆ ಕರ್ತೃತ್ವವಿಲ್ಲವೆಂದು ಸಾಧಿಸಲು 'ವ್ಯತಿರೇಕ' ಎಂಬ ಸೂತ್ರವು ಬಂದಿದೆ. 'ಚೇತನಪ್ರವೃತ್ತೇಃ' ಎಂಬ ಪದವನ್ನು ಅಧ್ಯಾಹಾರ ಮಾಡಿಕೊಳ್ಳಬೇಕು. ಈಶ್ವರನಿಲ್ಲದೆ ಚೇತನ ಪ್ರವೃತ್ತಿಯೂ ಸಂಭವಿಸಲು ಸಾಧ್ಯವಿಲ್ಲದಿರುವಾಗ ಜಡವಾದ ಪ್ರಧಾನವು ಸ್ವತಃ ಪ್ರವೃತ್ತಿಯುಳ್ಳದ್ದಲ್ಲವೆಂದು ಹೇಳುವುದೇನು ಎಂದು ಅರ್ಥ. ಅಪ್ರಾಮಾಣಿಕವೂ ಪ್ರಮಾಣವಿರುದ್ಧವೂ ಆದ ಸಾಂಖ್ಯಮತವು ಉಪಾದೇಯವಲ್ಲವೆಂದು ಭಾವ.

ಅನ್ಯತ್ರಾಭಾವಾಧಿಕರಣ—೨

## ಓಂ ಅನ್ಯತ್ರಾಭಾವಾಚ್ಚ ನ ತೃಣಾದಿವತ್ ಓಂ (೨-೨-೫)

**ಅಧಿಕರಣ ಪ್ರತಿಪಾದ್ಯ ವಿಷಯ ಮತ್ತು ಸೂತ್ರಾರ್ಥ**

ಈ ಅಧಿಕರಣದಲ್ಲಿ, 'ನ ಋತೇ ತ್ವತ್ಕ್ರಿಯತೇ' ಎಂಬ ಶ್ರುತಿಗೆ ಅಪ್ರಧಾನನಾದ ಈಶ್ವರನಲ್ಲಿ ತಾತ್ಪರ್ಯವನ್ನು ಹೇಳಲು ಸಾಧ್ಯತೆ ಇರುವುದರಿಂದ ಹಿಂದಿನ ಅಧಿಕರಣದಲ್ಲಿ ಹೇಳಿದ ದೋಷ ನನಗಿಲ್ಲ ಎಂದು ಪೂರ್ವಾಧಿಕರಣವನ್ನು ಆಕ್ಷೇಪಿಸಿ ಹೊರಟಿರುವ, ಈಶನಿಗೆ ಅಪ್ರಾಧಾನ್ಯವನ್ನೂ ಪ್ರಕೃತಿಗೇ ಜಗತ್ಕರ್ತೃತ್ವವನ್ನೂ ಹೇಳುವ ಮತವು

प्रकृतस्तत्सृज्यं जगच्च । चोऽनुक्तसमुच्चये । अन्यत्र ईशादन्याधारत्वेन जगतोऽभावात् तत्प्रेरणां विना कस्यापि कार्यस्य सत्त्वाभावादिति यावत् । चशब्दात् प्रकृत्यादिकारणसत्तादेरपीशायत्तत्वाच्च । तृणादीनां पर्जन्य इव नेशोऽनुग्राहकमात्रं किन्तु सर्वस्वतन्त्र एवेत्यर्थः । न हि यदधीनं यत्सत्तादि तत्तस्यानुग्राहकमात्रमिति भावः । भाष्योक्त-श्रुत्यादिना हेतुः सिद्ध इति ध्येयम् । अन्यानधीनत्वेशाधीनत्वयो-र्लाभायैवं विन्यासः ॥ २ ॥

---

ನಿರಾಕರಿಸಲ್ಪಡುವುದು ಈಶ್ವರ ಮತ್ತು ಅವನಿಂದ ಸೃಷ್ಟಿಸಲ್ಪಡುವ ಜಗತ್ತು ಇಲ್ಲಿ ಪ್ರಕೃತವಾಗಿದೆ. 'ಚ' ಶಬ್ದವು ಅನುಕ್ತಸಮುಚ್ಚಯವನ್ನು ಹೇಳುವುದು. ಅನ್ಯತ್ರ–ಈಶ್ವರನನ್ನು ಬಿಟ್ಟು ಮತ್ತೊಂದನ್ನು ಆಧರಿಸಿ, ಅಭಾವಾತ್–ಜಗತ್ತು ಇಲ್ಲದಿರುವುದರಿಂದ ; ಭಗವಂತನ ಪ್ರೇರಣೆ ಇಲ್ಲದೆ ಯಾವ ಕಾರ್ಯವೂ ಸಂಭವಿಸಲಾರದಾದ್ದರಿಂದ ಎಂದು ಭಾವ. 'ಪ್ರಕೃತಿ ಮೊದಲಾದ ಕಾರಣಗಳ ಅಸ್ತಿತ್ವವೂ ಭಗವದಧೀನವಾದ್ದರಿಂದಲೂ ಕೂಡ' ಎಂದು 'ಚ' ಶಬ್ದದಿಂದ ಲಭಿಸುವುದು. ತೃಣ ಮೊದಲಾದವುಗಳಿಗೆ ಮಳೆಯು ಹೇಗೆ ಕೇವಲ ಅನುಗ್ರಾಹಕವೋ ಹಾಗೆ ಈಶನು ಕೇವಲ ಅನುಗ್ರಾಹಕನೊದಲಾಕನಲ್ಲ, ಅವನು ಸರ್ವಸ್ವತಂತ್ರನೆಂದು ಅರ್ಥ. ಯಾವ ವಸ್ತುಗಳ ಅಸ್ತಿತ್ವದವುಗಳೂ ಯಾರಿಗೆ ಅಧೀನವಾಗಿದೆಯೋ ಅವನು ಆ ವಸ್ತುಗಳಿಗೆ ಕೇವಲ ಅನುಗ್ರಾಹಕನಲ್ಲವಷ್ಟೇ ಎಂದು ಭಾವ.

ಈಶ್ವರನನ್ನುಳಿದು ಇನ್ನೊಂದನ್ನು ಆಧರಿಸದಿರುವುದು, ಪ್ರಕೃತ್ಯಾದಿ ಕಾರಣಗಳಿಗೂ ಅಸ್ತಿತ್ವ ಮೊದಲಾದವುಗಳೂ ಈಶಾಧೀನವಾಗಿರುವುದು ಎಂಬ, ಸೂತ್ರದಲ್ಲಿ ಹೇಳಿರುವ ಹೇತುಗಳು ಭಾಷ್ಯದಲ್ಲಿ ಉದಾಹೃತವಾಗಿರುವ [1]ಶ್ರುತ್ಯಾದಿಗಳಿಂದ ಸಿದ್ಧವಾಗುವುವು.

ಪ್ರಕೃತ್ಯಾದಿ ಕಾರಣಗಳು ಈಶಭಿನ್ನನಿಗೆ ಅಧೀನವಾಗಿಲ್ಲ ಮತ್ತು ಈಶಾಧೀನವಾಗಿವೆ ಎಂಬ ಅಂಶಗಳ ಲಾಭಕ್ಕಾಗಿ ಹೀಗೆ ಸೂತ್ರವಿನ್ಯಾಸವನ್ನು ಮಾಡಲಾಗಿದೆ.

---

1. "ಯಚ್ಚ ಕಿಂಚಿತ್ ಜಗತ್ಸರ್ವಂ", (ಮಹಾನಾರಾಯಣೋಪನಿಷತ್), "ಬ್ರಹ್ಮೈವೇದ-ಮಾವಿರಾಸೀತ್" (ಬೃ. ೪–೫–೨), "ಸ ಏವ ಭೂಯೋ ನಿಜವೀರ್ಯಚೋದಿತಾಂ" (ಭಾಗವತ) ಇತ್ಯಾದಿ ಪ್ರಮಾಣಗಳಿಂದ ಎಂದು ಭಾವ.

अभ्युपगमाधिकरणम्—३

## ॥ ॐ अभ्युपगमेऽप्यर्थाभावात् ॐ ॥ २-२-६

अत्र श्रुत्यप्रामाण्यान्न मे प्रागुक्तदोष इति प्राप्तं चार्वाकमतं निरस्यते। नेत्यस्ति। अर्थशब्दो विषयप्रयोजनपरः। त्वदीयशास्त्रस्य सिद्धान्तत्वमुपगम्यते न वा। अन्तेऽस्मदिष्टम्। आद्ये विषयप्रयोजनवत्त्वं नोपेयते उतोपेयते। नाद्यः। अभ्युपगमेऽपि सिद्धान्तत्वाऽभ्युपगमेऽपि तद्व्यापकयोरर्थयोरभावाऽभ्युपगमाद् व्याहत्यापातात्। नान्त्यः, दृष्टादृष्टयोर्विषयप्रयोजनयोरभावान्न युक्तं तन्मतमित्यर्थः ॥ ३ ॥

---

ಅಭ್ಯುಪಗಮಾಧಿಕರಣ—೩

## ಓಂ ಅಭ್ಯುಪಗಮೇಽಪ್ಯರ್ಥಾಭಾವಾತ್ ಓಂ (೨-೨-೬)

**ಈ ಅಧಿಕರಣದ ಉದ್ದೇಶ ಮತ್ತು ಸೂತ್ರಾರ್ಥ**

ಈ ಅಧಿಕರಣದಲ್ಲಿ, ವೇದವೇ ಅಪ್ರಮಾಣವಾದುದರಿಂದ ಹಿಂದಿನ ಅಧಿಕರಣದಲ್ಲಿ ಹೇಳಿದ ದೋಷ ನನಗಿಲ್ಲ ಎಂದು ಹೇಳುವ ಚಾರ್ವಾಕನ ಮತವನ್ನು ನಿರಾಕರಿಸಲಾಗುವುದು 'ನ' ಎಂಬ ಪದವು ಅನುವೃತ್ತವಾಗುವುದು. ಸೂತ್ರದ 'ಅರ್ಥ' ಶಬ್ದವು ವಿಷಯ–ಪ್ರಯೋಜನ ಎಂಬ ಎರಡೂ ಅರ್ಥವನ್ನು ಹೇಳುವುದು. 'ನಿನ್ನ ಶಾಸ್ತ್ರವನ್ನು ಸಿದ್ಧಾಂತವೆಂದು ಒಪ್ಪುವಿಯೋ ಇಲ್ಲವೋ ? ಸಿದ್ಧಾಂತವೆಂದು ಒಪ್ಪುವ ಪಕ್ಷದಲ್ಲಿ ಆ ಸಿದ್ಧಾಂತಕ್ಕೆ ವಿಷಯ–ಪ್ರಯೋಜನಗಳಿವೆ ಎಂದು ಅಂಗೀಕರಿಸುವುದಿಲ್ಲವೋ ಅಥವಾ ಅಂಗೀಕರಿಸುವಿಯೋ ?' ವಿಷಯ–ಪ್ರಯೋಜನಗಳನ್ನು ಒಪ್ಪುವುದಿಲ್ಲವಾದರೆ, ಅಭ್ಯುಪಗಮೇಽಪಿ–ತನ್ನ ಶಾಸ್ತ್ರವನ್ನು ಸಿದ್ಧಾಂತವೆಂದು ಒಪ್ಪಿದರೂ, ಅರ್ಥಾಭಾವಾತ್–ಸಿದ್ಧಾಂತವಾಗಿದ್ದಲ್ಲಿ ಇರಲೇಬೇಕಾಗಿದ್ದ ವಿಷಯ–ಪ್ರಯೋಜನಗಳನ್ನು ಇಲ್ಲವೆಂದು ಒಪ್ಪಿರುವುದರಿಂದ ವ್ಯಾಹತಿ ಬಂದೀತು. ವಿಷಯ–ಪ್ರಯೋಜನಗಳನ್ನು ಅಂಗೀಕರಿಸುವೆನೆಂದು ಹೇಳಲೂ ಚಾರ್ವಾಕನಿಗೆ ಸಾಧ್ಯವಿಲ್ಲ ಏಕೆಂದರೆ ಅವನ ಶಾಸ್ತ್ರಕ್ಕೆ ದೃಷ್ಟವಾದ ವಿಷಯ–ಪ್ರಯೋಜನಗಳಾಗಲೀ ಅಥವಾ ಅದೃಷ್ಟವಾದ ವಿಷಯ–ಪ್ರಯೋಜನಗಳಾಗಲೀ ಇಲ್ಲ. ಆದ್ದರಿಂದ ಚಾರ್ವಾಕಮತವು ಅಯುಕ್ತ ಎಂದು ಅರ್ಥ.

पुरुषाश्माधिकरणम्—४

## ॥ ॐ पुरुषाश्मवदिति चेत्तथापि ॐ ॥ २-२-७

अत्र न प्रागुक्तदोषोऽत्रास्तीति प्राप्तं जीवगुणकप्रधानकर्तृवादं निराचष्टे । नेत्यस्ति । यथा पुरुषस्य चेतनस्य सम्बन्धेन शरीरमश्मानयनादिकर्तृ तद्वत्प्रधानं जीवसम्बन्धात् महदादिकार्यकर्त्रस्त्विति चेत्, तथापि एवमधिकाशङ्कासद्भावेऽपि नोक्तदोषनिस्तारः । "न ऋते" इत्यादिश्रुत्या शरीरप्रवृत्तेरपीशायत्तत्वेन तव दृष्टान्तः साध्यहीन इति भावः ॥

---

ಪುರುಷಾಶ್ಮಾಧಿಕರಣ—೪

## ಓಂ ಪುರುಷಾಶ್ಮವದಿತಿ ಚೇತ್ತಥಾಪಿ ಓಂ (೨-೨-೭)

**ಅಧಿಕರಣದ ಉದ್ದೇಶ**

[1]ಹಿಂದೆ ಹೇಳಿದ ದೋಷ ತನಗಿಲ್ಲವೆಂದು ಪ್ರಸಕ್ತವಾದ, ಜೀವನಿಗೆ ಅಪ್ರಾಧಾನ್ಯವನ್ನೂ ಪ್ರಕೃತಿಗೇ ಜಗತ್ಕರ್ತೃತ್ವವನ್ನೂ ಹೇಳುವ ಮತವನ್ನು ಈ ಅಧಿಕರಣದಲ್ಲಿ ನಿರಾಕರಿಸುವರು.

**ಸೂತ್ರಾರ್ಥ**

'ನ' ಎಂಬ ಪದವನ್ನು ಅಧ್ಯಾಹಾರ ಮಾಡಿಕೊಳ್ಳಬೇಕು. ಹೇಗೆ ಪುರುಷನ ಅಂದರೆ ಚೇತನನ ಸಂಬಂಧದಿಂದಾಗಿ ಶರೀರವು ಕಲ್ಲನ್ನು ತರುವುದೇ ಮೊದಲಾದ ಕ್ರಿಯೆಗಳಲ್ಲಿ ಕರ್ತೃವಾಗಿರುವುದೋ ಹಾಗೆಯೇ ಪ್ರಕೃತಿಯೂ ಜೀವಸಂಬಂಧದಿಂದಾಗಿ ಮಹತತ್ತ್ವ ಮೊದಲಾದ ಜನ್ಯಪದಾರ್ಥಗಳನ್ನು ಸೃಷ್ಟಿಸುವ ಕ್ರಿಯೆಗೆ ಕರ್ತೃವಾಗಿರಬಹುದು ಎಂದರೆ, ತಥಾಪಿ—ಹೀಗೆ ಅಧಿಕ ಆಶಂಕೆ ಇದ್ದರೂ ಹಿಂದೆ ಹೇಳಿದ ದೋಷ ಪರಿಹಾರವಾಗುವುದಿಲ್ಲ. 'ನ ಋತೇ' ಇತ್ಯಾದಿ ಶ್ರುತಿಯ ಆಧಾರದಿಂದ ಶರೀರದ ಪ್ರವೃತ್ತಿಯೂ ಈಶಾಧೀನವಾದುದರಿಂದ ನಿನ್ನ ದೃಷ್ಟಾಂತ [2]ಸಾಧ್ಯರಹಿತವಾಗಿದೆ ಎಂದು ಭಾವ.

---

1. ಕೇವಲ ಅಚೇತನಕ್ಕೆ ಸ್ವತಃ ಪ್ರವೃತ್ತಿ ಅನುಪಪನ್ನವೆಂದೂ, ಕ್ಷೀರ, ಜಲ ಮೊದಲಾದವುಗಳಲ್ಲಿ ಕಾಣುವ ಕ್ರಿಯೆಯೂ ಈಶಾಧೀನವಾದುದರಿಂದ ಅಚೇತನದ ಸ್ವತಃಪ್ರವೃತ್ತಿಗೆ ದೃಷ್ಟಾಂತವೇ ಇಲ್ಲವೆಂದೂ ಹೇಳಿದ ದೋಷಗಳು ಜೀವನ ಸನ್ನಿಧಾನದಿಂದ ಪ್ರಕೃತಿಗೆ ಕರ್ತೃತ್ವವನ್ನು ಹೇಳುವ ನಿರೀಶ್ವರ ಸಾಂಖ್ಯರ ಈ ಏಕದೇಶಮತದಲ್ಲಿ ಇಲ್ಲವೆಂದು ಪೂರ್ವಪಕ್ಷಿಯ ಭಾವ.

2. ಪ್ರಧಾನಕ್ಕೆ ಸ್ವತಂತ್ರ ಕರ್ತೃತ್ವವನ್ನು ಸಾಧಿಸುವ ನಿನ್ನ ಅನುಮಾನದಲ್ಲಿ ದೃಷ್ಟಾಂತವಾದ ಶರೀರವು ಸ್ವತಂತ್ರಕರ್ತೃತ್ವವೆಂಬ ಸಾಧ್ಯರಹಿತವೆಂದು ಭಾವ.

इतश्च साध्यहीन इत्याह—

॥ ॐ अङ्गित्वानुपपत्तेः ॐ ॥ २-२-८

जीवस्य गुणत्वे त्वयोच्यमाने सार्वजनीनस्य शरीरं प्रत्यङ्गित्वस्यानुपपत्तेर्न पुरुषाश्मदृष्टान्तो युक्त इत्यर्थः । प्रागुक्तश्रुतावस्य हैतुकत्वेनानादरादत्र चशब्दाप्रयोगः ॥ ४ ॥

अन्यथानुमित्यधिकरणम्—५

॥ ॐ अन्यथाऽनुमितौ च ज्ञशक्तिवियोगात् ॐ ॥ २-२-९

---

ಈ ಮುಂದಿನ ಕಾರಣದಿಂದಲೂ ದೃಷ್ಟಾಂತವು ಸಾಧ್ಯಹೀನವೆಂದು ಹೇಳಲು ಸೂತ್ರ—

ಓಂ ಅಂಗಿತ್ವಾನುಪಪತ್ತೇಃ ಓಂ (೨-೨-೮)

**ಸೂತ್ರಾರ್ಥ**

ಜೀವನಿಗೆ ಅಪ್ರಾಧಾನ್ಯವನ್ನು ಹೇಳಿದಲ್ಲಿ ಸರ್ವಜನರ ಅನುಭವಸಿದ್ಧವಾದ, ಶರೀರದ ದೃಷ್ಟಿಯಿಂದ ಜೀವನಿಗಿರುವ ಪ್ರಾಧಾನ್ಯವು ಅನುಪಪನ್ನವಾಗುವುದರಿಂದ ಪುರುಷಾಶ್ಮದೃಷ್ಟಾಂತವು ಅಯುಕ್ತವೆಂದು ಅರ್ಥ. ಹಿಂದಿನ ಸೂತ್ರದಲ್ಲಿ ಸಿದ್ಧಾಂತಿಯು ಸೂಚಿಸಿದ 'ನ ಋತೇ' ಇತ್ಯಾದಿ ಶ್ರುತಿಯಲ್ಲಿ ಹೈತುಕನಾದ ಪೂರ್ವಪಕ್ಷಿಗೆ ಆದರವಿಲ್ಲದಿರುವುದರಿಂದ ಈ ಸೂತ್ರದಲ್ಲಿ 'ಚ' ಶಬ್ದವನ್ನು ಪ್ರಯೋಗಿಸಿಲ್ಲ.[1]

ಅನ್ಯಥಾನುಮಿತ್ಯಧಿಕರಣ—೫

ಓಂ ಅನ್ಯಥಾಽನುಮಿತೌ ಚ ಜ್ಞಶಕ್ತಿವಿಯೋಗಾತ್ ಓಂ (೨--೨--೯)

---

1. ಹಿಂದಿನ ಸೂತ್ರದಲ್ಲಿ ಹೇಳಿದ ಯುಕ್ತಿಯ ಸಮುಚ್ಚಯವನ್ನು ಹೇಳಲು ಈ ಸೂತ್ರದಲ್ಲಿ 'ಚ' ಶಬ್ದವಿರಬೇಕಾಗಿತ್ತು ಎಂದು ಆಶಂಕೆ. ಹಿಂದಿನ ಸೂತ್ರದಲ್ಲಿ ಹೇಳಿದ ಯುಕ್ತಿಯು ಶ್ರುತಿರೂಪವಾದುದರಿಂದ ಹೈತುಕನಾದ ಪೂರ್ವಪಕ್ಷಿಗೆ ಶ್ರುತಿಯಲ್ಲಿ ಆದರವಿಲ್ಲದ್ದರಿಂದ ಈ ಸೂತ್ರದಲ್ಲಿ ಹೇಳುವ ಯುಕ್ತಿಯೊಂದೇ ನಿರಾಸಯುಕ್ತಿಯಾಗುವುದರಿಂದ 'ಚ' ಶಬ್ದವಿಲ್ಲವೆಂದು ಭಾವ

अत्र प्रागुक्ताङ्गित्वानुपपत्त्युद्धारेण प्राप्तं जीवप्रधानकर्तृवादं प्रत्याचष्टे । चशब्देनाङ्गित्वानुपपत्तेराकर्षः । अन्यथा प्रागुक्तादन्यथा जीवस्य प्राधान्येन प्रकृतेर्गुणत्वेन पुरुषाश्मदृष्टान्तेनैवानुमितौ चाङ्गित्वानुपपत्तिः । कुतः ? ज्ञशक्तिवियोगात् । जानातीति ज्ञः । इगुपधज्ञाप्रीकिरः कः । ज्ञस्य पुरुषस्य शरीरसम्बन्धे शक्त्यभावात्तदुपसर्जनकपुरुषकर्तृत्वपक्षे तेन विना तत्सम्बन्धे सामर्थ्याभावाद् दृष्टान्ताभावादिति भावः । इतरेत्यत्र श्रुत्यादिप्राप्तं जीवकर्तृत्वम् अत्र तु समयप्राप्तं निरस्यत इति भेदः ॥

---

**ಅಧಿಕರಣ ಪ್ರತಿಪಾದ್ಯ ಪ್ರಮೇಯ ಮತ್ತು ಸೂತ್ರಾರ್ಥ**

ಈ ಅಧಿಕರಣದಲ್ಲಿ, ಹಿಂದಿನ ಸೂತ್ರದಲ್ಲಿ ಹೇಳಿದ 'ಪ್ರಾಧಾನ್ಯಾನುಪಪತ್ತಿ' ಎಂಬ ದೋಷವನ್ನು ಪರಿಹರಿಸಿ ಪ್ರಾಪ್ತವಾಗಿರುವ 'ಜೀವನೇ ಪ್ರಧಾನಕರ್ತೃ' ಎಂಬ ವಾದವನ್ನು ನಿರಾಕರಿಸಲಾಗುವುದು.

ಸೂತ್ರದಲ್ಲಿರುವ 'ಚ' ಶಬ್ದವು 'ಅಂಗಿತ್ವಾನುಪಪತ್ತಿ' ದೋಷವನ್ನು ಇಲ್ಲೂ ಯೋಜಿಸಬೇಕೆಂದು ಸೂಚಿಸುವುದು. ಅನ್ಯಥಾ–ಹಿಂದೆ ಹೇಳಿದುದಕ್ಕಿಂತ ಬೇರೆಯಾಗಿ ಅಂದರೆ ಜೀವನಿಗೇ ಪ್ರಧಾನಕರ್ತೃತ್ವವೆಂದೂ, ಪ್ರಕೃತಿಯೇ ಅಪ್ರಧಾನವೆಂದೂ ಪುರುಷಾಶ್ಮದೃಷ್ಟಾಂತದಿಂದಲೇ, ಅನುಮಿತೌ ಚ–ಅನುಮಾನ ಮಾಡಿದರೂ ಕೂಡ 'ಅಂಗಿತ್ವಾನುಪಪತ್ತಿ' ಎಂಬ ದೋಷ ಬರುವುದು. ಏಕೆಂದರೆ, ಜ್ಞಶಕ್ತಿವಿಯೋಗಾತ್– 'ಇಗುಪಧಜ್ಞಾಪ್ರೀಕಿರಃ ಕಃ' (ಪಾ. ಸೂ. ೩–೧–೧೩೫) ಎಂಬ ಸೂತ್ರದ ಪ್ರಕಾರ ಜ್ಞಾಧಾತುವಿಗೆ 'ಕ' ಪ್ರತ್ಯಯವನ್ನು ಸೇರಿಸಿದಾಗ 'ಜಾನಾತೀತಿ ಜ್ಞಃ' ಎಂಬ ವ್ಯುತ್ಪತ್ತಿಯಂತೆ 'ಜ್ಞ' ಶಬ್ದಕ್ಕೆ ಜೀವ ಎಂದು ಅರ್ಥವಾಗುವುದು. ಪ್ರಕೃತಿ ಅಪ್ರಧಾನ, ಜೀವನೇ ಪ್ರಧಾನಕರ್ತೃ ಎಂಬ ವಾದದಲ್ಲಿ 'ಜ್ಞ' ಎಂದರೆ ಪುರುಷನಿಗೆ ಶರೀರಸಂಬಂಧವನ್ನು ಪಡೆಯಲು ಈಶ್ವರನನ್ನು ಬಿಟ್ಟು ಸಾಮರ್ಥ್ಯವೇ ಇಲ್ಲದಿರುವುದರಿಂದ, ದೃಷ್ಟಾಂತವೇ ಇಲ್ಲದಿರುವುದರಿಂದ ಎಂದು ಭಾವ.

**ಇತರವ್ಯಪದೇಶಾಧಿಕರಣ ಮತ್ತು ಈ ಅಧಿಕರಣಗಳಿಗೆ ಭೇದ**

'ಇತರವ್ಯಪದೇಶಾತ್' (ಬ್ರ. ಸೂ. ೨–೧–೨೨) ಎಂಬಲ್ಲಿ ಶ್ರುತಿ ಮೊದಲಾದವುಗಳ ಆಧಾರದಿಂದ ಪ್ರಾಪ್ತವಾದ ಜೀವಕರ್ತೃತ್ವವನ್ನು ನಿರಾಕರಿಸಲಾಗಿದೆ. ಈ ಅಧಿಕರಣದಲ್ಲಾದರೋ ಸಾಂಖ್ಯಸಮಯದಿಂದ ಪ್ರಾಪ್ತವಾಗುವ ಜೀವಕರ್ತೃತ್ವವನ್ನು ನಿರಾಕರಿಸಲಾಗುವುದು ಎಂದು ವ್ಯತ್ಯಾಸವಿದೆ.

*

सामान्यदोषेणापि प्राक्तनसर्वपक्षान्निराह—

॥ ॐ विप्रतिषेधाच्चासमञ्जसम् ॐ ॥ २-२-१०

सर्वश्रुतिस्मृतियुक्तिविरुद्धत्वाच्चानीश्वरमतमसमञ्जसमित्यर्थः ॥ ५ ॥

वैशेषिकाधिकरणम्—६

॥ ॐ महद्दीर्घवद्वा ह्रस्वपरिमण्डलाभ्याम् ॐ ॥ २–२–११

अत्र प्रागुक्तनिरीशमतोक्तदोषोऽत्र नास्तीति प्राप्तं वैशेषिकमतं निरस्यते। पञ्चम्यन्ताद्वतिः। प्रतियोगिनस्तथा निर्देशात्। तत्र तस्येवेत्यस्य प्रायिकत्वात्। षष्ठ्यन्ताद्वतित्वे तु सकाशादिति योज्यम्।

---

ಈ ಹಿಂದಿನ ಎಲ್ಲ ವಾದಗಳನ್ನೂ ಸಮಾನವಾದ ದೋಷದಿಂದ ನಿರಾಕರಿಸಲು ಸೂತ್ರ—

ಓಂ ವಿಪ್ರತಿಷೇಧಾಚ್ಚ ಅಸಮಂಜಸಮ್ ಓಂ (೨-೨-೧೦)

**ಸೂತ್ರಾರ್ಥ**

ಸಕಲ ಶ್ರುತಿ ಸ್ಮೃತಿಯುಕ್ತಿಗಳಿಂದ ವಿರುದ್ಧವಾದುದರಿಂದಲೂ ಕೂಡ ಈಶ್ವರ ವಿರೋಧಿಮತವು ಅಸಮಂಜಸವಾಗಿದೆ.

ವೈಶೇಷಿಕಾಧಿಕರಣ—೬

ಓಂ ಮಹದ್ದೀರ್ಘವದ್ವಾ ಹ್ರಸ್ವಪರಿಮಂಡಲಾಭ್ಯಾಮ್ ಓಂ (೨-೨-೧೧)

**ಅಧಿಕರಣದ ವಿಷಯ**

ಈ ಅಧಿಕರಣದಲ್ಲಿ—ಈಶ್ವರ ವಿರೋಧಿಯಾದ ಹಿಂದಿನ ಮತಗಳಿಗೆ ಹೇಳಿದ ದೋಷವು ತನಗಿಲ್ಲವೆಂದು ಹೇಳುವ ವೈಶೇಷಿಕಮತವನ್ನು ನಿರಾಕರಿಸಲಾಗುವುದು.

**'ಮಹದ್ದೀರ್ಘವತ್' ಎಂಬ ಪದದ ನಿಷ್ಪತ್ತಿ**

'ವತಿ' ಪ್ರತ್ಯಯದ ಅರ್ಥವಾದ ಸಾದೃಶ್ಯದ ಪ್ರತಿಸಂಬಂಧಿಯಾದ ಹ್ರಸ್ವ ಮತ್ತು ಅಣುಪರಿಮಾಣಗಳನ್ನು ಪಂಚಮೀವಿಭಕ್ತ್ಯಂತವಾದ ಪದದಿಂದ ನಿರ್ದೇಶಿಸಿರು

**भावप्रधानोऽयम् । यथा महत्त्वाद्दीर्घत्वाच्च परिमाणाच्चतुरणुकादिकार्यगतं परिमाणं जायते तथा ह्रस्वत्वात्पारिमाण्डल्याच्च परिमाणात् तत्तत्कार्ये परिमाणमुत्पद्येतेत्यर्थः । अन्यथा महत्त्वदीर्घत्वाभ्यामपि नोत्पद्येत । अविशेषादिति वाशब्दार्थः । परिमाणावान्तरजातौ**

ವುದರಿಂದ ಪಂಚಮೀವಿಭಕ್ತ್ಯಂತವಾದ ‘ಮಹದ್ದೀರ್ಘ’ ಶಬ್ದದ ಮೇಲೆ ‘ವತಿ’ ಪ್ರತ್ಯಯವು ಸೇರಿ ‘ಮಹದ್ದೀರ್ಘವತ್’ ಎಂಬ ಪದವಾಗಿದೆ. ಸಪ್ತಮೀ ಮತ್ತು ಷಷ್ಠೀ ವಿಭಕ್ತ್ಯಂತವಾದ ಪದಕ್ಕೇ ‘ವತಿ’ ಪ್ರತ್ಯಯವು ಬರುವುದೆಂದು ಹೇಳುವ [1] ‘ತತ್ರ ತಸ್ಯೇವ’ (ಪಾ. ಸೂ. ೫-೧-೧೧೬) ಎಂಬ ನಿಯಮವು ಸಾಮಾನ್ಯ ನಿಯಮವಾಗಿದ್ದು ‘ಮಹದ್ದೀರ್ಘವತ್’ ಎಂಬ ಪದವು ಅಪವಾದವಾಗಿದೆ. ಷಷ್ಠ್ಯಂತವಾದ ಪದಕ್ಕೇ ‘ವತಿ’ ಪ್ರತ್ಯಯವು ಸೇರುವುದೆಂದಾದಲ್ಲಿ ‘ಸಕಾಶಾತ್’ ಎಂಬ ಪದವನ್ನು [2]ಯೋಜಿಸಿ ಕೊಳ್ಳಬೇಕು. ಇಲ್ಲಿ ‘ಮಹತ್’ ಮತ್ತು ‘ದೀರ್ಘ’ ಪದಗಳು ಭಾವಪ್ರಧಾನ ನಿರ್ದೇಶವಾಗಿದ್ದು ಮಹತ್ತ್ವ, ದೀರ್ಘತ್ವ ಎಂಬ ಅರ್ಥವನ್ನು ನೀಡುತ್ತವೆ.

**ಸೂತ್ರಾರ್ಥ**

ಹೇಗೆ, ಮಹತ್ತ್ವ ಮತ್ತು ದೀರ್ಘತ್ವವೆಂಬ ಪರಿಮಾಣಗಳಿಂದ ಚತುರಣುಕ ಮೊದಲಾದ ಜನ್ಯವಸ್ತುಗಳ ಪರಿಮಾಣವು ಹುಟ್ಟುವುದೋ ಹಾಗೆಯೇ ಹ್ರಸ್ವತ್ವ ಮತ್ತು ಅಣುತ್ವ ಪರಿಮಾಣಗಳಿಂದಲೂ ದ್ವ್ಯಣುಕ ಮೊದಲಾದ ಜನ್ಯವಸ್ತುಗಳಲ್ಲಿ ಪರಿಮಾಣವು ಉತ್ಪನ್ನವಾಗಲಿ ಎಂದು ಅರ್ಥ. ಹ್ರಸ್ವತ್ವ ಪರಿಮಾಣದಿಂದಾಗಲೀ ಅಣುತ್ವ ಪರಿಮಾಣದಿಂದಾಗಲೀ ಯಾವುದೇ ಪರಿಮಾಣವು ಹುಟ್ಟದಿದ್ದಲ್ಲಿ ಮಹತ್ತ್ವ, ದೀರ್ಘತ್ವಗಳಿಂದಲೂ ಯಾವುದೇ ಪರಿಮಾಣವು ಹುಟ್ಟದಿರಲಿ, ವಿಶೇಷವಿಲ್ಲದಿರುವುದರಿಂದ ಎಂದು ಸೂತ್ರದಲ್ಲಿರುವ ‘ವಾ’ ಶಬ್ದದ ಅರ್ಥ. ಹ್ರಸ್ವತ್ವತ್ವ, ಮಹತ್ತ್ವತ್ವ, ದೀರ್ಘತ್ವತ್ವ ಮತ್ತು ಅಣುತ್ವತ್ವ ಎಂದು ವೈಶೇಷಿಕರು ಕಲ್ಪಿಸುವ ಪರಿಮಾಣದ ವಿಭಿನ್ನ ಜಾತಿಗಳ ಅಸ್ತಿತ್ವದಲ್ಲಿ ಯಾವುದೇ ಪ್ರಮಾಣವಿಲ್ಲ. ಆದ್ದರಿಂದ ಸಾವಧಿಕವಾದ ಅಣುತ್ವ, ಮಹತ್ತ್ವಗಳು ಎಲ್ಲೆಡೆಯಲ್ಲಿಯೂ ಇರುವವೆಂದು ಹೇಳಬಹುದು. ಈ ಕಾರಣದಿಂದ ದ್ವ್ಯಣುಕ ಮೊದಲಾದವುಗಳ ಪರಿಮಾಣವೂ ಕೂಡ ತಮಗಿಂತ ನಿಕೃಷ್ಟವಾದ ಪರಿಮಾಣದ ದೃಷ್ಟಿಯಿಂದ ಮಹತ್ ಪರಿಮಾಣವೇ ಆಗಿದೆಯೆಂದು ಹೇಳಬಹುದು. ಹೀಗೆ

1. ‘ತತ್ರ ಇವ’ ಮತ್ತು ‘ತಸ್ಯ ಇವ’ ಎಂಬ ಅರ್ಥಗಳಲ್ಲಿ ‘ವತಿ’ ಪ್ರತ್ಯಯವು ಬರುವುದೆಂದು ಸೂತ್ರಾರ್ಥ.

2. ‘ಮಹತಃ ಸಕಾಶಾತ್’, ‘ದೀರ್ಘಸ್ಯ ಸಕಾಶಾತ್’ ಅಂದರೆ ಮಹತ್ ಪರಿಮಾಣದ ದೆಸೆಯಿಂದ ಮತ್ತು ದೀರ್ಘ ಪರಿಮಾಣದ ದೆಸೆಯಿಂದ ಹೇಗೆ ಮತ್ತೊಂದು ಪರಿಮಾಣವು ಕಾರ್ಯ ದ್ರವ್ಯಗಳಲ್ಲಿ ಹುಟ್ಟುವುದೋ ಎಂದು ‘ಮಹದ್ದೀರ್ಘವದ್ವಾ’ ಎಂಬ ಭಾಗದ ಅರ್ಥ.

**मानाभावेनाणुत्वमहत्त्वादेः सावधिकतया द्व्यणुकादिपरिमाणस्यापि स्वापकृष्टपरिमाणान्महत्त्वेन सारूप्याद्वैजात्येऽपि संख्ययेव द्व्यणुकादि-परिमाणेन तत्कार्ये परिमाणोत्पत्तिसम्भवादिति भावः । एवं द्रव्य-समवायिकारणमपि निरसनीयम् । अत्र महत्त्वदीर्घत्वेत्यादिवाच्ये**

---

ದ್ವ್ಯಣುಕದ ಪರಿಮಾಣವೂ ತ್ರ್ಯಣುಕದ ಪರಿಮಾಣವೂ ಸಜಾತೀಯವಾದ ಮಹತ್ ಪರಿಮಾಣವೇ ಆಗಿರುವುದರಿಂದ ದ್ವ್ಯಣುಕ ಪರಿಮಾಣದಿಂದ ತ್ರ್ಯಣುಕ ಪರಿಮಾಣವು ಹುಟ್ಟಬಹುದು. ದ್ವ್ಯಣುಕದ ಪರಿಮಾಣ ಮತ್ತು ತ್ರ್ಯಣುಕದ ಪರಿಮಾಣಗಳು ವಿಜಾತೀಯವೆಂದೇ ಭಾವಿಸಿದರೂ, ದ್ವ್ಯಣುಕಗಳ ಸಂಖ್ಯೆಯು ಪರಿಮಾಣದ ದೃಷ್ಟಿಯಿಂದ ವಿಜಾತೀಯವಾಗಿದ್ದರೂ ತ್ರ್ಯಣುಕದ ಪರಿಮಾಣಕ್ಕೆ ಕಾರಣವಾಗಬಹುದು ಎಂದು ವೈಶೇಷಿಕರೇ ಒಪ್ಪಿರುವಂತೆ ವಿಜಾತೀಯವಾದ ದ್ವ್ಯಣುಕ ಪರಿಮಾಣದಿಂದ ತ್ರ್ಯಣುಕ ಪರಿಮಾಣವು ಹುಟ್ಟಬಹುದೆಂದು [1]ಭಾವ. ಹೀಗೆಯೇ ದ್ರವ್ಯಸಮವಾಯಿ ಕಾರಣವನ್ನು ನಿರಾಕರಿಸತಕ್ಕದ್ದು.

### ಸೂತ್ರದಲ್ಲಿ 'ಮಹತ್' ಇತ್ಯಾದಿ ಪದಪ್ರಯೋಗದ ಮತ್ತು ಎರಡು ದೃಷ್ಟಾಂತಗಳನ್ನು ನೀಡಿರುವುದರ ಸಮರ್ಥನೆ.

ಸೂತ್ರದಲ್ಲಿ 'ಮಹತ್ತ್ವ', 'ದೀರ್ಘತ್ವ' ಮೊದಲಾದ ಪದಗಳನ್ನೇ ಪ್ರಯೋಗಿಸಬೇಕಿದ್ದರೂ 'ಪ್ರಚಯವಿಶೇಷಾಚ್ಚ ಮಹತ್' (ವೈ. ಸೂ. ೭-೧-೯) ಎಂಬ ಕಾಣಾದಸೂತ್ರವನ್ನನುಸರಿಸಿ 'ಮಹತ್', 'ದೀರ್ಘ' ಇತ್ಯಾದಿ ಪದಗಳನ್ನು [2]ಪ್ರಯೋಗಿಸಲಾಗಿದೆ. ಹ್ರಸ್ವತ್ವ ಮತ್ತು ಪರಿಮಂಡಲ ಅಂದರೆ ಅಣು

---

1. ವೈಶೇಷಿಕಮತದಲ್ಲಿ ಪರಿಮಾಣವು ಒಂದು ಗುಣ. ಅದು ಅಣುತ್ವ, ಮಹತ್ತ್ವ, ದೀರ್ಘತ್ವ, ಹ್ರಸ್ವತ್ವಗಳೆಂದು ನಾಲ್ಕು ಬಗೆಯಾಗಿದೆ. ಈ ನಾಲ್ಕು ಬಗೆಯ ಪರಿಮಾಣಗಳೂ ಅಣುತ್ವತ್ವ, ಮಹತ್ತ್ವತ್ವ, ದೀರ್ಘತ್ವತ್ವ ಮತ್ತು ಹ್ರಸ್ವತ್ವತ್ವಗಳೆಂಬ ನಾಲ್ಕು ವಿಭಿನ್ನಜಾತಿಗಳನ್ನು ಪಡೆದಿವೆ. ಕಪಾಲಪರಿಮಾಣವು ಘಟದ ಪರಿಮಾಣಕ್ಕೆ ಕಾರಣವಾಗಿರುವುದು ದೃಷ್ಟವಾಗಿರುವುದರಿಂದ ಕಾರಣದ ಪರಿಮಾಣವು ಕಾರ್ಯದ ಪರಿಮಾಣಕ್ಕೆ ಕಾರಣ. ಆದರೆ, ಸಜಾತೀಯವಾದ ಪರಿಮಾಣಗಳಲ್ಲೇ ಕಾರ್ಯಕಾರಣಭಾವವಿರುವುದೆಂದು ವೈಶೇಷಿಕರ ಸಿದ್ಧಾಂತ. ಆದ್ದರಿಂದ ದ್ವ್ಯಣುಕದ ಅಣುಪರಿಮಾಣವು ತ್ರ್ಯಣುಕದ ಮಹತ್ ಪರಿಮಾಣಕ್ಕೆ ಕಾರಣವಲ್ಲವೆಂದೂ, ಮೂರು ದ್ವ್ಯಣುಕಗಳು ಸೇರಿ ತ್ರ್ಯಣುಕದ ನಿರ್ಮಾಣವಾಗುವುದರಿಂದ ದ್ವ್ಯಣುಕದ ಸಂಖ್ಯೆಯೇ ತ್ರ್ಯಣುಕದ ಪರಿಮಾಣಕ್ಕೆ ಕಾರಣವೆಂದೂ ಅವರ ಅಭಿಮತ. ವೈಶೇಷಿಕರ ಈ ಸಿದ್ಧಾಂತವನ್ನು ಇಲ್ಲಿ ಖಂಡಿಸಲಾಗಿದೆ.

2. ಪ್ರಚಯದಿಂದ ಎಂದರೆ ಸಂಯೋಗವಿಶೇಷದಿಂದ ಮಹತ್‌ಪರಿಮಾಣವು ಹುಟ್ಟುವುದೆಂದು ಕಾಣಾದ ಸೂತ್ರದ ಅರ್ಥ. ಇಲ್ಲಿ ಮಹತ್ತ್ವ ಎಂಬರ್ಥದಲ್ಲಿ ಮಹತ್‌ಪದವನ್ನು ಪ್ರಯೋಗಿಸಿರುವಂತೆ ಬಾದರಾಯಣ ಸೂತ್ರದಲ್ಲಿ 'ಮಹತ್' ಮೊದಲಾದ ಪದಗಳನ್ನೇ ಪರಿಮಾಣವಾಚಕವನ್ನಾಗಿ ಪ್ರಯೋಗಿಸಲಾಗಿದೆ ಎಂದು ಭಾವ.

महदित्यादिनिर्देशस्तु "प्रचयविशेषाच्च महत्" इति काणादसूत्रानुसारादिति ध्येयम् । दार्ष्टान्तिकस्य द्वित्वाद्वा विषयव्याप्त्यर्थं वा परोपेतपरिमाणचतुष्कमप्रामाणिकमिति सूचयितुं वा दृष्टान्तद्वयोक्तिः ॥

असमवायिकारणं निरस्य निमित्तं निरस्यति—

## ॥ ॐ उभयथाऽपि न कर्मातस्तदभावः ॐ ॥

## २-२-१२

उभयथाऽपि ईश्वरेच्छाया नित्यानित्यत्वरूपप्रकारद्वयेऽपि न कर्म परमाणुषु क्रिया न सम्भवति । अतः परमाणुषु क्रियाभावात् तदभावः परिमाणसन्निधापितद्व्यणुकादिकार्याभाव इत्यर्थः । नित्यत्वे लये तस्यां सत्यामणुषु कर्मानुत्पादेन व्यभिचाराद्धेतुत्वं नास्ति ।

---

ಪರಿಮಾಣವೆಂಬ ದಾರ್ಷ್ಟಾಂತಿಕಗಳು ಎರಡಿರುವುದರಿಂದ, ಅಥವಾ, ಪರಿಮಾಣಕ್ಕೆ ಸಂಬಂಧಿಸಿದ ಎಲ್ಲ [1]ವಿಷಯುಗಳನ್ನೂ ಸಂಗ್ರಹಿಸುವ ಸಲುವಾಗಿ, ಅಥವಾ ವೈಶೇಷಿಕರು ಅಂಗೀಕರಿಸಿರುವ ಪರಿಮಾಣದ ನಾಲ್ಕು ಬಗೆ ಅಪ್ರಾಮಾಣಿಕವೆಂದು ಸೂಚಿಸಲು 'ಮಹತ್', 'ದೀರ್ಘ' ಎಂಬ ಎರಡು ದೃಷ್ಟಾಂತಗಳನ್ನು ನೀಡಲಾಗಿದೆ.

ಅಸಮವಾಯಿಕಾರಣವನ್ನು ನಿರಾಕರಿಸಿ ನಿಮಿತ್ತಕಾರಣವನ್ನೂ ನಿರಾಕರಿಸಲು ಸೂತ್ರ—

## ಓಂ ಉಭಯಥಾಽಪಿ ನ ಕರ್ಮಾತಸ್ತದಭಾವಃ ಓಂ

## (೨-೨-೧೨)

**ಸೂತ್ರಾರ್ಥ**

ಉಭಯಥಾಽಪಿ—ಈಶ್ವರೇಚ್ಛೆ ನಿತ್ಯವಾದುದು ಅಥವಾ ಅನಿತ್ಯವಾದುದು ಎಂಬ ಎರಡು ಪ್ರಕಾರಗಳಲ್ಲಿ ಯಾವುದನ್ನೊಪ್ಪಿದರೂ, ನ ಕರ್ಮ–ಪರಮಾಣುಗಳಲ್ಲಿ ಕ್ರಿಯೆ ಸಂಭವಿಸಲಾರದು. ಅತಃ—ಹೀಗೆ ಪರಮಾಣುಗಳಲ್ಲಿ ಕ್ರಿಯೆ ಉತ್ಪತ್ತಿಯಾಗದಿರುವ ಕಾರಣದಿಂದ, ತದಭಾವಃ–ಹಿಂದಿನ ಸೂತ್ರದಲ್ಲಿ ಪರಿಮಾಣದ ಪ್ರಸ್ತಾಪದಿಂದ ಬುದ್ಧಿ ಸನ್ನಿಹಿತವಾಗಿರುವ ದ್ವ್ಯಣುಕಾದಿ ಕಾರ್ಯಗಳೂ ಉತ್ಪನ್ನವಾಗಲಾರವು ಎಂದು ಅರ್ಥ. ಈಶ್ವರೇಚ್ಛೆಯು ನಿತ್ಯವೆಂದೊಪ್ಪಿದರೆ ಪ್ರಲಯದಲ್ಲಿ ಈಶ್ವರೇಚ್ಛೆಯೆಂಬ

---

1. ಅಣು, ಮಹತ್‌ಪರಿಮಾಣಗಳನ್ನು ಮಾತ್ರವಲ್ಲದೆ ಹ್ರಸ್ವತ್ವ, ದೀರ್ಘತ್ವ ಪರಿಮಾಣ ಗಳನ್ನು ನಿರಾಕರಿಸುವ ಸಲುವಾಗಿ ಎಂದು ಭಾವ.

अनित्यत्वे अनवस्थाद्यापातेनोत्पादकाभावादीशेच्छाया हेतुत्वं न युक्तमिति भावः। सिद्धान्ते त्वीशस्य वैदिकत्वान्न दोष इति हृदयम्। उभयथापि तदभावादित्येवोक्तौ कर्माद्यभावेनान्यथासिद्धिं शङ्केत। अतो न कर्मेत्युक्तिः। तस्य इच्छैकहेतुकत्वाददृष्टविलम्बेन कार्यविलम्बाभावात्। उभयथाऽपि न कर्मेत्येव पूर्तौ शेषोक्तिरनिष्टसूचनार्था।

---

ಕಾರಣ ಇದ್ದರೂ ಪರಮಾಣುಗಳಲ್ಲಿ ಕ್ರಿಯೆಯೆಂಬ ಕಾರ್ಯ ಹುಟ್ಟದಿರುವುದರಿಂದ ವ್ಯಭಿಚಾರ ಬರುವುದು. ಆದ್ದರಿಂದ ಈಶ್ವರೇಚ್ಛೆಯು ಪರಮಾಣುಕ್ರಿಯೆಗೆ ಕಾರಣವೆಂದಾಗಲಾರದು. ಈಶ್ವರೇಚ್ಛೆ ಅನಿತ್ಯವೆಂದು ಹೇಳಿದಲ್ಲಿ ಅದಕ್ಕೊಂದು ಕಾರಣ, ಆ ಕಾರಣಕ್ಕೆ ಮತ್ತೊಂದು ಕಾರಣ ಹೀಗೆ ಅನವಸ್ಥಾದಿದೋಷಗಳು ಬರುವ ಪ್ರಸಂಗವಿರುವುದರಿಂದ ಈಶ್ವರೇಚ್ಛೆಯನ್ನು ಉತ್ಪಾದಿಸುವ ಕಾರಣವೇ ಇಲ್ಲ. ಹೀಗೆ ಈಶ್ವರೇಚ್ಛೆಯೇ ಇಲ್ಲದಿರುವಾಗ ಅದಕ್ಕೆ ಪರಮಾಣುಕ್ರಿಯೆಯನ್ನು ಕುರಿತು ಕಾರಣತ್ವವನ್ನು ಹೇಳುವುದು ಯುಕ್ತವಲ್ಲವೆಂದು ಭಾವ. ಸಿದ್ಧಾಂತದಲ್ಲಾದರೋ ಈಶ್ವರನು ವೇದರೂಪಪ್ರಮಾಣದಿಂದ ಸಿದ್ಧನೆಂದು ಹೇಳುವುದರಿಂದ ಯಾವ ದೋಷವೂ ಇಲ್ಲವೆಂದು ಅಂತರಂಗ.

## ಸೂತ್ರರಚನೆಯಲ್ಲಿರುವ ಸ್ವಾರಸ್ಯಾಂಶಗಳು

'ಈಶ್ವರೇಚ್ಛೆ ನಿತ್ಯವಾದರೂ ಅನಿತ್ಯವಾದರೂ ದ್ವ್ಯಣುಕಾದಿ ಕಾರ್ಯಗಳ ಉತ್ಪತ್ತಿಯಾಗಲಾರದು' ಎಂಬ ಅರ್ಥ ಬರುವಂತೆ 'ಉಭಯಥಾಽಪಿ ತದಭಾವಾತ್' ಎಂದಿಷ್ಟೇ ಸೂತ್ರವನ್ನು ರಚಿಸಿದ್ದಲ್ಲಿ ದ್ವ್ಯಣುಕ ಉತ್ಪತ್ತಿಯಾಗದಿರಲು ಪರಮಾಣುಗಳಲ್ಲಿ ಕ್ರಿಯೆಯಿಲ್ಲದಿರುವುದೇ ಕಾರಣ ಹೊರತು ಈಶ್ವರೇಚ್ಛೆಯ ನಿತ್ಯತ್ವಾದಿಗಳಲ್ಲ ಎಂಬ ಅನ್ಯಥಾಸಿದ್ಧಿ ಸಂದೇಹವು ಉದ್ಭವಿಸುತ್ತಿದ್ದಿತು. ಆದ್ದರಿಂದ 'ನ ಕರ್ಮ' ಎಂದು ಹೇಳಲಾಗಿದೆ.[1]

---

1. ನಿರ್ದಿಷ್ಟಕಾರಣವನ್ನುಳಿದು ಬೇರೆಯೇ ಕಾರಣದಿಂದ ಕಾರ್ಯ ಸಂಭವಿಸುವುದು ಎಂಬ ಶಂಕೆ ಅನ್ಯಥಾಸಿದ್ಧಿಶಂಕೆ. ಪ್ರಕೃತ, ದ್ವ್ಯಣುಕ ಉತ್ಪತ್ತಿಯಾಗದಿರಲು ಈಶ್ವರೇಚ್ಛೆಯ ನಿತ್ಯತ್ವ ಅಥವಾ ಅನಿತ್ಯತ್ವ ಕಾರಣವೆಂಬ ಅರ್ಥ ಬರುವಂತೆ 'ಉಭಯಥಾಽಪಿ ತದಭಾವಾತ್' ಎಂದು ಸೂತ್ರ ರಚಿಸಿದ್ದಲ್ಲಿ ದ್ವ್ಯಣುಕ ಉತ್ಪನ್ನವಾಗದಿರಲು ಪರಮಾಣುಕ್ರಿಯೆ ಇಲ್ಲದಿರುವುದೇ ಕಾರಣ ಹೊರತು ನಿರ್ದಿಷ್ಟವಾದ ಈಶ್ವರೇಚ್ಛಾ ನಿತ್ಯತ್ವಾದಿಗಳಲ್ಲ ಎಂಬ ಅನ್ಯಥಾಸಿದ್ಧಿಶಂಕೆ ಬರುತ್ತಿದ್ದಿತು. 'ನ ಕರ್ಮ' ಎಂಬ ಪದಗಳನ್ನು ಸೂತ್ರದಲ್ಲಿ ಸೇರಿಸಿದಲ್ಲಿ ಪರಮಾಣು ಕರ್ಮಾಭಾವದ ಮೂಲಕವೇ ಈಶ್ವರೇಚ್ಛಾ ನಿತ್ಯತ್ವಾದಿಗಳು ದ್ವ್ಯಣುಕಾಭಾವಕ್ಕೆ ಕಾರಣವೆಂದು ಹೇಳಿದಂತಾಗುವುದರಿಂದ ಅನ್ಯಥಾಸಿದ್ಧಿಶಂಕೆಗೆ ಅವಕಾಶವಿಲ್ಲ.

उभयथाऽपि कर्माभावादिति वाच्ये न कर्मात इति भेदेनोक्तिर्लये सत्यामपीशेच्छायां न कर्मातो व्यभिचारः। तदन्यदापि न कर्म अतः कार्याभाव इति सूचयितुम् ॥

समवायिकारणं च निराह—

**॥ ॐ समवायाभ्युपगमाच्च साम्यादनवस्थितेः ॐ ॥**
**२-२-१३**

---

ಪರಮಾಣುಗಳಲ್ಲಿ ಕ್ರಿಯೆ ಉತ್ಪನ್ನವಾಗಲು ಈಶ್ವರೇಚ್ಛೆಯೊಂದೇ ಕಾರಣವೆಂದು ವೈಶೇಷಿಕರ ಸಿದ್ಧಾಂತ. ಆದ್ದರಿಂದ ಇತರ ಕಾರ್ಯಗಳ ಉತ್ಪತ್ತಿಯ ವಿಷಯದಲ್ಲಿ 'ಅದೃಷ್ಟವೆಂಬ ಕಾರಣವಿಲ್ಲದ್ದರಿಂದ ಕಾರ್ಯ ಉತ್ಪನ್ನವಾಗಿಲ್ಲ' ಎಂದು ಹೇಳುವಂತೆ ಪರಮಾಣುಕ್ರಿಯೆ ಉತ್ಪನ್ನವಾಗದಿರಲು ಅದೃಷ್ಟರೂಪ ಕಾರಣವಿಲ್ಲದಿರುವುದೇ ಹೇತು ಎಂದು ಹೇಳಲು ಸಾಧ್ಯವಿಲ್ಲ. 'ಉಭಯಥಾಪಿ ನ ಕರ್ಮ' ಎಂದಿಷ್ಟೇ ಸಾಕಾಗಿದ್ದರೂ ಉಳಿದ ಭಾಗವನ್ನು ಹೇಳಿರುವುದು ಪರಮಾಣುಗಳಲ್ಲಿ ಕ್ರಿಯೆ ಉತ್ಪನ್ನವಾಗದಿದ್ದಲ್ಲಿ ಉಂಟಾಗುವ ಅನಿಷ್ಟವನ್ನು ಸೂಚಿಸಲು. 'ಉಭಯಥಾಪಿ ಕರ್ಮಾಭಾವಾತ್' ಎಂದು ಹೇಳಬಹುದಾಗಿತ್ತು. ಆದರೂ, ಪ್ರಲಯದಲ್ಲಿ ಈಶ್ವರೇಚ್ಛೆ ಇದ್ದರೂ ಪರಮಾಣುಗಳಲ್ಲಿ ಕ್ರಿಯೆಯಿಲ್ಲ. ಆದ್ದರಿಂದ ಪರಮಾಣುಕ್ರಿಯೆಗೂ ಈಶ್ವರೇಚ್ಛೆಗೂ ಹೇಳುವ ಕಾರ್ಯಕಾರಣಭಾವವು ವ್ಯಭಿಚರಿತವಾಗುವುದು. ಹೀಗೆ ವ್ಯಭಿಚಾರದೋಷವಿರುವುದರಿಂದಲೇ ಪ್ರಲಯಕಾಲಕ್ಕಿಂತ ವ್ಯತಿರಿಕ್ತವಾದ ಕಾಲದಲ್ಲೂ ಈಶ್ವರೇಚ್ಛೆಯಿಂದಾಗಿ ಪರಮಾಣುಗಳಲ್ಲಿ ಕ್ರಿಯೆಯುಂಟಾಗಲಾರದು. ಆದ್ದರಿಂದ ದ್ವ್ಯಣುಕವೆಂಬ ಕಾರ್ಯದ ಉತ್ಪತ್ತಿಯಾಗಲಾರದು' ಎಂಬ ಅರ್ಥವನ್ನು ಸೂಚಿಸಲು 'ನ ಕರ್ಮ ಅತಃ' ಎಂದು ಪದಗಳನ್ನು ವಿಂಗಡಿಸಿ [1]ಹೇಳಲಾಗಿದೆ.

ಸಮವಾಯಿಕಾರಣವನ್ನೂ ನಿರಾಕರಿಸಲು ಸೂತ್ರ—

**ಓಂ ಸಮವಾಯಾಭ್ಯುಪಗಮಾಚ್ಚ**
**ಸಾಮ್ಯಾದನವಸ್ಥಿತೇಃ ಓಂ (೨-೨-೧೩)**

---

1. 'ಉಭಯಥಾಪಿ ಕರ್ಮಾಭಾವಾತ್ ತದಭಾವಃ' ಎಂದು ಸೂತ್ರವಿದ್ದಲ್ಲಿ 'ಈಶ್ವರೇಚ್ಛೆ ಮತ್ತು ಪರಮಾಣುಕ್ರಿಯೆಗಳ ಕಾರ್ಯಕಾರಣಭಾವಕ್ಕೆ ವ್ಯಭಿಚಾರವಿರುವುದರಿಂದ ಪ್ರಲಯೇತರ ಕಾಲದಲ್ಲೂ ಈಶ್ವರೇಚ್ಛೆಯಿಂದ ಪರಮಾಣುಕ್ರಿಯೆಯಾಗಲು ಸಾಧ್ಯವಿಲ್ಲ' ಎಂಬ ಅರ್ಥವು ಲಭಿಸಲಾರದು. 'ನ ಕರ್ಮ ಅತಃ' ಎಂದು ವಿಂಗಡಿಸಿ ರಚಿಸಿದ್ದರಿಂದ 'ಅತಃ' ಎಂಬುದಕ್ಕೆ 'ವ್ಯಭಿಚಾರದೋಷವಿರುವುದರಿಂದ' ಎಂಬ ಅರ್ಥವನ್ನು ಹೇಳಿ, ಪ್ರಲಯೇತರಕಾಲದಲ್ಲಿ ಈಶ್ವರೇಚ್ಛೆಯು ಪರಮಾಣುಕ್ರಿಯೆಗೆ ಕಾರಣವಲ್ಲವೆಂದು ಹೇಳಲು ವ್ಯಭಿಚಾರವೇ ನಿಮಿತ್ತವೆಂದು ವ್ಯಾಖ್ಯಾನಿಸಬಹುದು ಎಂದು ಭಾವ.

चः समुच्चये । अवयवावयव्यादीनां भिन्नत्वमुपेत्य तेषां समवायाभ्युपगमाच्च तन्मतमसत् । कुतः ? समवायस्यापि समवायिभ्यां भिन्नत्वसाम्यात् । मृद्घटसमवाय इत्यादिविशिष्टबुद्ध्युपपत्तये समवायान्तरापेक्षायां तत्राप्येवं तत्राप्येवमित्यनवस्थानादित्यर्थः । समवायासम्भवान्न परमाण्वादीनां द्रव्यादिकारणत्वं युक्तमिति भावः ॥

एवं कारणत्रयनिरासेन सृष्टिं निरस्य प्रलयं निराचष्टे—

## ॥ ॐ नित्यमेव च भावात् ॐ ॥ २-२-१४

---

**ಸೂತ್ರಾರ್ಥ**

ಸೂತ್ರದಲ್ಲಿ 'ಚ' ಶಬ್ದವು ಸಮುಚ್ಚಯವನ್ನು ಹೇಳುವುದು. ಅವಯವ–ಅವಯವಿಗಳಿಗೆ ಭೇದವನ್ನೊಪ್ಪಿ ಅವುಗಳಿಗೆ ಸಮವಾಯ ಸಂಬಂಧವನ್ನು ಅಂಗೀಕರಿಸಿರುವುದರಿಂದಲೂ ವೈಶೇಷಿಕಮತವು ನಿರ್ದುಷ್ಟವಲ್ಲ. ಏಕೆಂದರೆ, ಅವಯವಿಗೆ ಅವಯವಗಳಿಂದ ಭೇದವಿರುವಂತೆ ಸಮವಾಯಕ್ಕೂ ಸಮವಾಯಿಗಳಿಂದ ಭೇದವಿದೆ ಎಂದು ಅವರ ಸಿದ್ಧಾಂತ. ಈ ಸಾಮ್ಯದಿಂದಾಗಿ, 'ಮೃದ್‌ಘಟಸಮವಾಯಃ' ಅಂದರೆ 'ಮಣ್ಣಿನಲ್ಲಿ ಘಟಸಮವಾಯವಿದೆ' ಇತ್ಯಾದಿಯಾದ ವಿಶಿಷ್ಟವ್ಯವಹಾರವನ್ನು ನಿರ್ವಹಿಸುವ ಸಲುವಾಗಿ ಘಟಸಮವಾಯಕ್ಕೂ ಮಣ್ಣಿಗೂ ಮತ್ತೊಂದು ಸಮವಾಯದ ಅವಶ್ಯಕತೆಯುಂಟಾಗುವುದು. ಆ ಮತ್ತೊಂದು ಸಮವಾಯಕ್ಕೂ ಮಣ್ಣಿಗೂ ಇದರಂತೆಯೇ ಇನ್ನೊಂದು ಸಮವಾಯ, ಅಲ್ಲೂ ಹೀಗೆಯೇ ಎಂದು ಅನವಸ್ಥೆಯುಂಟಾಗುವುದು ಎಂದು ಅರ್ಥ. ಸಮವಾಯವೇ ಹೀಗೆ ಅಸಂಭಾವಿತವಾದ್ದರಿಂದ ಪರಮಾಣುಗಳು ದ್ರವ್ಯ ಮೊದಲಾದವುಗಳನ್ನು ಕುರಿತು ಸಮವಾಯಿಕಾರಣ ಎಂಬುದು ಯುಕ್ತವಲ್ಲ ಎಂದು ಭಾವ.

ಹೀಗೆ ಸಮವಾಯಿಕಾರಣ, ಅಸಮವಾಯಿಕಾರಣ, ನಿಮಿತ್ತಕಾರಣಗಳೆಂಬ ಮೂರು ವಿಧವಾದ ಕಾರಣಗಳನ್ನು ಖಂಡಿಸುವ ಮೂಲಕ ವೈಶೇಷಿಕಮತದ ಸೃಷ್ಟಿಪ್ರಕ್ರಿಯೆಯನ್ನು ನಿರಾಕರಿಸಿ ಪ್ರಲಯವನ್ನು ನಿರಾಕರಿಸಲು ಸೂತ್ರ—

## ಓಂ ನಿತ್ಯಮೇವ ಚ ಭಾವಾತ್ ಓಂ (೨-೨-೧೪)

किञ्चेति चार्थः । ईशेच्छापरमाण्वादिकारणस्य नित्यं भावान्नित्यमेव च कार्यं स्यान्न तु कदाचित्प्रलय इत्येवार्थः । यद्वा समवायस्येत्यस्ति । सत्तासमवायो जनिरिति परैरङ्गीकृतत्वात् समवायस्य च नित्यमेव भावात् सर्वं नित्यं जनिमत्स्यादित्यर्थः । तथाच सृष्टिप्रलयानुपपत्तिरिति भावः ॥

अभ्युपेत्य परमाणुनित्यत्वं तदारम्भवादो दूषितः । इदानीं तु तन्नित्यत्वमेव नेत्याह—

॥ ॐ रूपादिमत्त्वाच्च विपर्ययो दर्शनात् ॐ ॥
२-२-१५

किञ्च पार्थिवादिपरमाणूनां रूपरसादिमत्त्वात् प्रकृतनित्यत्व

---

**ಸೂತ್ರಾರ್ಥ**

'ಚ' ಶಬ್ದಕ್ಕೆ 'ಕಿಂಚ' ಎಂದು ಅರ್ಥ. ಈಶ್ವರನ ಇಚ್ಛೆ, ಪರಮಾಣುಗಳು ಮೊದಲಾದ ಕಾರಣಗಳು ಎಂದೆಂದೂ ಇರುವುದರಿಂದ ಕಾರ್ಯಗಳೂ ಯಾವಾಗಲೂ ಹುಟ್ಟಬೇಕಾಗುವುದು. ಎಂದಿಗೂ ಪ್ರಲಯವಾಗಲಾರದು ಎಂದು 'ಏವ' ಶಬ್ದದ ಅರ್ಥ. ಅಥವಾ 'ಸಮವಾಯಸ್ಯ' ಎಂಬ ಪದವನ್ನು ಅಧ್ಯಾಹಾರಮಾಡಿಕೊಳ್ಳಬೇಕು. 'ಸತ್ತಾಜಾತಿಯ ಸಮವಾಯವೇ ಉತ್ಪತ್ತಿ' ಎಂಬುದಾಗಿ ವೈಶೇಷಿಕರು ಒಪ್ಪಿರುವುದರಿಂದ, ಸಮವಾಯವು ನಿತ್ಯವೇ ಆಗಿರುವುದರಿಂದ ಎಲ್ಲ ವಸ್ತುಗಳೂ ಯಾವಾಗಲೂ ಉತ್ಪತ್ತಿಯುಳ್ಳದ್ದಾಗಬೇಕಾಗುವುದು ಎಂದು ಅರ್ಥ. ಒಟ್ಟನಲ್ಲಿ, ವೈಶೇಷಿಕಮತದಲ್ಲಿ ಸೃಷ್ಟಿ-ಪ್ರಲಯಗಳು ಯುಕ್ತವಲ್ಲ ಎಂದು ಭಾವ.

ವೈಶೇಷಿಕರು ಹೇಳುವ ಪರಮಾಣುಗಳ ನಿತ್ಯತ್ವವನ್ನು ಅಂಗೀಕರಿಸಿ ಪರಮಾಣು ಕಾರಣತಾವಾದವನ್ನು, ಇಲ್ಲಿಯವರೆಗೆ ಖಂಡಿಸಲಾಯಿತು. ಈಗ ಪರಮಾಣುಗಳಿಗೆ ನಿತ್ಯತ್ವವೇ ಇಲ್ಲವೆಂದು ಹೇಳಲು ಸೂತ್ರ—

ಓಂ ರೂಪಾದಿಮತ್ತ್ವಾಚ್ಚ ವಿಪರ್ಯಯೋ
ದರ್ಶನಾತ್ ಓಂ (೨-೨-೧೫)

**ಸೂತ್ರಾರ್ಥ**

ಪಾರ್ಥಿವ ಪರಮಾಣುಗಳೇ ಮೊದಲಾದ ಪರಮಾಣುಗಳಿಗೆ ರೂಪ, ರಸ ಮೊದಲಾದ ಗುಣಗಳಿರುವುದರಿಂದ, ಪ್ರಸ್ತುತವಾದ ನಿತ್ಯತ್ವಕ್ಕೆ ವಿಪರೀತವಾದ

विपर्ययः अनित्यत्वं भवति । यद्रूपादिमत् तदनित्यमिति घटादौ दर्शनादित्यर्थः । भौतिकत्वेन रूपादेर्विशेषणात् नेशादौ व्यभिचारः ॥

अस्तु रूपादिमत्त्वेऽपि नित्यत्वम् । अस्तु वा अनित्यत्वम् । किं बाधकमत आह—

## ॥ ॐ उभयथा च दोषात् ॐ ॥ २-२-१६

उक्तपक्षद्वयेऽपि दोषसत्त्वादित्यर्थः । आद्ये घटादेरपि नित्यतापत्तिः । तत्साम्यस्य अणुष्वप्यनेन हेतुना सुसाधत्वात् । अन्त्येऽणूनामभावेन द्व्यणुकादिकार्याभाव इति भावः ।

---

ಧರ್ಮವು ಅಂದರೆ ಅನಿತ್ಯತ್ವವು ಉಂಟಾಗುವುದು. ಯಾವುದು ರೂಪ ಮೊದಲಾದ ಗುಣಗಳನ್ನು ಪಡೆದಿದೆಯೋ ಅದು ಅನಿತ್ಯವಾದುದು ಎಂಬ ನಿಯಮ ಘಟಾದಿಗಳಲ್ಲಿ ಅನುಭವಸಿದ್ಧವಾಗಿರುವುದರಿಂದ ಎಂದು ಅರ್ಥ. ಅನಿತ್ಯತ್ವಸಾಧಕವಾದ ರೂಪಾದಿಗಳಿಗೆ ಭೌತಿಕತ್ವವೆಂಬ ವಿಶೇಷಣವನ್ನು ಸೇರಿಸುವುದರಿಂದ ಈಶ್ವರ ಮೊದಲಾದವರಲ್ಲಿ ವ್ಯಭಿಚಾರವಿಲ್ಲ[1]

ರೂಪಾದಿಗಳಿದ್ದರೂ ಪರಮಾಣುಗಳು ನಿತ್ಯವೇ ಆಗಿರಬಹುದು. ಅಥವಾ ಪರಮಾಣುಗಳು ಅನಿತ್ಯವೇ ಆಗಿರಲಿ, ಬಾಧಕವೇನು ? ಎಂಬ ಆಶಂಕೆಗೆ ಉತ್ತರ—

## ಓಂ ಉಭಯಥಾ ಚ ದೋಷಾತ್ ಓಂ (೨-೨-೧೬)

**ಸೂತ್ರಾರ್ಥ**

ಉಕ್ತವಾದ ಎರಡೂ ಪಕ್ಷಗಳಲ್ಲಿ ದೋಷವಿರುವುದರಿಂದ ಎಂದು ಅರ್ಥ. ರೂಪಾದಿಗಳಿದ್ದರೂ ಪರಮಾಣುಗಳು ನಿತ್ಯವೇ ಎಂಬ ಮೊದಲನೆಯ ಪಕ್ಷದಲ್ಲಿ ಪರಮಾಣುಗಳಂತೆ ಘಟಾದಿಗಳೂ ನಿತ್ಯವಾಗಬೇಕಾದೀತು. ಏಕೆಂದರೆ, ಇದೇ ರೂಪಾದಿಹೇತುವಿನಿಂದಲೇ ಅಣುಗಳಲ್ಲೂ ಘಟಾದಿಗಳ ಸಾಮ್ಯವನ್ನು ಸುಲಭವಾಗಿ

---

1. 'ಯಾವುದು ರೂಪಾದಿಗಳನ್ನು ಪಡೆದಿದೆಯೋ ಅದು ಅನಿತ್ಯ' ಎಂಬ ನಿಯಮಕ್ಕೆ ಈಶ್ವರ ಮೊದಲಾದವರಲ್ಲಿ ವ್ಯಭಿಚಾರವೆಂದು ಶಂಕೆ. 'ಯಾವುದು ಭೌತಿಕರೂಪಾದಿಗಳನ್ನು ಪಡೆದಿದೆಯೋ ಅದು ಅನಿತ್ಯ' ಎಂದು ನಿಯಮದ ಸ್ವರೂಪವಾದುದರಿಂದ ಅಭೌತಿಕವಾದ ರೂಪಾದಿಗಳನ್ನು ಹೊಂದಿರುವ ಈಶ್ವರಾದಿಗಳಲ್ಲಿ ವ್ಯಭಿಚಾರವಿಲ್ಲ ಎಂದು ಸಮಾಧಾನ.

इतश्च तन्मतं निराचष्टे—

## ॥ ॐ अपरिग्रहाच्च अत्यन्तमनपेक्षा ॐ ॥ २-२-१७

परमाण्वारम्भवादस्य श्रुत्यादिपरिग्रहशून्यत्वात् तद्विरुद्धत्वाच्चानपेक्षा अनादरणं युक्तमित्यर्थः ॥ ६ ॥

समुदायाधिकरणम्—७

## ॥ ॐ समुदाय उभयहेतुकेऽपि तदप्राप्तिः ॐ ॥ २-२-१८

---

ಸಾಧಿಸಲು [1]ಶಕ್ಯ. ಅಣುಗಳೂ ಅನಿತ್ಯಗಳೆಂಬ ಎರಡನೆಯ ಪಕ್ಷದಲ್ಲಿ ಅಣುಗಳೇ ಇಲ್ಲದಿರುವಾಗ ದ್ವ್ಯಣುಕಾದಿ ಕಾರ್ಯಗಳು ಇರಲಾರವು ಎಂದು ಭಾವ.

ಈ ಮುಂದಿನ ಕಾರಣದಿಂದಲೂ ವೈಶೇಷಿಕಮತವನ್ನು ನಿರಾಕರಿಸುವ ಸೂತ್ರ—

## ಓಂ ಅಪರಿಗ್ರಹಾಚ್ಚ ಅತ್ಯಂತಮನಪೇಕ್ಷಾ ಓಂ (೨-೨-೧೭)

**ಸೂತ್ರಾರ್ಥ**

ಪರಮಾಣುಕಾರಣತಾವಾದವು ಶ್ರುತ್ಯಾದಿಪ್ರಮಾಣಗಳ ಅಂಗೀಕಾರವನ್ನು ಪಡೆಯದಿರುವುದರಿಂದಲೂ ಶ್ರುತ್ಯಾದಿವಿರುದ್ಧವಾಗಿರುವುದರಿಂದಲೂ ಅನಪೇಕ್ಷಾ— ಆ ವಾದದ ಅನಾದರಣೆಯು ಯುಕ್ತವಾಗಿದೆ ಎಂದು ಅರ್ಥ.

ಸಮುದಾಯಾಧಿಕರಣ—೭

## ಓಂ ಸಮುದಾಯ ಉಭಯಹೇತುಕೇಽಪಿ ತದಪ್ರಾಪ್ತಿಃ ಓಂ (೨-೨-೧೮)

---

1. ಘಟಾದಿಗಳು ಸಾವಯವಗಳು, ಆದರೆ ಪರಮಾಣುಗಳು ನಿರವಯವಗಳು, ಈ ಕಾರಣದಿಂದಾಗಿ ಅಣುಗಳಂತೆ ಘಟಾದಿಗಳು ನಿತ್ಯವಾಗಲಾರವು ಎಂಬ ಶಂಕೆಗೆ ಇದು ಉತ್ತರ. ರೂಪಾದಿಗಳಿರುವುದರಿಂದಲೇ ಘಟಾದಿಗಳಂತೆ ಅಣುಗಳೂ ಸಾವಯವಗಳೇ ಎಂದು ಸಾಧಿಸಲು ಶಕ್ಯ ಎಂದು ಭಾವ.

एवं हैतुकान्निरस्य पाषण्डिषु परमाणुपुञ्जवादिनोर्वैभाषिक-सौत्रान्तिकयोर्मतमत्र नये निरस्यते । उभयेत्यनेकोपलक्षणम् । अपिः एकहेतुकत्वपक्षनिराससूचकः । कालकर्मादिनिमित्तेन क्षणिकोऽणु-हेतुकः समुदायो भवति । न त्ववयवी कश्चिदस्तीति मते समुदायः किमेकाणुहेतुक उतानेकाणुहेतुकः । एकस्मात् समुदाय इत्यस्य व्याहत्यादेराद्योऽयुक्तः । अन्त्येऽपि उभयहेतुके मिलितानेकहेतुके समुदायेऽङ्गीकृते सति तदप्राप्तिस्तस्य समुदायस्याप्राप्तिरनुपपत्ति-रित्यर्थः । अणूनां मेलने सति समुदायस्तस्मिन् सति मेलनमित्य-न्योन्याश्रयादित्यर्थः । विरलानेकहेतुकत्वे तु तादृशाणूनां सदा

---

**ಅಧಿಕರಣವು ನಿರೂಪಿಸುವ ವಿಷಯ ಮತ್ತು ಸೂತ್ರಾರ್ಥ**

ಹೀಗೆ ಹೈತುಕರನ್ನು ನಿರಾಕರಿಸಿ ಪಾಷಂಡಿಗಳಲ್ಲಿ ಪರಮಾಣುಪುಂಜವಾದಿಗಳಾದ ವೈಭಾಷಿಕ–ಸೌತ್ರಾಂತಿಕರ ಮತವನ್ನು ಈ ಅಧಿಕರಣದಲ್ಲಿ ನಿರಾಕರಿಸಲಾಗುವುದು.

'ಉಭಯ' ಪದವು ಅನೇಕ ಎಂಬ ಅರ್ಥವನ್ನು ಲಕ್ಷಣಾವೃತ್ತಿಯಿಂದ ಕೊಡುವುದು. 'ಅಪಿ' ಶಬ್ದವು 'ಒಂದೇ ಅಣುವು ಅಣುಸಮುದಾಯಕ್ಕೆ ಕಾರಣ' ಎಂಬ ಪಕ್ಷದ ಖಂಡನೆಯನ್ನು ಸೂಚಿಸುವುದು. ಕಾಲ, ಕರ್ಮ ಮೊದಲಾದ ನಿಮಿತ್ತಗಳಿಂದಾಗಿ ಅಣುಗಳಿಂದ ಕ್ಷಣಿಕವಾದ ಒಂದು ಸಮುದಾಯವು ಉತ್ಪನ್ನವಾಗುವುದು. ಅವಯವಿ ಎಂಬ ಯಾವುದೇ ವಸ್ತುವಿಲ್ಲ ಎಂಬ ಮತದಲ್ಲಿ ಆ ಸಮುದಾಯವು ಒಂದೇ ಅಣುವಿನಿಂದ ಉಂಟಾಗುವುದೋ ಅಥವಾ ಅನೇಕ ಅಣುಗಳಿಂದ ಉಂಟಾಗುವುದೋ? ಒಂದರಿಂದ ಸಮುದಾಯವು ಹುಟ್ಟುವುದು ಎಂದಲ್ಲಿ ವ್ಯಾಹತಿ ಮೊದಲಾದ ದೋಷಗಳು ಬರುವುದರಿಂದ ಮೊದಲನೆಯ ಪಕ್ಷ ಯುಕ್ತವಲ್ಲ. ಎರಡನೆಯ ಪಕ್ಷದಲ್ಲೂ, ಉಭಯ ಹೇತುಕೇ—ಮಿಲಿತವಾದ ಅನೇಕ ಅಣುಗಳು ಕಾರಣವಾಗಿರುವ, ಸಮುದಾಯೇ—ಸಮುದಾಯವನ್ನು ಅಂಗೀಕರಿಸಿದಲ್ಲಿ, ತದಪ್ರಾಪ್ತಿಃ—ಆ ಸಮುದಾಯಕ್ಕೆ ಅಪ್ರಾಪ್ತಿ ಎಂದರೆ ಅನುಪಪತ್ತಿಯುಂಟಾಗುವುದು ಎಂದು ಅರ್ಥ. ಅಣುಗಳ ಮೇಳನವಾದರೆ ಮಾತ್ರ ಸಮುದಾಯ ಉಂಟಾಗಬಹುದು. ಸಮುದಾಯವಿದ್ದಲ್ಲಿ ಮಾತ್ರ ಮೇಳನವಾಗಬಹುದು—ಹೀಗೆ ಅನ್ಯೋನ್ಯಾಶ್ರಯ ಬರುವುದು ಎಂದು ಅರ್ಥ. ಬಿಡಿಬಿಡಿಯಾದ ಅಣುಗಳು ಅಣುಗಳ ಸಮುದಾಯಕ್ಕೆ ಕಾರಣವೆಂದು ಹೇಳಿದಲ್ಲಿ ಅಂತಹ ಅಣುಗಳು ಯಾವಾಗಲೂ ಇರುವುದರಿಂದ ಸಮುದಾಯವೂ ಯಾವಾಗಲೂ ಇರಬೇಕಾದೀತು. ಅದರ ನಾಶವೇ ಆಗಲಾರದು ಎಂದು ಭಾವ.

सत्त्वात् समुदायोऽपि सदा स्यादिति लयायोगादिति भावः । समुदाये अनेकहेतुकेऽपीति वाच्ये उभयेत्युक्तिः उभाववयवावस्य मेलनस्य तदुभयमिति समुदितानेकत्वरूपमिलितत्वरूपपक्षलाभाय । सङ्ख्याया अवयवे तयप् । द्वित्रिभ्यां तयस्यायज्वा । उभादुदात्तो नित्यमिति स्मृतेः । यद्वोभशब्दपर्यायः अत्रोभयशब्दः । सर्वादिसूत्रकैय्यटे उभादुदात्तो नित्यमिति नित्यग्रहणस्य समासादावुभशब्दस्योभयेत्येव रूपमित्येतदर्थज्ञापकत्वोक्तेः । एवञ्चोभयहेतुकः समुदाय इत्यत्रापि

---

**'ಉಭಯಹೇತುಕೇಽಪಿ' ಎಂಬ ಪದದ ಸ್ವಾರಸ್ಯ ಮತ್ತು ಆ ಪದದ ನಿಷ್ಪತ್ತಿ**

'ಸಮುದಾಯೇ ಅನೇಕಹೇತುಕೇಽಪಿ' ಎಂದೇ ಹೇಳಬಹುದಾಗಿದ್ದಿತು. ಆದರೂ ಉಭೌ ಅವಯವೌ ಅಸ್ಯ ಎಂಬ ವ್ಯುತ್ಪತ್ತಿಯಂತೆ ಉಭಯ ಅಂದರೆ ಎರಡು ಅವಯವಗಳುಳ್ಳ ಮೇಳನ ಎಂದು ಅರ್ಥವಾಗುವುದು. ಹೀಗೆ 'ಮಿಲಿತವಾದ ಅನೇಕ ಅಣುಗಳು ಸಮುದಾಯಕ್ಕೆ ಕಾರಣ' ಎಂಬ ಪಕ್ಷವು ದೊರಕುವುದಕ್ಕಾಗಿ ಅನೇಕ ಹೇತುಕೇಽಪಿ ಎಂಬುದರ ಬದಲು ಉಭಯಹೇತುಕೇಽಪಿ ಎಂದು ಹೇಳಲಾಗಿದೆ.

[1] 'ಸಂಖ್ಯಾಯಾ ಅವಯವೇ ತಯಪ್' (ಪಾ. ಸೂ. ೫–೨–೪೨) [2] 'ದ್ವಿತ್ರಿಭ್ಯಾಂ ತಯಸ್ಯಾಯಜ್ ವಾ' (ಪಾ. ಸೂ. ೫–೨–೪೩) [3] 'ಉಭಾದುದಾತ್ತೋ ನಿತ್ಯಂ' (ಪಾ. ಸೂ. ೫–೨–೪೪) ಎಂಬ ಸೂತ್ರಗಳಿಂದ ಸಂಖ್ಯಾವಾಚಕವಾದ ಉಭಶಬ್ದಕ್ಕೆ ಅವಯವಾರ್ಥದಲ್ಲಿ ತಯಪ್ ಪ್ರತ್ಯಯ ಸೇರಿ ಅದಕ್ಕೆ 'ಆಯಜ್' ಆದೇಶವಾಗಿ ಬಂದಾಗ 'ಉಭಯ' ಎಂದು ರೂಪವಾಗುವುದು. ಅಥವಾ ಇಲ್ಲಿ ಉಭಯಶಬ್ದವು ಉಭಶಬ್ದಕ್ಕೆ ಪರ್ಯಾಯಶಬ್ದವಾಗಿದೆ. ಸರ್ವಾದಿಸೂತ್ರಕ್ಕೆ ಸಂಬಂಧಿಸಿದ ಕೈಯಟ ವ್ಯಾಖ್ಯಾನದಲ್ಲಿ 'ಉಭಾದುದಾತ್ತೋ ನಿತ್ಯಂ' ಎಂಬಲ್ಲಿ ನಿತ್ಯಪದವು ಸಮಾಸ ಮೊದಲಾದವುಗಳಲ್ಲಿ ಉಭಶಬ್ದದ ಸ್ಥಾನದಲ್ಲಿ ಉಭಯವೆಂದೇ ರೂಪವಿರುವುದು ಎಂಬುದಕ್ಕೆ ಜ್ಞಾಪಕವಾಗಿದೆ ಎಂದು ಹೇಳಿರುವುದು ಈ ವಿಷಯದಲ್ಲಿ

---

1. ಸಂಖ್ಯಾವಾಚಕಶಬ್ದದ ಮುಂದೆ ಅವಯವಾರ್ಥದಲ್ಲಿ ತಯಪ್ ಪ್ರತ್ಯಯವು ಬರುವುದೆಂದು ಸೂತ್ರಾರ್ಥ. ಪಂಚತಯಃ ಎಂದು ಉದಾಹರಣೆ.

2. ದ್ವಿ, ತ್ರಿ ಶಬ್ದಗಳಿಗೆ ಅವಯವಾರ್ಥದಲ್ಲಿ ತಯಪ್ ಪ್ರತ್ಯಯಕ್ಕೆ ಅಯಜಾದೇಶವು ವಿಕಲ್ಪವಾಗಿ ಬರುವುದು ಎಂದು ಸೂತ್ರಾರ್ಥ. ದ್ವಯಂ-ದ್ವಿತಯಂ, ತ್ರಯಂ-ತ್ರಿತಯಂ ಎಂದು ಉದಾಹರಣೆ.

3. 'ಉಭ' ಶಬ್ದಕ್ಕೆ ತಯಪ್‌ಸ್ಥಾನದಲ್ಲಿ ಅಯಜಾದೇಶವು ನಿತ್ಯವಾಗಿ ಬರುವುದು ಮತ್ತು ಅದು ಆದ್ಯುದಾತ್ತವಾಗಿರುವುದು.

**मिलितोभयहेतुकः समुदायश्चेदन्योन्याश्रयात् तदप्राप्तिः । विरलोभयहेतुकश्चेत् समुदायः सदा स्यादित्यर्थः । केचित्तु मिलिता विरलाश्चेत्युभये येऽणवस्तदुभयहेतुकेऽपि समुदाये तदप्राप्तिः । तदिति सन्निहितसमुदायो बुद्धिस्थलयश्चोच्यत इति पक्षद्वयस्यापि सूत्र एव निरास इत्यप्याहुः ॥**

ಪ್ರಮಾಣವಾಗಿದೆ. [1]ಆದ್ದರಿಂದ 'ಉಭಯಹೇತುಕಃ ಸಮುದಾಯಃ' ಎಂಬಲ್ಲೊ ಮಿಲಿತವಾದ ಉಭಯಪರಮಾಣುಗಳು ಪರಮಾಣು ಸಮುದಾಯಕ್ಕೆ ಕಾರಣವೆಂದಲ್ಲಿ ಅನ್ಯೋನ್ಯಾಶ್ರಯ ಬರುವುದರಿಂದ ಅಂತಹ ಸಮುದಾಯವು ಅನುಪಪನ್ನವಾಗುವುದು. ವಿರಲವಾದ ಉಭಯ ಪರಮಾಣುಗಳು ಸಮುದಾಯಕ್ಕೆ ಕಾರಣವೆಂದಲ್ಲಿ ಅಂತಹ ಸಮುದಾಯವು ಯಾವಾಗಲೂ ಇರಬೇಕಾಗುವುದು ಎಂದರ್ಥವಾಗುವುದು.

**'ಉಭಯಹೇತುಕ' ಶಬ್ದಕ್ಕೆ ವ್ಯಾಖ್ಯಾನಾಂತರ**

ಕೆಲವರು—ಮಿಲಿತವಾದವು ಹಾಗೂ ವಿರಲವಾದವು ಎಂದು ಅಣುಗಳು ಎರಡು ವಿಧವಾಗಿವೆ ಈ ಉಭಯ ಅಣುಗಳಲ್ಲಿ ಯಾವುದು ಪರಮಾಣು ಸಮುದಾಯಕ್ಕೆ ಕಾರಣವೆಂದು ಅಂಗೀಕರಿಸಿದರೂ 'ತದಪ್ರಾಪ್ತಿ' ಯಾಗುವುದು. ಇಲ್ಲಿ 'ತತ್' ಶಬ್ದವು ಇದೇ ಸೂತ್ರದಲ್ಲಿ ಸನ್ನಿಹಿತವಾಗಿರುವ ಸಮುದಾಯವನ್ನೂ, ಬುದ್ಧಿಸನ್ನಿಹಿತವಾದ ಲಯವನ್ನೂ ಹೇಳುವುದು. ಆದ್ದರಿಂದ ಮಿಲಿತಪರಮಾಣುಗಳು ಕಾರಣವೆಂಬ ಪಕ್ಷ ಮತ್ತು ವಿರಳ ಪರಮಾಣುಗಳು ಕಾರಣವೆಂಬ ಪಕ್ಷ—ಈ ಎರಡೂ ಪಕ್ಷಗಳನ್ನು ಸೂತ್ರದಲ್ಲೇ [2]ನಿರಾಕರಿಸಲಾಗಿದೆ ಎಂದು ಹೇಳುವರು.

1. ಉಭಯಶಬ್ದವು ಅವಯವಾರ್ಥಕ ತಯಪ್ ಪ್ರತ್ಯಯಾಂತ ಶಬ್ದವೆಂದು ಹೇಳಿದಾಗ 'ಉಭೌ ಅವಯವೌ ಅಸ್ಯ ಮೇಳಸಸ್ಯ ತದ್ ಉಭಯಮ್' ಎಂಬ ವಿಗ್ರಹದಂತೆ ಮಿಲಿತವಾದ ಅನೇಕ ಪರಮಾಣುಗಳು ಕಾರಣವಾಗಿರುವ ಸಮುದಾಯವೆಂದು 'ಉಭಯಹೇತುಕ ಸಮುದಾಯ' ಶಬ್ದದ ಅರ್ಥವಾಗುವುದು. ವಿರಲವಾದ ಅನೇಕ ಪರಮಾಣುಗಳು ಕಾರಣವಾಗಿರುವ ಸಮುದಾಯವೆಂಬ ಅರ್ಥವು ಆ ಶಬ್ದದಿಂದ ಬರಲಾರದು. ಉಭಯಶಬ್ದವು ಉಭಶಬ್ದದ ಪರ್ಯಾಯ ಶಬ್ದವೆಂದು ಸ್ವೀಕರಿಸಿದಲ್ಲಿ ಉಭಯಹೇತುಕ ಎಂದರೆ ಅನೇಕಹೇತುಕ ಎಂದಿಷ್ಟೇ ಅರ್ಥವಾಗುವುದು. ಮಿಲಿತ ಅಥವಾ ವಿರಲ ಪರಮಾಣುಗಳ ಜೋಡಣೆಯಿಂದ ಮಿಲಿತ ಅನೇಕ ಪರಮಾಣು ಹೇತುಕವಾದ ಸಮುದಾಯ, ವಿರಲ ಅನೇಕ ಪರಮಾಣುಹೇತುಕಸಮುದಾಯ ಎಂಬ ಎರಡೂ ಪಕ್ಷಗಳು 'ಉಭಯಹೇತುಕ ಸಮುದಾಯ' ಎಂಬ ಪದದಿಂದ ಲಬ್ಧವಾಗುವುವು.

2. ಮಿಲಿತಪರಮಾಣುಗಳು ಪರಮಾಣುಸಮುದಾಯಕ್ಕೆ ಕಾರಣವೆಂಬ ಪಕ್ಷದಲ್ಲಿ ತದಪ್ರಾಪ್ತಿ ಎಂದರೆ ಅನ್ಯೋನ್ಯಾಶ್ರಯದಿಂದಾಗಿ ಸಮುದಾಯದ ಅನುಪಪತ್ತಿ. ವಿರಳ ಪರಮಾಣುಗಳು ಕಾರಣವೆಂಬ ಪಕ್ಷದಲ್ಲಿ ಆ ಸಮುದಾಯವು ಸದಾ ಇರಬೇಕಾಗುವುದರಿಂದ ಲಯದ ಅನುಪಪತ್ತಿ—ಹೀಗೆ ಎರಡೂ ಪಕ್ಷಗಳ ನಿರಾಕರಣೆ ಸೂತ್ರ ಲಭ್ಯವಾಗುವುವು.

उक्तमाक्षिप्याह—

## ॥ ॐ इतरेतरप्रत्ययत्वादिति चेन्नोत्पत्तिमात्र-निमित्तत्वात् ॐ ॥ २-२-१९

इतरसहितमितरदितरेतरत् । तस्य प्रत्ययोऽपेक्षाबुद्धिर्यस्य व्यवहारादेस्तस्य भावस्तत्त्वं तस्मात् । यदुक्तं प्राक् लयायोगोऽन्योन्याश्रय इति च । तन्न । अणुगतानेकत्वसङ्ख्यारूपस्य मदभिमतसमुदायस्य सदा सत्त्वेऽपि तत्प्रतीतिव्यवहारयोरपेक्षाबुद्ध्यधीनत्वात् सामीप्य-हेतुकापेक्षाबुद्ध्यभावेन समुदायप्रतीत्यादेरभावाल्लयाद्युपपत्तिरिति

---

ಹೇಳಿದ ದೋಷವನ್ನು ಆಕ್ಷೇಪಿಸಿ ಸಮಾಧಾನ ನೀಡುವ ಸೂತ್ರ—

## ಓಂ ಇತರೇತರಪ್ರತ್ಯಯತ್ವಾದಿತಿ ಚೇನ್ನ ಉತ್ಪತ್ತಿಮಾತ್ರನಿಮಿತ್ತತ್ವಾತ್ ಓಂ (೨-೨-೧೯)

**ಸೂತ್ರಾರ್ಥ**

[1]ಇತರಸಹಿತವಾದ ಇತರ–ಇತರೇತರ, ಪ್ರತ್ಯಯ ಎಂದರೆ [2]ಅಪೇಕ್ಷಾಬುದ್ಧಿ. ‘ ಇತರೇತರಸ್ಯ ಪ್ರತ್ಯಯಃ ಯಸ್ಯ ತಸ್ಯ ಭಾವಃ ತತ್ತ್ವಂ, ತಸ್ಮಾತ್ ’ ಎಂಬ ವಿಗ್ರಹದಂತೆ ಇತರೇತರಪ್ರತ್ಯಯತ್ವಾತ್ ಎಂದರೆ ‘ ಪರಮಾಣು ಸಮುದಾಯದ ವ್ಯವಹಾರ ಮೊದಲಾದವುಗಳು ಪರಸ್ಪರ ಸಹಿತವಾದ ಪರಮಾಣುಗಳ ಅಪೇಕ್ಷಾಬುದ್ಧಿಯಿಂದ ಉಂಟಾಗುವುದರಿಂದ ’ ಎಂದು ಅರ್ಥ.

ಹಿಂದಿನ ಸೂತ್ರದಲ್ಲಿ, ಪರಮಾಣು ಸಮುದಾಯದ ಲಯವು ಸಂಭವಿಸಲಾರದು, ಅನ್ಯೋನ್ಯಾಶ್ರಯ ಬರುವುದು ಎಂದು ಹೇಳಿದ್ದು ಸರಿಯಲ್ಲ. ನಮ್ಮ ಅಭಿಪ್ರಾಯದಲ್ಲಿ ಅಣುಗಳ ಸಮುದಾಯವೆಂದರೆ ಅವುಗಳ ಅನೇಕತ್ವಸಂಖ್ಯೆಯೇ ಆಗಿದೆ. ಇಂತಹ ಸಮುದಾಯ ಯಾವಾಗಲೂ ಇದ್ದರೂ ಕೂಡ ಅದರ ಪ್ರತೀತಿಯಾಗಲಿ ವ್ಯವಹಾರವಾಗಲಿ ಅಪೇಕ್ಷಾಬುದ್ಧಿ ಇದ್ದಾಗ ಮಾತ್ರ ಉಂಟಾಗುವುವು. ಪರಮಾಣುಗಳಿಗೆ ಪರಸ್ಪರ ಸಾಮೀಪ್ಯವಿದ್ದಾಗ ಮಾತ್ರ ಸಂಭವಿಸುವ ಅಪೇಕ್ಷಾಬುದ್ಧಿ ಲಯಕಾಲದಲ್ಲಿ

---

1. ಒಂದರಿಂದ ಸಹಿತವಾದ ಮತ್ತೊಂದು.

2. ವಸ್ತುಗಳ ಸಂಖ್ಯಾಜ್ಞಾನಕ್ಕೆ ಕಾರಣವಾದ ಅನೇಕ ವಸ್ತುಗಳನ್ನು ಕುರಿತಾದ ‘ ಇದಮೇಕಂ, ಇದಮೇಕಂ ’ ಎಂಬ ತಿಳುವಳಿಕೆ.

चेन्न । विरलाणूनां मिलिताणुरूपसमुदायोत्पत्तिमात्रे निमित्तत्वादपेक्षाबुद्ध्यादौ निमित्तत्वाभावादित्यर्थः । क्षणिकवादे एकैककार्योत्पादनेनैवाणूनां नाशादादौ दर्शनं ततोऽपेक्षाबुद्धिस्ततस्तत्समुदायविषयप्रतीतिव्यवहारावेकत्र सर्वं न युक्तमिति कदापि समुदायप्रतीतिव्यवहारौ न स्यातामिति भावः । इतरेत्याद्युक्तिरपेक्षाबुद्धिस्वरूपोपदर्शनाय । तदप्यन्योन्यसाहित्यरूपसामीप्यहेतुका सेति सूचयितुम् । अभ्युपेत्य चेदमुदितम् ।

वस्तुतो विरलाणुभ्यो मिलिताणुरूपासदृशकार्यजननमेवायुक्तमित्याह—

---

ಇಲ್ಲದಿರುವುದರಿಂದ ಅಣುಸಮುದಾಯದ ಪ್ರತೀತಿಯಾಗಲೀ ವ್ಯವಹಾರವಾಗಲೀ ಉಂಟಾಗದಿರುವುದರಿಂದ ಲಯಾದಿಗಳು ಉಪಪನ್ನವಾಗುವವು—ಎಂದರೆ ಇದು ಸರಿಯಲ್ಲ, ಏಕೆಂದರೆ ವಿರಲಪರಮಾಣುಗಳು ಮಿಲಿತಪರಮಾಣುರೂಪವಾದ ಅಣು ಸಮುದಾಯದ ಉತ್ಪತ್ತಿಗೆ ಕಾರಣವಾಗಬಹುದೇ ಹೊರತು ಆ ಪರಮಾಣುಗಳನ್ನು ಕುರಿತಾದ ಅಪೇಕ್ಷಾಬುದ್ಧಿ ಮೊದಲಾದವುಗಳಿಗೆ ಕಾರಣವಾಗಲಾರದು ಎಂದು ಅರ್ಥ. ಕ್ಷಣಿಕವಾದದಲ್ಲಿ, ಒಂದೊಂದು ಕಾರ್ಯವನ್ನು ಉತ್ಪಾದಿಸಿದ ಕೂಡಲೆ ಅಣುಗಳು ನಾಶವಾಗುವವು. ಆದ್ದರಿಂದ, ಮೊದಲು ಅವುಗಳನ್ನು ನೋಡುವುದು, ಅನಂತರ ಅಪೇಕ್ಷಾಬುದ್ಧಿ, ಅನಂತರ ಆ ಸಮುದಾಯದ ಪ್ರತೀತಿ ವ್ಯವಹಾರಗಳು—ಇವೆಲ್ಲವೂ ಒಂದೇ ಅಣುಗಳ ವಿಷಯದಲ್ಲಿ ಯುಕ್ತವಲ್ಲ. ಆದ್ದರಿಂದ ಅಣುಸಮುದಾಯದ ಪ್ರತೀತಿ–ವ್ಯವಹಾರಗಳು ಎಂದೂ ಆಗಲಾರವು ಎಂದು ಭಾವ.

**'ಇತರೇತರಪ್ರತ್ಯಯತ್ವಾತ್' ಎಂಬ ಪದಪ್ರಯೋಗದ ಪ್ರಯೋಜನ**

ಅಪೇಕ್ಷಾಬುದ್ಧಿ ಎಂದರೇನು ಎಂಬುದನ್ನು ತಿಳಿಸಲು 'ಇತರ' ಇತ್ಯಾದಿ ಪದವನ್ನು ಪ್ರಯೋಗಿಸಲಾಗಿದೆ. ಸಾಮೀಪ್ಯ ಎಂದರೆ ಪರಸ್ಪರ ಜೊತೆಗಿರುವುದೇ ಅಪೇಕ್ಷಾಬುದ್ಧಿಗೆ ಕಾರಣ ಎಂಬುದನ್ನು ಸೂಚಿಸಲು ಅಪೇಕ್ಷಾಬುದ್ಧಿಯ ಸ್ವರೂಪವನ್ನು ಸೂತ್ರದಲ್ಲಿ ತಿಳಿಸಲಾಗಿದೆ.

ಬೌದ್ಧರ ವಾದವನ್ನು ಒಪ್ಪಿಕೊಂಡು ಇದುವರೆಗೆ ವಿಚಾರಮಾಡಲಾಯಿತು. ಆದರೆ, ವಾಸ್ತವಿಕವಾಗಿ, ವಿರಲ ಅಣುಗಳಿಂದ ತಮಗೆ ಸದೃಶವಲ್ಲದ ಮಿಲಿತ ಅಣು ರೂಪವಾದ ಕಾರ್ಯದ ಉತ್ಪತ್ತಿಯೇ ಯುಕ್ತವಲ್ಲ ಎಂದು ಹೇಳುವ ಸೂತ್ರ—

## ॥ ॐ उत्तरोत्पादे च पूर्वनिरोधात् ॐ ॥ २-२-२०

नेत्यस्ति । चः समुच्चये । विसदृशकार्यजनिश्च न युक्तेत्यन्वेति । अवधारणेऽपि वा । उत्तरस्य स्वसदृशकार्यस्योत्पाद एव पूर्वस्य कारणस्य निरोधान्नाशादित्यर्थः । क्षणिकवादे कारणस्य सदृशकार्यजनन एव सामर्थ्यात् तत्कार्यमुत्पाद्य पश्चाद्वैसादृश्यं जनयतीत्येतदप्ययुक्तमिति भावः । सुधायां तूत्पत्तिमात्र एव सदृशकार्योत्पाद एव निमित्तत्वाद्विसदृशकार्ये निमित्तत्वाभावादिति पूर्वसूत्रांशस्यार्थान्तरमुक्त्वोत्तरोत्पादे चेत्यस्य कार्योत्पाद एव पूर्वनाशान्न कार्ये

---

## ಓಂ ಉತ್ತರೋತ್ಪಾದೇ ಚ ಪೂರ್ವನಿರೋಧಾತ್ ಓಂ
## (೨--೨--೨೦)

**ಸೂತ್ರಾರ್ಥ**

'ನ' ಎಂಬ ಪದವು ಅನುವೃತ್ತಿಗೊಳ್ಳುವುದು. 'ಚ' ಶಬ್ದವು ಸಮುಚ್ಚಯವನ್ನು ಹೇಳುವುದು. 'ವಿಸದೃಶವಾದ ಕಾರ್ಯದ ಉತ್ಪತ್ತಿಯೂ ಯುಕ್ತವಲ್ಲ' ಎಂದು ಅನ್ವಿತವಾಗುವುದು. ಅಥವಾ, 'ಚ' ಶಬ್ದವು ಅವಧಾರಣವನ್ನೂ ಹೇಳುವುದು. ಉತ್ತರಸ್ಯ–ತನಗೆ ಸದೃಶವಾದ ಕಾರ್ಯದ, ಉತ್ಪಾದೇ ಏವ–ಉತ್ಪಾದನೆಯಿಂದಲೇ, ಪೂರ್ವಸ್ಯ–ಕಾರಣದ, ನಿರೋಧಾತ್–ನಾಶವಾಗುವುದರಿಂದ ಎಂದು ಅರ್ಥ. ಕ್ಷಣಿಕ ವಾದದಲ್ಲಿ ಕಾರಣವು ತನಗೆ ಸದೃಶವಾದ ಕಾರ್ಯವನ್ನು ಉತ್ಪಾದಿಸುವುದರಲ್ಲೇ ಸಾಮರ್ಥ್ಯವನ್ನು ಪಡೆದಿರುವುದರಿಂದ, ಅಂತಹ ಕಾರ್ಯವನ್ನು ಮೊದಲು ಉತ್ಪಾದಿಸಿ ಅನಂತರ ತನ್ನ ವೈಸಾದೃಶ್ಯವನ್ನು ಅಲ್ಲಿ ಉತ್ಪಾದಿಸುವುದು ಎಂಬ ವಾದವೂ ಅಯುಕ್ತವೆಂದು ಭಾವ.

**ಸುಧಾರೀತ್ಯಾ ವ್ಯಾಖ್ಯಾನಾಂತರ**

ಸುಧಾದಲ್ಲಾದರೋ—ಹಿಂದಿನ ಸೂತ್ರದ 'ಉತ್ಪತ್ತಿಮಾತ್ರನಿಮಿತ್ತತ್ವಾತ್' ಎಂಬ ಅಂಶಕ್ಕೆ—ಉತ್ಪತ್ತಿಮಾತ್ರ ಏವ ನಿಮಿತ್ತತ್ವಾತ್ ಎಂದರೆ ಕಾರಣವು ತನಗೆ ಸದೃಶವಾದ ಕಾರ್ಯವನ್ನು ಉತ್ಪಾದಿಸುವುದರಲ್ಲೇ ನಿಮಿತ್ತವಾಗಿರುವುದರಿಂದ, ತನಗೆ ವಿಸದೃಶವಾದ ಕಾರ್ಯಕ್ಕೆ ನಿಮಿತ್ತವಾಗದಿರುವುದರಿಂದ ಎಂದು ಅರ್ಥಾಂತರವನ್ನು ಹೇಳಿ, 'ಉತ್ತರೋತ್ಪಾದೇ ಚ' ಎಂಬ ಸೂತ್ರಕ್ಕೆ—ಕಾರ್ಯವನ್ನು ಉತ್ಪಾದಿಸಿದ ಕೂಡಲೇ ಕಾರಣವು ನಾಶವಾಗುವುದರಿಂದ ಕಾರ್ಯದಲ್ಲಿ ಕಾರಣವು ಸಂಸ್ಕಾರವನ್ನುಂಟು

संस्काराधायकत्वम् । तेनात्मादिक्षणिकत्ववादे व्याप्त्याद्यनुसन्धातुरेकस्याभावेऽपि पूर्वपूर्वात्मसंस्कारयोगिनामुत्तरात्मनामुत्पत्त्या तर्कादिव्यवहारो युक्त इति न युक्तमित्यर्थान्तरमुक्तम् ॥

प्रतिक्षणोत्पत्तिरेव नेत्याह—

॥ ॐ असति प्रतिज्ञोपरोधो यौगपद्यमन्यथा ॐ ॥
२-२-२१

नेत्यस्ति । उत्तरोत्पाद इति पूर्वेति च प्रतिक्षणमिति योग्यतयाऽन्वेति । न प्रतिक्षणं कार्योत्पत्तिर्युक्ता । कुतः ? किं कारणे नष्टे कार्यमुत्पद्यते विद्यमाने वा । आद्ये असति पूर्वस्मिन्कारणेऽसति कार्योत्पत्तिरित्युक्ते तत्तस्य कार्यमिति प्रतिज्ञाया उपरोधो हानि-

---

ಮಾಡಲಾರದು. ಆದ್ದರಿಂದ, ಕ್ಷಣಿಕವಾದದಲ್ಲೂ ಹಿಂದೆ ತಿಳಿದಿದ್ದ ವ್ಯಾಪ್ತಿ ಮೊದಲಾದವುಗಳನ್ನು ಸ್ಮರಿಸುವ ಒಬ್ಬ ಆತ್ಮನಿಲ್ಲದಿದ್ದರೂ, ಹಿಂದು ಹಿಂದಿನ ಆತ್ಮದ ಸಂಸ್ಕಾರವನ್ನು ಹೊಂದಿರುವ ಮುಂದುಮುಂದಿನ ಆತ್ಮರು ಉತ್ಪನ್ನರಾಗುವುದರಿಂದ ತರ್ಕವೇ ಮೊದಲಾದ ವ್ಯವಹಾರವು ಯುಕ್ತವಾಗಿದೆ—ಎಂಬ ವಾದವು ಯುಕ್ತವಲ್ಲ ಎಂದು ಪ್ರಕೃತಸೂತ್ರಕ್ಕೆ ಅರ್ಥಾಂತರವನ್ನು ಹೇಳಲಾಗಿದೆ.

ಪ್ರತಿಕ್ಷಣದಲ್ಲೂ ಉತ್ಪತ್ತಿ ಎನ್ನುವುದೇ ಇಲ್ಲ ಎಂದು ಹೇಳಲು ಸೂತ್ರ—

ಓಂ ಅಸತಿ ಪ್ರತಿಜ್ಞೋಪರೋಧೋ
ಯೌಗಪದ್ಯಮನ್ಯಥಾ ಓಂ (೨-೨-೨೧)

**ಸೂತ್ರಾರ್ಥ**

'ನ' ಎಂಬ ಪದವು ಅನುವೃತ್ತವಾಗುವುದು. 'ಉತ್ತರೋತ್ಪಾದೇ' 'ಪೂರ್ವ' ಎಂಬ ಪದಗಳೂ ಅನುವೃತ್ತವಾಗುವುವು. ಅನ್ವಯಯೋಗ್ಯವಾದುದರಿಂದ 'ಪ್ರತಿಕ್ಷಣಂ' ಎಂಬ ಪದವು ಅನ್ವಿತವಾಗುವುದು. ಪ್ರತಿಕ್ಷಣವೂ ಕಾರ್ಯೋತ್ಪತ್ತಿಯಾಗುವುದು ಎಂಬುದು ಯುಕ್ತವಲ್ಲ. ಏಕೆಂದರೆ—ಕಾರಣವು ನಾಶವಾದ ಮೇಲೆ ಕಾರ್ಯದ ಉತ್ಪತ್ತಿಯಾಗುವುದೋ ಅಥವಾ ಕಾರಣವು ಇರುವಾಗಲೇ ಕಾರ್ಯೋತ್ಪತ್ತಿಯಾಗುವುದೋ ? ಮೊದಲನೆಯ ಪಕ್ಷದಲ್ಲಿ—ಅಸತಿ ಪೂರ್ವಸ್ಮಿನ್—ಕಾರಣವು ಇಲ್ಲದಿರುವಾಗ ಕಾರ್ಯದ ಉತ್ಪತ್ತಿಯಾಗುವುದು ಎಂದು ಹೇಳಿದಲ್ಲಿ, 'ಅದು ಆ

रित्यर्थः । अतिप्रसङ्गादिति भावः । अन्यथा सति पूर्वस्मिन् उत्तरोत्पाद इत्यन्त्यपक्षे यौगपद्यमविच्छिन्नोत्पत्तिः । कार्याणामिति प्रकृतमन्वेति । स्यादिति शेषः । कारणस्य कार्यक्षणेऽप्यवस्थाने कारणस्य विनाशकाभावेन पुनस्तस्मात् कार्योत्पत्तयः स्युः तेभ्यस्तथेति सर्वकार्यजनिरविच्छिन्ना स्यादिति भावः । यद्वा यस्मिन् क्षणे कारणं तस्मिन्नेव कार्यावस्थानं तत्कार्याणां चैवमिति सर्वकार्याणां सहावस्थानरूपयौगपद्यं स्यादित्यर्थः । पराभिमतत्वादसत्पक्षस्य पूर्वनिर्देशः ।

---

ಕಾರಣದ ಕಾರ್ಯ ' ಎಂಬ ಪ್ರತಿಜ್ಞೆಯು ಉಪರೋಧ ಎಂದರೆ ಹಾನಿಯಾಗುವುದು ಎಂದು ಅರ್ಥ. ಕಾರಣವಿಲ್ಲದಿದ್ದರೂ ಕಾರ್ಯದ ಉತ್ಪತ್ತಿಯಾಗುವುದಾದರೆ ಅತಿ ಪ್ರಸಂಗ ಬರುವುದೆಂದು ಭಾವ. ಅನ್ಯಥಾ—ಕಾರಣವಿದ್ದಾಗಲೇ ಕಾರ್ಯದ ಉತ್ಪತ್ತಿ ಯಾಗುವುದು ಎಂಬ ಎರಡನೆಯ ಪಕ್ಷವನ್ನು ಅಂಗೀಕರಿಸಿದಲ್ಲಿ, ಯೌಗಪದ್ಯಂ— ಕಾರ್ಯಗಳ ಅವಿಚ್ಛಿನ್ನವಾಗಿ ಉತ್ಪತ್ತಿಯು ಉಂಟಾದೀತು. ಇಲ್ಲಿ 'ಕಾರ್ಯಗಳ' ಎಂಬ ಪ್ರಸಕ್ತವಾದ ಪದವನ್ನು ಅನ್ವಯಿಸಲಾಗಿದೆ. 'ಉಂಟಾದೀತು' ಎಂದು ಶೇಷವನ್ನು ಸೇರಿಸಲಾಗಿದೆ. ಕಾರ್ಯವಿರುವ ಕ್ಷಣದಲ್ಲೂ ಕಾರಣವಿರುವುದಾದರೆ ಅಂತಹ ಕಾರಣ ನಾಶವಾಗುವ ಸಂದರ್ಭವೇ ಇಲ್ಲವಾದ್ದರಿಂದ ಪುನಃ ಆ ಕಾರಣದಿಂದ ಕಾರ್ಯಗಳು ಹುಟ್ಟಬೇಕಾದೀತು. ಆ ಕಾರ್ಯಗಳಿಂದಲೂ ಅವುಗಳ ಕಾರ್ಯಗಳು ಹುಟ್ಟಬೇಕಾದೀತು. ಹೀಗೆ ಅವಿಚ್ಛಿನ್ನವಾಗಿ ಎಲ್ಲ ಕಾರ್ಯಗಳ ಉತ್ಪತ್ತಿಯೂ ಆಗಬೇಕಾದೀತು ಎಂದು ಭಾವ.

**'ಯೌಗಪದ್ಯಮನ್ಯಥಾ' ಎಂಬ ಭಾಗಕ್ಕೆ ವ್ಯಾಖ್ಯಾನಾಂತರ**

ಅಥವಾ, ಯಾವ ಕ್ಷಣದಲ್ಲಿ ಕಾರಣವಿದೆಯೋ ಆ ಕ್ಷಣದಲ್ಲೇ ಕಾರ್ಯವೂ ಇರುವುದು, ಆ ಕಾರ್ಯದ ಕಾರ್ಯಗಳೂ ಹಾಗೆಯೇ ಅದೇ ಕ್ಷಣದಲ್ಲಿರುವುವು—ಹೀಗೆ ಎಲ್ಲ ಕಾರ್ಯಗಳಿಗೂ ಯೌಗಪದ್ಯ ಅಂದರೆ ಒಂದೇ ಕಾಲದಲ್ಲಿ ಇರುವಿಕೆ ಉಂಟಾಗ ಲೆಂದು ಅರ್ಥ.

ಕಾರಣ ನಾಶವಾದ ಮೇಲೆ ಕಾರ್ಯ ಹುಟ್ಟುವುದು ಎಂಬ ಅಸತ್‌ಪಕ್ಷವು ಬೌದ್ಧರಿಗೆ ಅಭಿಮತವಾದುದರಿಂದ ಆ ಪಕ್ಷವನ್ನು ಸೂತ್ರದಲ್ಲಿ ಮೊದಲು ನಿರ್ದೇಶಿಸ ಲಾಗಿದೆ.

एवं क्षणिकवादे कार्योत्पत्तिं निरस्य विनाशं च निरस्यति—

## ॥ ॐ प्रतिसंख्याप्रतिसंख्यानिरोधाप्राप्तिरविच्छेदात् ॐ ॥ २-२-२२

प्रतिसंख्या बुद्धिः । तदभावोऽप्रतिसंख्या । बुद्धिपूर्वाबुद्धिपूर्व-विनाशौ प्रतिसंख्याप्रतिसंख्यानिरोधौ । तावेव ससन्तानविनाश-प्रतिक्षणविनाशावुच्येते । तयोरप्राप्तिरनुपपत्तिः । कुतः ? अविच्छेदात् । कार्यजनीनामिति वा कार्याणामिति वा प्रकृतमन्वेति । कारणे सति कार्यं भवत्येवेति नियमाभ्युपगमात् प्रतिक्षणं कार्यमुत्पाद्य नश्यतीति

---

ಹೀಗೆ ಕ್ಷಣಿಕವಾದದಲ್ಲಿ ಕಾರ್ಯಗಳ ಉತ್ಪತ್ತಿಯನ್ನು ಖಂಡಿಸಿ ಕಾರ್ಯಗಳ ನಾಶವನ್ನೂ ನಿರಾಕರಿಸಲು ಬಂದಿರುವ ಸೂತ್ರ—

## ಓಂ ಪ್ರತಿಸಂಖ್ಯಾಽಪ್ರತಿಸಂಖ್ಯಾನಿರೋಧಾಪ್ರಾಪ್ತಿ-ರವಿಚ್ಛೇದಾತ್ ಓಂ (೨-೨-೨೨)

**ಸೂತ್ರಾರ್ಥ**

ಪ್ರತಿಸಂಖ್ಯಾ ಎಂದರೆ ಬುದ್ಧಿ ಅಪ್ರತಿಸಂಖ್ಯಾ ಎಂದರೆ ಬುದ್ಧಿಯ ಅಭಾವ. ಪ್ರತಿಸಂಖ್ಯಾನಿರೋಧವೆಂದರೆ ಬುದ್ಧಿಪೂರ್ವಕವಾದ ವಿನಾಶ, ಅಪ್ರತಿಸಂಖ್ಯಾನಿರೋಧ ವೆಂದರೆ ಬುದ್ಧಿಪೂರ್ವಕವಲ್ಲದ ವಿನಾಶ. ಈ ವಿನಾಶಗಳನ್ನೇ ಬೌದ್ಧಮತದಲ್ಲಿ [1]ಸಸಂತಾನವಿನಾಶ ಮತ್ತು ಪ್ರತಿಕ್ಷಣವಿನಾಶಗಳೆಂದು ಹೇಳುವರು. ಇಂತಹ ವಿನಾಶ ಗಳಿಗೆ ಅಪ್ರಾಪ್ತಿಃ—ಅನುಪಪತ್ತಿಯುಂಟಾಗುವುದು. ಏಕೆಂದರೆ, ಅವಿಚ್ಛೇದಾತ್— 'ಕಾರ್ಯೋತ್ಪತ್ತಿಗಳ' ಅಥವಾ 'ಕಾರ್ಯಗಳ' ಎಂಬ ಪ್ರಸಕ್ತವಾದ ಪದವು ಇಲ್ಲಿ ಅನ್ವಯಹೊಂದುವುದು. ಕಾರಣವಿದ್ದಾಗ ಕಾರ್ಯವು ಆಗಿಯೇ ತೀರುವುದೆಂದು ಬೌದ್ಧರು ಒಪ್ಪಿರುವರು. ಆದುದರಿಂದ ಪ್ರತಿಕ್ಷಣವೂ ಕಾರ್ಯವನ್ನು ಉತ್ಪಾದಿಸಿಯೇ

---

1. ಸಂತಾನವೆಂದರೆ ಪರಂಪರೆ. ಕೋಲೋ ಅಥವಾ ಮತ್ತಾವುದೋ ಸಾಧನದಿಂದ ಮಡಕೆಯನ್ನು ಒಡೆದರೆ ಅದು ಸಸಂತಾನ ವಿನಾಶ. ಏಕೆಂದರೆ ಆ ಮಡಕೆಯೆಂಬ ಕಾರ್ಯದ ಪರಂಪರೆ ಅಲ್ಲಿಗೆ ಕೊನೆಗೊಳ್ಳುತ್ತದೆ. ಇಂತಹ ವಿನಾಶ ಸಾಮಾನ್ಯವಾಗಿ ಬುದ್ಧಿಪೂರ್ವಕವಾಗಿ ನಡೆಯುವುದರಿಂದ ಇದನ್ನು ಪ್ರತಿಸಂಖ್ಯಾನಿರೋಧವೆಂದು ಕರೆಯುವರು. ಬೌದ್ಧಮತದಂತೆ ವಸ್ತುಗಳು ಪ್ರತಿಕ್ಷಣದಲ್ಲೂ ನಾಶವಾಗುವವು. ಪ್ರತಿಯೊಂದು ಮಡಕೆಯೂ ನಾಶವಾಗುವು ದಾದರೂ ಅದರ ಸಂತಾನ ನಾಶವಾಗದೆ ಮುಂದುವರೆಯುವುದರಿಂದ ಇದು ನಿಸ್ಸಂತಾನ ವಿನಾಶ. ಪ್ರತಿಕ್ಷಣ ನಡೆಯುವ ಈ ವಿನಾಶ ಬುದ್ಧಿಪೂರ್ವಕವಲ್ಲವಾದುದರಿಂದ ಇದು ಅಪ್ರತಿಸಂಖ್ಯಾನಿರೋಧ.

वाच्ये उत्पत्तिक्षणस्यैव कार्यवियोगक्षणत्वात् कार्यवियोगकाले कारणं सदेवेति कार्यमुत्पादयेत् । तदुत्पत्त्यनन्तरं चैवमिति कथं त्वदङ्गीकृत-प्रतिक्षणविनाशः स्यात् । तथा सतो हि घटस्यान्तिको नाशः । अतोऽसौ सत्त्वात्कार्यमुत्पादयेदेव । तत्कार्यं चैवमिति कथं त्वदङ्गीकृत-सन्तानोच्छेदः स्यादिति भावः ।

अर्थक्रियाकारित्वरूपसत्त्वान्यथानुपपत्त्या क्षणिकत्वं भावाना-मुपेयमित्यत आह—

## ॥ ॐ उभयथा च दोषात् ॐ ॥ २-२-२३

---

ಕಾರಣವು ನಾಶವಾಗುವುದೆಂದು ಹೇಳಿದಲ್ಲಿ ಕಾರ್ಯದ ಉತ್ಪತ್ತಿ ಕ್ಷಣವೇ ಕಾರ್ಯದ ನಾಶಕ್ಷಣವೂ ಆಗಿರುವುದರಿಂದ ಕಾರ್ಯನಾಶ ಕ್ಷಣದಲ್ಲಿ ಇನ್ನೊಂದು ಕಾರ್ಯ ಹುಟ್ಟಲು ಬೇಕಾದ ಕಾರಣ ಇದ್ದಂತೇ ಆಗುವುದು. ಆದ್ದರಿಂದ ಆ ಕಾರಣವು ತನ್ನ ಕಾರ್ಯ ವನ್ನು ಉತ್ಪಾದಿಸಬೇಕಾಗುವುದು. ಆ ಕಾರ್ಯ ಹುಟ್ಟಿದ ನಂತರವೂ ಕಾರಣವಿರು ವುದರಿಂದ ಹೀಗೆಯೇ ಪುನಃ ಕಾರ್ಯ ಹುಟ್ಟಬೇಕಾಗುವುದು. ಹೀಗಿರುವುದರಿಂದ ನೀನು ಅಂಗೀಕರಿಸಿರುವ ಪ್ರತಿಕ್ಷಣವಿನಾಶ ಹೇಗೆ ಸಂಭವಿಸೀತು? ಅದರಂತೆ, ಇರುವ ಘಟಕ್ಕೇ ಆತ್ಯಂತಿಕ ವಿನಾಶವಾಗಲು ಸಾಧ್ಯ. ಆದ್ದರಿಂದ, ಇರುವ ಆ ಘಟ ತನ್ನ ಕಾರ್ಯವನ್ನು ಉತ್ಪಾದಿಸಲೇ ಬೇಕು. ಉತ್ಪನ್ನವಾದ ಆ ಕಾರ್ಯವೂ ಇರುವುದರಿಂದ ತನ್ನ ಕಾರ್ಯವನ್ನು ಉತ್ಪಾದಿಸಲೇ ಬೇಕು. ಹೀಗಿರುವಾಗ ನೀನೊಪ್ಪಿರುವ ಸಸಂತಾನ ವಿನಾಶ ಹೇಗಾದೀತು? ಎಂದು ಭಾವ.

ಪದಾರ್ಥಗಳು ಸತ್ತ್ವ ಅಂದರೆ [1] ಅರ್ಥಕ್ರಿಯಾಕಾರಿತ್ವವನ್ನು ಪಡೆದಿವೆ. ಅವುಗಳು ಕ್ಷಣಿಕವಲ್ಲದಿದ್ದರೆ ಅರ್ಥಕ್ರಿಯಾಕಾರಿಯಾಗಲಾರವು. ಆದ್ದರಿಂದ ಪದಾರ್ಥ ಗಳೆಲ್ಲವೂ ಕ್ಷಣಿಕವೆಂದೊಪ್ಪಬೇಕು ಎಂಬ ಬೌದ್ಧರ ಶಂಕೆಗೆ ಉತ್ತರ—

## ಓಂ ಉಭಯಥಾ ಚ ದೋಷಾತ್ ಓಂ (೨-೨-೨೩)

---

1. ಸಫಲವಾದ ಪ್ರವೃತ್ತಿಯನ್ನು ಹುಟ್ಟಿಸುವ ಸಾಮರ್ಥ್ಯವೇ ಅರ್ಥಕ್ರಿಯಾಕಾರಿತ್ವ. ಉದಾ—ನೀರು ಅರ್ಥಕ್ರಿಯಾಕಾರಿ. ತೃಷೆಯನ್ನು ತಣಿಸಬೇಕೆಂಬ ನಮ್ಮ ಪ್ರವೃತ್ತಿ ನೀರಿನಿಂದ ಸಫಲವಾಗುವುದು. ಮರುಮರೀಚಿಕೆ ಅರ್ಥಕ್ರಿಯಾಕಾರಿಯಲ್ಲ. ಕಾರಣ ತೃಷೆಯನ್ನು ಪರಿಹರಿಸುವ ನಮ್ಮ ಪ್ರವೃತ್ತಿ ಸಫಲವಾಗುವುದಿಲ್ಲ.

कारणे सति कार्यं भवत्येवेति नियमेऽनियमे चोभयथापि दोषादित्यर्थः । आद्ये कारणस्यापि यावत्कार्यभावित्वात् सव्येतर-गोश्रृङ्गवत् न कार्यकारणभावः । अन्त्ये तत्कालेऽर्थक्रियाभावेनाऽसत्त्वापत्त्या न कदापि ततः कार्यजनिरिति भावः । जलाहरणादि-योग्यतयैव सत्त्वोपपत्तिरिति हृदयम् ।

ननु यत्सत् तत्क्षणिकं यथा दीपादीत्यनुमानात् क्षणिकत्वं भावानामस्त्वित्यत आह—

## ॥ ॐ आकाशे चाविशेषात् ॐ ॥ २-२-२४

दीप इवाकाशे च परिमाणविशेषाभावादित्यर्थः । आकाशे परिमाणविशेषादर्शनेन तस्याक्षणिकत्वं सिद्धमिति तद्दृष्टान्तेन सत्त्व-

---

**ಸೂತ್ರಾರ್ಥ**

ಕಾರಣವಿದ್ದಾಗ ಕಾರ್ಯವಾಗಲೇ ಬೇಕು ಎಂಬ ನಿಯಮವಿರಲಿ ಅಥವಾ ಇಲ್ಲದಿರಲಿ, ಎರಡೂ ಪಕ್ಷದಲ್ಲೂ ದೋಷವಿರುವುದರಿಂದ ಎಂದು ಅರ್ಥ. ನಿಯಮವಿದೆ ಎಂಬ ಮೊದಲನೆ ಪಕ್ಷದಲ್ಲಿ ಕಾರಣವೂ ಕಾರ್ಯವಿರುವವರೆಗೆ ಇರುವುದರಿಂದ, ಹಸುವಿನ ಬಲ ಮತ್ತು ಎಡ ಕೊಂಬುಗಳಂತೆ ಅವುಗಳಿಗೆ ಕಾರ್ಯಕಾರಣಭಾವವೇ ಇರಲಾರದು. ನಿಯಮವಿಲ್ಲ ಎಂಬ ಎರಡನೆಯ ಪಕ್ಷದಲ್ಲಿ—ಕಾರಣವಿದ್ದಾಗ ಕಾರ್ಯ ಉತ್ಪತ್ತಿಯಾಗದಿರುವುದರಿಂದ ಕಾರಣಕ್ಕೆ ಅರ್ಥಕ್ರಿಯಾಕಾರಿತ್ವ ಅಂದರೆ ಸತ್ತ್ವವೇ ಇಲ್ಲವೆಂದಾಯಿತು. ಆದ್ದರಿಂದ, ಆ ಕಾರಣದಿಂದ ಎಂದೂ ಕಾರ್ಯದ ಉತ್ಪತ್ತಿಯಾಗಲಾರದು ಎಂದು ಭಾವ. ಜಲಾಹರಣಾದಿಯೋಗ್ಯತೆ ಇರುವುದರಿಂದ ಘಟಕ್ಕೆ ಸತ್ತ್ವವಿದೆಯೇ ಹೊರತು ಇನ್ನೊಂದು ಘಟವನ್ನು ಉತ್ಪಾದಿಸುವುದರಿಂದ ಅಲ್ಲ ಎಂದು ಅಂತರ್ಯ.

'ಯಾವುದು ಸತ್ಯವೋ ಅದು ಕ್ಷಣಿಕ, ದೀಪದಂತೆ' ಎಂಬ ಅನುಮಾನ ಪ್ರಮಾಣದಿಂದ ಪದಾರ್ಥಗಳಿಗೆ ಕ್ಷಣಿಕತ್ವ ಸಿದ್ಧಿಸುವುದು ಎಂಬ ಶಂಕೆಗೆ ಉತ್ತರ—

## ಓಂ ಆಕಾಶೇ ಚಾವಿಶೇಷಾತ್ ಓಂ (೨-೨-೨೪)

**ಸೂತ್ರಾರ್ಥ**

ದೀಪದಲ್ಲಿರುವಂತೆ ಆಕಾಶದಲ್ಲೂ ಪರಿಮಾಣ ವಿಶೇಷವಿಲ್ಲದಿರುವುದರಿಂದ ಎಂದು ಅರ್ಥ. ಆಕಾಶದಲ್ಲಿ ದೀಪದ ಪರಿಮಾಣವಿಶೇಷ ಕಾಣದಿರುವುದರಿಂದ ದೀಪದಂತೆ ಆಕಾಶವು ಕ್ಷಣಿಕವಲ್ಲ ಎಂದು ಸಿದ್ಧವಾಗುವುದು. ಹೀಗೆ ಕ್ಷಣಿಕವಲ್ಲದ ಆಕಾಶ

हेतुनैव सर्वस्य क्षणिकत्वं ससाधनमिति प्रकरणसमं त्वदनुमानमिति भावः ।

बाधितत्वेनाप्यनुमानं निराह—

॥ ॐ अनुस्मृतेश्च ॐ ॥ २-२-२५

तदेवेदमिति प्रत्यभिज्ञानाच्च नानुमानात् क्षणिकत्वं सिद्धमिति भावः ॥ ७ ॥

असदधिकरणम्—८

॥ ॐ नासतोऽदृष्टत्वात् ॐ ॥ २-२ २६

अत्र नये परमाणुपुञ्जवादोक्तदोषोऽत्र नेति प्राप्तं शून्यमतं निरस्यते । विश्वकारणत्वमिति प्रकरणाल्लभ्यते । असतः शून्यस्य

---

ದೃಷ್ಟಾಂತದಿಂದಲೇ ಬೌದ್ಧರು ಕ್ಷಣಿಕತ್ವವನ್ನು ಸಾಧಿಸುವ 'ಸತ್ತ್ವ' ಹೇತುವಿನಿಂದಲೇ ಎಲ್ಲವನ್ನೂ ಕ್ಷಣಿಕವಲ್ಲವೆಂದು ಸುಲಭವಾಗಿ ಸಾಧಿಸಬಹುದು. ಆದ್ದರಿಂದ 'ಸರ್ವಂ ಕ್ಷಣಿಕಂ ಸತ್ತ್ವಾತ್' ಎಂಬ ನಿನ್ನ ಅನುಮಾನವು ಪ್ರಕರಣಸಮವೆಂಬ ದೋಷಗ್ರಸ್ತವಾಗಿದೆ ಎಂದು ಭಾವ.

ಬಾಧದೋಷದಿಂದಲೂ ಕ್ಷಣಿಕತ್ವಸಾಧಕ ಅನುಮಾನವನ್ನು ನಿರಾಕರಿಸುವ ಸೂತ್ರ—

ಓಂ ಅನುಸ್ಮೃತೇಶ್ಚ ಓಂ (೨-೨-೨೫)

**ಸೂತ್ರಾರ್ಥ**

'ಅದೇ ಇದು' ಎಂಬ ಪ್ರತ್ಯಭಿಜ್ಞಾನವಿರುವುದರಿಂದಲೂ ಅನುಮಾನದಿಂದ ಕ್ಷಣಿಕತ್ವವು ಸಿದ್ಧಿಸುವುದಿಲ್ಲವೆಂದು ಭಾವ.

**ಅಸದಧಿಕರಣ—೮**

ಓಂ ನಾಸತೋಽದೃಷ್ಟತ್ವಾತ್ ಓಂ (೨-೨-೨೬)

**ಅಧಿಕರಣದ ವಿಷಯ ಮತ್ತು ಸೂತ್ರಾರ್ಥ**

ಈ ಅಧಿಕರಣದಲ್ಲಿ, ಪರಮಾಣುಪುಂಜವಾದಕ್ಕೆ ಹೇಳಿದ ದೋಷ ತನ್ನಲ್ಲಿಲ್ಲವೆಂದು ಪ್ರಸಕ್ತವಾಗುವ ಶೂನ್ಯಮತವನ್ನು ನಿರಾಕರಿಸಲಾಗುವುದು. ಪ್ರಕರಣಕ್ಕನು

जगत्कारणत्वं न युक्तम् । कुतः ? मानाभावादिति भावः । कुतो न मानमित्यतः अदृष्टत्वात् शून्यकारणत्वस्याप्रत्यक्षत्वात् । क्वापि तत्कारणत्वस्यादर्शनाद् दृष्टान्ताभावेन नानुमानिकत्वादिति यावत् । तथा अदृष्टत्वात्, आगमस्येति शेषः, शून्यकारणत्वबोधकागमस्यादर्शनादिति परम्परया अदृष्टत्वादिति हेतुर्योज्यः । तेन मानाभावो मेयाभावहेतुर्न तु प्रत्यक्षाभावमात्रमिति न शङ्क्यम् । सुधायां तु असतः शून्याज्जगतो जन्म नेति पञ्चम्यन्ततया व्याख्यातम् । यद्यपि शून्यं नासदित्यभ्युपेतं माध्यमिकैः । तथापि सर्वधर्मशून्यत्वे असत्त्वमापाद्य असत इत्युक्तम् । वृत्त्यन्तरं तु ना पुरुषः सतः आदि-

---

ಗುಣವಾಗಿ 'ವಿಶ್ವಕಾರಣತ್ವ' ಎಂಬ ಪದವು ಲಭಿಸುವುದು. ಅಸತಃ–ಶೂನ್ಯಕ್ಕೆ, ಜಗತ್ಕಾರಣತ್ವವು ಯುಕ್ತವಲ್ಲ. ಏಕೆಂದರೆ, ಪ್ರಮಾಣವಿಲ್ಲದ್ದರಿಂದ ಎಂದು ಭಾವ. ಪ್ರಮಾಣವೇಕಿಲ್ಲ ? ಎಂಬ ಪ್ರಶ್ನೆಗೆ ಉತ್ತರ 'ಅದೃಷ್ಟತ್ವಾತ್'–ಶೂನ್ಯವು ಕಾರಣವಾಗಿರುವುದು ಪ್ರತ್ಯಕ್ಷಸಿದ್ಧವಾಗದಿರುವುದರಿಂದ. ಶೂನ್ಯ ಕಾರಣವಾಗಿರುವುದು ಎಲ್ಲೂ ಕಂಡಿಲ್ಲವಾದ್ದರಿಂದ ದೃಷ್ಟಾಂತವೇ ಇಲ್ಲ. ಆದ್ದರಿಂದ ಶೂನ್ಯ ಕಾರಣತ್ವವು ಅನುಮಾನಪ್ರಮಾಣದಿಂದ ಸಿದ್ಧವಲ್ಲ ಎಂದು ಅಭಿಪ್ರಾಯ. ಹಾಗೆಯೇ, ಅದೃಷ್ಟತ್ವಾತ್—'ಆಗಮಸ್ಯ' ಎಂದು ಶೇಷವನ್ನು ಸೇರಿಸಬೇಕು—ಶೂನ್ಯವು ಕಾರಣವೆಂದು ಬೋಧಿಸುವ ಆಗಮವೂ ದೃಷ್ಟವಾಗಿಲ್ಲವಾದ್ದರಿಂದ ಶೂನ್ಯವು ಜಗತ್ಕಾರಣವೆಂಬ ವಿಷಯದಲ್ಲಿ ಯಾವ ಪ್ರಮಾಣವೂ ಇಲ್ಲ. ಹೀಗೆ ಶೂನ್ಯವು ಜಗತ್ಕಾರಣವಲ್ಲ ಎಂದು ಸಾಧಿಸಲು ಅದೃಷ್ಟತ್ವವನ್ನು ಪರಂಪರೆಯಿಂದ ಹೇತುವನ್ನಾಗಿ ಯೋಜಿಸಬೇಕು. ಈ ಯೋಜನೆಯಿಂದಾಗಿ, 'ಒಂದು ವಿಷಯ ಇಲ್ಲವೆನ್ನಲು ಯಾವುದೇ ಪ್ರಮಾಣವಿಲ್ಲದಿರುವುದು ಕಾರಣವಾಗಬಹುದೇ ಹೊರತು ಪ್ರತ್ಯಕ್ಷ ಇಲ್ಲದಿರುವುದು ಮಾತ್ರ ಕಾರಣವಾಗಲಾರದು' ಎಂಬ ಶಂಕೆಗೆ ಅವಕಾಶವಿಲ್ಲ.

**ಸುಧಾರೀತ್ಯಾ ವ್ಯಾಖ್ಯಾನಾಂತರ**

ಸುಧಾದಲ್ಲಾದರೋ, ಅಸತಃ—ಶೂನ್ಯದಿಂದ, ಜಗತ್ತಿನ ಉತ್ಪತ್ತಿಯಿಲ್ಲವೆಂದು 'ಅಸತಃ' ಎಂಬ ಪದವನ್ನು ಪಂಚಮೀವಿಭಕ್ತ್ಯಂತವೆಂದು ವ್ಯಾಖ್ಯಾನ ಮಾಡಲಾಗಿದೆ. ಮಾಧ್ಯಮಿಕರು ಶೂನ್ಯವನ್ನು ಅಸತ್ ಎಂದೇನೂ ಒಪ್ಪುವುದಿಲ್ಲ. ಆದರೂ, ಯಾವುದೇ ಧರ್ಮವಿಲ್ಲದಿದ್ದಲ್ಲಿ ಶೂನ್ಯವು ಅಸತ್ತೇ ಆಗಬೇಕಾದೀತು ಎಂದು ಆಪಾದಿಸಿ 'ಅಸತ' ಎಂದು ಸೂತ್ರದಲ್ಲಿ ಹೇಳಲಾಗಿದೆ.

कालीनकार्यस्य कर्ताऽनुमातव्यः । कुतः ? दृष्टत्वात् अद्यतनकार्ये पुंस्कृतत्वस्य दृष्टत्वादिति ध्येयम् ॥

अदृष्टमप्यसतो जगत्कारणत्वमस्त्वित्यत आह—

॥ ॐ उदासीनानामपि चैवं सिद्धिः ॐ ॥

२-२-२७

एवमसतः कारणत्वे सत्युदासीनानां हेयोपादेयधीविषयत्वादुदासीनानां खपुष्पादीनामपि सकाशात् सौरभ्यादिकार्यसिद्धिः स्यादित्यर्थः । तेभ्यो न चेच्छून्यादपि कार्यं न स्यादसत्वाविशेषादिति

---

**ಈ ಸೂತ್ರದ ಇನ್ನೊಂದು ವ್ಯಾಖ್ಯಾನ**

ಈ ಸೂತ್ರದ ಇನ್ನೊಂದು ವ್ಯಾಖ್ಯಾನವಾದರೋ ಹೀಗಿದೆ—ನಾ–ಪುರುಷನು, ಸತಃ–ಸೃಷ್ಟಿಯ ಪ್ರಾರಂಭಕಾಲದ ಕಾರ್ಯಕ್ಕೆ, ಕರ್ತೃವಾಗಿದ್ದಾನೆಂದು ಅನುಮಾನ ಪ್ರಮಾಣದಿಂದ ಸಾಧಿಸಬಹುದು. ಏಕೆಂದರೆ, ದೃಷ್ಟತ್ವಾತ್–ಈ ಕಾಲದ ಕಾರ್ಯಗಳು ಪುರುಷನಿರ್ಮಿತವೆಂದು ದೃಷ್ಟವಾಗಿರುವುದರಿಂದ ಎಂದು.

ಯಾವುದೇ ಪ್ರಮಾಣದಿಂದ ಸಿದ್ಧವಾಗದಿದ್ದರೂ ಅಸತ್ತಿಗೆ ಜಗತ್ಕಾರಣತ್ವವಿರಲಿ ಎಂಬ ಶಂಕೆಗೆ ಉತ್ತರ—

ಓಂ ಉದಾಸೀನಾನಾಮಪಿ ಚೈವಂ ಸಿದ್ಧಿಃ ಓಂ

(೨-೨-೨೭)

**ಸೂತ್ರಾರ್ಥ**

ಏವಂ–ಹೀಗೆ ಅಸತ್ತಿಗೆ ಕಾರಣತ್ವವಿರುವುದಾದಲ್ಲಿ, ಉದಾಸೀನಾನಾಮಪಿ–ತ್ಯಾಜ್ಯವೆಂಬ ಬುದ್ಧಿಗಾಗಲಿ, ಗ್ರಾಹ್ಯವೆಂಬ ಬುದ್ಧಿಗಾಗಲಿ ವಿಷಯವಾಗದೆ ಉದಾಸೀನ ವಾಗಿರುವ ಆಕಾಶಪುಷ್ಪ ಮೊದಲಾದವುಗಳಿಂದಲೂ, ಸಿದ್ಧಿಃ–ಸುವಾಸನೆ ಮೊದಲಾದ ಕಾರ್ಯಗಳು ಉಂಟಾಗಬೇಕಾದೀತು ಎಂದು ಅರ್ಥ.

**' ಚ ' ಮತ್ತು ' ಉದಾಸೀನ ' ಶಬ್ದಗಳ ಪ್ರಯೋಗದ ಉದ್ದೇಶ**

ಆಕಾಶಪುಷ್ಪ ಮೊದಲಾದವುಗಳಿಂದ ಯಾವುದೇ ಕಾರ್ಯವಾಗದಿದ್ದಲ್ಲಿ ಅವುಗಳಂತೆ ಅಸತ್ತಾಗಿರುವ ಶೂನ್ಯದಿಂದಲೂ ಯಾವುದೇ ಕಾರ್ಯ ಉತ್ಪನ್ನವಾಗ ಲಾರದು ಎಂದು ಸೂಚಿಸಲು ' ಚ ' ಶಬ್ದವನ್ನು ಪ್ರಯೋಗಿಸಲಾಗಿದೆ. ' ಆಕಾಶಪುಷ್ಪ

सूचयितुं चशब्दः । खपुष्पादीनामिति वाच्ये उदासीनेत्युक्तिर्हेतु-गर्भतया नेष्टापत्तिरिति सूचयितुम् । वृत्यन्तराणि तु—एवं शून्यादेव सर्वोत्पत्तौ तन्त्वाद्युपादानादुदासीनानामपि उपादानहीनानां, चिकीर्षादिरहितानामिति यावत्, पुंसां घटादिकार्यसिद्धिः स्यादिति । तथा देशकालाद्यपेक्षानियमादुदासीनानां तदपेक्षारहितानामपि कार्याणां किंशुकपुष्पादीनां सिद्धिः स्यादिति सुधोक्तानि ध्येयानि । कर्त्रुपादाननिमित्तापेक्षापि न स्यादिति फलितार्थः ।

---

ಮೊದಲಾದವುಗಳಿಂದ ' ಎಂದು ಹೇಳಬೇಕಾಗಿದ್ದರೂ ಅದರ ಬದಲು ' ಉದಾಸೀನ ಗಳಿಂದಲೂ ' ಎಂದು ಹೇಳಿರುವುದು ಉದಾಸೀನಪದದ ಅರ್ಥವು ಆಕಾಶಪುಷ್ಪಾದಿ ಗಳಿಂದ ಸುವಾಸನೆ ಮೊದಲಾದ ಕಾರ್ಯಗಳ ಉತ್ಪತ್ತಿಯು ಅಂಗೀಕಾರಾರ್ಹವಲ್ಲ ವೆಂಬುದಕ್ಕೆ ಹೇತುವನ್ನು[1] ಒಳಗೊಂಡಿದೆ ಆದ್ದರಿಂದ ' ಅಸತ್ತಿಗೆ ಕಾರಣತ್ವವಿರುವು ದಾದರೆ ಆಕಾಶಪುಷ್ಪಾದಿಗಳಿಂದಲೂ ಸುವಾಸನೆ ಮೊದಲಾದ ಕಾರ್ಯಗಳು ಹುಟ್ಟಲಿ ' ಎಂದು ಆಪಾದಿಸಿದಾಗ ಇಷ್ಟಾಪತ್ತಿಯನ್ನು ಹೇಳಲು ಸಾಧ್ಯವಿಲ್ಲ—ಎಂದು ಸೂಚಿಸಲು.

**ಸುಧಾರೀತ್ಯಾ ಈ ಸೂತ್ರದ ವ್ಯಾಖ್ಯಾನಾಂತರಗಳು**

ಏವಂ–ಹೀಗೆ ಶೂನ್ಯದಿಂದಲೇ ಎಲ್ಲವೂ ಉತ್ಪನ್ನವಾಗುವುದಾದರೆ, ಉದಾಸೀನಾ-ನಾಮಪಿ–ತಂತು ಮೊದಲಾದ ಉಪಾದಾನ ಕಾರಣಗಳಿಂದ ಉದಾಸೀನರಾದ ಅಂದರೆ ತಂತು ಮೊದಲಾದ ಉಪಾದಾನಕಾರಣಗಳೇ ಇಲ್ಲದ ಪುರುಷರಿಗೂ—ಪಟಾದಿಗಳನ್ನು ಮಾಡಲು ಇಚ್ಛೆಯಿಲ್ಲದಿದ್ದವರಿಗೂ ಎಂದು ಭಾವ—ಪಟಾದಿ ಕಾರ್ಯಗಳು ಉತ್ಪನ್ನ ವಾಗಬೇಕಾದೀತು ಎಂದೂ, ಹಾಗೆಯೇ–ದೇಶ, ಕಾಲ ಮೊದಲಾದವುಗಳು ಆವಶ್ಯಕ ವೆಂಬ ನಿಯಮದಿಂದ ಉದಾಸೀನವಾದ ಅಂದರೆ ದೇಶಕಾಲಾದಿಗಳ ಆವಶ್ಯಕತೆಯೇ ಇಲ್ಲದೆ ಕಿಂಶುಕ ಮೊದಲಾದ ಪುಷ್ಪಗಳ ಉತ್ಪತ್ತಿಯಾಗಲಿ ಎಂದು ಮುಂತಾದ ಸುಧೋಕ್ತ ವ್ಯಾಖ್ಯಾನಾಂತರಗಳನ್ನು ತಿಳಿಯಬೇಕು. ಕರ್ತೃ, ಉಪಾದಾನ ಕಾರಣ, ನಿಮಿತ್ತಕಾರಣ—ಇದಾವುದರ ಆವಶ್ಯಕತೆಯೂ ಕಾರ್ಯಗಳಿಗೆ ಇಲ್ಲವೆಂದಾಗಲಿ ಎಂದು ಸಾರಾಂಶ.

---

1. ಆಕಾಶಪುಷ್ಪಾದಿಗಳಿಂದ ಸುವಾಸನೆ ಇತ್ಯಾದಿ ಕಾರ್ಯಗಳು ಹುಟ್ಟುವುದಿದ್ದಲ್ಲಿ ಅವು ಹೇಯಬುದ್ಧಿ ಅಥವಾ ಉಪಾದೇಯಬುದ್ಧಿಗೆ ವಿಷಯವಾಗುತ್ತಿತ್ತು. ಆದರೆ ಆಕಾಶಪುಷ್ಪಾದಿಗಳು ಹೇಯೋಪಾದೇಯ ಬುದ್ಧಿಗೆ ವಿಷಯವಾಗದಿರುವುದರಿಂದ ಆಕಾಶಪುಷ್ಪಾದಿಗಳಿಂದ ಕಾರ್ಯೋ ತ್ಪತ್ತಿಯು ಅಂಗೀಕಾರಾರ್ಹವಲ್ಲವೆಂದು ತಿಳಿಯುವುದು. ಹೀಗೆ, ಆಕಾಶಪುಷ್ಪಾದಿಗಳಿಂದ ಕಾರ್ಯೋ ತ್ಪತ್ತಿಯು ಇಷ್ಟವಲ್ಲವೆಂಬುದಕ್ಕೆ ಹೇಯೋಪಾದೇಯಬುದ್ಧ್ಯವಿಷಯತ್ವವು ಹೇತು.

माऽस्तु शून्यपरिणामः प्रपञ्चस्तद्विवर्तस्तु स्यात्तत्रोक्तदोषाभावादत आह—

## ॥ ॐ नाभाव उपलब्धेः ॐ ॥ २-२-२८

भवतीति भावः सन् । अभावोऽसन् । भवतेश्चेति णः । जगत् अभावो न शून्यव्यतिरेकेण तत्त्वं नास्तीति न । उपलब्धेः सदित्युपलभ्यमानत्वादित्यर्थः । सुधायां तु तवासतो जनिरिव मम सतो जनिर्न दृष्टा । जगतः सत्त्वासम्मतेरित्यतो जगतोऽसत्त्वं नेत्याहेत्यवतार्य व्याख्यातम् ॥

---

[1]ಪ್ರಪಂಚವು ಶೂನ್ಯದ ಪರಿಣಾಮವಾಗಲು ಸಾಧ್ಯವಿಲ್ಲದಿದ್ದರೆ ಬೇಡ, ಈಗ ಹೇಳಿದ ದೋಷಗಳಿಲ್ಲದಿರುವುದರಿಂದ ಪ್ರಪಂಚವು ಶೂನ್ಯದ ವಿವರ್ತವೆಂದೊಪ್ಪಬಹುದು ಎಂಬ ಶಂಕೆಗೆ ಉತ್ತರ—

## ಓಂ ನಾಭಾವ ಉಪಲಬ್ಧೇಃ ಓಂ (೨-೨-೨೮)

**ಸೂತ್ರಾರ್ಥ**

'ಭವತಿ ಇತಿ ಭಾವಃ' ಎಂಬ ವ್ಯುತ್ಪತ್ತಿಯಂತೆ ಭಾವ ಎಂದರೆ ಅಸ್ತಿತ್ವವುಳ್ಳದ್ದು ; ಮತ್ತು ಅಭಾವವೆಂದರೆ ಅಸ್ತಿತ್ವರಹಿತವಾದದ್ದು. 'ಭವತೇಶ್ಚ' ಎಂಬ ಪಾಣಿನಿ ಸೂತ್ರದಿಂದ ಭೂಧಾತುವಿಗೆ 'ಣ' ಪ್ರತ್ಯಯ ಬಂದು ಭಾವ ಎಂದು ರೂಪವಾಗಿದೆ. ಜಗತ್ತು, ನ ಅಭಾವಃ–ಶೂನ್ಯವನ್ನುಳಿದು ಅಸ್ತಿತ್ವವನ್ನೇ ಪಡೆದಿಲ್ಲವೆಂಬುದು ಸರಿಯಲ್ಲ ಉಪಲಬ್ಧೇಃ–'ಸತ್' ಎಂಬ ಅನುಭವಕ್ಕೆ ವಿಷಯವಾಗಿರುವುದರಿಂದ ಎಂದು ಅರ್ಥ.

**ಸುಧಾದಲ್ಲಿ ಈ ಸೂತ್ರಕ್ಕೆ ಬೇರೆ ಅವತರಣಿಕೆಯನ್ನು ನೀಡಲಾಗಿದೆ.**

ಸುಧಾದಲ್ಲಾದರೋ—' ನಿನಗೆ ಅಸತ್ತಿನಿಂದ ಉತ್ಪತ್ತಿಯಾಗುವುದು ಹೇಗೆ ದೃಷ್ಟವಾಗಿಲ್ಲವೋ ಹಾಗೆ ಜಗತ್ತಿಗೆ ಸತ್ಯತ್ವವನ್ನು ನಾನು ಒಪ್ಪದಿರುವುದರಿಂದ ನನಗೆ ಸತ್ತಿನಿಂದ ಕಾರ್ಯದ ಉತ್ಪತ್ತಿಯು ದೃಷ್ಟವಲ್ಲ' ಎಂಬ ಬೌದ್ಧರ ಶಂಕೆಗೆ ಉತ್ತರವಾಗಿ ಜಗತ್ತಿಗೆ ಅಸತ್ತ್ವವಿಲ್ಲವೆಂದು ಈ ಸೂತ್ರ ಹೇಳುವುದು ಎಂದು ಅವತರಣಿಕೆ ನೀಡಿ ಸೂತ್ರವನ್ನು ವ್ಯಾಖ್ಯಾನ ಮಾಡಲಾಗಿದೆ.

---

1. ಮಣ್ಣು ಘಟವಾದಂತೆ ಶೂನ್ಯವು ಜಗತ್ತಾಗಿ ಬದಲಾವಣೆ ಹೊಂದುವುದು ಎಂಬ ವಾದ ಶೂನ್ಯಪರಿಣಾಮವಾದ. ಹಗ್ಗ ಸರ್ಪದಂತೆ ಭಾಸವಾಗುವಂತೆ ಶೂನ್ಯವು ಜಗತ್ತಿನಂತೆ ಭಾಸವಾಗುವುದು ಎಂಬ ವಾದ ಶೂನ್ಯವಿವರ್ತವಾದ.

ननु सदित्युपलम्भेऽपि स्वप्नादिवदसज्जगत् किं न स्यादत आह—

॥ ॐ वैधर्म्याच्च न स्वप्नादिवत् ॐ ॥ २-२-२९

अभाव इति वर्तते । स्वप्नजाग्रत्वादिवद्रज्जुभुजङ्गादिवच्च जगद्भावोऽसन्न । कुतः ? वैधर्म्याच्च स्वप्न एवायं न जाग्रत्, रज्जुरियं न सर्प इति बाधविषयत्ववैलक्षण्यादित्यर्थः । चशब्दोऽत्र च बाधाभावादित्यर्थसूचनार्थः । सुधायां दृश्यत्वादिमिथ्यात्वहेत्वपाकरणार्थमप्येतदवतार्य स्वप्नादिवज्जगद् दृश्यत्वादिना न मिथ्या । अर्थक्रियाकारित्वादिवैधर्म्यात् सत्यत्वसिद्धेः, चशब्दोक्तसत्यत्वानुभवबाधात्,

---

ಜಗತ್ತು ಸತ್ಯವೆಂಬ ಅನುಭವವಿದ್ದರೂ ಸ್ವಪ್ನದಂತೆ ಜಗತ್ತು ಅಸತ್ಯವೇಕಾಗ ಬಾರದು ಎಂಬ ಶಂಕೆಗೆ ಉತ್ತರ—

ಓಂ ವೈಧರ್ಮ್ಯಾಚ್ಚ ನ ಸ್ವಪ್ನಾದಿವತ್ ಓಂ (೨-೨-೨೯)

**ಸೂತ್ರಾರ್ಥ**

'ಅಭಾವಃ' ಎಂಬ ಪದವು ಅನುವೃತ್ತವಾಗುವುದು. ಸ್ವಪ್ನದಲ್ಲಿ ತೋರುವ ಜಾಗ್ರದ್ದೆಶೆಯಂತೆ, ರಜ್ಜುವಿನಲ್ಲಿ ತೋರುವ ಸರ್ಪದಂತೆ ಜಗತ್ತು ಅಭಾವ ಅಂದರೆ ಅಸತ್ ಅಲ್ಲ ಏಕೆಂದರೆ, ವೈಧರ್ಮ್ಯಾಚ್ಚ—'ಇದು ಸ್ವಪ್ನವೇ, ಜಾಗ್ರದ್ದೆಶೆಯಲ್ಲ', 'ಇದು ರಜ್ಜುವೇ, ಸರ್ಪವಲ್ಲ' ಎಂಬ ಬಾಧವಿಷಯವಾಗಿರುವ ವಿಷಯದಲ್ಲಿ ವೈಲಕ್ಷಣ್ಯವಿರುವುದರಿಂದ ಎಂದು ಅರ್ಥ. 'ಚ' ಶಬ್ದವು ಜಗತ್ತಿನ ವಿಷಯದಲ್ಲಿ ಅಂತಹ ಬಾಧವಿಲ್ಲವೆಂಬುದನ್ನು ಸೂಚಿಸುವುದು.

**ಈ ಸೂತ್ರಕ್ಕೆ ಸುಧಾದಲ್ಲಿ ಕೊಟ್ಟಿರುವ ಇನ್ನೊಂದು ಅವತರಣಿಕೆ ಮತ್ತು ವ್ಯಾಖ್ಯಾನ**

ಸುಧಾದಲ್ಲಿ, ದೃಶ್ಯತ್ವ ಮೊದಲಾದ ಜಗನ್ಮಿಥ್ಯಾತ್ವಸಾಧಕ ಹೇತುಗಳ ನಿರಾಕರಣೆಗಾಗಿಯೂ ಈ ಸೂತ್ರವು ಬಂದಿದೆ ಎಂದು ಅವತರಣಿಕೆಯನ್ನು ಕೊಟ್ಟು 'ಜಗತ್ತು ದೃಶ್ಯವಾಗಿರುವುದರಿಂದ ಸ್ವಪ್ನಾದಿಗಳಂತೆ ಮಿಥ್ಯೆ' ಎನ್ನುವುದು ಸರಿಯಲ್ಲ. ಅರ್ಥಕ್ರಿಯಾಕಾರಿತ್ವ ಮೊದಲಾದ ಸ್ವಪ್ನವಿರುದ್ಧ ಧರ್ಮಗಳಿಂದ ಜಗತ್ತು ಸತ್ಯವೆಂದು ಸಿದ್ಧವಾಗಿರುವುದರಿಂದ ; ಅಲ್ಲದೆ, 'ಚ' ಶಬ್ದವು ಹೇಳುವ ಸತ್ಯತ್ವಾನುಭವದ ಬಾಧವಿರುವುದರಿಂದ ಹಾಗೂ ಜಗನ್ಮಿಥ್ಯಾತ್ವವಿಷಯದಲ್ಲಿ ಯಾವುದೇ ಪ್ರಮಾಣವಿಲ್ಲದಿರು

ततएव मिथ्यात्वे कस्यापि मानस्याभावाच्चेति सत्प्रतिपक्षबाधमिथ्यात्वमानाभावोक्तिपरमप्युक्तम् । तेन बाधाभावो नासिद्ध इति ध्येयम् । तत्त्वप्रदीपे तु स्वप्नादिवज्जगन्न दृश्यत्वादिना मिथ्या । स्वप्न एवायं न जागरित इति प्रतीत्या जाग्रत्त्वाद्येकदेशस्यैव मिथ्यात्वेन सर्वस्य तदभावेन साध्यवैकल्यात् । जाग्रत्त्वस्य दृष्टान्तत्वे बाधकभावाभावाभ्यां वैधर्म्यादिति योजितम् । एतेनैवाद्वैतमतं च प्रत्युक्तं बोध्यम् ॥ ८ ॥

ವುದರಿಂದ ಎಂಬುದಾಗಿ ಮಿಥ್ಯಾತ್ವಾನುಮಾನಕ್ಕೆ [1]ಸತ್ಪ್ರತಿಪಕ್ಷ, [2]ಬಾಧ, ಮಿಥ್ಯಾತ್ವದಲ್ಲಿ ಪ್ರಮಾಣಾಭಾವ—ಈ ದೋಷಗಳನ್ನು ಹೇಳುವಂತೆಯೂ ಈ ಸೂತ್ರವನ್ನು ವ್ಯಾಖ್ಯಾನಮಾಡಲಾಗಿದೆ. ಹೀಗೆ ಮಿಥ್ಯಾತ್ವದಲ್ಲಿ ಪ್ರಮಾಣಾಭಾವಪರವಾಗಿ ಈ ಸೂತ್ರವನ್ನು ವ್ಯಾಖ್ಯಾನ ಮಾಡಿದ್ದರಿಂದ 'ಜಗತ್ತು ಸತ್ಯವಾಗಿದೆ, ಬಾಧವಿಲ್ಲದಿರುವುದರಿಂದ' ಎಂಬ ಅನುಮಾನದಲ್ಲಿ 'ಬಾಧವಿಲ್ಲದಿರುವಿಕೆ' ಎಂಬ ಹೇತು [3]ಅಸಿದ್ಧವಲ್ಲ ಎಂದು ತಿಳಿಯಬೇಕು.

**ತತ್ತ್ವಪ್ರದೀಪರೀತ್ಯಾ ವ್ಯಾಖ್ಯಾನಾಂತರ**

ತತ್ತ್ವಪ್ರದೀಪದಲ್ಲಾದರೋ—ಸ್ವಪ್ನಾದಿಗಳಂತೆ ಜಗತ್ತು ದೃಶ್ಯವಾಗಿರುವುದರಿಂದ ಮಿಥ್ಯೆ ಎನ್ನುವುದು ಸರಿಯಲ್ಲ. ಏಕೆಂದರೆ, 'ಇದು ಸ್ವಪ್ನವೇ ಜಾಗರಿತವಲ್ಲ' ಎಂಬ ಅನುಭವದಿಂದ ಸ್ವಪ್ನದಲ್ಲಿ ತೋರುವ ಜಾಗ್ರತ್ತ್ವ ಮೊದಲಾದ ಒಂದು ಏಕದೇಶಮಾತ್ರ ಮಿಥ್ಯೆ ಎಂದು ಸಿದ್ಧವಾಗುವುದೇ ಹೊರತು ಇಡೀ ಸ್ವಪ್ನವೇ ಮಿಥ್ಯೆಯಾಗುವುದಿಲ್ಲವಾದ್ದರಿಂದ ಸ್ವಪ್ನರೂಪದೃಷ್ಟಾಂತದಲ್ಲಿ ಮಿಥ್ಯಾತ್ವವೆಂಬ ಸಾಧ್ಯದ ವೈಕಲ್ಯ ಬರುವುದು. ಜಗನ್ಮಿಥ್ಯಾತ್ವಸಾಧಕಾನುಮಾನದಲ್ಲಿ ಜಾಗ್ರತ್ತ್ವವೇ ದೃಷ್ಟಾಂತವೆಂದಲ್ಲಿ, ಜಾಗ್ರತ್ತ್ವಕ್ಕೆ ಪ್ರಮಾಣಬಾಧವಿರುವಂತೆ ಜಗತ್ತಿಗೆ ಪ್ರಮಾಣಬಾಧವಿಲ್ಲದಿರುವುದರಿಂದ—ಈ ವೈಧರ್ಮ್ಯದಿಂದಾಗಿ ಜಾಗ್ರತ್ತ್ವದಂತೆ ಜಗತ್ತು ಮಿಥ್ಯೆಯೆಂದು ಸಿದ್ಧವಾಗುವುದಿಲ್ಲ ಎಂದು ಯೋಜನೆಯನ್ನು ಮಾಡಲಾಗಿದೆ.

ಈ ಅಧಿಕರಣದಿಂದಲೇ ಅದ್ವೈತಮತವೂ ನಿರಾಕೃತವಾಗುವುದೆಂದು ತಿಳಿಯಬೇಕು.

---

1. ಸಾಧ್ಯಾಭಾವಸಾಧಕವಾದ ಮತ್ತೊಂದು ಹೇತುವಿಗೆ ಸತ್ಪ್ರತಿಪಕ್ಷ ಎಂದು ಹೆಸರು. ಜಗತ್ತು ಮಿಥ್ಯೆ, ದೃಶ್ಯವಾದ್ದರಿಂದ ಎಂಬ ಅನುಮಾನಕ್ಕೆ ಜಗತ್ತು ಮಿಥ್ಯೆಯಲ್ಲ ಅರ್ಥಕ್ರಿಯಾಕಾರಿಯಾದ್ದರಿಂದ ಎಂಬ ಅನುಮಾನ ಸತ್ಪ್ರತಿಪಕ್ಷ.

2 ಪ್ರಮಾಣಗಳಿಂದ ಬಾಧ.

3. ಮಿಥ್ಯಾತ್ವವೆಂದರೆ ಬಾಧ್ಯತ್ವ. ಮಿಥ್ಯಾತ್ವದಲ್ಲಿ ಪ್ರಮಾಣವಿಲ್ಲವೆಂದು ಸಾಧಿಸಿದರೆ ಜಗತ್ತಿಗೆ ಬಾಧವಿದೆ ಎಂಬುದರಲ್ಲಿ ಪ್ರಮಾಣವಿಲ್ಲವೆಂದು ಸಾಧಿಸಿದಂತಾಯಿತು. ಆದ್ದರಿಂದ ಜಗತ್ಸತ್ಯತ್ವಸಾಧಕ ಬಾಧಾಭಾವವು ಅಸಿದ್ಧವಲ್ಲವೆಂದು ಭಾವ.

अनुपलब्ध्यधिकरणम्—९

## ॥ ॐ न भावोऽनुपलब्धेः ॐ ॥ २-२-३०

अत्र नये नासतोऽदृष्टत्वादित्युक्तदोषो नात्रेति प्राप्तं विज्ञानमतं निराह । जगदिति प्रकृतम् । भवतीति भावः सद्रूपज्ञानम् । जगत् भावो ज्ञानात्मकं न । ज्ञानमेव जगदाकारेण परिणमत इति नेत्यर्थः । कुतः ? अनुपलब्धेरननुभवात् । प्रमाणाभावादित्यर्थः । उपलब्धि-विरोधादित्यप्यर्थः । ज्ञानज्ञेययोर्भेदस्य साक्षिसिद्धत्वादिति भावः । ज्ञानमिति वाच्ये भाव इत्युक्तिर्नाऽसत इत्युक्तदोषो नेति दर्शयितुम् ।

---

ಅನುಪಲಬ್ಧ್ಯಧಿಕರಣ—೯

## ಓಂ ನ ಭಾವೋಽನುಪಲಬ್ಧೇಃ ಓಂ (೨-೨-೩೦)

### ಅಧಿಕರಣದ ವಿಷಯ ಮತ್ತು ಸೂತ್ರಾರ್ಥ

ಈ ಅಧಿಕರಣದಲ್ಲಿ, ' ನಾಸತೋಽದೃಷ್ಟತ್ವಾತ್ ' ಎಂಬಲ್ಲಿ ಹೇಳಿದ ದೋಷ ತನಗಿಲ್ಲವೆಂದು ಹೇಳುವ ವಿಜ್ಞಾನಮತವನ್ನು ನಿರಾಕರಿಸಲಾಗುವುದು. ಸಂದರ್ಭ-ವಶಾತ್ ' ಜಗತ್ ' ಎಂಬ ಪದವು ಲಭಿಸುವುದು. ' ಭವತೀತಿ ಭಾವಃ ' ಎಂಬ ವ್ಯುತ್ಪತ್ತಿಯಂತೆ ' ಭಾವ ' ವೆಂದರೆ ಸತ್ ಆಗಿರುವ ಜ್ಞಾನ. ಜಗತ್ತು ಭಾವೋ ನ-ಜ್ಞಾನಸ್ವರೂಪವಲ್ಲ, ಜ್ಞಾನವೇ ಜಗದಾಕಾರವಾಗಿ ಪರಿಣಮಿಸುತ್ತದೆ ಎಂಬುದು ಸರಿಯಲ್ಲ ಎಂದು ಅರ್ಥ. ಏಕೆಂದರೆ, ಅನುಪಲಬ್ಧೇಃ—ಅನುಭವವಿಲ್ಲದಿರುವುದರಿಂದ ; ಪ್ರಮಾಣವಿಲ್ಲದಿರುವುದರಿಂದ ಎಂದು ಅರ್ಥ. ಅನುಭವವಿರೋಧವಿರುವುದರಿಂದ ಎಂದೂ ಅರ್ಥವಾಗುವುದು. ಜ್ಞಾನ ಮತ್ತು ಜ್ಞೇಯುಗಳಿಗೆ ಭೇದವು ಸಾಕ್ಷಿಪ್ರಮಾಣ ಸಿದ್ಧವಾಗಿರುವುದರಿಂದ ಎಂದು ಭಾವ

### ' ಭಾವ ' ಪದದ ಪ್ರಯೋಜನ ಮತ್ತು ವ್ಯಾಖ್ಯಾನಾಂತರಗಳು

[1] ' ಜ್ಞಾನಂ ' ಎಂದು ಹೇಳಬೇಕಾಗಿದ್ದರೂ ಅದರ ಬದಲು ' ಭಾವಃ ' ಎಂದು ಹೇಳಿರುವುದು ಜ್ಞಾನವು ಸತ್ತಾಗಿರುವುದರಿಂದ ' ನಾಸತಃ ' ಎಂಬಲ್ಲಿ ಹೇಳಿದ ದೋಷ

---

1. ' ಭವತೀತಿ ಭಾವಃ ' ಎಂಬ ವ್ಯುತ್ಪತ್ತಿಯಂತೆ ಭಾವವೆಂದರೆ ಸತ್. ವಿಜ್ಞಾನವಾದಿಮತದಲ್ಲಿ ಜ್ಞಾನವೊಂದೇ ಸತ್ಯವಾದುದರಿಂದ ಭಾವಪದವು ಸದ್ರೂಪವಾದ ಜ್ಞಾನವನ್ನೇ ಹೇಳುವುದು. ವಿಜ್ಞಾನವೇ ಜಗತ್ಕಾರಣವೆಂದು ಹೇಳುವ ವಿಜ್ಞಾನವಾದದಲ್ಲಿ ಜಗತ್ಕಾರಣವು ಸತ್ಯವೆಂದು ಭಾವಪದವು ಹೀಗೆ ಸೂಚಿಸುವುದರಿಂದ ಅಸತ್ಕಾರಣತಾವಾದಿ ಶೂನ್ಯಮತಕ್ಕೆ ಹೇಳಿದ ದೋಷವು ಈ ಮತದಲ್ಲಿ ಇಲ್ಲವೆಂದು ಸೂಚಿಸಿದಂತಾಗುವುದು ಎಂದು ಭಾವ.

केचित्तु प्राप्तौ भुव् शुद्धिचिन्तयोरिति कविकल्पद्रुमोक्तेश्चिन्तारूपज्ञानार्थस्य भुवो रूपमिति भावः । युष्माकं भाः साकारत्वेनाभिमतं ज्ञानमिति वाऽभिप्रेत्य भाव इत्युक्तिरित्याहुः ॥

इतश्चैवमित्याह—

॥ ॐ क्षणिकत्वाच्च ॐ ॥ २-२-३१

न भाव इति वर्तते । भाव इति आवर्तते च । भावस्य क्षणिकत्वाच्च आशुतरविनाशित्वाच्च न भावो जगदित्यर्थः । जगतः स्थायित्वं प्रागुक्तमिति भावः ॥

एवं पृथङ् निरस्तानि बौद्धमतानि सामान्यदोषेण निराह—

॥ ॐ सर्वथाऽनुपपत्तेश्च ॐ ॥ २-२-३२

---

ವಿಲ್ಲವೆಂದು ತಿಳಿಸಲು. ಕೆಲವರು, 'ಪ್ರಾಪ್ತೌ ಭುವ್ ಶುದ್ಧಿಚಿಂತಯೋಃ' ಎಂದು ಕವಿಕಲ್ಪದ್ರುಮದಲ್ಲಿ ಹೇಳಿರುವುದರಿಂದ 'ಭಾವ' ಪದವು ಚಿಂತಾಸ್ವರೂಪವಾದ ಜ್ಞಾನವೆಂಬ ಅರ್ಥವುಳ್ಳ ಭುವ್ ಧಾತುವಿನ ರೂಪವೆಂದು ಅಥವಾ 'ಭಾವಃ' ಅಂದರೆ ವಃ–ನಿಮ್ಮ, ಭಾಃ–ಸಾಕಾರವೆಂದು ಅಂಗೀಕರಿಸಿದ ಜ್ಞಾನವು ಎಂಬ ಅಭಿಪ್ರಾಯದಿಂದ ಭಾವಃಎಂಬ ಪದಪ್ರಯೋಗವನ್ನು ಮಾಡಲಾಗಿದೆಯೆಂದು ಹೇಳುವರು.

ಈ ಮುಂದಿನ ಕಾರಣದಿಂದಲೂ ವಿಜ್ಞಾನವು ಜಗತ್ಕಾರಣವಲ್ಲ ಎಂದು ಹೇಳುವ ಸೂತ್ರ—

ಓಂ ಕ್ಷಣಿಕತ್ವಾಚ್ಚ ಓಂ (೨-೨-೩೧)

**ಸೂತ್ರಾರ್ಥ**

'ನ ಭಾವಃ' ಎಂಬ ಪದಗಳು ಅನುವೃತ್ತಿಗೊಳ್ಳುತ್ತವೆ. 'ಭಾವ' ಎಂಬ ಪದವು ಆವೃತ್ತಿಯನ್ನೂ ಪಡೆಯುತ್ತದೆ. ಭಾವವು ಅಂದರೆ ಜ್ಞಾನವು, ಕ್ಷಣಿಕತ್ವಾಚ್ಚ–ಅತಿಶೀಘ್ರವಾಗಿ ವಿನಾಶವನ್ನು ಪಡೆಯುವುದರಿಂದಲೂ, ಜ್ಞಾನವು ಜಗತ್ತಲ್ಲ ಎಂದು ಅರ್ಥ. ಜಗತ್ತು ಸ್ಥಾಯಿಯಾದುದೆಂದು ಹಿಂದೆ ಹೇಳಲಾಗಿದೆ ಎಂದು ಭಾವ.

ಹೀಗೆ ಪ್ರತ್ಯೇಕವಾಗಿ ನಿರಾಕರಿಸಲಾದ ಬೌದ್ಧಮತಗಳನ್ನು ಅವುಗಳೆಲ್ಲಕ್ಕೂ ಅನ್ವಯಿಸುವ ದೋಷದಿಂದಲೂ ನಿರಾಕರಿಸಲು ಸೂತ್ರ—

ಓಂ ಸರ್ವಥಾಽನುಪಪತ್ತೇಶ್ಚ ಓಂ (೨-೨-೩೨)

नेत्यस्ति । सर्वथा प्रत्यर्थं क्षणिकत्वकल्पने शून्याद्वैतकल्पने विज्ञानाद्वैतकल्पने प्रकटने प्रच्छादने वा वेदद्वेषपक्षा न ग्राह्याः । कुतः ? अनुपपत्तेः उपपत्त्युपलक्षितमानाभावात् तद्विरुद्धत्वाच्चेत्यर्थः ॥ ९ ॥

नैकस्मिन्नधिकरणम्—१०

## ॥ ॐ नैकस्मिन्नसम्भवात् ॐ ॥ २-२-३३

अत्र सर्वप्रकारोपगमान्नैकपक्षोक्तदोषोऽत्रेति प्राप्तं क्षपणकमतं निराक्रियते । सत्त्वम्, असत्त्वं, सदसत्त्वं, सदसद्विलक्षणत्वं, सत्त्वे

---

**ಸೂತ್ರಾರ್ಥ**

'ನ' ಎಂಬ ಪದವು ಅನುವೃತ್ತವಾಗುವುದು. ಸರ್ವಥಾ–ಪ್ರತಿಯೊಂದು ಪದಾರ್ಥವೂ ಕ್ಷಣಿಕವೆಂದು ಕಲ್ಪಿಸಿದಲ್ಲಿ, ಶೂನ್ಯವ್ಯತಿರಿಕ್ತವಾದ ಯಾವುದೇ ವಸ್ತುವಿಲ್ಲವೆಂಬ ಶೂನ್ಯಾದ್ವೈತವನ್ನು ಕಲ್ಪಿಸಿದಲ್ಲಿ, ವಿಜ್ಞಾನ ವ್ಯತಿರಿಕ್ತವೆಲ್ಲವೂ ಮಿಥ್ಯೆಯೆಂಬ ವಿಜ್ಞಾನಾದ್ವೈತವನ್ನು ಕಲ್ಪಿಸಿದಲ್ಲಿ, ಶೂನ್ಯವಾದಿಗಳೇ ಮೊದಲಾದ ಬೌದ್ಧರ ಶಬ್ದಗಳಿಂದಲೇ ಪ್ರಕಟವಾಗಿ ಅದ್ವೈತವಾದವನ್ನು ಪರಿಗ್ರಹಿಸಿದಲ್ಲಿ ಅಥವಾ ಬೌದ್ಧತ್ವವನ್ನು ಪ್ರಕಟಪಡಿಸದೆ ಬೇರೆ ಶಬ್ದಗಳಿಂದ ಅದ್ವೈತವಾದವನ್ನು ಸ್ವೀಕರಿಸಿದಲ್ಲಿ—ಅಂತಹ ಯಾವ ವೇದದ್ವೇಷಿಯಾದ ಪಕ್ಷವೂ ಗ್ರಾಹ್ಯವಲ್ಲ. ಏಕೆಂದರೆ, ಅನುಪಪತ್ತೇಃ–ಉಪಪತ್ತಿಪದವು ಲಕ್ಷಣಯಾ ಹೇಳುವ ಯಾವುದೇ ಪ್ರಮಾಣವೂ ಇಲ್ಲದಿರುವುದರಿಂದ ಮತ್ತು ಪ್ರಮಾಣವಿರುದ್ಧವಾದುದರಿಂದ ಎಂದು ಅರ್ಥ.

ನೈಕಸ್ಮಿನ್ನಧಿಕರಣ—೧೦

## ಓಂ ನೈಕಸ್ಮಿನ್ನಸಂಭವಾತ್ ಓಂ (೨-೨-೩೩)

**ಅಧಿಕರಣದ ವಿಷಯ ಮತ್ತು ಸೂತ್ರಾರ್ಥ**

ಈ ಅಧಿಕರಣದಲ್ಲಿ, ಎಲ್ಲ ಮತಗಳು ಹೇಳುವ ರೀತಿಗಳನ್ನೂ ಒಪ್ಪುವುದರಿಂದ ಯಾವುದೇ ಒಂದು ಪಕ್ಷಕ್ಕೆ ಹೇಳಿದ ದೋಷ ತಮ್ಮ ಪಕ್ಷಕ್ಕಿಲ್ಲವೆಂದು ಹೇಳುವ ಕ್ಷಪಣಕರ ಮತವನ್ನು ನಿರಾಕರಿಸಲಾಗುವುದು. ಸತ್ತ್ವ, ಅಸತ್ತ್ವ, ಸದಸತ್ತ್ವ (ಸತ್ ಮತ್ತು ಅಸತ್ ಎರಡೂ ಆಗಿರುವುದು), ಸದಸದ್ವಿಲಕ್ಷಣತ್ವ (ಸತ್, ಅಸತ್ ಎರಡೂ ಅಲ್ಲದಿರುವುದು), ಸತ್ತ್ವೇ ಸತಿ ಸದ್ವಿಲಕ್ಷಣತ್ವ (ಸತ್ ಆಗಿದ್ದೂ ಸತ್ ಅಲ್ಲದಿರುವುದು), ಅಸತ್ತ್ವೇ ಸತಿ ಅಸದ್ವಿಲಕ್ಷಣತ್ವ (ಅಸತ್ ಆಗಿದ್ದೂ ಅಸತ್ ಅಲ್ಲದಿರುವುದು),

सति सद्विलक्षणत्वमसत्त्वे सत्यसद्विलक्षणत्वं, सदसदात्मकत्वे सति सदसद्विलक्षणत्वमित्यनियतसप्तप्रकारा एकस्मिन् वस्तुनि न युक्ताः। कुतः ? असम्भवात् । अप्रामाणिकत्वेनासम्भावितत्वादित्यर्थः ।

यदपि देहपरिमाणत्वं जीवस्योपेतं तत्किं सर्वदेहगतचेष्टोपपत्त्यर्थमुपेयते । अथ देहावच्छेदकं विनात्मनः परिमाणाभावाद्वा। आद्य आह—

॥ ॐ एवं चात्माऽकात्स्न्यर्म् ॐ ॥ २-२-३४

जैनमतप्रसङ्गसन्निधापितमात्मनो देहपरिमाणत्वमेवमिति परामृश्यते । एवं च देहपरिमाणत्वे सत्यात्मनो मशकादिदेहस्यात्मनो

---

ಸದಸದಾತ್ಮಕತ್ವೇ ಸತಿ ಸದಸದ್ವಿಲಕ್ಷಣತ್ವ (ಸತ್, ಅಸತ್ ಎರಡೂ ಆಗಿದ್ದು ಸತ್, ಅಸತ್ ಎರಡೂ ಅಲ್ಲದಿರುವುದು) ಎಂಬ, ಈ ವಸ್ತು ಹೀಗೆಯೇ ಎಂಬ ನಿಯಮವಿಲ್ಲದೆ ಏಳೂ ಪ್ರಕಾರಗಳು ಒಂದು ವಸ್ತುವಿನಲ್ಲಿರುವುದು ಯುಕ್ತವಲ್ಲ. ಏಕೆಂದರೆ, ಅಸಂಭವಾತ್–ಅಪ್ರಾಮಾಣಿಕವಾಗಿದ್ದು ಅಸಂಭಾವಿತವಾದ್ದರಿಂದ—ಎಂದು ಅರ್ಥ.

**ದೇಹಪರಿಮಾಣವೇ ಜೀವನ ಪರಿಮಾಣ ಎಂಬ ಜೈನವಾದದ ನಿರಾಕರಣೆ**

ದೇಹದ ಪರಿಮಾಣದಷ್ಟೇ ಜೀವನ ಪರಿಮಾಣ ಎಂದು ಜೈನರು ಒಪ್ಪಿರುವುದು ದೇಹದ ಎಲ್ಲ ಭಾಗದಲ್ಲೂ ನಡೆಯುವ ಕ್ರಿಯೆಗಳನ್ನು ವಿವರಿಸುವ ಸಲುವಾಗಿಯೋ ಅಥವಾ ದೇಹದ ಪರಿಮಾಣವನ್ನು ಬಿಟ್ಟು ಬೇರೆ ಪರಿಮಾಣ ಜೀವನಿಗಿಲ್ಲವಾದ್ದರಿಂದಲೋ ?

ಮೊದಲನೆಯ ಪಕ್ಷವನ್ನು ನಿರಾಕರಿಸುವ ಸೂತ್ರ—

ಓಂ ಏವಂ ಚಾತ್ಮಾऽಕಾರ್ತ್ಸ್ನ್ಯರ್ಮ್ ಓಂ (೨-೨-೩೪)

**ಸೂತ್ರಾರ್ಥ**

ಜೈನಮತವಿಚಾರಸಂದರ್ಭದಿಂದಾಗಿ ಸ್ಮರಣೆಗೆ ಬರುವ 'ಆತ್ಮನು ದೇಹಪರಿಮಾಣವುಳ್ಳವನು' ಎಂಬ ವಿಷಯವು 'ಏವಂ' ಎಂಬ ಪದದಿಂದ ಪರಾಮರ್ಶಿಸಲ್ಪಡುವುದು. ಏವಂ ಚ – ಆತ್ಮನು ದೇಹಪರಿಮಾಣದಷ್ಟೇ ಪರಿಮಾಣವುಳ್ಳವನಾದಲ್ಲಿ, ಸೊಳ್ಳೆ ಮೊದಲಾದ ದೇಹದಲ್ಲಿರುವ ಆತ್ಮನಿಗೆ ಆನೆ ಮೊದಲಾದ ದೇಹ

*

गजादिदेहप्राप्तावकात्स्न्यमपूर्णत्वं सर्वदेहाव्यापित्वं स्यादित्यर्थः। ततश्च न सर्वदेहचेष्टेति भावः। यद्वाऽऽत्मनो गजादिदेहस्थस्य मशकादिदेहप्राप्तावात्मनोऽकात्स्न्यं देह एव कात्स्न्यं न स्यादतिरेकः स्यादित्यर्थः। ततश्च कायपरिमाणत्वभङ्ग इति भावः। चशब्देनैवैषोऽप्यर्थः सङ्ग्राह्यो न वृत्त्यन्तरेणेत्येके॥

यदा यद्देहमाप्नोति तदा तद्देहपरिमाण इत्यत आह—

॥ ॐ न च पर्यायादप्यविरोधो विकारादिभ्यः ॐ ॥
२-२-३५

पर्यायादपि क्रमादपि, क्रमात् तत्तद्देहपरिमाणत्वाङ्गीकारादपि अविरोधो न च भवति। कुतः? विकारादिभ्यः विकारित्वापत्तेः।

---

ಲಭಿಸಿದಾಗ, ಅಕಾರ್ತ್ಸ್ನ್ಯವು–ಅಪೂರ್ಣತೆಯು ಅಂದರೆ ಇಡೀ ದೇಹದಲ್ಲಿ ವ್ಯಾಪ್ತಿ ಇಲ್ಲದಿರುವಿಕೆಯು ಉಂಟಾದೀತು ಎಂದು ಅರ್ಥ. ಆ ಕಾರಣದಿಂದ ದೇಹದ ಎಲ್ಲ ಭಾಗಗಳಲ್ಲಿ ಕ್ರಿಯೆಯೂ ಉಂಟಾಗಲಾರದು ಎಂದು ಭಾವ. ಅಥವಾ ಆನೆ ಮೊದಲಾದ ದೇಹದಲ್ಲಿರುವ ಆತ್ಮನಿಗೆ ಸೊಳ್ಳೆ, ಮೊದಲಾದ ದೇಹವು ಲಭಿಸಿದಾಗ, ಆತ್ಮನಿಗೆ, ಅಕಾರ್ತ್ಸ್ನ್ಯಂ–ದೇಹದಲ್ಲಿ ಮಾತ್ರ ವ್ಯಾಪ್ತಿ ಇಲ್ಲದಂತಾದೀತು, ದೇಹದ ಹೊರಗೂ ಆತ್ಮನಿದ್ದಾನೆಂದಾದೀತು ಎಂದು ಅರ್ಥ. ಆ ಕಾರಣದಿಂದಾಗಿ ಆತ್ಮನಿಗೆ ದೇಹ ಪರಿಮಾಣದಷ್ಟೇ ಪರಿಮಾಣ ಎಂಬ ಸಿದ್ಧಾಂತಕ್ಕೆ ಭಂಗ ಬರುವುದೆಂದು ಭಾವ. ಸೂತ್ರದಲ್ಲಿರುವ 'ಚ' ಶಬ್ದದಿಂದಲೇ ಈ ಅರ್ಥವನ್ನು ಸಂಗ್ರಹಿಸಲು ಸಾಧ್ಯ. ವ್ಯಾಖ್ಯಾನಾಂತರದ ಅಗತ್ಯವಿಲ್ಲ ಎಂದು ಕೆಲವರು ಹೇಳುವರು.

ಯಾವಾಗ ಯಾವ ದೇಹವನ್ನು ಪಡೆಯುವನೋ ಆಗ ಆತ್ಮನು ಆ ದೇಹದ ಪರಿಮಾಣವನ್ನು ಪಡೆಯುವನು. ಆದ್ದರಿಂದ ಯಾವುದೇ ದೋಷವಿಲ್ಲ ಎಂಬ ಆಶಂಕೆಗೆ ಉತ್ತರ—

ಓಂ ನ ಚ ಪರ್ಯಾಯಾದಪ್ಯವಿರೋಧೋ ವಿಕಾರಾದಿಭ್ಯಃ ಓಂ (೨–೨–೩೫)

**ಸೂತ್ರಾರ್ಥ**

ಪರ್ಯಾಯಾದಪಿ–ಕ್ರಮದಿಂದಲೂ ಕೂಡ. ಕ್ರಮದಿಂದ ಆಯಾಯಾ ದೇಹದ ಪರಿಮಾಣ ಆತ್ಮನಿಗೆ ಲಭಿಸುವುದು ಎಂದು ಅಂಗೀಕರಿಸಿದರೂ ವಿರೋಧವಿಲ್ಲವೆಂದಾಗ

ततश्चानित्यत्वानिर्मोक्षत्वशास्त्रवैयर्थ्यानि तेभ्य इत्यर्थः । स्वमते जीवस्य सुखादिभोगकृतोच्चत्वनीचत्वरूपविकारोऽस्ति । तस्य स्वरूपविकाससङ्कोचरूपत्वात् । तथापि चैतन्यादियावद्द्रव्यभाविधर्मनिवृत्तावेवानित्यत्वोपगमान्नानित्यत्वमुक्तं सुधायाम् । उक्तं च नयचन्द्रिकायाम्—सङ्कोचविकासादन्यथाभावान्नाशो नेति ॥

प्रागुक्तं प्रत्यक्षं प्रत्याह—

॥ ॐ अन्त्यावस्थितेश्चोभयनित्यत्वादविशेषात् ॐ ॥

२-२-३६

अन्त्यस्य मुक्तिगतात्मपरिमाणस्यावस्थितेस्तदवच्छेदकतया नित्यदेहावश्यम्भावेनोभयस्य मुक्तावात्मतद्देहयोर्नित्यत्वादद्यतनदेहानामपि

---

ಲಾರದು. ಏಕೆಂದರೆ, ವಿಕಾರಾದಿಭ್ಯಃ–ಆತ್ಮನು ವಿಕಾರಿಯಾಗಬೇಕಾದೀತು. ಅದರಿಂದಾಗಿ, ಆತ್ಮನಿಗೆ ಅನಿತ್ಯತೆ, ಮೋಕ್ಷವಿಲ್ಲದಿರುವುದು, ಶಾಸ್ತ್ರವೈಯರ್ಥ್ಯ–ಈ ದೋಷಗಳು ಜೈನರಿಗೆ ಬರುವವು ಎಂದು ಅರ್ಥ.

**ಸ್ವಮತದಲ್ಲಿ ಆತ್ಮನಿಗೆ ಅನಿತ್ಯತ್ವವಿಲ್ಲ**

ಸ್ವಮತದಲ್ಲೂ ಜೀವನಿಗೆ ಸುಖದುಃಖಗಳ ಅನುಭವದಿಂದಾಗಿ ಉಚ್ಚತ್ವ, ನೀಚತ್ವ ರೂಪವಾದ ವಿಕಾರವಿದೆ. ಏಕೆಂದರೆ, ಉಚ್ಚತ್ವ-ನೀಚತ್ವಗಳು ಜೀವಸ್ವರೂಪದ ವಿಕಾಸ-ಸಂಕೋಚಗಳೇ ಆಗಿವೆ. ಆದರೂ, ಚೇತನತ್ವವೇ ಮೊದಲಾದ ಯಾವದ್ದ್ರವ್ಯಭಾವಿಯಾದ ಧರ್ಮಗಳು ನಾಶವಾದರೆ ಮಾತ್ರ ಜೀವನಿಗೆ ಅನಿತ್ಯತ್ವ ಬರುವುದೆಂದು ಒಪ್ಪಿರುವುದರಿಂದ ಆತ್ಮನಿಗೆ ಅನಿತ್ಯತ್ವವಿಲ್ಲವೆಂದು ಸುಧಾದಲ್ಲಿ ಸ್ಪಷ್ಟಪಡಿಸಲಾಗಿದೆ. ನಯಚಂದ್ರಿಕಾದಲ್ಲೂ ಸಂಕೋಚ-ವಿಕಾಸಗಳಿಂದ ಆತ್ಮನಿಗೆ ಯಾವುದೇ ಬದಲಾವಣೆ ಇಲ್ಲದಿರುವುದರಿಂದ ನಾಶವಿಲ್ಲ—ಎಂದು ಹೇಳಲಾಗಿದೆ.

ಹಿಂದೆ ಪ್ರಸ್ತುತವಾದ ಇನ್ನೊಂದು ಪಕ್ಷವನ್ನು ಕುರಿತು ಉತ್ತರ—

ಓಂ ಅಂತ್ಯಾವಸ್ಥಿತೇಶ್ಚೋಭಯನಿತ್ಯತ್ವಾದವಿಶೇಷಾತ್ ಓಂ

(೨-೨-೩೬)

**ಸೂತ್ರಾರ್ಥ**

ಅಂತ್ಯ ಅಂದರೆ, ಮುಕ್ತಿಯನ್ನು ಹೊಂದಿರುವ ಆತ್ಮನ ಪರಿಮಾಣವು, ಅವಸ್ಥಿತೇಃ–ಇರುವುದರಿಂದ, ಆ ಪರಿಮಾಣಕ್ಕೆ ಆಶ್ರಯವಾಗಿ ನಿತ್ಯದೇಹವೂ ಅವಶ್ಯ

नित्यत्वं स्यादविशेषाद्देहत्वाविशेषादित्यर्थः । वृत्त्यन्तरं तु, अन्त्या याऽवस्थितिः सततोर्ध्वगतिरूपा मुक्त्याख्या तस्याश्च विकारात्तद्रूपादपि विकारात् आत्मनोऽनित्यत्वं स्यादिति पूर्वस्मादनुषङ्गः । न केवलं परिमाणादिति चार्थः । एवमपि तस्य नित्यत्वे उभयनित्यत्वादात्मप्रपञ्चयोर्द्वयोरपि नित्यत्वापाताद्विकारित्वमात्रस्य त्वयाऽप्रयोजकीकृतत्वाद्विकारविशेषस्य नाशव्याप्तत्वेन त्वयाऽनङ्गीकारादिति भावः । यद्वा स्थास्नूनां परिमाणभेदेनात्मनो विकारापत्त्या वा देहेन्द्रियापत्तिबाधकेन वा निरात्मकत्वमुपेतम् । तच्च न । आद्ये गजादिदेहस्याविशेषात् । अन्त्ये स्थास्नूनां मानुषाद्यविशेषात् गीतादिश्रवणेन स्थास्नूनामपि विकासदृष्ट्या देहेन्द्रियाद्यनुमानादिति सुधोक्तं ध्येयम् ।

---

ವಾಗಿ ಇರಬೇಕಾದ್ದರಿಂದ, ಉಭಯಸ್ಯ ನಿತ್ಯತ್ವಾತ್–ಮುಕ್ತಿಯಲ್ಲಿ ಆತ್ಮ ಮತ್ತು ಅವನ ದೇಹ ಇವೆರಡೂ ನಿತ್ಯವಾದುದರಿಂದ, ಈಗಿನ ದೇಹಗಳಿಗೂ ನಿತ್ಯತ್ವವಿರಬೇಕಾದೀತು. ಅವಿಶೇಷಾತ್–ಮುಕ್ತಿ ಮತ್ತು ಸಂಸಾರ ಇವೆರಡರ ದೇಹಗಳೂ ದೇಹಗಳಾಗಿರುವ ವಿಷಯದಲ್ಲಿ ವಿಶೇಷವಿಲ್ಲದಿರುವುದರಿಂದ ಎಂದು ಅರ್ಥ.

**ಸುಧಾರೀತ್ಯಾ ವ್ಯಾಖ್ಯಾನಾಂತರ**

"ಸತತ ಊರ್ಧ್ವಗಮನರೂಪವಾದ ಮುಕ್ತಿಯೆಂದು ಕರೆಯಲ್ಪಡುವ ಕೊನೆಯ ಯಾವ ಅವಸ್ಥೆ ಇದೆಯೋ ಆ ಅವಸ್ಥೆಯೆಂಬ ವಿಕಾರದಿಂದಲೂ ಕೂಡ ಆತ್ಮನಿಗೆ ಅನಿತ್ಯತ್ವ ಬಂದೀತು"—ಹಿಂದಿನ ಸೂತ್ರದಿಂದ ವಿಕಾರ ಮೊದಲಾದ ಪದಗಳನ್ನು ಇಲ್ಲಿ ಅನುವೃತ್ತಿಮಾಡಿಕೊಳ್ಳಲಾಗಿದೆ—ಕೇವಲ ಪರಿಮಾಣದಿಂದಲ್ಲದೇ ಮುಕ್ತಿಯಿಂದಲೂ ಆತ್ಮನಿಗೆ ಅನಿತ್ಯತ್ವ ಬಂದೀತು ಎಂದು 'ಚ' ಶಬ್ದದ ಅರ್ಥ. ಹೀಗೆ ವಿಕಾರವಿದ್ದರೂ ಆತ್ಮನು ನಿತ್ಯನೆಂದು ಹೇಳುವುದಾದಲ್ಲಿ, ಉಭಯನಿತ್ಯತ್ವಾತ್–ಆತ್ಮ, ಪ್ರಪಂಚ ಇವೆರಡೂ ನಿತ್ಯವಾಗಬೇಕಾದೀತು. ಆತ್ಮನಿಗೆ ಪರಿಮಾಣ, ಮುಕ್ತಿ ಮೊದಲಾದ ವಿಕಾರವಿಶೇಷಗಳಿದ್ದರೂ ನಾಶವಿರಬೇಕೆಂಬ ವ್ಯಾಪ್ತಿಯನ್ನು ಜೈನರು ಒಪ್ಪದಿರುವುದರಿಂದ ಕೇವಲ ವಿಕಾರವು ಪ್ರಪಂಚದ ಅನಿತ್ಯತೆಯನ್ನು ಸಾಧಿಸಲು ಅಪ್ರಯೋಜಕವಾಗುವಂತೆ ಮಾಡಲಾಯಿತು ಎಂದು ಭಾವ.

ಅಥವಾ, ವೃಕ್ಷಗಳಲ್ಲೂ ಆತ್ಮನಿರುವುದಾದರೆ ಪರಿಮಾಣದ ವ್ಯತ್ಯಾಸದಿಂದಾಗಿ ಆತ್ಮನಿಗೆ ವಿಕಾರ ಬಂದೀತು ಎಂಬ ಬಾಧಕದಿಂದಲೋ ವೃಕ್ಷಕ್ಕೂ ದೇಹೇಂದ್ರಿಯಾದಿಗಳಿರಬೇಕಾದೀತು ಎಂಬ ಬಾಧಕದಿಂದಲೋ ವೃಕ್ಷಗಳು ನಿರಾತ್ಮಕವೆಂದು ಜೈನರು

अत्र प्रपञ्चस्यापि नित्यत्वादिति वाच्ये उभयेत्युक्तिर्न्यायसाम्यसूचनाय ॥ १० ॥

पत्युरधिकरणम्—११

## ॥ ॐ पत्युरसामञ्जस्यात् ॐ ॥ २-२-३७

अत्र नये नैकस्मिन्नित्युक्तदोषोऽत्र नेति प्राप्तं सौरादिमतोपलक्षणत्वेन शैवमतं निरस्यते । नेति कारणत्वमिति च वर्तते । पत्युः पशुपतेः न जगत्कारणत्वं युक्तम् । कुतः ? पत्युरसामञ्जस्यात् पारतन्त्र्यजनिमृत्यादिदोषित्वादित्यर्थः । तच्च श्रुत्यादिसिद्धमिति भावः । पत्युरित्युभयत्रान्वेति ॥

---

ಹೇಳುವರು—ಅದೂ ಸರಿಯಾದುದಲ್ಲ ಮೊದಲನೆಯ ಪಕ್ಷದಲ್ಲಿ ವೃಕ್ಷಗಳಿಗೆ ಗಜಾದಿ ದೇಹಗಳಿಂದ ಯಾವುದೇ ವಿಶೇಷವಿಲ್ಲ. ಅಂತಿಮ ಪಕ್ಷದಲ್ಲಿ, ವೃಕ್ಷಗಳಿಗೆ ಮನುಷ್ಯಾದಿಗಳಿಂದ ಯಾವುದೇ ವಿಶೇಷವಿಲ್ಲ. ಸಂಗೀತಶ್ರವಣದಿಂದ ವೃಕ್ಷಗಳಿಗೂ ವಿಕಾಸವಾಗುವುದು ದೃಷ್ಟವಾಗಿರುವುದರಿಂದ ಅವುಗಳಿಗೂ ದೇಹೇಂದ್ರಿಯಾದಿಗಳಿವೆ ಎಂದು ಸಾಧಿಸಬಹುದು—ಎಂದು ಸುಧಾದಲ್ಲಿ ಹೇಳಿರುವ ವ್ಯಾಖ್ಯಾನಾಂತರವನ್ನು ಗಮನಿಸಬೇಕು.

ಈ ಸೂತ್ರದಲ್ಲಿ ' ಪ್ರಪಂಚಸ್ಯಾಪಿ ನಿತ್ಯತ್ವಾತ್ ' ಎಂದು ಹೇಳಬೇಕಾಗಿದ್ದರೂ, ಆತ್ಮನಿಗೂ ಪ್ರಪಂಚಕ್ಕೂ ಇರುವ ನ್ಯಾಯಸಾಮ್ಯವನ್ನು ಸೂಚಿಸಲು ' ಉಭಯನಿತ್ಯತ್ವಾತ್ ' ಎಂದು ಹೇಳಲಾಗಿದೆ.

ಪತ್ಯುರಧಿಕರಣ—೧೧

## ಓಂ ಪತ್ಯುರಸಾಮಂಜಸ್ಯಾತ್ ಓಂ (೨-೨-೩೭)

**ಅಧಿಕರಣದ ವಿಷಯ ಮತ್ತು ಸೂತ್ರಾರ್ಥ**

ಈ ಅಧಿಕರಣದಲ್ಲಿ, ' ನೈಕಸ್ಮಿನ್ ' (ಬ್ರ.ಸೂ. ೨–೨–೩೩) ಎಂಬಲ್ಲಿ ಹೇಳಿರುವ ದೋಷಗಳು ಈ ಮತದಲ್ಲಿ ಇಲ್ಲವೆಂದು ಪ್ರಾಪ್ತವಾಗುವ ಶೈವಮತವನ್ನು, ಸೌರಮತ ಮೊದಲಾದ ಮತಗಳ ನಿರಾಕರಣೆಯೂ ಇದರಂತೆಯೇ ಎಂದು ಸೂಚಿಸುವ ಸಲುವಾಗಿ, ನಿರಾಕರಿಸಲಾಗುವುದು. 'ನ' ಮತ್ತು 'ಕಾರಣತ್ವ' ಎಂಬ ಪದಗಳು ಅನುವೃತ್ತವಾಗುವುವು. ಪತ್ಯುಃ–ಪಶುಪತಿಗೆ, ಜಗತ್ಕಾರಣತ್ವವು ಯುಕ್ತವಲ್ಲ. ಏಕೆಂದರೆ, ಪತ್ಯುಃ ಅಸಾಮಂಜಸ್ಯಾತ್–ಪಶುಪತಿಗೆ ಪಾರತಂತ್ರ್ಯ, ಜನನ, ಮರಣ ಮೊದಲಾದ

इतश्च न युक्तमित्याह—

॥ ॐ सम्बन्धानुपपत्तेश्च ॐ ॥ २–२–३८

पत्युरित्यस्ति । पत्युरशरीरत्वाज्जगता कार्यकर्तृभावरूपसम्बन्धानुपपत्तेश्च न पत्युः कर्तृत्वमित्यर्थः ॥

इतश्चैवमित्याह—

॥ ॐ अधिष्ठानानुपपत्तेश्च ॐ ॥ २-२-३९

पृथिव्याद्यधिष्ठानानुपपत्तेश्च न पत्युः कारणत्वमित्यर्थः । भूतानां प्रलीनत्वेन सृष्ट्यादिकालेऽभावादिति भावः । अभावादिति

---

ದೋಷಗಳಿರುವುದರಿಂದ ಎಂದು ಅರ್ಥ. ಆ ದೋಷಗಳು ಶ್ರುತಿ ಮೊದಲಾದ ಪ್ರಮಾಣಗಳಿಂದ ಸಿದ್ಧವಾಗಿವೆ ಎಂದು ಭಾವ. 'ಪತ್ಯುಃ' ಎಂಬ ಪದವು ಎರಡು ಕಡೆಯೂ ಅನ್ವಯಿಸುವುದು.[1]

ಈ ಮುಂದಿನ ಕಾರಣದಿಂದಲೂ ಪಶುಪತಿಗೆ ಜಗತ್ಕಾರಣತ್ವ ಯುಕ್ತವಲ್ಲವೆಂದು ಹೇಳುವ ಸೂತ್ರ—

ಓಂ ಸಂಬಂಧಾನುಪಪತ್ತೇಶ್ಚ ಓಂ (೨-೨-೩೮)

**ಸೂತ್ರಾರ್ಥ**

'ಪತ್ಯುಃ' ಎಂಬ ಪದವು ಅನುವೃತ್ತವಾಗುವುದು. ಪಶುಪತಿಗೆ ಶರೀರವಿಲ್ಲದಿರುವುದರಿಂದ ಜಗತ್ತಿಗೂ ಪಶುಪತಿಗೂ ಕಾರ್ಯಕರ್ತೃಭಾವರೂಪವಾದ ಸಂಬಂಧವು ಅನುಪಪನ್ನವಾಗುವುದು. ಈ ಕಾರಣದಿಂದಲೂ ಪಶುಪತಿಗೆ ಜಗತ್ಕರ್ತೃತ್ವವಿಲ್ಲವೆಂದು ಅರ್ಥ.

ಇನ್ನೊಂದು ಕಾರಣದಿಂದಲೂ ಪಶುಪತಿಗೆ ಜಗತ್ಕಾರಣತ್ವವಿಲ್ಲವೆಂದು ಹೇಳುವ ಸೂತ್ರ—

ಓಂ ಅಧಿಷ್ಠಾನಾನುಪಪತ್ತೇಶ್ಚ ಓಂ (೨-೨-೩೯)

**ಸೂತ್ರಾರ್ಥ**

ಭೂಮಿಯೇ ಮೊದಲಾದ ಆಶ್ರಯವು ಅನುಪಪನ್ನವಾಗಿರುವ ಕಾರಣದಿಂದಲೂ ಪಶುಪತಿಗೆ ಜಗತ್ಕಾರಣತ್ವವಿಲ್ಲವೆಂದು ಅರ್ಥ. ಭೂತಗಳೆಲ್ಲವೂ ಲಯವನ್ನು ಹೊಂದಿರು

---

1. "ಪತ್ಯುಃ ನ ಜಗತ್ಕಾರಣತ್ವಂ, ಪತ್ಯುಃ ಅಸಾಮಂಜಸ್ಯಾತ್" ಹೀಗೆ ಎರಡು ಕಡೆ 'ಪತ್ಯುಃ' ಎಂಬ ಶಬ್ದದ ಅನ್ವಯವೆಂದು ಭಾವ.

वाच्येऽनुपपत्तेरित्युक्तिः कारकत्वात् तस्यैवाधिष्ठानत्वे चेतनान्तरवद्भोगप्राप्त्या तदनुपपत्तेरित्यग्रेतनदोषसूचनाय ॥

योगद्वयोक्तमाक्षिप्याह—

॥ ॐ करणवच्चेन्न भोगादिभ्यः ॐ ॥ २-२-४०

करणमिति देह उच्यते । जीवस्य तत्तत्कार्यजनने तस्य सहकारित्वात् । एतच्चोपलक्षणम् । अस्मदादिशरीरवदिदं कारकजातं साक्षात् प्रयत्नाधिष्ठेयतया पत्युः शरीररूपमधिष्ठानरूपं चेति न

---

ವುದರಿಂದ ಸೃಷ್ಟಿಯ ಆದಿಕಾಲದಲ್ಲಿ ಅಧಿಷ್ಠಾನವಾಗಬಲ್ಲ ಯಾವ ಭೂತವೂ ಇಲ್ಲವೆಂದು ಭಾವ.

**'ಅನುಪಪತ್ತಿ' ಪದದ ಸ್ವಾರಸ್ಯ**

ಸೃಷ್ಟಿಕ್ರಿಯೆಗೆ ಕಾರಣನಾಗಿರುವುದರಿಂದ ಶಿವನನ್ನೇ ಅಧಿಷ್ಠಾನವೆಂದು ಹೇಳಿದಲ್ಲಿ ಇತರ ಚೇತನರಂತೆ ಶಿವನಿಗೂ ಸುಖದುಃಖಾನುಭವರೂಪವಾದ ಭೋಗವುಂಟಾಗಬೇಕಾದೀತು. ಆದ್ದರಿಂದ ಶಿವನಿಗೆ ಅಧಿಷ್ಠಾನತ್ವವು ಅನುಪಪನ್ನವೆಂದು ಮುಂದೆ ಹೇಳುವ ದೋಷವನ್ನು ಸೂಚಿಸುವ ಸಲುವಾಗಿ 'ಅಭಾವಾತ್' ಎಂದು ಹೇಳಬೇಕಾಗಿದ್ದರೂ 'ಅನುಪಪತ್ತೇಃ' ಎಂದು ಹೇಳಲಾಗಿದೆ.

ಹಿಂದಿನ ಎರಡು ಸೂತ್ರಗಳಲ್ಲಿ ಹೇಳಿದುದನ್ನು ಆಕ್ಷೇಪಿಸಿ ಉತ್ತರ ನೀಡುವ ಸೂತ್ರ—

## ಓಂ ಕರಣವಚ್ಚೇನ್ನ ಭೋಗಾದಿಭ್ಯಃ ಓಂ (೨-೨-೪೦)

**ಸೂತ್ರಾರ್ಥ**

ಆಯಾಯಾ ಕಾರ್ಯಗಳು ಉಂಟಾಗಬೇಕಾದರೆ ಜೀವನಿಗೆ ದೇಹವು ಸಹಕಾರಿಯಾಗಿರುವುದರಿಂದ ಇಲ್ಲಿ 'ಕರಣ'ಪದವು ದೇಹವನ್ನು ಹೇಳುವುದು. ಇದು ಉಪಲಕ್ಷಣ.[1] ಜಗತ್ತಿನ ಸೃಷ್ಟಿಗೆ ಆವಶ್ಯಕವಾದ ಕಾರಣಸಮೂಹವು ನಮ್ಮ ಪ್ರಯತ್ನಾಧಿಷ್ಠೇಯವಾಗಿರುವ ನಮ್ಮ ಶರೀರದಂತೆ ಶಿವನ ಸೃಷ್ಟಿಯ ಪ್ರಯತ್ನಕ್ಕೆ ಸಾಕ್ಷಾತ್ ಅಧಿಷ್ಠೇಯವಾದುದರಿಂದ ಶಿವನ ಶರೀರವೂ ಅಧಿಷ್ಠಾನವೂ ಆಗಿದೆ. ಆದ್ದರಿಂದ 'ಸಂಬಂಧಾನುಪಪತ್ತಿ' ಮತ್ತು

---

1. 'ಕರಣ'ಶಬ್ದಕ್ಕೆ ದೇಹವೆಂಬ ಅರ್ಥವನ್ನು ಮಾತ್ರವಲ್ಲದೆ ಅಧಿಷ್ಠಾನವೆಂಬ ಅರ್ಥವನ್ನೂ ಗ್ರಹಿಸಬೇಕೆಂದು ಅಭಿಪ್ರಾಯ. ಮುಂದಿನ ವಾಕ್ಯದಿಂದ ಇದು ಸ್ಪಷ್ಟವಾಗುವುದು.

सम्बन्धानुपपत्त्यादीति चेन्न । भोगादिभ्यः सुखदुःखानुभवरूप-भोगोत्पत्तिमरणाख्यदोषेभ्य इत्यर्थः । कारकजातस्य शरीरत्वे तद्धर्म-प्राप्तेरनिवारणादिति भावः ॥

करणवच्चेदित्युक्तं देहवत्त्वपक्षं सम्बन्धेत्युक्तं तदभावपक्षं च दोषान्तरेण निरस्यति—

॥ ॐ अन्तवत्त्वमसर्वज्ञता वा ॐ ॥ २-२-४१

पत्युरित्यस्ति । शिवो देहवान् न वा । आद्ये पत्युरन्तवत्त्वं परिच्छिन्नत्वं स्यात् । अन्त्ये सर्वज्ञता न स्यात् । अशरीरिणो ज्ञानस्यैवाभावादिति भावः । वाशब्दो विकल्पार्थः । न हि तादृशस्य चैत्रादिवत् कर्तृत्वं युक्तमिति भावः । एतेन लीलाविग्रहोपादानमस्तीति

---

'ಅಧಿಷ್ಠಾನಾನುಪಪತ್ತಿ' ದೋಷಗಳಿಲ್ಲ ಎಂದರೆ ಅದು ಯುಕ್ತವಲ್ಲ. ಭೋಗಾದಿಭ್ಯಃ– ಸುಖದುಃಖಾನುಭವರೂಪವಾದ ಭೋಗ, ಜನನ, ಮರಣಗಳೆಂಬ ದೋಷಗಳಿಂದ ಎಂದು ಅರ್ಥ. ಕಾರಣಸಮೂಹವೆಲ್ಲವೂ ಶಿವನ ಶರೀರವಾದಲ್ಲಿ ಶರೀರಧರ್ಮವಾದ ಭೋಗಾದಿದೋಷಗಳನ್ನು ನಿವಾರಿಸಲು ಸಾಧ್ಯವಿಲ್ಲವೆಂದು ಭಾವ.

'ಕರಣವಚ್ಚೇತ್' ಎಂಬಲ್ಲಿ ಹೇಳಿರುವ 'ಶಿವನಿಗೆ ದೇಹವಿದೆ' ಎಂಬ ಪಕ್ಷವನ್ನೂ, 'ಸಂಬಂಧ' ಎಂಬಲ್ಲಿ ಹೇಳಿರುವ 'ಶಿವನಿಗೆ ದೇಹವಿಲ್ಲ' ಎಂಬ ಪಕ್ಷವನ್ನೂ ದೋಷಾಂತರವನ್ನು ಹೇಳುವ ಮೂಲಕ ನಿರಾಕರಿಸುವ ಸೂತ್ರ—

ಓಂ ಅಂತವತ್ತ್ವಮಸರ್ವಜ್ಞತಾ ವಾ ಓಂ (೨-೨-೪೧)

**ಸೂತ್ರಾರ್ಥ**

'ಪತ್ಯುಃ' ಎಂಬ ಪದವು ಅನುವೃತ್ತವಾಗುವುದು. ಶಿವನು ದೇಹವುಳ್ಳವನೋ ಅಲ್ಲವೋ ? ಮೊದಲನೆಯ ಪಕ್ಷದಲ್ಲಿ ಪಶುಪತಿಗೆ ಅಂತವತ್ತ್ವಂ–ಪರಿಚ್ಛಿನ್ನತ್ವ ಬಂದೀತು. ಎರಡನೆಯ ಪಕ್ಷವನ್ನು ಒಪ್ಪಿದಲ್ಲಿ ಶಿವನು ಸರ್ವಜ್ಞನಲ್ಲವೆಂದಾದೀತು. ಶರೀರವಿಲ್ಲದಿರುವವನಿಗೆ ಜ್ಞಾನವೇ ಇರಲಾರದು ಎಂದು ಭಾವ. 'ವಾ' ಶಬ್ದವು ವಿಕಲ್ಪಾರ್ಥಕವಾದುದು. ಅಸರ್ವಜ್ಞರಾದ ಚೈತ್ರಾದಿಗಳಿಗೆ ಹೇಗೆ ಜಗತ್ಕರ್ತೃತ್ವ ಯುಕ್ತವಲ್ಲವೋ ಹಾಗೆ ಅಂತಹ ಶಿವನಿಗೂ ಜಗತ್ಕರ್ತೃತ್ವ ಯುಕ್ತವಲ್ಲವಷ್ಟೇ— ಎಂದು ಭಾವ.

प्रत्युक्तम् । तस्यापि देहत्वेन मृतिरूपान्तवत्त्वानिस्तारात् । स्वमते चैते दोषा आत्मनि चैवमित्यादिसूत्रैरेव श्रुतिबलान्निरस्ता इत्याकूतम् । ॥ ११ ॥

उत्पत्त्यधिकरणम्—१२

## ॥ ॐ उत्पत्त्यसम्भवात् ॐ ॥ २-२-४२

अत्र पूर्वन्यायेन निरस्तमपि शक्तिमतं विशेषदोषविवक्षया पुनर्निरस्यते । न शक्तिर्जगत्कारणमित्यन्वेति । कुतः ? उत्पत्त्यसम्भवात् । ततोऽपत्योत्पत्त्यसम्भवादित्यर्थः । पुरुषाननुगृहीतस्त्रीमात्रादपत्योत्पत्तेरदर्शनादिति भावः ॥

---

ಇದೇ ಕಾರಣದಿಂದ, ಶಿವನು ಸೃಷ್ಟಿಗಾಗಿ ಲೀಲಾಶರೀರವನ್ನು ಸ್ವೀಕರಿಸುವುದುಂಟು ಎಂಬ ವಾದವು ನಿರಾಕರಿಸಲ್ಪಡುವುದು. ಏಕೆಂದರೆ, ಲೀಲಾಶರೀರವೂ ಶರೀರವೇ ಆದ್ದರಿಂದ ಮರಣರೂಪವಾದ ಅಂತವತ್ತ್ವವನ್ನು ನಿವಾರಿಸಲು ಸಾಧ್ಯವೇ ಆಗದು. ಸ್ವಮತದಲ್ಲಿ ಈ ದೋಷಗಳನ್ನು 'ಆತ್ಮನಿ ಚೈವಂ' (ಬ್ರ.ಸೂ. ೨–೧–೨೮) ಇತ್ಯಾದಿ ಸೂತ್ರಗಳಿಂದ ಶ್ರುತಿಗಳ ಆಧಾರದಿಂದ ನಿರಾಕರಿಸಲಾಗಿದೆ ಎಂದು ಆಂತರ್ಯ.

ಉತ್ಪತ್ತ್ಯಧಿಕರಣ—೧೨

## ಓಂ ಉತ್ಪತ್ತ್ಯಸಂಭವಾತ್ ಓಂ (೨--೨--೪೨)

### ಅಧಿಕರಣದ ವಿಷಯ ಮತ್ತು ಸೂತ್ರಾರ್ಥ

ಈ ಅಧಿಕರಣದಲ್ಲಿ, ಹಿಂದಿನ ಅಧಿಕರಣದ ನ್ಯಾಯದಿಂದಲೇ ಶಕ್ತಿಮತವು ನಿರಾಕೃತವಾಗಿದ್ದರೂ ವಿಶೇಷ ದೋಷಗಳನ್ನು ಹೇಳುವ ಉದ್ದೇಶದಿಂದ ಪುನಃ ನಿರಾಕರಿಸಲ್ಪಡುವುದು. 'ಶಕ್ತಿಯು ಜಗತ್ಕಾರಣವಲ್ಲ' ಎಂಬ ಪದಗಳು ಅನ್ವಿತವಾಗುತ್ತವೆ. ಏಕೆಂದರೆ, ಉತ್ಪತ್ತ್ಯಸಂಭವಾತ್–ಆ ಶಕ್ತಿದೇವತೆಯಿಂದ ಸಂತಾನದ ಉತ್ಪತ್ತಿ ಸಾಧ್ಯವಿಲ್ಲವಾದ್ದರಿಂದ ಎಂದು ಅರ್ಥ. ಪುರುಷನ ಅನುಗ್ರಹವಿಲ್ಲದೆ ಕೇವಲ ಸ್ತ್ರೀಯಿಂದ ಸಂತಾನದ ಉತ್ಪತ್ತಿ ಎಲ್ಲೂ ದೃಷ್ಟವಾಗಿಲ್ಲವೆಂದು ಭಾವ.

शिवानुगृहीता शक्तिः कारणमिति मध्यमवाममतं निराह—

॥ ॐ न च कर्तुः करणम् ॐ ॥ २-२-४३

कर्तुश्चानुग्राहकस्य शिवस्य ज्ञानादिसाधनं नास्तीत्यर्थः । शिवस्य कारणोत्पादने केवलशक्तेरशक्तेरिति भावः ॥

ज्ञानदेहादिकारणवान् अनुग्राहकः शिव इत्यणुवाममतं निराह—

॥ ॐ विज्ञानादिभावे वा तदप्रतिषेधः ॐ ॥ २-२-४४

कर्तुरित्यस्ति । विज्ञानादिभावेऽङ्गीकृते सति तस्य प्रकृतशैवमतस्याप्रतिषेधः प्रतिषेधो न कृतः स्यात्, अनुमतिः स्यादित्यर्थः ।

---

ಶಿವನಿಂದ ಅನುಗೃಹೀತಳಾದ ಶಕ್ತಿಯು ಜಗತ್ಕಾರಣವೆಂದು ಹೇಳುವ ಮಧ್ಯಮ ವಾಮಮತವನ್ನು ನಿರಾಕರಿಸುವ ಸೂತ್ರ—

ಓಂ ನ ಚ ಕರ್ತುಃ ಕರಣಮ್ ಓಂ (೨-೨-೪೩)

**ಸೂತ್ರಾರ್ಥ**

ಕರ್ತುಶ್ಚ–ಅನುಗ್ರಾಹಕನಾದ ಶಿವನಿಗೆ ಜ್ಞಾನವೇ ಮೊದಲಾದ ಸಾಧನಗಳಿಲ್ಲವೆಂದು ಅರ್ಥ. ಶಿವನಿಗೆ ಜ್ಞಾನವೇ ಮೊದಲಾದ ಸಾಧನಗಳು ಹುಟ್ಟುವಂತೆ ಮಾಡಲು ಕೇವಲ ಶಕ್ತಿದೇವತೆಗೆ ಶಕ್ತಿಯಿಲ್ಲವೆಂದು ಭಾವ.

ಜ್ಞಾನ, ದೇಹ ಮೊದಲಾದ ಕಾರಣವುಳ್ಳ ಶಿವನೇ ಶಕ್ತಿಗೆ ಅನುಗ್ರಾಹಕ ಎಂದು ಹೇಳುವ ಅಣುವಾಮಮತವನ್ನು ನಿರಾಕರಿಸುವ ಸೂತ್ರ—

ಓಂ ವಿಜ್ಞಾನಾದಿಭಾವೇ ವಾ ತದಪ್ರತಿಷೇಧಃ ಓಂ (೨-೨-೪೪)

**ಸೂತ್ರಾರ್ಥ**

'ಕರ್ತುಃ' ಎಂಬ ಪದವು ಅನುವೃತ್ತವಾಗುವುದು. ವಿಜ್ಞಾನಾದಿಭಾವೇ ವಾ– ವಿಜ್ಞಾನ ಮೊದಲಾದವುಗಳು ಶಿವನಿಗೆ ಇವೆ ಎಂದು ಒಪ್ಪಿದಲ್ಲಿ, ತದಪ್ರತಿಷೇಧಃ– ಪ್ರಕೃತವಾದ ಶೈವಮತವನ್ನು ನಿರಾಕರಿಸಿದಂತೆ ಆಗಲಾರದು, ಅದನ್ನು ಒಪ್ಪಿದಂತೆ

तादृशशिवेनैव सर्वकार्योत्पत्तौ व्यर्थं शक्तिकर्तृत्वाङ्गीकरणम् । शिवकर्तृत्वं च प्राङ् निरस्तमिति भावः ॥

एवं शाक्तेयमतत्रयं पृथङ् निरस्य सामान्येनापि निराह—

**॥ ॐ विप्रतिषेधाच्च ॐ ॥ २-२-४५**

सकलश्रुत्यादिविरुद्धत्वाच्चासमञ्जसं शक्तिमतमिति योज्यम् ॥ १२ ॥

इति श्रीमद्राघवेन्द्रयतिकृतायां तन्त्रदीपिकायां द्वितीयाध्यायस्य द्वितीयः पादः समाप्तः ॥ श्रीकृष्णार्पणमस्तु ॥

---

ಆಗುವುದು ಎಂದು ಅರ್ಥ. ಅಂತಹ ಶಿವನಿಂದಲೇ ಎಲ್ಲ ಜಗತ್ತಿನ ಉತ್ಪತ್ತಿಯಾಗಲು ಸಾಧ್ಯವಿರುವಾಗ ಶಕ್ತಿ ಜಗತ್ಕಾರಣ ಎಂದು ಒಪ್ಪುವುದು ವ್ಯರ್ಥ. ಶಿವನೇ ಜಗತ್ಕಾರಣ ಎಂಬ ವಾದವಂತೂ ಹಿಂದೆ ನಿರಾಕೃತವಾಗಿದೆ ಎಂದು ಭಾವ.

ಹೀಗೆ ಮೂರು ಶಾಕ್ತೇಯ ಮತಗಳನ್ನು ಪ್ರತ್ಯೇಕವಾಗಿ ಖಂಡಿಸಿ ಸಮಾನವಾದ ದೋಷದಿಂದಲೂ ನಿರಾಕರಿಸುವ ಸೂತ್ರ—

ಓಂ ವಿಪ್ರತಿಷೇಧಾಚ್ಚ ಓಂ (೨-೨-೪೫)

**ಸೂತ್ರಾರ್ಥ**

ಶ್ರುತಿ ಮೊದಲಾದ ಸಕಲ ಪ್ರಮಾಣವಿರುದ್ಧವಾಗಿರುವುದರಿಂದಲೂ ಶಕ್ತಿಮತವು ಅಸಮಂಜಸವಾಗಿದೆ. 'ಶಕ್ತಿಮತವು ಅಸಮಂಜಸವಾಗಿದೆ' ಎಂಬ ಪದಗಳನ್ನು ಇಲ್ಲಿ ಯೋಜಿಸಿಕೊಳ್ಳಬೇಕು.

ಶ್ರೀಮದ್ರಾಘವೇಂದ್ರಯತಿಗಳು ರಚಿಸಿರುವ ತಂತ್ರದೀಪಿಕೆಯಲ್ಲಿ ದ್ವಿತೀಯಾಧ್ಯಾಯದ ದ್ವಿತೀಯಪಾದವು ಸಮಾಪ್ತವಾಯಿತು.

ಶ್ರೀಕೃಷ್ಣಾರ್ಪಣಮಸ್ತು

# अथ द्वितीयाध्यायस्य तृतीयः पादः

विप्रतिषेधादित्युक्तदोषो वैदिकमतेऽपि स्यादित्याशङ्कां व्युदासयितुमत्र पादे श्रुतिविरोधो निराक्रियते ॥

वियदधिकरणम्—१

## ॥ ॐ न वियदश्रुतेः ॐ ॥ २-३-१

अत्र नये वियदुत्पत्त्यनुत्पत्तिश्रुत्योरविरोध उच्यते । उत्पत्त्यसम्भवे वृत्तेरनुत्पत्तीत्यन्वेति । वियदनुत्पत्तिमन्न उत्पत्तिमदेव । कुतः ? अश्रुतेः तदनुत्पत्तिश्रुत्यभावादित्यर्थः । अत्र श्रुतौ सूत्रे च वियत्पदेन भूताकाशौ तदभिमानिनौ चेति चतुष्टयमुच्यते ।

---

# ದ್ವಿತೀಯಾಧ್ಯಾಯ—ತೃತೀಯಪಾದ

**ಪಾದದ ವಿಷಯ**

'ವಿಪ್ರತಿಷೇಧಾತ್' (ಬ್ರ. ಸೂ. ೨-೨-೪೫) ಎಂಬಲ್ಲಿ ಹೇಳಿರುವ ದೋಷ ವೈದಿಕಮತದಲ್ಲೂ ಬರುವುದು ಎಂಬ ಆಶಂಕೆಯನ್ನು ಪರಿಹರಿಸಲು ಈ ಪಾದದಲ್ಲಿ ವೈದಿಕಮತಕ್ಕೆ ಶ್ರುತಿವಿರೋಧವನ್ನು ನಿರಾಕರಿಸಲಾಗುವುದು.

ವಿಯದಧಿಕರಣ—೧

## ಓಂ ನ ವಿಯದಶ್ರುತೇಃ ಓಂ (೨-೩-೧)

**ಅಧಿಕರಣದ ವಿಷಯ ಮತ್ತು ಉದ್ದೇಶ**

ಈ ಅಧಿಕರಣದಲ್ಲಿ, ಆಕಾಶಕ್ಕೆ ಉತ್ಪತ್ತಿ ಇದೆ — ಇಲ್ಲ ಎಂದು ಹೇಳುವ ಶ್ರುತಿಗಳಿಗೆ ವಿರೋಧವಿಲ್ಲವೆಂದು ಹೇಳಲಾಗುವುದು. ಹಿಂದಿನ ಪಾದದ ಕೊನೆಯ ಅಧಿಕರಣದಲ್ಲಿರುವ 'ಉತ್ಪತ್ತ್ಯಸಂಭವ' ಎಂಬ ಸಮಾಸದಿಂದ ಲಬ್ಧವಾಗುವ 'ಅನುತ್ಪತ್ತಿ' ಎಂಬ ಪದವು ಇಲ್ಲಿ ಅನ್ವಿತವಾಗುವುದು. ಆಕಾಶವು ಅನುತ್ಪತ್ತಿಯನ್ನು ಪಡೆದಿಲ್ಲ, ಉತ್ಪತ್ತಿಯನ್ನೇ ಪಡೆದಿದೆ. ಏಕೆಂದರೆ, ಅಶ್ರುತೇಃ—ಆಕಾಶಕ್ಕೆ ಉತ್ಪತ್ತಿಯಿಲ್ಲವೆಂದು ಹೇಳುವ ಶ್ರುತಿಯಿಲ್ಲವಾದ್ದರಿಂದ ಎಂದು ಅರ್ಥ. ಇಲ್ಲಿ, ಶ್ರುತಿ ಮತ್ತು ಸೂತ್ರಗಳಲ್ಲಿ 'ವಿಯತ್' ಪದವು, ಭೂತಾಕಾಶ, ಅವ್ಯಾಕೃತಾಕಾಶ ಮತ್ತು ಅವೆರಡರ ಅಭಿಮಾನಿಗಳು—ಹೀಗೆ ನಾಲ್ಕನ್ನು ಹೇಳುವುದು.

वियदिति च प्रकृतिजीवचैतन्यकालवेदमहदहङ्कारमनोबुद्धयादीनां तदभिमानिनां चोपलक्षकमिति सुधायाम् । विशेषव्याप्तिमत्त्वात्तत्सर्वमुच्यत इति तत्त्वप्रदीपे । उत्पत्तिश्चात्र पराधीनविशेषावाप्तिरूपा । सा च नित्ये यथायोग्यम् । श्रियः सिसृक्षुत्वं, प्रकृतेः परिणामः, आकाशस्य मूर्तसम्बन्ध इत्यादि । अन्यत्र भूत्वा भवनरूपा । उत्पत्तिश्रुतिरपि तत्तत्परा । एवमग्रेऽपि बोध्यम् ।

उत्पत्तौ मानाभावादेवानुत्पत्तिमत्त्वं सिद्धयतीत्यत आह—

॥ ॐ अस्ति तु ॐ ॥ २-३-२

---

**ಸುಧಾ ಮತ್ತು ತತ್ತ್ವಪ್ರದೀಪರೀತ್ಯಾ 'ವಿಯತ್' ಪದದ ಅರ್ಥ**

'ವಿಯತ್' ಪದವು ಆಕಾಶವನ್ನು ಮಾತ್ರವಲ್ಲದೆ ಉಪಲಕ್ಷಣಯಾ, ಪ್ರಕೃತಿ, ಜೀವಚೈತನ್ಯ, ಕಾಲ, ವೇದ, ಮಹತ್ತತ್ತ್ವ, ಅಹಂಕಾರತತ್ತ್ವ, ಮನಸ್ಸು, ಬುದ್ಧಿ ಮೊದಲಾದವುಗಳನ್ನೂ ಅವುಗಳ ಅಭಿಮಾನಿಗಳನ್ನೂ ಹೇಳುವುದೆಂದು ಸುಧಾದಲ್ಲಿ ಹೇಳಿದೆ. ವಿಶೇಷ ವ್ಯಾಪ್ತಿಯನ್ನು ಪಡೆದಿರುವ ಕಾರಣದಿಂದ ಪ್ರಕೃತಿ ಮೊದಲಾದ ಈ ಎಲ್ಲವನ್ನೂ 'ವಿಯತ್' ಪದವು ಹೇಳುವುದೆಂದು ತತ್ತ್ವಪ್ರದೀಪದಲ್ಲಿ ಹೇಳಿದೆ.

**ಉತ್ಪತ್ತಿಯು ನಾನಾವಿಧವಾದುದು**

ಆಕಾಶಾದಿಗಳ ವಿಷಯದಲ್ಲಿ ವಿವಕ್ಷಿತವಾಗಿರುವ ಉತ್ಪತ್ತಿಯು ಪರಾಧೀನ ವಿಶೇಷಾವಾಪ್ತಿರೂಪವಾದುದು. ಈ ವಿಧವಾದ ಉತ್ಪತ್ತಿಯೂ ನಿತ್ಯಪದಾರ್ಥಗಳಲ್ಲಿ ಆಯಾಯಾ ವಸ್ತುವಿನ ಯೋಗ್ಯತೆಗನುಗುಣವಾಗಿ ವಿಭಿನ್ನವಾಗಿದೆ. ಲಕ್ಷ್ಮೀದೇವಿಗೆ ಪರಾಧೀನವಿಶೇಷಾವಾಪ್ತಿಯೆಂದರೆ ಸೃಷ್ಟಿಮಾಡುವ ಇಚ್ಛೆ. ಆಕಾಶಕ್ಕೆ ಅದು ಮೂರ್ತವಸ್ತುಗಳ ಸಂಬಂಧರೂಪವಾಗಿದೆ—ಇತ್ಯಾದಿ. ಇತರ ಅಂದರೆ ಅನಿತ್ಯ ಪದಾರ್ಥಗಳಿಗೆ ಉತ್ಪತ್ತಿಯು ಅಭೂತ್ವಾಭವನರೂಪವಾಗಿದೆ. ಜಗತ್ತಿನ ಉತ್ಪತ್ತಿಯನ್ನು ಹೇಳುವ ಶ್ರುತಿಯೂ ಆಯಾಯಾ ವಸ್ತುವಿಗೆ ಯೋಗ್ಯವಾದ ಉತ್ಪತ್ತಿಯನ್ನೇ ಹೇಳುವುದು. ಹೀಗೆ ಮುಂದೂ ತಿಳಿಯಬೇಕು.

ಆಕಾಶ ಮೊದಲಾದವುಗಳಿಗೆ ಉತ್ಪತ್ತಿಯನ್ನು ಸಾಧಿಸುವ ಪ್ರಮಾಣವಿಲ್ಲದಿರುವುದರಿಂದಲೇ ಅವುಗಳಿಗೆ ಅನುತ್ಪತ್ತಿಯು ಸಿದ್ಧಿಸುವುದು ಎಂಬ ಆಶಂಕೆಗೆ ಉತ್ತರ—

ಓಂ ಅಸ್ತಿ ತು ಓಂ (೨--೩--೨)

तुरेव । अस्त्येव वियदुत्पत्तिश्रुतिः "आकाशः सम्भूतः" इत्यादिकेत्यर्थः ।

"अनादिर्वा अयमाकाशः" इति श्रुतिविरुद्धेयं श्रुतिः । अश्रुतेरिति चासिद्धमित्यत आह—

॥ ॐ गौण्यसम्भवात् ॐ ॥ २-३-३

अनादित्वश्रुतिर्गौणी गौणानादित्वपरा । असम्भवात् अस्तीत्युक्तोत्पत्तिश्रुतीनामयोगादित्यर्थः । भूतस्य स्वरूपतः, तदभिमानिनो देहतः अवकाशतदभिमानिनोः पराधीनविशेषावाप्तित उत्पत्तिसम्भवेन चतुष्टयविषयत्वात् बहुत्वाच्चोत्पत्तिश्रुतिर्युक्ता । "अनादिर्वा" इति

---

**ಸೂತ್ರಾರ್ಥ**

'ತು' ಶಬ್ದಕ್ಕೆ ಏವ ಎಂದು ಅರ್ಥ 'ಆಕಾಶಃ ಸಂಭೂತಃ' ಇತ್ಯಾದಿಯಾದ ಆಕಾಶಕ್ಕೆ ಉತ್ಪತ್ತಿಯನ್ನು ಹೇಳುವ ಶ್ರುತಿ ಇದ್ದೇ ಇದೆ ಎಂದು ಅರ್ಥ.

'ಆಕಾಶಃ ಸಂಭೂತಃ' ಎಂಬ ಶ್ರುತಿಯು 'ಅನಾದಿರ್ವಾ ಅಯಮಾಕಾಶಃ' ಎಂಬ ಶ್ರುತಿಗೆ ವಿರುದ್ಧವಾಗಿದೆ. ಅಲ್ಲದೆ 'ಅಶ್ರುತೇಃ' ಎಂದು ಆಕಾಶದ ಅನುತ್ಪತ್ತಿಯ ವಿಷಯದಲ್ಲಿ ಯಾವುದೇ ಶ್ರುತಿಯಿಲ್ಲವೆಂದು ಹೇಳಿರುವುದೂ ಅಸಿದ್ಧವಾಗಿದೆ ಎಂಬ ಆಕ್ಷೇಪಕ್ಕೆ ಉತ್ತರ—

ಓಂ ಗೌಣ್ಯಸಂಭವಾತ್ ಓಂ (೨-೩-೩)

**ಸೂತ್ರಾರ್ಥ**

ಆಕಾಶಕ್ಕೆ ಅನಾದಿತ್ವವನ್ನು ಹೇಳುವ ಶ್ರುತಿಯು, ಗೌಣೀ–ಗೌಣವಾದ ಅನಾದಿತ್ವವನ್ನು ಹೇಳುವ ಅಭಿಪ್ರಾಯವುಳ್ಳದ್ದು. ಅಸಂಭವಾತ್–'ಅಸ್ತಿ' ಎಂಬ ಸೂತ್ರದಲ್ಲಿ ಹೇಳಿದ ಶ್ರುತಿಗಳು, ಆಕಾಶವು ಅನಾದಿಯೇ ಆಗಿದ್ದಲ್ಲಿ ಅಯುಕ್ತವಾಗುವುದರಿಂದ ಎಂದು ಅರ್ಥ. ಭೂತಾಕಾಶಕ್ಕೆ ಸ್ವರೂಪತಃ ಉತ್ಪತ್ತಿ, ಅದರ ಅಭಿಮಾನಿಗೆ ದೇಹತಃ ಉತ್ಪತ್ತಿ, ಅವ್ಯಾಕೃತಾಕಾಶ ಮತ್ತು ಅದರ ಅಭಿಮಾನಿ—ಈ ಎರಡಕ್ಕೆ ಪರಾಧೀನವಿಶೇಷಾವಾಪ್ತಿ ರೂಪವಾದ ಉತ್ಪತ್ತಿ—ಹೀಗೆ ಉತ್ಪತ್ತಿಗಳಿರುವುದರಿಂದ, ಈ ನಾಲ್ಕು ರೀತಿಯ ಉತ್ಪತ್ತಿಯನ್ನು ಹೇಳುವ ಕಾರಣ ಮತ್ತು ಅನೇಕವಾಗಿರುವುದರಿಂದ ಉತ್ಪತ್ತಿ ಶ್ರುತಿಯು ಯುಕ್ತವಾಗಿದೆ. 'ಅನಾದಿರ್ವಾ' ಎಂಬ ಶ್ರುತಿಯು

श्रुतिर्भूते सर्वथाऽयुक्तेत्यसर्वविषयत्वाद्भूते छत्रिवल्लाक्षणिकी वा चिरन्तनत्वमात्रेण गौणी वा भूतेतरत्रितयाकाशपरा वा नेयेति भावः ।

इतश्च गौणीत्याह—

॥ ॐ शब्दाच्च ॐ ॥ २-३-४

"अथ ह वा व नित्यानि" इति भाष्योक्तश्रुतेश्चानादिश्रुतिर्गौणी । अन्या मुख्यार्थेत्यर्थः । न केवलमसम्भवयुक्तिसिद्धेति चार्थः ।

---

ಭೂತಾಕಾಶದ ವಿಷಯದಲ್ಲಿ ಸರ್ವಥಾ ಅಯುಕ್ತವಾಗಿದೆ. ಆದುದರಿಂದ ಎಲ್ಲ ವಿಧವಾದ ಆಕಾಶಗಳಿಗೂ ಅನಾದಿತ್ವವನ್ನು ಹೇಳಲು ಸಾಧ್ಯವಿಲ್ಲದಿರುವುದರಿಂದ ಅನಾದಿತ್ವ ಶ್ರುತಿಯು ಭೂತಾಕಾಶದ ವಿಷಯದಲ್ಲಿ ಛತ್ರಿವತ್[1] ಲಾಕ್ಷಣಿಕವಾಗಿದೆ ಎಂದು ಹೇಳಬೇಕಾಗುವುದು. ಅಥವಾ, ಚಿರಕಾಲ ಇರುವ ಕಾರಣ ಭೂತಾಕಾಶವನ್ನು ಅನಾದಿ ಎಂದು ಹೇಳಲಾಗಿದೆ ಎಂಬುದಾಗಿ ಅನಾದಿಶಬ್ದವು ಗೌಣವೆಂದು ಹೇಳಬೇಕಾಗುವುದು. ಅಥವಾ, ಭೂತಾಕಾಶವನ್ನು ಬಿಟ್ಟು ಉಳಿದ ಮೂರು ಆಕಾಶಗಳನ್ನು ಅನಾದಿಯೆಂದು ಹೇಳುವ ತಾತ್ಪರ್ಯ ಈ ಶ್ರುತಿಗಿದೆ ಎಂದಾದರೂ ವ್ಯಾಖ್ಯಾನಮಾಡಬೇಕಾಗುವುದು ಎಂದು ಭಾವ.

ಈ ಮುಂದಿನ ಕಾರಣದಿಂದಲೂ ಅನಾದಿತ್ವಶ್ರುತಿಯು ಗೌಣವಾಗಿದೆ ಎಂದು ಹೇಳುವ ಸೂತ್ರ—

ಓಂ ಶಬ್ದಾಚ್ಚ ಓಂ (೨-೩-೪)

**ಸೂತ್ರಾರ್ಥ**

[2] 'ಅಥ ಹ ವಾ ವ ನಿತ್ಯಾನಿ' ಎಂದು ಭಾಷ್ಯದಲ್ಲಿ ಉದಾಹರಿಸಿದ ಶ್ರುತಿಯ ಆಧಾರದಿಂದಲೂ ಅನಾದಿಶ್ರುತಿಯು ಗೌಣವಾಗಿದೆ. ಉತ್ಪತ್ತಿಯನ್ನು ಹೇಳುವ

---

1. 'ಛತ್ರಿಣೋ ಯಾಂತಿ' ಎಂಬ ವಾಕ್ಯದಲ್ಲಿ ಛತ್ರಿ ಶಬ್ದವು ಛತ್ರವನ್ನು ಹಿಡಿದವರ ಮತ್ತು ಹಿಡಿಯದವರ ಗುಂಪನ್ನು ಲಕ್ಷಣಯಾ ಹೇಳುವುದು. ಅಂತೆಯೇ, ಅನಾದಿಯಲ್ಲದ ಮತ್ತು ಅನಾದಿಯಾಗಿರುವ ಆಕಾಶಗಳ ಗುಂಪನ್ನು ಅನಾದಿಶ್ರುತಿಯಲ್ಲಿ 'ಅನಾದಿ' ಪದವು ಲಕ್ಷಣಯಾ ಹೇಳುವುದು ಎಂದು ಭಾವ.

2. "ಅಥ ಹ ವಾವ ನಿತ್ಯಾನಿ ಪುರುಷಃ ಪ್ರಕೃತಿರಾತ್ಮಾ ಕಾಲ ಇತಿ । ಅಥ ಯಾನ್ಯನಿತ್ಯಾನಿ ಪ್ರಾಣಃ ಶ್ರದ್ಧಾ ಭೂತಾನಿ ಭೌತಿಕಾನೀತಿ । ಯಾನಿ ಹ ವಾ ವ ಉತ್ಪತ್ತಿಮಂತಿ ತಾನ್ಯನಿತ್ಯಾನಿ । ಯಾನಿ ಹ ವಾವ ಅನುತ್ಪತ್ತಿಮಂತಿ ತಾನಿ ನಿತ್ಯಾನಿ । ನ ಹ್ಯೇತಾನಿ ಕದಾಚನೋತ್ಪದ್ಯಂತೇ ನ ವಿಲೀಯಂತೇ ಪುರುಷಃ ಪ್ರಕೃತಿರಾತ್ಮಾ ಕಾಲ ಇತಿ । ಅಥೈತಾನ್ಯುತ್ಪತ್ತಿಮಂತಿ ಚ ಅನುತ್ಪತ್ತಿಮಂತಿ ಚ ಪ್ರಾಣಃ ಶ್ರದ್ಧಾಽಽಕಾಶ ಇತಿ ಭಾಗಶೋ ಹ್ಯುತ್ಪದ್ಯಂತೇ"—ಭಾಲ್ಲವೇಯ ಶ್ರುತಿ.

अस्यां श्रुतौ भागशो ह्युत्पद्यन्त इति भूतादिचतुर्भिर्भागैराकाशपदार्थस्योत्पत्त्युक्तेरवकाशादिस्वरूपकतिपयभागेनानुत्पत्त्युक्तेरिति भावः ॥

ननु "न जायते म्रियते" इति विष्णावनुत्पत्तिवाचिशब्दस्य मुख्यार्थत्वदर्शनादस्याप्यनेकार्थत्वनिरासायाकाशेऽप्यनुत्पत्तिश्रुतिर्मुख्यैव वाच्येत्यत आह—

## ॥ ॐ स्याच्चैकस्य ब्रह्मशब्दवत् ॐ ॥ २-३-५

ಮತ್ತೊಂದು ಶ್ರುತಿಯು ಮುಖ್ಯಾರ್ಥವನ್ನು ಹೇಳುವುದು ಎಂದು ಅರ್ಥ. ಅನಾದಿತ್ವ ಶ್ರುತಿಯು ಗೌಣವೆಂಬುದು 'ಅಸಂಭವ' ಯುಕ್ತಿಯಿಂದ ಮಾತ್ರ ಸಿದ್ಧವಲ್ಲವೆಂದು 'ಚ' ಶಬ್ದದ ಅರ್ಥ. ಈ ಶ್ರುತಿಯಲ್ಲಿ 'ಭಾಗಶೋ ಹ್ಯುತ್ಪದ್ಯಂತೇ' ಎಂಬುದಾಗಿ ಆಕಾಶಕ್ಕೆ ಭೂತ, ಅವ್ಯಾಕೃತಾಕಾಶ, ಇವೆರಡರ ಅಭಿಮಾನಿಗಳು—ಹೀಗೆ ನಾಲ್ಕು ಭಾಗಗಳಿಂದ ಉತ್ಪತ್ತಿಯನ್ನು ಹೇಳಲಾಗಿದೆ. ಅವ್ಯಾಕೃತಾಕಾಶಸ್ವರೂಪ, ಅಭಿಮಾನಿ ಚೈತನ್ಯ ಸ್ವರೂಪ—ಹೀಗೆ ಕೆಲವು ಭಾಗಗಳಿಂದ ಅನುತ್ಪತ್ತಿಯನ್ನು ಹೇಳಲಾಗಿದೆ ಎಂದು ಭಾವ.[1]

ವಿಷ್ಣುವಿಗೆ ಅನುತ್ಪತ್ತಿಯನ್ನು ಹೇಳುವ 'ನ ಜಾಯತೇ ಮ್ರಿಯತೇ' ಎಂಬ ವಾಕ್ಯಕ್ಕೆ ಮುಖ್ಯವಾದ ಅರ್ಥವೇ ಇರುವುದರಿಂದ, ಅನುತ್ಪತ್ತಿವಾಚಕ ಶಬ್ದಕ್ಕೆ ಅನೇಕಾರ್ಥಗಳನ್ನು ಪರಿಹರಿಸಲು, 'ಅನಾದಿರ್ವಾ' ಎಂಬ ಆಕಾಶಕ್ಕೆ ಅನುತ್ಪತ್ತಿಯನ್ನು ಹೇಳುವ ಶ್ರುತಿಯೂ ಮುಖ್ಯಾರ್ಥವನ್ನೇ ಪಡೆದಿದೆ ಎಂದು ಹೇಳಬೇಕಾಗುವುದು ಎಂಬ ಆಶಂಕೆಗೆ ಉತ್ತರ—

## ಓಂ ಸ್ಯಾಚ್ಚೈಕಸ್ಯ ಬ್ರಹ್ಮಶಬ್ದವತ್ ಓಂ (೨-೩-೫)

1. ಪ್ರಾಣ, ಶ್ರದ್ಧಾ, ಆಕಾಶ—ಇವುಗಳಿಗೆ ಬಹುಭಾಗಗಳಿಂದ ಉತ್ಪತ್ತಿಯನ್ನೂ, ಕೆಲವು ಭಾಗಗಳಿಂದ ಅನುತ್ಪತ್ತಿಯನ್ನೂ ಹೇಳಲಾಗಿದೆ. ಹೇಗೆಂದರೆ, ಪ್ರಾಣಪದಕ್ಕೆ ಭೂತವಾಯು, ಅದರ ಅಮುಖ್ಯಾಭಿಮಾನಿ ಮತ್ತು ಮುಖ್ಯಾಭಿಮಾನಿ—ಈ ಮೂರು ಅರ್ಥ. ಈ ಮೂರು ಅಂಶಗಳಿಗೂ ಉತ್ಪತ್ತಿಯಿದೆ. ಶ್ರದ್ಧಾಪದಾರ್ಥವಾದ ಸರಸ್ವತಿಗೂ ಹೀಗೆಯೇ. ಆಕಾಶಪದಕ್ಕೆ ಭೂತಾಕಾಶ, ಅವ್ಯಾಕೃತಾಕಾಶ, ಇವೆರಡರ ಅಭಿಮಾನಿಗಳು—ಹೀಗೆ ನಾಲ್ಕು ಅರ್ಥವಿದೆ. ಈ ನಾಲ್ಕು ಅಂಶಗಳಿಗೂ ಉತ್ಪತ್ತಿಯಿದೆ ಎಂದು ಈ ಶ್ರುತಿ ಹೇಳುವುದು. ಅವ್ಯಾಕೃತಾಕಾಶದ ಸ್ವರೂಪ, ಅಭಿಮಾನಿಗಳ ಸ್ವರೂಪ ಇವುಗಳಿಗೆ ಮಾತ್ರ ಉತ್ಪತ್ತಿಯಿಲ್ಲ. ಹೀಗೆ ಬಹುಭಾಗಗಳಿಗೆ ಉತ್ಪತ್ತಿಯನ್ನೂ ಕೆಲವು ಭಾಗಗಳಿಗೆ ಮಾತ್ರ ಅನುತ್ಪತ್ತಿಯನ್ನೂ ಹೇಳಿರುವುದರಿಂದ ಉತ್ಪತ್ತಿ ಶ್ರುತಿಯು ಮುಖ್ಯಾರ್ಥವುಳ್ಳದ್ದೆಂದೂ ಅನುತ್ಪತ್ತಿಶ್ರುತಿಯು ಅಮುಖ್ಯಾರ್ಥವೆಂದೂ ತಿಳಿಯುವುದೆಂದು ಭಾವ.

च एव । तस्योभयत्रान्वयः । एकस्यैवानुत्पत्तिवाचिशब्दस्य विष्णौ मुख्यत्वेऽप्याकाशेऽमुख्यत्वं स्यादेव । ब्रह्मशब्दवत् । ब्रह्मशब्दस्य परब्रह्मणि मुख्यत्वेऽपि विरिञ्चादिषु गौणत्वं तद्वदित्यर्थः ॥

अस्तु ब्रह्मशब्दो बाधादन्यत्रामुख्यः । इह तु कुत इत्यत आह—

॥ ॐ प्रतिज्ञाहानिरव्यतिरेकात् शब्देभ्यः ॐ ॥
२-३-६

आकाशेऽप्यनुत्पत्तिवाचिशब्दस्य मुख्यत्वे "स इदं सर्वमसृजत" इति प्रतिज्ञाहानिः स्यात् । न चात्र आकाशो न श्रुत इति शङ्क्यम् । अव्यतिरेकादाकाशस्य सर्वमध्यपतितत्वादित्यर्थः । स्पष्टमत्राकाशस्योत्पत्तिर्न भातीत्यतः शब्देभ्य इति । "आत्मा वा इदमेक

---

**ಸೂತ್ರಾರ್ಥ**

'ಚ' ಶಬ್ದಕ್ಕೆ ಏವ ಎಂದು ಅರ್ಥ. ಅದಕ್ಕೆ ಎರಡು ಕಡೆ ಅನ್ವಯ. ಒಂದೇ ಅನುತ್ಪತ್ತಿವಾಚಕ ಶಬ್ದಕ್ಕೆ ವಿಷ್ಣುವಿನಲ್ಲಿ ಮುಖ್ಯತ್ವವಿದ್ದರೂ ಆಕಾಶದ ವಿಷಯದಲ್ಲಿ ಅಮುಖ್ಯತ್ವವು ಇದ್ದೇ ಇರುವುದು. ಬ್ರಹ್ಮಶಬ್ದವತ್–ಬ್ರಹ್ಮಶಬ್ದವು ಪರಬ್ರಹ್ಮನಲ್ಲಿ ಮುಖ್ಯವಾಗಿದ್ದರೂ ವಿರಿಂಚಾದಿಗಳಲ್ಲಿ ಹೇಗೆ ಗೌಣವೋ ಹಾಗೆ ಎಂದು ಅರ್ಥ.

ಬಾಧಕವಿರುವ ಕಾರಣ ಬ್ರಹ್ಮಶಬ್ದವು ವಿರಿಂಚಾದಿಗಳಲ್ಲಿ ಅಮುಖ್ಯವೆಂದಿರಲಿ, ಆದರೆ, ಪ್ರಕೃತ ಅನಾದಿತ್ವಶ್ರುತಿಯು ಗೌಣವೆಂದೇಕೆ ಒಪ್ಪಬೇಕು ಎಂಬ ಆಶಂಕೆಗೆ ಉತ್ತರ—

ಓಂ ಪ್ರತಿಜ್ಞಾಹಾನಿರವ್ಯತಿರೇಕಾತ್ ಶಬ್ದೇಭ್ಯಃ ಓಂ
(೨–೩–೬)

**ಸೂತ್ರಾರ್ಥ**

ಆಕಾಶಕ್ಕೂ ಅನುತ್ಪತ್ತಿಯನ್ನು ಹೇಳುವ ಶ್ರುತಿ ಮುಖ್ಯವಾಗಿರುವುದಾದರೆ 'ಸ ಇದಂ ಸರ್ವಮಸೃಜತ' (ತೈ. ೨-೬) ಎಂಬ ಪ್ರತಿಜ್ಞೆಯನ್ನು ಪರಿತ್ಯಜಿಸಿದಂತಾದೀತು. 'ಸ ಇದಂ' ಎಂಬ ಶ್ರುತಿಯಲ್ಲಿ ಆಕಾಶವು ಕೇಳಿಬರುವುದಿಲ್ಲ ಎಂದು ಶಂಕಿಸಬಾರದು. ಅವ್ಯತಿರೇಕಾತ್–ಸರ್ವದ ಮಧ್ಯದಲ್ಲಿ ಆಕಾಶವೂ ಸೇರಿರುವುದರಿಂದ ಎಂದು ಅರ್ಥ. ಈ ಶ್ರುತಿಯಲ್ಲಿ ಆಕಾಶಕ್ಕೆ ಉತ್ಪತ್ತಿ ಇದೆಯೆಂದು ಸ್ಪಷ್ಟವಾಗಿ

एवाग्रे", "असदेवेदमग्रे", "इदं वा अग्रे नैव किञ्चन" इत्याद्युत्पत्तिश्रुतिभ्यः स्पष्टं सादित्वमित्यर्थः। बहुवचनेन बहुश्रुतिविरोधादेकस्यानुत्पत्तिशब्दस्यामुख्यत्वं न्याय्यमिति सूचयति । असम्भवादित्युक्तविवृत्तित्वादस्य न पौनरुक्त्यम् ॥

आकाशादावनुत्पत्तिशब्दस्य गौणत्वाय तस्य शब्दतः सादित्वमुक्त्वाऽनुमानतोऽपि तदाह—

॥ ॐ यावद्विकारं तु विभागो लोकवत् ॐ ॥
२-३-७

विकार इति कर्मणि घञ्। "यावदवधारण" इत्यव्ययीभावः। विभागपदेन कर्मार्थघञन्तेनाल्पशक्तिमानुच्यते । तस्याप्ययमिह

---

ತಿಳಿದುಬರುವುದಿಲ್ಲ ಎಂಬ ಆಶಂಕೆಗೆ ಉತ್ತರ—'ಶಬ್ದೇಭ್ಯಃ' ಎಂದು. "ಆತ್ಮಾ ವಾ ಇದಮೇಕ ಏವ ಅಗ್ರೇ" (ಐ ೧-೧), "ಅಸದೇವೇದಮಗ್ರೇ" (ಛಾಂ. ೬-೨ ೧), "ಇದಂ ವಾ ಅಗ್ರೇ ನೈವ ಕಿಂಚನ" (ತೈ. ಬ್ರಾ. ೨-೨-೯) ಇತ್ಯಾದಿ ಉತ್ಪತ್ತಿ ಶ್ರುತಿಗಳಿಂದ ಆಕಾಶಕ್ಕೆ ಉತ್ಪತ್ತಿ ಇರುವುದು ಸ್ಪಷ್ಟವೆಂದು ಅರ್ಥ. ಅನೇಕ ಶ್ರುತಿಗಳ ವಿರೋಧವಿರುವುದರಿಂದ ಆಕಾಶಕ್ಕೆ ಅನುತ್ಪತ್ತಿಯನ್ನು ಹೇಳುವ ಒಂದು ಶ್ರುತಿಗೆ ಅಮುಖ್ಯತ್ವವನ್ನು ಹೇಳುವುದು ನ್ಯಾಯವೆಂದು 'ಶಬ್ದೇಭ್ಯಃ' ಎಂಬಲ್ಲಿರುವ ಬಹುವಚನ ದಿಂದ ಸೂಚಿಸಲಾಗಿದೆ 'ಅಸಂಭವಾತ್' ಎಂಬ ಸೂತ್ರದಲ್ಲಿ ಹೇಳಿರುವುದರ ವಿವರಣ ರೂಪವಾದುದರಿಂದ ಈ ಸೂತ್ರಕ್ಕೆ ಪುನರುಕ್ತಿ ದೋಷವಿಲ್ಲ.

ಆಕಾಶಾದಿಗಳಿಗೆ ಅನುತ್ಪತ್ತಿಯನ್ನು ಹೇಳುವ ಶ್ರುತಿಯು ಗೌಣವೆಂದು ಸಾಧಿಸಲು ಅವುಗಳಿಗೆ ಶ್ರುತಿಯ ಆಧಾರದಿಂದ ಉತ್ಪತ್ತಿಯನ್ನು ಸಮರ್ಥಿಸಿದ ನಂತರ ಅನುಮಾನಪ್ರಮಾಣದಿಂದಲೂ ಉತ್ಪತ್ತಿಯನ್ನು ಸಾಧಿಸುವ ಸೂತ್ರ—

ಓಂ ಯಾವದ್ವಿಕಾರಂ ತು ವಿಭಾಗೋ ಲೋಕವತ್ ಓಂ
(೨-೩-೭)

**'ಯಾವದ್ವಿಕಾರಂ' 'ವಿಭಾಗಃ' ಎಂಬ ಪದಗಳ ನಿಷ್ಪತ್ತಿ ಮತ್ತು ಅರ್ಥ**

'ವಿಕಾರಃ' ಎಂಬ ಪದವು ಕರ್ಮಾರ್ಥಕವಾದ ಘಞ್ ಪ್ರತ್ಯಯಾಂತ ಶಬ್ದ ವಾಗಿದೆ. 'ಯಾವದವಧಾರಣೇ' (ಪಾ. ಸೂ. ೨-೧-೮) ಎಂಬ ಸೂತ್ರದಿಂದ ಅವ್ಯಯೀಭಾವಸಮಾಸವಾಗಿದೆ. ಕರ್ಮಾರ್ಥಕ ಘಞ್‌ಪ್ರತ್ಯಯಾಂತವಾದ 'ವಿಭಾಗ' ಪದವು 'ಅಲ್ಪಶಕ್ತಿಯುಳ್ಳವನು' ಎಂಬ ಅರ್ಥವನ್ನು ಹೇಳುವುದು. ಅಲ್ಪಶಕ್ತಿಯುಳ್ಳವ

शक्तो नेति विभज्यमानत्वात् । यावद्विकारं विक्रियमाण एवार्थो विभागो विभक्तः, अल्पशक्तिमानित्यर्थः । यो विभक्तः स विक्रियमाण इति व्याप्तिरुक्ता भवति । यावदनित्यं कृतकमितिवत् । लोकवद्धटादिवदित्यर्थः । एतेन वियदुत्पत्तिमत् विभक्तत्वाद्धटादिवदित्यनुमानं सूचितम् । तुर्यस्मादित्यर्थे । यस्मादेवं तस्माद्विकार इत्येके । अनुमानेनापीति टीकोक्तेः । अल्पशक्तित्वाच्चेति तत्त्वप्रदीपोक्तेः तुश्चार्थः सन् अनुमानस्य प्राक्तनशब्दसमुच्चयार्थ इत्यन्ये । यदुत्पत्तिमत् न तदविभक्तं व्यतिरेकेण यथा ब्रह्मेति तोरर्थ इत्यप्याहुः ॥ १ ॥

---

ನನ್ನು 'ಇವನು ಈ ಕಾರ್ಯದಲ್ಲಿ ಶಕ್ತನಲ್ಲ' ಎಂದು ಇತರರಿಂದ ಬೇರ್ಪಡಿಸುವುದರಿಂದ ಈ ಪದಕ್ಕೆ ಈ ಅರ್ಥವು ಯುಕ್ತವಾಗಿದೆ.

**ಸೂತ್ರಾರ್ಥ**

ಯಾವದ್ವಿಕಾರಂ–ವಿಕಾರವನ್ನು ಪಡೆಯುವ ಪದಾರ್ಥವೇ, ವಿಭಾಗಃ–ವಿಭಕ್ತ ಅಂದರೆ ಅಲ್ಪಶಕ್ತಿಯುಳ್ಳದ್ದು ಎಂದು ಅರ್ಥ. 'ಯಾವದನಿತ್ಯಂ ಕೃತಕಂ' ಎಂಬ ವಾಕ್ಯದಿಂದ 'ಯಾವುದು ಕೃತಕವೋ ಅದು ಅನಿತ್ಯ' ಎಂಬ ವ್ಯಾಪ್ತಿಯನ್ನು ಹೇಳಿದಂತೆ 'ಯಾವದ್ವಿಕಾರಂ ವಿಭಾಗಃ' ಎಂಬ ವಾಕ್ಯದಿಂದ 'ಯಾವುದು ಅಲ್ಪಶಕ್ತಿಯುಳ್ಳದ್ದೋ ಅದು ವಿಕಾರವನ್ನು ಪಡೆಯುವುದು' ಎಂಬ ವ್ಯಾಪ್ತಿಯು ಉಕ್ತವಾಗುವುದು. ಲೋಕವತ್–ಘಟಾದಿಗಳಂತೆ ಎಂದು ಅರ್ಥ. ಈ ಸೂತ್ರದಿಂದ, 'ಆಕಾಶವು ಉತ್ಪತ್ತಿಯುಳ್ಳದ್ದು, ಅಲ್ಪಶಕ್ತಿಯನ್ನು ಹೊಂದಿರುವುದರಿಂದ, ಘಟಾದಿಗಳಂತೆ' ಎಂಬ ಅನುಮಾನವು ಸೂಚಿತವಾಗುವುದು.

**'ತು' ಶಬ್ದದ ಅರ್ಥ**

'ತು' ಶಬ್ದವು 'ಯಸ್ಮಾತ್' ಅಂದರೆ 'ಯಾವ ಕಾರಣದಿಂದ' ಎಂಬ ಅರ್ಥವನ್ನು ಕೊಡುವುದು. 'ಯಾವ ಕಾರಣದಿಂದ ಅಲ್ಪಶಕ್ತಿಯುಳ್ಳದ್ದಾಗಿರುವುದೋ ಆ ಕಾರಣದಿಂದ ವಿಕಾರವನ್ನು ಪಡೆದಿದೆ' ಎಂದು ಅರ್ಥವೆಂದು ಕೆಲವರು ಹೇಳುವರು. 'ಅನುಮಾನೇನಾಪಿ' ಎಂಬ ಟೀಕಾವಾಕ್ಯವು ಈ ವ್ಯಾಖ್ಯಾನಕ್ಕೆ ಆಧಾರ. 'ಅಲ್ಪಶಕ್ತಿಮತ್ತ್ವಾಚ್ಚ' ಎಂದು ತತ್ತ್ವಪ್ರದೀಪದಲ್ಲಿ ಹೇಳಿರುವುದರಿಂದ 'ತು' ಶಬ್ದವು ಚಶಬ್ದದ ಅರ್ಥವನ್ನು ಪಡೆದಿದ್ದು ಅನುಮಾನಪ್ರಮಾಣಕ್ಕೆ ಹಿಂದಿನ ಸೂತ್ರದಲ್ಲಿ ಹೇಳಿದ ಶ್ರುತಿಪ್ರಮಾಣದ ಸಮುಚ್ಚಯರೂಪವಾದ ಅರ್ಥವನ್ನು ಹೇಳುವುದು ಎಂದು ಇತರ ಕೆಲವರು ಹೇಳುವರು. 'ಯಾವುದು ಉತ್ಪತ್ತಿಯುಳ್ಳದ್ದೋ ಅದು ಅಲ್ಪಶಕ್ತಿರಹಿತವಲ್ಲ, ವ್ಯತಿರೇಕೇಣ ಬ್ರಹ್ಮನಂತೆ' ಎಂದು 'ತು' ಶಬ್ದದ ಅರ್ಥ ಎಂದೂ ಹೇಳುವರು.

मातरिश्वाधिकरणम्—२

## ॥ ॐ एतेन मातरिश्वा व्याख्यातः ॐ ॥ २-३-८

"आकाशाद्वायुः", "वायुर्वा व नित्यः" इति वायूत्पत्त्यनुत्पत्तिश्रुत्यविरोध उच्यते । मातरिश्वापदेन तदमुख्यमुख्याभिमानिरूपत्रितयपरेण तदुत्पत्त्यनुत्पत्तिपरशब्दो गृह्यते । एतेनाश्रुतेरित्यादिप्रागुक्तहेतुजातेन मातरिश्वानुत्पत्त्यादिपरशब्दो व्याख्यातः गौणमुख्यत्वेन व्याख्यात इत्यर्थः । विशेषशङ्कायां मुख्यवायोर्ज्ञाननित्यत्वरूपविशेषं वक्तुमयं योगः ॥ २ ॥

---

ಮಾತರಿಶ್ವಾಧಿಕರಣ—೨

## ಓಂ ಏತೇನ ಮಾತರಿಶ್ವಾ ವ್ಯಾಖ್ಯಾತಃ ಓಂ (೨–೩–೮)

**ಅಧಿಕರಣದ ವಿಷಯ ಮತ್ತು ಸೂತ್ರಾರ್ಥ**

ಈ ಅಧಿಕರಣದಲ್ಲಿ, 'ಆಕಾಶಾದ್ವಾಯುಃ' ಎಂಬ ವಾಯುವಿಗೆ ಉತ್ಪತ್ತಿಯನ್ನು ಹೇಳುವ ಶ್ರುತಿಗೂ 'ವಾಯುರ್ವಾ ವ ನಿತ್ಯಃ' ಎಂಬ ವಾಯುವಿಗೆ ಅನುತ್ಪತ್ತಿಯನ್ನು ಹೇಳುವ ಶ್ರುತಿಗೂ ಅವಿರೋಧವನ್ನು ಹೇಳಲಾಗುವುದು.

ಭೂತವಾಯು, ಅದರ ಅಮುಖ್ಯಾಭಿಮಾನಿ ಮತ್ತು ಮುಖ್ಯಾಭಿಮಾನಿ ಹೀಗೆ ಮೂರನ್ನು ಹೇಳುವ, ಸೂತ್ರದಲ್ಲಿರುವ ಮಾತರಿಶ್ವಪದದಿಂದ ಆ ಮೂರರ ಉತ್ಪತ್ತಿ ಮತ್ತು ಅನುತ್ಪತ್ತಿಗಳನ್ನು ಹೇಳುವ ಶ್ರುತಿಗಳು ಗ್ರಹಿಸಲ್ಪಡುವುವು. ಏತೇನ—'ಅಶ್ರುತೇಃ' (ಬ್ರ.ಸೂ. ೨–೩–೧) ಇತ್ಯಾದಿ ಹಿಂದೆ ಹೇಳಿದ ಯುಕ್ತಿಸಮುದಾಯದಿಂದ, ವಾಯುವಿಗೆ ಅನುತ್ಪತ್ತಿ-ಉತ್ಪತ್ತಿಗಳನ್ನು ಹೇಳುವ ಶ್ರುತಿಗಳು, ವ್ಯಾಖ್ಯಾತಃ–ಕ್ರಮವಾಗಿ, ಗೌಣವೆಂದೂ, ಮುಖ್ಯವೆಂದೂ ವ್ಯಾಖ್ಯಾನಿಸಲ್ಪಡುವುವು ಎಂದು ಅರ್ಥ.

**ಈ ಸೂತ್ರ ವ್ಯರ್ಥವಲ್ಲ**

1 ವಿಶೇಷ ಶಂಕೆಯನ್ನು ಮಾಡಿದಾಗ, ಮುಖ್ಯವಾಯುವಿಗೆ ಜ್ಞಾನವು ನಿತ್ಯವಾದುದು ಎಂಬ ವಿಶೇಷವನ್ನು ಹೇಳಲು ಈ ಸೂತ್ರ ಹೊರಟಿದೆ.

---

1. 'ಅಥ ಹ ನಿತ್ಯಾಶ್ಚಾನಿತ್ಯಾಶ್ಚ ತೇಜೋಬನ್ನಾನ್ಯಾಕಾಶ ಇತಿ ತಾನ್ಯನಿತ್ಯಾನಿ, ವಾಯುರ್ವಾವ ನಿತ್ಯಃ ವಾಯುನಾ ಹಿ ಸರ್ವಾಣಿ ಭೂತಾನಿ ನೇನೀಯಂತೇ' ಎಂಬ ಶ್ರುತಿಯಲ್ಲಿ ಆಕಾಶಾದಿಗಳನ್ನು ಅನಿತ್ಯವೆಂದು ಹೇಳಿ ವಾಯು ನಿತ್ಯವೆಂದು ಪ್ರತ್ಯೇಕವಾಗಿ ಹೇಳಿರುವುದರಿಂದ ವಾಯುವಿಗೆ ಉತ್ಪತ್ತಿಯಿಲ್ಲವೆಂಬ ವಿಶೇಷಶಂಕೆಯನ್ನು ಮಾಡಿದಾಗ.

असम्भवाधिकरणम्—३

## ॥ ॐ असम्भवस्तु सतोऽनुपपत्तेः ॐ ॥ २–३–९

अत्र ब्रह्मोत्पत्तिश्रुत्यविरोध उच्यते । तुरेव । सतो ब्रह्मणोऽसम्भव एवानुत्पत्तिरेव । कुतः ? अनुपपत्तेः । असतस्सकाशात् सज्जन्मनोऽनुपपत्तेरित्यर्थः । क्वाप्यदर्शनादिति भावः । उत्पत्त्यसम्भव इत्यनुवृत्तावपि तस्य न वियदिति नञाऽन्वितत्वात् पुनरसम्भव इत्युक्तिः । तुरिति भागोत्पत्तिं पराधीनविशेषावाप्तिं च निराह । सत

---

ಅಸಂಭವಾಧಿಕರಣ—೩

## ಓಂ ಅಸಂಭವಸ್ತು ಸತೋಽನುಪಪತ್ತೇಃ ಓಂ (೨-೩-೯)

**ಅಧಿಕರಣದ ವಿಷಯ ಮತ್ತು ಸೂತ್ರಾರ್ಥ**

ಈ ಅಧಿಕರಣದಲ್ಲಿ ಬ್ರಹ್ಮನಿಗೆ ಉತ್ಪತ್ತಿಯನ್ನು ಹೇಳುವ ಶ್ರುತಿಯ ವಿರೋಧವಿಲ್ಲನೆಂದು ಹೇಳಲಾಗುವುದು. 'ತು' ಶಬ್ದಕ್ಕೆ ಏವ ಎಂದು ಅರ್ಥ. ಸತಃ-ಬ್ರಹ್ಮನಿಗೆ, ಅಸಂಭವ ಏವ–ಉತ್ಪತ್ತಿ ಇಲ್ಲವೇ ಇಲ್ಲ. ಏಕೆಂದರೆ, ಅನುಪಪತ್ತೇಃ–ಅಸತ್ತಿನಿಂದ ಸತ್ ಜನಿಸುವುದು ಅನುಪಪನ್ನವಾದುದರಿಂದ ಎಂದು ಅರ್ಥ. ಅಸತ್ತಿನಿಂದ ಸತ್ ಹುಟ್ಟುವುದು ಎಲ್ಲೂ ದೃಷ್ಟವಾಗಿಲ್ಲದಿರುವುದರಿಂದ ಎಂದು ಭಾವ.

**'ಅಸಂಭವ' ಪದದ ಆವಶ್ಯಕತೆ ಮತ್ತು ಸೂತ್ರದ ಇತರ ಪದಗಳು ಸೂಚಿಸುವ ಅರ್ಥವಿಶೇಷ**

[1] 'ಉತ್ಪತ್ತ್ಯಸಂಭವ' ಎಂಬ ಪದವನ್ನು ಅನುವೃತ್ತಿ ಮಾಡಿಕೊಳ್ಳಬಹುದಾಗಿದ್ದರೂ ಆ ಪದವು 'ನ ವಿಯತ್' ಎಂಬ ಸೂತ್ರದ ನಞ್‌ಪದದೊಂದಿಗೆ ಅನ್ವಯ ಪಡೆದಿರುವುದರಿಂದ ಈ ಸೂತ್ರದಲ್ಲಿ ಪುನಃ 'ಅಸಂಭವಃ' ಎಂಬ ಪದವನ್ನು ಹೇಳಲಾಗಿದೆ. ವಾಯು ಮೊದಲಾದವುಗಳಿಗಿರುವ ಭಾಗಶಃ ಉತ್ಪತ್ತಿಯನ್ನು ಲಕ್ಷ್ಮೀದೇವಿಗಿರುವ ಪರಾಧೀನವಿಶೇಷಾವಾಪ್ತಿರೂಪವಾದ ಉತ್ಪತ್ತಿಯನ್ನು ಬ್ರಹ್ಮನಿಗೆ 'ತು'

---

1. 'ಉತ್ಪತ್ತ್ಯಸಂಭವಾತ್' (ಬ್ರ.ಸೂ. ೨–೨–೪೨) ಎಂಬ ಹಿಂದಿನ ಪಾದದ ಸೂತ್ರದಿಂದ ಉತ್ಪತ್ತ್ಯಸಂಭವ ಎಂಬ ಪದವನ್ನು ಅನುವೃತ್ತಿ ಮಾಡಿಕೊಳ್ಳಲು ಸಾಧ್ಯವಿರುವಾಗ ಈ ಸೂತ್ರದಲ್ಲಿ ಪುನಃ ಅಸಂಭವ ಪದವನ್ನು ಉಪಯೋಗಿಸುವುದು ಅನಾವಶ್ಯಕವೆಂದು ಶಂಕೆ. ಮುಂದೆ ಬರುವ 'ನ ವಿಯದಶ್ರುತೇಃ' (೨–೩–೧) ಎಂಬ ಸೂತ್ರದಲ್ಲಿ ನಞ್ ಪದದಿಂದ ಅನ್ವಯಪಡೆದ ಉತ್ಪತ್ತ್ಯಸಂಭವಶಬ್ದವು ಈ ಸೂತ್ರದಲ್ಲಿ ಅನುವೃತ್ತಿ ಪಡೆಯಲಾರದ್ದರಿಂದ 'ಅಸಂಭವಃ' ಎಂಬ ಪದವನ್ನು ಪ್ರತ್ಯೇಕವಾಗಿ ಇಲ್ಲಿ ಪ್ರಯೋಗಿಸಬೇಕಾಗಿದೆ ಎಂದು ಭಾವ.

इत्युक्तिरसतः सदजायतेति श्रुतिसूचनेन ब्रह्मणोऽप्यसद्रूपकारणमस्तीति पूर्वपक्षयुक्तिं स्वातन्त्र्यरूपसिद्धान्तयुक्तिं च सूचयितुम् । सत्त्वं स्वातन्त्र्यमुद्दिष्टमिति भारतोक्तेः । द्युभ्वादिनये आविर्भावरूपोत्पत्तिसिद्धावप्यत्र प्रकरणेऽभिप्रेतपराधीनविशेषावाप्तिरूपोत्पत्तिनिरासोऽत्रेति ध्येयम् ॥ ३ ॥

तेजोऽधिकरणम्—४

## ॥ ॐ तेजोऽतस्तथा ह्याह ॐ ॥ २-३-१०

अत्र तेजोजनकश्रुत्यविरोध उच्यते । अत इति सत इत्युक्तं ब्रह्मोच्यते । तोरनुवृत्तिः । उत्पत्तिमदिति मण्डूकप्लुत्याऽनुवर्तते । तथेति

---

ಶಬ್ದವು ನಿರಾಕರಿಸುವುದು. 'ಅಸತಃ ಸದಜಾಯತ' ಎಂಬ ಶ್ರುತಿಯನ್ನು ಸೂಚಿಸುವ ಮೂಲಕ ಬ್ರಹ್ಮನಿಗೂ ಅಸತ್ತೆಂಬ ಕಾರಣವಿದೆ ಎಂಬ ಪೂರ್ವಪಕ್ಷಯುಕ್ತಿಯನ್ನು ಸೂಚಿಸಲು ಮತ್ತು 'ಸತ್ತ್ವಂ ಸ್ವಾತಂತ್ರ್ಯಮುದ್ದಿಷ್ಟಂ' ಎಂಬ ಭಾರತೋಕ್ತಿಯನ್ನನುಸರಿಸಿ ಸ್ವಾತಂತ್ರ್ಯರೂಪವಾದ [1] ಸಿದ್ಧಾಂತಯುಕ್ತಿಯನ್ನು ಸೂಚಿಸಲು 'ಸತಃ' ಎಂದು ಹೇಳಲಾಗಿದೆ. ದ್ಯುಭ್ವಾದ್ಯಧಿಕರಣದಲ್ಲಿ ಬ್ರಹ್ಮನಿಗೆ ಆವಿರ್ಭಾವರೂಪವಾದ ಉತ್ಪತ್ತಿ ಇದೆಯೆಂದು ಸಿದ್ಧವಾಗಿದ್ದರೂ ಈ ಪ್ರಕರಣದಲ್ಲಿ ಅಭಿಪ್ರೇತವಾಗಿರುವ ಪರಾಧೀನವಿಶೇಷಾವಾಪ್ತಿರೂಪವಾದ ಉತ್ಪತ್ತಿಯನ್ನು ಇಲ್ಲಿ ನಿರಾಕರಿಸಲಾಗಿದೆ ಎಂದು ತಿಳಿಯಬೇಕು.

ತೇಜೋಧಿಕರಣ—೪

## ಓಂ ತೇಜೋಽತಸ್ತಥಾ ಹ್ಯಾಹ ಓಂ (೨–೩–೧೦)

**ಅಧಿಕರಣದ ವಿಷಯ ಮತ್ತು ಸೂತ್ರಾರ್ಥ**

ಈ ಅಧಿಕರಣದಲ್ಲಿ ತೇಜಸ್ಸಿನ ಕಾರಣವನ್ನು ಹೇಳುವ ಶ್ರುತಿಯ ಅವಿರೋಧವನ್ನು ಹೇಳಲಾಗುವುದು. ಹಿಂದಿನ ಸೂತ್ರದಲ್ಲಿ 'ಸತಃ' ಎಂಬ ಪದದಿಂದ ಹೇಳಲ್ಪಟ್ಟಿರುವ ಬ್ರಹ್ಮನನ್ನು ಈ ಸೂತ್ರದ 'ಅತಃ' ಪದವು ಹೇಳುವುದು. 'ತು' ಶಬ್ದವು

---

1. ಲಕ್ಷ್ಮೀದೇವಿಯನ್ನು ಮೊದಲುಗೊಂಡು ಸಕಲಜಗತ್ತಿಗೂ ಅಸ್ವಾತಂತ್ರ್ಯವಿರುವುದರಿಂದ ಪರಾಧೀನ ವಿಶೇಷಾವಾಪ್ತಿಯೇ ಮೊದಲಾದ ಉತ್ಪತ್ತಿ ಇರುವುದು. ಬ್ರಹ್ಮನಿಗೆ ಸ್ವಾತಂತ್ರ್ಯವಿರುವುದರಿಂದ ಅಂತಹ ಉತ್ಪತ್ತಿಯಿಲ್ಲ ಎಂದು ಭಾವ.

समुच्चये । अतस्तु ब्रह्मण एव न तु वायोः । तेजस्तथा तेजोऽप्युत्पत्तिमत् । न केवलं वियत् मातरिश्वा चेत्यर्थः । कुतः ? हि यस्मादाह— "तत्तेजोऽसृजत" इति श्रुतिरित्यर्थः । कारणत्वेनेत्यत्र सतस्तेजःकारणत्वेनोक्तावपीह पुनरुक्तिः तद्वत्स्वातन्त्र्येण वायोरपि हेतुत्वनिवृत्त्यर्था । वियत्यविवादात्तेजसो दूरश्रुतेशजत्वोक्त्यैव वायोरपि तत्सिद्धेस्तेजोऽत इत्येवोक्तिः । तदनन्यत्वमित्यादौ युक्तिप्राप्तं

---

ಅನುವೃತ್ತವಾಗುವುದು. 'ಉತ್ಪತ್ತಿಮತ್' ಎಂಬ ಪದವು ಮಂಡೂಕಪ್ಲುತಿಯಿಂದ ಅನುವೃತ್ತಿ ಹೊಂದುವುದು. 'ತಥಾ' ಶಬ್ದವು ಸಮುಚ್ಚಯಾರ್ಥಕವಾದುದು.

ಅತಸ್ತು–ಬ್ರಹ್ಮನಿಂದಲೇ–ಹೊರತು ವಾಯುವಿನಿಂದಲ್ಲ, ತೇಜಸ್ತಥಾ–ತೇಜಸ್ಸು ಉತ್ಪತ್ತಿಯನ್ನು ಪಡೆದಿರುವುದು. 'ಆಕಾಶ ಮತ್ತು ವಾಯು ಇವಿಷ್ಟೇ ಅಲ್ಲ' ಎಂದು ಚ ಶಬ್ದದ ಅರ್ಥ. ಏಕೆಂದರೆ, ಹಿ–ಯಾವ ಕಾರಣದಿಂದ, ಆಹ–'ತತ್ತೇಜೋಽಸೃಜತ' ಎಂಬ ಶ್ರುತಿಯು ಹೇಳುವುದೋ ಆ ಕಾರಣದಿಂದ ಎಂದು ಅರ್ಥ.

### ತೇಜಸ್ಸಿಗೆ ಬ್ರಹ್ಮನು ಕಾರಣನೆಂದು ಹಿಂದೆಯೇ ಹೇಳಿದ್ದರೂ ಈ ಸೂತ್ರ ಆವಶ್ಯಕ

'ಕಾರಣತ್ವೇನ' (ಬ್ರ.ಸೂ. ೧–೪–೧೫) ಎಂಬಲ್ಲಿ ಬ್ರಹ್ಮನನ್ನು ತೇಜಸ್ಸಿನ ಕಾರಣನೆಂದು ಹೇಳಿದ್ದರೂ, ಬ್ರಹ್ಮನಂತೆ ವಾಯುವಿಗೆ ತೇಜಸ್ಸನ್ನು ಕುರಿತು ಸ್ವತಂತ್ರ ಕಾರಣತ್ವವಿಲ್ಲ ಎಂಬುದನ್ನು ತಿಳಿಸಲು ಈ ಅಧಿಕರಣದಲ್ಲಿ ಪುನಃ ತೇಜಸ್ಸನ್ನು ಕುರಿತು ಬ್ರಹ್ಮನೇ ಕಾರಣನೆಂದು ಹೇಳಲಾಗಿದೆ. ಆಕಾಶಕ್ಕೆ ಬ್ರಹ್ಮನು ಸ್ವತಂತ್ರಕಾರಣನೆನ್ನುವುದರಲ್ಲಿ ವಿವಾದವಿಲ್ಲದಿರುವುದರಿಂದ[1] ದೂರದಲ್ಲಿ ಶ್ರುತನಾದ ಈಶನು ತೇಜಸ್ಸಿಗೆ ಸ್ವತಂತ್ರಕಾರಣನೆಂದು ಹೇಳುವುದರಿಂದಲೇ ವಾಯುವಿಗೂ ಬ್ರಹ್ಮನು ಸ್ವತಂತ್ರಕಾರಣನೆಂದು ಸಿದ್ಧವಾಗುವುದರಿಂದ 'ತೇಜೋಽತಃ' ಎಂದಿಷ್ಟೇ ಈ ಸೂತ್ರದಲ್ಲಿ ಹೇಳಲಾಗಿದೆ. 'ತದನನ್ಯತ್ವಂ' (ಬ್ರ.ಸೂ. ೨–೧–೧೫) ಇತ್ಯಾದಿ ಸೂತ್ರಗಳಲ್ಲಿ ಯುಕ್ತಿಯ ಮೂಲಕ ಶಂಕಿಸಲಾದ ಸ್ವತಂತ್ರ ಕಾರಣಾಂತರವನ್ನು ನಿರಾಕರಿಸಲಾಗಿದೆ, ಇಲ್ಲಾದರೊ ಶ್ರುತಿಯ ಮೂಲಕ ಶಂಕಿಸಲಾದ ಸ್ವತಂತ್ರಕಾರಣಾಂತರವನ್ನು ನಿರಾಕರಿಸಲಾಗಿದೆ ಎಂದು

---

1. "ಆತ್ಮನ ಆಕಾಶಃ ಸಂಭೂತಃ ಆಕಾಶಾದ್ವಾಯುಃ ವಾಯೋರಗ್ನಿಃ" ಎಂಬ ಶ್ರುತಿಯಲ್ಲಿ ಆತ್ಮಶಬ್ದವಾಚ್ಯನಾದ ಈಶನು ವಾಯುವಿನ ದೃಷ್ಟಿಯಿಂದ ಅಗ್ನಿಗೆ ದೂರದಲ್ಲಿ ಶ್ರುತನಾಗಿದ್ದಾನೆ. ಆದರೂ ಅಗ್ನಿಗೆ ಈಶನು ಸ್ವತಂತ್ರಕಾರಣನೆಂದು ಈ ಸೂತ್ರದಲ್ಲಿ ಸಾಧಿಸಿದ ಮೇಲೆ ವಾಯುವಿಗೂ ಬ್ರಹ್ಮನು ಸ್ವತಂತ್ರಕಾರಣನೆಂದು ಸಿದ್ಧನಾಗುವನೆಂದು ಭಾವ.

कारणान्तरस्वातन्त्र्यं निरस्तम् इह तु श्रुतिप्राप्तमिति भेदः । अत्र तेज-आदिपदेन जडं तद्देवता चोच्यते ॥ ४ ॥

अबधिकरणम्—५

॥ ओँ आपः ओँ ॥ २-३-११

अत्राब्जनकश्रुत्यविरोध उच्यते । अतस्तथाऽह्याहेत्यस्ति उत्पत्तिमदिति च । आपोऽप्यत एवोत्पत्तिमत्यः । न त्वग्नेः । "यस्मात् ब्रह्मैवेदमग्र आसीत्तदपोऽसृजत" इत्याह श्रुतिरित्यर्थः । आप इति श्रौतपृथिव्यादेरुपलक्षणम् । घर्मात् स्वेदादिदृष्टेरग्नेरब्जन्म प्रत्यक्षमिति विशेषशङ्कानिवृत्त्यर्थोऽयं विभागः ॥ ५ ॥

---

ವೈಲಕ್ಷಣ್ಯವಿದೆ. ಇಲ್ಲಿ 'ತೇಜಸ್' ಮೊದಲಾದ ಪದದಿಂದ ಜಡ ತೇಜಸ್ಸು ಇತ್ಯಾದಿಗಳು ಮತ್ತು ಅವುಗಳ ಅಭಿಮಾನಿ ದೇವತೆಯನ್ನು ಹೇಳಲಾಗಿದೆ.

ಅಬಧಿಕರಣ—೫

ಓಂ ಆಪಃ ಓಂ (೨-೩-೧೧)

**ಅಧಿಕರಣದ ವಿಷಯ ಮತ್ತು ಸೂತ್ರಾರ್ಥ**

ಈ ಅಧಿಕರಣದಲ್ಲಿ 'ಅಪ್'ಗೆ ಕಾರಣವನ್ನು ಹೇಳುವ ಶ್ರುತಿಯ ವಿರೋಧವಿಲ್ಲವೆಂಬುದನ್ನು ಹೇಳಲಾಗುವುದು.

'ಅತಃ', 'ತಥಾ ಹ್ಯಾಹ' ಎಂಬ ಪದಗಳೂ ಮತ್ತು 'ಉತ್ಪತ್ತಿಮತ್' ಎಂಬ ಪದವೂ ಅನುವೃತ್ತಿ ಹೊಂದುವುವು. ಆಪಃ ಅಪಿ–ಜಲವೂ, ಅತ ಏವ–ಆ ಬ್ರಹ್ಮನಿಂದಲೇ, ಉತ್ಪತ್ತಿಮತ್ಯಃ – ಉತ್ಪತ್ತಿಯನ್ನು ಪಡೆದಿದೆ. ಅಗ್ನಿಯಿಂದಲ್ಲ. 'ಬ್ರಹ್ಮೈವ ಇದಮಗ್ರ ಆಸೀತ್, ತದಪೋಽಸೃಜತ' ಎಂದು ಶ್ರುತಿಯು ಹೇಳುವುದರಿಂದ ಎಂದು ಅರ್ಥ. 'ಆಪಃ' ಎಂಬ ಪದವು ಶ್ರುತಿಯಲ್ಲಿ ಹೇಳಿರುವ ಪೃಥಿವೀ ಮೊದಲಾದವುಗಳಿಗೂ ಉಪಲಕ್ಷಣವಾಗಿದೆ.

**ಹಿಂದಿನ ಸೂತ್ರದಲ್ಲೇ ಈ ಸೂತ್ರವನ್ನು ಸೇರಿಸದಿರುವುದರ ಕಾರಣ**

ಉಷ್ಣತೆಯಿಂದ ಬೆವರು ಮೊದಲಾದವುಗಳು ಉಂಟಾಗುವುದು ಕಂಡಿರುವುದರಿಂದ ಅಗ್ನಿಯಿಂದ ಜಲದ ಉತ್ಪತ್ತಿ ಪ್ರತ್ಯಕ್ಷಸಿದ್ಧವಾಗಿದೆ ಎಂಬ ವಿಶೇಷಶಂಕೆಯನ್ನು ಪರಿಹರಿಸಲು ಈ ಸೂತ್ರವನ್ನು ಹಿಂದಿನ ಸೂತ್ರದಿಂದ ವಿಭಜಿಸಲಾಗಿದೆ.

पृथिव्यधिकरणम्—६

## ॥ ॐ पृथिव्यधिकाररूपशब्दान्तरादिभ्यः ॐ ॥
## २-३-१२

अत्र "ता अन्नमसृजन्त" "अद्भ्यः पृथिवी" इति द्वारश्रुत्यविरोध उच्यते। अन्नमित्यन्वेति। अन्नं पृथिवी न प्रसिद्धान्नम्। येन श्रुत्योर्विरोधः स्यात्। कुतः? अधिकारात् "तत्तेजोऽसृजत" इत्यादिभूतप्रकरणात्। यत्कृष्णं तदन्नस्येति कार्ष्ण्यरूपात्, पृथिवी वा अन्नमिति शब्दान्तरात्। आदिपदाद्वेदो नाप्रमाणमपौरुषेयत्वादित्यादि

---

ಪೃಥಿವ್ಯಧಿಕರಣ—೬

## ಓಂ ಪೃಥಿವ್ಯಧಿಕಾರರೂಪಶಬ್ದಾಂತರಾದಿಭ್ಯಃ ಓಂ
## (೨-೩-೧೨)

**ಅಧಿಕರಣದ ವಿಷಯ ಮತ್ತು ಸೂತ್ರಾರ್ಥ**

ಈ ಅಧಿಕರಣದಲ್ಲಿ 'ತಾ ಅನ್ನಮಸೃಜಂತ' (ಛಾಂ. ೬-೨) ಮತ್ತು 'ಅದ್ಭ್ಯಃ ಪೃಥಿವೀ' (ತೈ. ೨-೧) ಎಂಬ ದ್ವಾರಶ್ರುತಿಗಳಿಗೆ[1] ಪರಸ್ಪರ ಅವಿರೋಧವನ್ನು ಹೇಳಲಾಗುವುದು.

'ಅನ್ನಂ' ಎಂಬ ಪದವು ಇಲ್ಲಿ ಅನ್ವಯವನ್ನು ಪಡೆಯುವುದು. ಅನ್ನವೆಂದರೆ ಪೃಥಿವೀ. ಪ್ರಸಿದ್ಧ ಅನ್ನವಲ್ಲ. ಪ್ರಸಿದ್ಧ ಅನ್ನವೇ ಅನ್ನಶಬ್ದದ ಅರ್ಥವಾಗಿದ್ದಲ್ಲಿ ಶ್ರುತಿಗಳಿಗೆ ಪರಸ್ಪರ ವಿರೋಧ ಸಂಭವಿಸುತ್ತಿದ್ದಿತು. ಇಲ್ಲಿ ಅನ್ನಶಬ್ದಕ್ಕೆ ಪೃಥಿವೀ ಅರ್ಥವಾಗಿದೆ ಎಂಬುದಕ್ಕೆ ಆಧಾರ–ಅಧಿಕಾರಾತ್–'ತತ್ತೇಜೋಽಸೃಜತ' ಎಂದು ಭೂತಪ್ರಕರಣವಾಗಿರುವುದು; 'ಯತ್ ಕೃಷ್ಣಂ ತದನ್ನಸ್ಯ' ಎಂದು ಕೃಷ್ಣರೂಪವನ್ನು ಅನ್ನಕ್ಕೆ ಹೇಳಿರುವುದು, 'ಪೃಥಿವೀ ವಾ ಅನ್ನಂ' ಎಂಬ ಇನ್ನೊಂದು ಶ್ರುತಿ ಮತ್ತು 'ಆದಿ' ಪದದಿಂದ ಲಭ್ಯವಾಗುವ 'ವೇದವು ಅಪ್ರಮಾಣವಲ್ಲ, ಅಪೌರುಷೇಯವಾದುದರಿಂದ' ಇತ್ಯಾದಿ ಯುಕ್ತಿಗಳು ಎಂದು ಅರ್ಥ.

---

1. ಬ್ರಹ್ಮನು ಅಪ್ ದ್ವಾರಾ ಅನ್ನವನ್ನು ಸೃಜಿಸಿದನೆಂದು 'ತಾ ಅನ್ನಮಸೃಜತ' ಎಂಬ ಶ್ರುತಿಯಿಂದ ತಿಳಿದುಬರುವುದು. ಅಪ್ ದ್ವಾರಾ ಪೃಥಿವೀಯನ್ನು ಸೃಜಿಸಿದನೆಂದು 'ಅದ್ಭ್ಯಃ ಪೃಥಿವೀ' ಎಂಬ ಶ್ರುತಿಯು ತಿಳಿಸುವುದು. ಈ ದ್ವಾರಶ್ರುತಿಗಳಿಗೆ ತೋರುವ ಪರಸ್ಪರ ವಿರೋಧವನ್ನು ಇಲ್ಲಿ ಪರಿಹರಿಸಲಾಗುವುದು ಎಂದು ಭಾವ.

युक्तेश्चेत्यर्थः । नाधिकारमात्रादन्नश्रुतिबाधः शक्य इत्यतो रूपेति लिङ्गोक्तिः । न ताभ्यामप्यतीव श्रुतेर्बाधः । किन्तु तद्वाचित्वज्ञापनमिति भावेन शब्दान्तरोक्तिः । शब्देत्येव वाच्ये अन्तरेत्युक्तिः शाखान्तर-स्थत्वसूचनायेति केचित् । "आपोऽन्नमसृजन्त पृथिवी वा अन्नम्" इत्येवंरूपशब्दविशेषद्योतनायेत्यन्ये । श्रुत्योरप्रामाण्यं किं नेत्यतो युक्तिः ॥ ६ ॥

तदभिध्यानाधिकरणम्—७

## ॥ ॐ तदभिध्यानादेव तु तल्लिङ्गात् सः ॐ ॥
## २-३-१३

**ಸೂತ್ರದಲ್ಲಿ ಅನೇಕ ಹೇತುಗಳನ್ನು ನೀಡಿರುವುದರ ಕಾರಣ**

ಕೇವಲ ಪ್ರಕರಣದಿಂದ ಅನ್ನಶ್ರುತಿಯನ್ನು ಬಾಧಿಸಲು ಶಕ್ಯವಿಲ್ಲವೆಂಬ ಕಾರಣದಿಂದ 'ರೂಪ' ಎಂಬ ಲಿಂಗವನ್ನು ಹೇಳಲಾಗಿದೆ. ಪ್ರಕರಣ ಮತ್ತು ಲಿಂಗ ಇವೆರಡೂ ಕೂಡ ಅನ್ನಶ್ರುತಿಯನ್ನು ಅತ್ಯಂತವಾಗಿ ಬಾಧಿಸುವುದಿಲ್ಲ. ಅನ್ನಶಬ್ದವು ಪೃಥಿವೀ ವಾಚಕವಾಗಿದೆ ಎಂಬುದನ್ನು ಮಾತ್ರ ತಿಳಿಸುವುದು ಎಂಬ ಭಾವದಿಂದ 'ಶಬ್ದಾಂತರ' ವನ್ನು ಹೇಳಲಾಗಿದೆ.

**'ಶಬ್ದಾಂತರ' ಎಂಬಲ್ಲಿ 'ಅಂತರ' ಪದದ ಆವಶ್ಯಕತೆ**

'ಶಬ್ದ' ಎಂದಿಷ್ಟೇ ಹೇಳಬಹುದಾಗಿದ್ದರೂ, 'ಪೃಥಿವೀ ವಾ ಅನ್ನಂ' (ತೈ. ೩-೯) ಎಂಬ ಶ್ರುತಿಯು ಶಾಖಾಂತರದಲ್ಲಿದೆ ಎನ್ನುವುದನ್ನು ಸೂಚಿಸಲು 'ಶಬ್ದಾಂತರ' ಎಂದು ಹೇಳಲಾಗಿದೆ ಎಂದು ಕೆಲವರು ಹೇಳುವರು. ಮತ್ತೆ ಕೆಲವರು 'ಆಪೋऽನ್ನಮಸೃಜಂತ ಪೃಥಿವೀ ವಾ ಅನ್ನಂ' ಎಂಬ ಶ್ರುತಿವಿಶೇಷವನ್ನು ಸೂಚಿಸಲು ಶಬ್ದಾಂತರ ಎಂದು ಹೇಳಲಾಗಿದೆ ಎಂದು ಹೇಳುವರು.

ಶ್ರುತಿಗಳಿಗೆ ಪರಸ್ಪರ ವಿರೋಧದಿಂದ ಅಪ್ರಾಮಾಣ್ಯವನ್ನೇಕೆ ಹೇಳಬಾರದು ಎಂಬುದಕ್ಕೆ ಉತ್ತರವಾಗಿ 'ಆದಿ' ಪದದಿಂದ ಯುಕ್ತಿಯನ್ನು ಹೇಳಲಾಗಿದೆ.

ತದಭಿಧ್ಯಾನಾಧಿಕರಣ—೭

## ಓಂ ತದಭಿಧ್ಯಾನಾದೇವ ತು ತಲ್ಲಿಂಗಾತ್ ಸಃ ಓಂ
## (೨-೩-೧೩)

अत्रैवमधिभूताधिदैवजन्मश्रुत्यविरोधमुक्त्वा "यत्प्रयन्ति", "रुद्रो माविशान्तक" इति तत्संहारकश्रुत्यविरोध उच्यते । अभिध्यानमिच्छा । तुस्तद्गतसञ्जिहीर्षात्वरूपविशेषवाची । एवेति कैमुत्यसूचकः । तल्लिङ्गेति तच्छब्देन बुद्धिस्थं विश्वसंहर्तृत्वमुच्यते । स इति प्रकृतो विष्णुः । संहर्तेति योग्यतयाऽन्वेति । स विष्णुः संहर्ता, न रुद्रः । कुतः ? तदभिध्यानात्तस्य विष्णोरभिध्यानात्तस्याभिध्यानादिति श्रुत्युक्तादनादिबन्धसञ्जिहीर्षारूपादेव तल्लिङ्गात्तस्य सादिजगत्संहर्तृत्वस्य साधकाल्लिङ्गादित्यर्थः । अनादेरपि बन्धस्य लयकर्ता किल विष्णुः, किमु सादेर्जगत इत्येवकारतात्पर्यम् । स इति "स नो हरिर्घृतम्" इति श्रुतिसूचकम् । अयं च चन्द्रिकोक्तः । टीकायां तु

---

**ಅಧಿಕರಣದ ವಿಷಯ ಮತ್ತು ಸೂತ್ರಾರ್ಥ**

ಹೀಗೆ ಭೂತಗಳ ಮತ್ತು ದೇವತೆಗಳ ಜನ್ಮವನ್ನು ಕುರಿತಾದ ಶ್ರುತಿಗಳಿಗೆ ಪರಸ್ಪರ ಅವಿರೋಧವನ್ನು ಹೇಳಿದ ನಂತರ ಈ ಅಧಿಕರಣದಲ್ಲಿ 'ಯತ್ ಪ್ರಯಂತಿ' (ತೈ.ಉ. ೩-೧) ಮತ್ತು 'ರುದ್ರೋ ಮಾ ವಿಶಾಂತಕಃ' (ಮಹಾನಾ. ೧೬-೨) ಎಂಬ ಭೂತಗಳ ಮತ್ತು ದೇವತೆಗಳ ಸಂಹಾರವನ್ನು ಕುರಿತಾದ ಶ್ರುತಿಗಳಿಗೆ ಅವಿರೋಧವನ್ನು ಹೇಳಲಾಗುವುದು.

ಅಭಿಧ್ಯಾನ ಎಂದರೆ ಇಚ್ಛೆ 'ತು' ಶಬ್ದವು ಇಚ್ಛೆಯಲ್ಲಿರುವ ಸಂಜಿಹೀರ್ಷಾತ್ವ[1]ವೆಂಬ ವಿಶೇಷವನ್ನು ಹೇಳುವುದು. 'ಏವ' ಶಬ್ದವು ಕೈಮುತ್ಯವನ್ನು ಸೂಚಿಸುವುದು. 'ತಲ್ಲಿಂಗ' ಎಂಬಲ್ಲಿರುವ 'ತತ್' ಶಬ್ದವು ಬುದ್ಧಿಸ್ಥವಾದ ಜಗತ್ಸಂಹರ್ತೃತ್ವವನ್ನು ಹೇಳುವುದು. 'ಸಃ' ಎಂಬ ಪದವು ಪ್ರಕೃತನಾದ ವಿಷ್ಣುವನ್ನು ಹೇಳುವುದು. ಅನ್ವಯಯೋಗ್ಯವಾದ 'ಸಂಹರ್ತಾ' ಎಂಬ ಪದವು ಅನ್ವಿತವಾಗುವುದು. ಸಃ-ಆ ವಿಷ್ಣುವು, ಸಂಹರ್ತಾ-ಸಂಹಾರಕನಾಗಿದ್ದಾನೆ, ಹೊರತು ರುದ್ರನಲ್ಲ. ಏಕೆಂದರೆ, ತದಭಿಧ್ಯಾನಾತ್-ತಸ್ಯ-ಆ ವಿಷ್ಣುವಿನ, ಅಭಿಧ್ಯಾನಾತ್-'ತಸ್ಯಾಭಿಧ್ಯಾನಾತ್'[2]

---

1. ಸಂಹಾರೇಚ್ಛೆಯ ಧರ್ಮ.

2. "ತಸ್ಯಾಭಿಧ್ಯಾನಾತ್ ಯೋಜನಾತ್ ತತ್ತ್ವಭಾವಾತ್ ಭೂಯಶ್ಚಾಂತೇ ವಿಶ್ವಮಾಯಾ ನಿವೃತ್ತಿಃ" ಎಂದು ಶ್ರುತಿ. "ಆ ಭಗವಂತನಲ್ಲಿ ಮನಸ್ಸನ್ನು ಸಂಯೋಜಿಸುವುದರಿಂದ, ಪುನಃ ಪುನಃ ಭಗವಂತನ ಯಥಾರ್ಥಧ್ಯಾನದಿಂದ ಉಂಟಾಗುವ ಭಗವದಿಚ್ಛಾವಿಶೇಷದಿಂದ ಪರಿಪಕ್ವ ಸಮಯದಲ್ಲಿ ಪ್ರಾರಬ್ಧಕರ್ಮಗಳು ನಾಶವಾದ ಮೇಲೆ ಬಂಧಕವಾದ ಅಜ್ಞಾನದ ಸಂಪೂರ್ಣ ನಿವೃತ್ತಿಯಾಗುವುದು" ಎಂದು ಶ್ರುತ್ಯರ್ಥ.

तस्य बन्धलयस्य तदभिध्यानात्तस्येति श्रुतौ तदभिध्यानहेतुकत्वश्रवणात् । तथा च तल्लिङ्गात्तदिच्छाधीनत्वलिङ्गाद्बन्धलयकर्ता विष्णुरित्यनुमीयते । अनादिबन्धसंहर्तृत्वात् स विष्णुः सादिजगत्संहर्ताऽनुमीयत इति पञ्चम्योर्वैय्यधिकरण्यमुपेत्य परम्परया हेतुत्वोक्तिर्भाष्य-

---

(ಶ್ವೇ. ೧-೧೦) ಎಂಬ ಶ್ರುತಿಯಲ್ಲಿ ಹೇಳಿದ 'ಅನಾದಿಬಂಧವನ್ನು ಸಂಹರಿಸುವ ಇಚ್ಛೆ' ಎಂಬ, ತಲ್ಲಿಂಗಾತ್–ಸಾದಿ ಜಗತ್ಸಂಹರ್ತೃತ್ವವನ್ನು ಸಾಧಿಸುವ ಲಿಂಗದಿಂದ ಎಂದು ಅರ್ಥ. ಅನಾದಿಯಾಗಿರುವ ಬಂಧಕ್ಕೇ ವಿಷ್ಣುವು ಲಯಕಾರಕನಾಗಿರುವನಲ್ಲವೇ. ಸಾದಿ ಜಗತ್ತಿನ ಲಯಕ್ಕೆ ಕಾರಣನೆಂದು ಹೇಳಬೇಕಾದುದೇನು' ಎಂದು 'ಏವ' ಶಬ್ದದ ತಾತ್ಪರ್ಯ. 'ಸಃ' ಎಂಬ ಪದವು 'ಸ ನೋ ಹರಿರ್ಘೃತಂ[1] ಎಂಬ ಶ್ರುತಿಯನ್ನು ಸೂಚಿಸುವುದು. ಇದು ಚಂದ್ರಿಕಾದಲ್ಲಿ ಹೇಳಿರುವ ಅರ್ಥ.

### ತತ್ತ್ವಪ್ರಕಾಶಿಕಾದಲ್ಲಿ ಹೇಳಿರುವ ಸೂತ್ರಾರ್ಥ

ಟೀಕಾದಲ್ಲಾದರೋ, 'ಬಂಧದ ಲಯಕ್ಕೆ, ತದಭಿಧ್ಯಾನಾತ್–'ತಸ್ಯಾಭಿಧ್ಯಾನಾತ್' ಎಂಬ ಶ್ರುತಿಯಲ್ಲಿ ಭಗವಂತನ ಇಚ್ಛೆಯೇ ಕಾರಣವೆಂದು ಶ್ರುತವಾಗಿರುವುದರಿಂದ. ಹೀಗೆ, ತಲ್ಲಿಂಗಾತ್—'ಅವನ ಇಚ್ಛೆಗೆ ಅಧೀನವಾಗಿರುವಿಕೆ' ಎಂಬ ಹೇತುವಿನಿಂದ ವಿಷ್ಣುವು ಬಂಧ-ಲಯಕರ್ತೃವೆಂದು ಅನುಮಾನಪ್ರಮಾಣದಿಂದ ಸಿದ್ಧಿಸುವುದು. ಅನಾದಿಬಂಧದ ಸಂಹಾರಕನಾದುದರಿಂದ ಆ ವಿಷ್ಣುವು ಸಾದಿಯಾದ ಜಗತ್ತಿಗೂ ಸಂಹಾರಕನೆಂದು ಅನುಮಾನದಿಂದ ಸಾಧಿಸಲಾಗುವುದು. ಇಲ್ಲಿ, 'ತದಭಿಧ್ಯಾನಾತ್', 'ತಲ್ಲಿಂಗಾತ್' ಎಂಬಲ್ಲಿರುವ ಪಂಚಮೀ ವಿಭಕ್ತಿಗಳಿಗೆ [2]ವೈಯ್ಯಧಿಕರಣ್ಯವನ್ನು ಅಂಗೀಕರಿಸಿ [3]ಪರಂಪರೆಯಿಂದ ಹೇತುವೆಂದು ಹೇಳಿರುವುದು ಭಾಷ್ಯದ್ದೇ ವ್ಯಾಖ್ಯಾನ

---

1. "ಯಮುಪ್ಯೇತಿ ಭುವನಂ ಸಾಂಪರಾಯೇ ಸ ನೋ ಹರಿರ್ಘೃತಮಿಹಾಯುಷೇತ್ತು ದೇವಃ"—ಎಂದು ತೈತ್ತಿರೀಯ ಶ್ರುತಿ. ಈ ಭುವನವು ಮೋಕ್ಷ–ಪ್ರಲಯಗಳಲ್ಲಿ ಯಾರನ್ನು ಪ್ರವೇಶಿಸುವುದೋ ಆ ಹರಿಯು ನಮ್ಮ ಆಯುಷ್ಯಕ್ಕಾಗಿ ಈ ಯಜ್ಞಸ್ಥಾನಕ್ಕೆ ಬಂದು ಆಹುತಿರೂಪವಾದ ಘೃತವನ್ನು ಸ್ವೀಕರಿಸಲಿ ಎಂದು ಶ್ರುತ್ಯರ್ಥ.

2. 'ತದಭಿಧ್ಯಾನವೆಂಬ ತಲ್ಲಿಂಗ' ಎಂಬ ಅರ್ಥ ಬರುವಂತೆ ವ್ಯಾಖ್ಯಾನ ಮಾಡಿದರೆ 'ತದಭಿಧ್ಯಾನಾತ್' 'ತಲ್ಲಿಂಗಾತ್' ಎಂಬಲ್ಲಿರುವ ಪಂಚಮೀವಿಭಕ್ತಿಗಳಿಗೆ ಸಾಮಾನಾಧಿಕರಣ್ಯವನ್ನು ಅಂಗೀಕರಿಸಿದಂತಾಗುತ್ತಿತ್ತು. ಆದರೆ, 'ಅವನ ಇಚ್ಛೆಗೆ ಅಧೀನವಾಗಿರುವಿಕೆ' ಎಂಬ ತಲ್ಲಿಂಗಕ್ಕೆ ಹೇತುವಾಗಿ ತದಭಿಧ್ಯಾನವನ್ನು ಅನ್ವಯಿಸಿರುವುದರಿಂದ ಪಂಚಮೀವಿಭಕ್ತಿಗಳಿಗೆ ವೈಯ್ಯಧಿಕರಣ್ಯ ಉಂಟಾಗುವುದು.

3. ಸಾದಿ ಜಗತ್ಸಂಹಾರಕನೆಂದು ಸಾಧಿಸಲು ಅನಾದಿಬಂಧಸಂಹಾರಕತ್ವ ಹೇತು. ಅನಾದಿ ಬಂಧಸಂಹಾರಕತ್ವವನ್ನು ಸಾಧಿಸಲು ತದಭಿಧ್ಯಾನವು ಹೇತು—ಹೀಗೆ ತದಭಿಧ್ಯಾನವು ಪರಂಪರೆಯಿಂದ ಹೇತುವಾಗಿದೆ.

स्यैव व्याख्या। एके तु तुरेव, स एवेत्यन्वेतीत्याहुः। तत्त्वप्रदीपादौ विशेषवाचीत्युक्तम् ॥ ७ ॥

विपर्ययाधिकरणम्—८

## ॥ ओं विपर्ययेण तु क्रमोऽत उपपद्यते च ओं ॥ २-३-१४

अन्नादिभूतसंहारक्रमश्रुत्यविरोध उच्यते । अत इत्यावर्तते। क्रमस्त्विवति तुरन्वेति। क्रमस्तु "क्रमादुत्पद्यते क्रमाद्विलीयत" इति श्रुत्युक्तक्रमस्तु अतः प्रकृतात् सृष्टिक्रमाद्विपर्ययेण भवति । कुतः ? अतः अस्मादेव शब्दात्। यस्यां भाल्लवेयश्रुतौ क्रमादुत्पद्यत इत्यादिना

ವಾಗಿದೆ. ಕೆಲವರು 'ತು' ಶಬ್ದಕ್ಕೆ 'ಏವ' ಎಂದು ಅರ್ಥ ಹೇಳಿ 'ಸ ಏವ' ಎಂದು ಅನ್ವಯವೆಂದು ಹೇಳುವರು. ತತ್ತ್ವಪ್ರದೀಪ ಮೊದಲಾದವುಗಳಲ್ಲಿ 'ತು' ಶಬ್ದವು ವಿಶೇಷವಾಚಕವೆಂದು ಹೇಳಲಾಗಿದೆ.

ವಿಪರ್ಯಯಾಧಿಕರಣ—೮

## ಓಂ ವಿಪರ್ಯಯೇಣ ತು ಕ್ರಮೋಽತ ಉಪಪದ್ಯತೇ ಚ ಓಂ (೨-೩-೧೪)

**ಅಧಿಕರಣದ ವಿಷಯ ಮತ್ತು ಸೂತ್ರಾರ್ಥ**

ಅನ್ನ ಮೊದಲಾದ ಭೂತಗಳ ಸಂಹಾರದ ಕ್ರಮಕ್ಕೆ ಸಂಬಂಧಿಸಿದ ಶ್ರುತಿಗಳಿಗೆ ಪರಸ್ಪರ ವಿರೋಧವಿಲ್ಲದಿರುವುದನ್ನು ಇಲ್ಲಿ ಹೇಳಲಾಗುವುದು. 'ಅತಃ' ಎಂಬ ಪದ ಆವೃತ್ತವಾಗುವುದು. 'ತು' ಶಬ್ದವು 'ಕ್ರಮಸ್ತು' ಎಂಬುದಾಗಿ ಅನ್ವಯವನ್ನು ಪಡೆಯುವುದು. ಕ್ರಮಸ್ತು—'ಕ್ರಮಾದುತ್ಪದ್ಯತೇ ಕ್ರಮಾದ್ವಿಲೀಯತೇ' ಎಂಬ ಶ್ರುತಿಯಲ್ಲಿ ಹೇಳಿರುವ ಕ್ರಮವಾದರೋ, ಅತಃ–ಪ್ರಕೃತವಾದ ಸೃಷ್ಟಿಕ್ರಮಕ್ಕಿಂತ ವಿಪರೀತವಾದ ಕ್ರಮದಲ್ಲೇ ಇರುವುದು. ಏಕೆಂದರೆ, ಅತಃ–ಇದೇ ಶ್ರುತಿಯಿಂದಲೇ, ಯಾವ ಭಾಲ್ಲವೇಯ [1] ಶ್ರುತಿಯಲ್ಲಿ 'ಕ್ರಮಾದುತ್ಪದ್ಯತೇ' ಇತ್ಯಾದಿಯಾಗಿ

1. "ಅತ ಏವ ಹೀದಂ ಪರಾತ್ ಕ್ರಮಾದುತ್ಪದ್ಯತೇ ಕ್ರಮಾದ್ವಿಲೀಯತೇ ನಾಸಾವುದೇತಿ ನಾಸ್ತಮೇತಿ" ಎಂಬ ಭಾಲ್ಲವೇಯ ಶ್ರುತಿ.

क्रमाल्लयः श्रुतस्तस्यामेव श्रुतौ क्रमाद्व्युत्क्रमाच्चेति व्युत्क्रमाल्लयश्रवणादित्यर्थः । व्युत्क्रमाल्लयाङ्गीकारे लोकविरोध इत्यत उक्तम् उपपद्यते चेति । विपर्यय इति वर्तते । पूर्वोत्पन्नानां सामर्थ्याधिक्यादिति भावः । तुस्तु क्रमाल्लीयन्ते इति श्रुतिगतिसूचकः । विपरीतक्रमस्यापि क्रमत्वादिति भावः । तुरेव स्थाने अत इत्यत्र चान्वेतीत्येके ॥ ८ ॥

अन्तराधिकरणम्—९

## ॥ ॐ अन्तरा विज्ञानमनसी क्रमेण तल्लिङ्गादिति चेन्नाविशेषात् ॐ ॥ २-३-१५

---

ಸೃಷ್ಟಿಕ್ರಮದಿಂದ ಲಯವು ಶ್ರುತವಾಗಿದೆಯೋ ಆದೇ ಶ್ರುತಿಯಲ್ಲಿ "ಕ್ರಮಾದ್ ವ್ಯುತ್ಕ್ರಮಾಚ್ಚ"[1] ಎಂದು ವಿಪರೀತಕ್ರಮದಿಂದ ಲಯವು ಕೇಳಿಬರುವುದರಿಂದ ಎಂದು ಅರ್ಥ. ಸೃಷ್ಟಿಕ್ರಮಕ್ಕೆ ವಿಪರೀತವಾದ ಕ್ರಮದಿಂದ ಲಯವನ್ನು ಅಂಗೀಕರಿಸಿದಲ್ಲಿ ಲೋಕವಿರೋಧ ಬರುವುದು ಎಂಬ ಶಂಕೆಗೆ ಸಮಾಧಾನವಾಗಿ 'ಉಪಪದ್ಯತೇ ಚ' ಎಂದು ಹೇಳಲಾಗಿದೆ. 'ವಿಪರ್ಯಯೇ' ಎಂಬ ಪದವು ಅನುವೃತ್ತವಾಗುವುದು. ಮೊದಲು ಉತ್ಪನ್ನವಾದವುಗಳಿಗೆ ಸಾಮರ್ಥ್ಯವು ಅಧಿಕವಾಗಿರುವುದರಿಂದ—ಎಂದು ಭಾವ. 'ತು' ಶಬ್ದವಾದರೋ 'ಕ್ರಮಾಲ್ಲೀಯಂತೇ' ಎಂಬ ಶ್ರುತಿಗೆ ಅರ್ಥ ಮಾಡಬೇಕಾದ ರೀತಿಯನ್ನು ಸೂಚಿಸುವುದು. 'ವಿಪರೀತಕ್ರಮವೂ ಕ್ರಮವೇ ಆಗಿದೆ' ಎಂದು ಭಾವ. ಕೆಲವರು 'ತು' ಶಬ್ದವು 'ಏವ' ಎಂಬ ಅರ್ಥದಲ್ಲಿ ಬಂದಿದೆ. ಈ ಶಬ್ದವು ತಾನಿರುವ ಸ್ಥಾನದಲ್ಲೂ, 'ಅತಃ' ಎಂಬಲ್ಲಿಯೂ ಅನ್ವಯ ಪಡೆಯುವುದೆಂದು ಹೇಳುವರು.

ಅಂತರಾಧಿಕರಣ—೯

## ಓಂ ಅಂತರಾ ವಿಜ್ಞಾನಮನಸೀ ಕ್ರಮೇಣ ತಲ್ಲಿಂಗಾದಿತಿ ಚೇನ್ನಾವಿಶೇಷಾತ್ ಓಂ (೨-೩-೧೫)

---

1. "ಕರ್ತಾ ಪ್ರಾಣಾದಿಕಸ್ಯಾಸ್ಯ ಹಂತಾ ಭೂಮ್ಯಾದಿಕಸ್ಯ ಚ । ಯಃ ಕ್ರಮಾದ್ ವ್ಯುತ್ಕ್ರಮಾಚ್ಚೈವ ಸ ಹರಿಃ ಪರ ಉಚ್ಯತೇ" ಎಂಬ ಭಾಲ್ಲವೇಯ ಶ್ರುತಿಯಲ್ಲಿ.

अत्र प्रागुक्तव्युत्क्रमलयस्य विज्ञानादावपवादशङ्कानिरासेन लयक्रमश्रुत्यविरोध उच्यते । विज्ञानमनसी विज्ञानमनस्तत्त्वे अन्तरा विना क्रमेण प्रागुक्तक्रमेणान्येषां तत्त्वानां लय इति शेषः । कुतः? तल्लिङ्गात् । तत्रोक्तेऽर्थे "मनसश्च विज्ञानम्", "यच्छेद्वाङ्मनसि प्राज्ञस्तद्यच्छेज्ज्ञान" इति श्रुत्युक्तात् क्रमादुत्पन्नयोः क्रमाल्लयाख्य-लिङ्गादिति चेन्न । अविशेषात् विज्ञानमनसोर्यथोत्पत्तिलय इति तद्विशेषप्रमाणाभावादित्यर्थः । विज्ञानमनसोः क्रमेणेति वाच्येऽन्तरे-त्येवंरूपोक्तिः तद्द्वयादन्येषां व्युत्क्रमेण लय इत्यर्थानुमतिसूचनाय ।

**ಅಧಿಕರಣದ ವಿಷಯ ಮತ್ತು ಸೂತ್ರಾರ್ಥ**

ಈ ಅಧಿಕರಣದಲ್ಲಿ—ಹಿಂದೆ ಹೇಳಿದ ವಿಪರೀತಕ್ರಮದ ಲಯಕ್ಕೆ ವಿಜ್ಞಾನ ಮೊದಲಾದವುಗಳಲ್ಲಿ ಅಪವಾದವಿದೆ ಎಂಬ ಶಂಕೆಯನ್ನು ನಿರಾಕರಿಸುವುದರ ಮೂಲಕ ಲಯಕ್ರಮಕ್ಕೆ ಸಂಬಂಧಿಸಿದ ಶ್ರುತಿಗಳಿಗೆ [1] ಪರಸ್ಪರ ವಿರೋಧವಿಲ್ಲವೆಂದು ಹೇಳಲಾಗುವುದು.

ವಿಜ್ಞಾನಮನಸೀ- ವಿಜ್ಞಾನತತ್ತ್ವ ಮತ್ತು ಮನಸ್ತತ್ತ್ವಗಳನ್ನು, ಅಂತರಾ—ಬಿಟ್ಟು, ಕ್ರಮೇಣ-ಹಿಂದೆ ಹೇಳಿದ ಕ್ರಮದಿಂದ ಇತರ ತತ್ತ್ವಗಳಿಗೆ ಲಯವಿರುವುದು—ಇಲ್ಲಿ 'ಇತರ ತತ್ತ್ವಗಳಿಗೆ ಲಯವಿರುವುದು' ಎಂಬ ಶೇಷವನ್ನು ಸೇರಿಸಿಕೊಳ್ಳಲಾಗಿದೆ—ಏಕೆಂದರೆ, ತಲ್ಲಿಂಗಾತ್—ಈಗ ಹೇಳಿದ ವಿಷಯದಲ್ಲಿ – "ಮನಸಶ್ಚ ವಿಜ್ಞಾನಂ", "ಯಚ್ಛೇದ್ ವಾಙ್ಮನಸಿ ಪ್ರಾಜ್ಞಃ" ಎಂಬ ಶ್ರುತಿಗಳಲ್ಲಿ ಹೇಳಿರುವ 'ಕ್ರಮದಿಂದ ಉತ್ಪನ್ನವಾದವುಗಳಿಗೆ ಅದೇ ಕ್ರಮದಿಂದ ಲಯ' ಎಂಬ ಲಿಂಗವಿರುವುದರಿಂದ ಎಂದರೆ ಅದು ಸರಿಯಲ್ಲ, ಅವಿಶೇಷಾತ್—ವಿಜ್ಞಾನ ಮನಸ್ತತ್ತ್ವಗಳಿಗೆ ಉತ್ಪತ್ತಿಯಾದ ಕ್ರಮದಲ್ಲೇ ಲಯವೆಂಬುದರಲ್ಲಿ ವಿಶೇಷಪ್ರಮಾಣವಿಲ್ಲದಿರುವುದರಿಂದ ಎಂದು ಅರ್ಥ.

**'ಅಂತರಾ ವಿಜ್ಞಾನಮನಸೀ' ಎಂದು ಸೂತ್ರವಿನ್ಯಾಸದ ಕಾರಣ**

'ವಿಜ್ಞಾನಮನಸೋಃ ಕ್ರಮೇಣ' ಎಂದು ಹೇಳಬಹುದಾಗಿದ್ದರೂ 'ಅಂತರಾ' ಎಂದು ಈ ರೀತಿಯಾಗಿ ಹೇಳಿರುವುದು ವಿಜ್ಞಾನ ಮನಸ್ಸುಗಳನ್ನು ಬಿಟ್ಟು ಉಳಿದ ತತ್ತ್ವಗಳಿಗೆ ವಿಪರೀತಕ್ರಮದಲ್ಲಿ ಲಯ ಎಂಬ ವಿಷಯದಲ್ಲಿ ಪೂರ್ವಪಕ್ಷದ ಅನುಮತಿ ಸೂಚಿಸಲು.

1. "ಪ್ರಾಣಾನ್ಮನೋ ಮನಸಶ್ಚ ವಿಜ್ಞಾನಮ್" ಎಂಬ ಶ್ರುತಿಯಲ್ಲಿ ಮನಸ್ತತ್ತ್ವದಿಂದ ವಿಜ್ಞಾನತತ್ತ್ವದ ಉತ್ಪತ್ತಿಯನ್ನು ಹೇಳಲಾಗಿದೆ. "ಯಚ್ಛೇದ್ ವಾಙ್ಮನಸಿ ಪ್ರಾಜ್ಞಃ ತದ್ ಯಚ್ಛೇತ್ ಜ್ಞಾನ ಆತ್ಮನಿ" ಎಂಬ ಶ್ರುತಿಯಲ್ಲಿ ಉತ್ಪತ್ತಿಕ್ರಮವನ್ನನುಸರಿಸಿ ಮನಸ್ತತ್ತ್ವಕ್ಕೆ ವಿಜ್ಞಾನತತ್ತ್ವದಲ್ಲಿ ಲಯವನ್ನು ಹೇಳಿದೆ. ಆದ್ದರಿಂದ ವಿಪರೀತ ಕ್ರಮದಿಂದ ಲಯ ಎಂದು ಹೇಳುವ ಶ್ರುತಿವಿರೋಧ ಎಂದು ಭಾವ.

उक्तलिङ्गमेव तत्र मानमित्याह—

॥ ॐ चराचरव्यपाश्रयस्तु स्यात्तद्व्यपदेशो भाक्तस्तद्भावभावित्वात् ॐ ॥ २-३-१६

चरेति चञ्चलत्वान्मनोरूपमिन्द्रियं तद्वृत्तिरूपविज्ञानं चोच्यते। अचरेत्यचञ्चलत्वान्मनस्तत्त्वं विज्ञानतत्त्वं च। स्यादिति सम्भावनायाम्। स चासौ व्यपदेशश्च तद्व्यपदेशः। तद्व्यपदेशस्तु मनसश्च विज्ञानमिति मनोविज्ञानशब्दरूपो व्यपदेशस्तु चराचरव्यपाश्रयः स्यात्। इन्द्रियतद्वृत्तितत्त्वविषयः सम्भावितः। तथापि स एकदेशविषयः। इन्द्रियमनस्तत्त्वरूपमनःशब्दार्थे तद्वृत्तिविज्ञानतत्त्वरूपविज्ञानशब्दार्थे चैकदेशेन्द्रियतद्वृत्तिरूपमनोविज्ञानविषय एव न तु

---

ವಿಜ್ಞಾನವಮನಸ್ಸುಗಳಿಗೆ ಉತ್ಪತ್ತಿಕ್ರಮದಿಂದಲೆ ಲಯವೆಂಬುದರಲ್ಲಿ 'ಯಚ್ಛೇದ್' ಇತ್ಯಾದಿ ಶ್ರುತ್ಯುಕ್ತಲಿಂಗವೇ ಪ್ರಮಾಣವಾಗಿದೆ ಎಂಬ ಶಂಕೆಯನ್ನು ನಿವಾರಿಸಲು ಸೂತ್ರ—

ಓಂ ಚರಾಚರವ್ಯಪಾಶ್ರಯಸ್ತು ಸ್ಯಾತ್ತದ್ವ್ಯಪದೇಶೋ ಭಾಕ್ತಸ್ತದ್ಭಾವಭಾವಿತ್ವಾತ್ ಓಂ (೨-೩-೧೬)

**ಸೂತ್ರಾರ್ಥ**

'ಚರ' ಎಂಬ ಪದವು ಚಂಚಲವಾದ ಮನೋರೂಪ ಇಂದ್ರಿಯವನ್ನೂ ಮನೋವೃತ್ತಿರೂಪವಾದ ವಿಜ್ಞಾನವನ್ನೂ ಹೇಳುವುದು. 'ಅಚರ' ಎಂಬ ಪದವು ಅಚಂಚಲವಾದ ಮನಸ್ತತ್ತ್ವ ಮತ್ತು ವಿಜ್ಞಾನತತ್ತ್ವಗಳನ್ನು ಹೇಳುವುದು. 'ಸ್ಯಾತ್' ಪದವು ಸಂಭಾವನಾರ್ಥಕವಾಗಿದೆ. ಸ ಚಾಸೌ ವ್ಯಪದೇಶಶ್ಚ ತದ್ವ್ಯಪದೇಶಃ ಎಂದು 'ತದ್ವ್ಯಪದೇಶ' ಪದದ ವಿಗ್ರಹ. ತದ್ವ್ಯಪದೇಶಸ್ತು— 'ಮನಸಶ್ಚ ವಿಜ್ಞಾನಂ' ಎಂಬುದಾಗಿ 'ಮನಸ್ಸು' 'ವಿಜ್ಞಾನ' ಈ ಶಬ್ದರೂಪವಾದ ವ್ಯವಹಾರವು, ಚರಾಚರವ್ಯಪಾಶ್ರಯಃ ಸ್ಯಾತ್–ಮನೋರೂಪ ಇಂದ್ರಿಯ, ಮನೋವೃತ್ತಿರೂಪವಾದ ವಿಜ್ಞಾನ, ಮನಸ್ತತ್ತ್ವ ಮತ್ತು ವಿಜ್ಞಾನತತ್ತ್ವ ಇವುಗಳೆಲ್ಲವನ್ನೂ ಕುರಿತದ್ದಾಗಿರುವ ಸಾಧ್ಯತೆ ಇದೆ. ಆದರೂ ಆ ವ್ಯವಹಾರವು ಏಕದೇಶವನ್ನು ಮಾತ್ರ ಕುರಿತದ್ದಾಗಿರುವುದು. ಮನಃಶಬ್ದಾರ್ಥವಾದ ಮನೋರೂಪ ಇಂದ್ರಿಯ ಮತ್ತು ಮನಸ್ತತ್ತ್ವ ಇವುಗಳಲ್ಲಿ, ಹಾಗೆಯೇ ವಿಜ್ಞಾನ ಶಬ್ದಾರ್ಥವಾದ ಮನೋವೃತ್ತಿಜ್ಞಾನ ಮತ್ತು

तत्त्वविषय इत्यर्थः । तद्भावभावित्वात् । चराचरव्यपाश्रयेति प्रातिपदिकमात्रं तद्भावविशेषणत्वेनावर्तते । चराचरेति स्थावरजङ्गमावुच्येते । तदिति मनः । चराचरव्यपाश्रयेण जङ्गमादिसर्ववस्तुविषयकत्वेन तद्भावेन मनोभावेन आलोचनेनेति यावत् । भावित्वात् वृत्तिरूपज्ञानस्योत्पद्यमानत्वादित्यर्थः । तुशब्दः श्रुतेर्गतिसूचकः । मन इत्याद्यनुक्त्वा चराचरेत्युक्तिः तद्भावविशेषणत्वार्था । तदिति तन्त्रम् । तत्र चराचरेषु विषये तस्य मनसो भावित्वाद्विज्ञानस्येत्यर्थ इत्येके । मनःशब्देन मनोरूपेन्द्रियं मनस्तत्त्वं च विज्ञानशब्देनापि वृत्तिविज्ञानतत्त्वं च । तथाच मनसो विज्ञानमित्युक्तिर्वस्तुनि मनोभावेन

---

ವಿಜ್ಞಾನತತ್ತ್ವ ಇವುಗಳಲ್ಲಿ ಏಕದೇಶವಾದ ಮನೋರೂಪ ಇಂದ್ರಿಯ–ಮನೋವೃತ್ತಿಜ್ಞಾನ—ಈ ಮನೋವಿಜ್ಞಾನಗಳಿಗೇ ಆ ವ್ಯವಹಾರವು ಸಂಬಂಧಿಸಿದೆ ಹೊರತು ಮನಸ್ತತ್ತ್ವ, ವಿಜ್ಞಾನತತ್ತ್ವಗಳಿಗೆ ಸಂಬಂಧಿಸಿಲ್ಲ ಎಂದು ಅರ್ಥ. ತದ್ಭಾವಭಾವಿತ್ವಾತ್–'ಚರಾಚರವ್ಯಪಾಶ್ರಯ' ಎಂಬ ಪ್ರಾತಿಪದಿಕಾಂಶವನ್ನು ಮಾತ್ರ 'ತದ್ಭಾವ' ಎಂಬ ಪದಕ್ಕೆ ವಿಶೇಷಣವಾಗಿ ಅನ್ವಯಿಸಲು ಆವೃತ್ತಿ ಮಾಡಿಕೊಳ್ಳಬೇಕು. 'ಚರಾಚರ' ಎಂದರೆ ಸ್ಥಾವರ ಜಂಗಮಗಳು. 'ತತ್' ಎಂದರೆ ಮನಸ್ಸು. ಚರಾಚರವ್ಯಪಾಶ್ರಯ ಎಂದರೆ ಜಂಗಮ ಮೊದಲಾದ ಸಕಲವಸ್ತುಗಳನ್ನು ಗ್ರಹಿಸುವ, ತದ್ಭಾವೇನ–ಮನೋಭಾವದಿಂದ, ಆಲೋಚನೆಯಿಂದ ಎಂದು ಸಾರ–ಭಾವಿತ್ವಾತ್–ಮನೋವೃತ್ತಿಜ್ಞಾನವು ಉತ್ಪನ್ನವಾಗುವುದರಿಂದ ಎಂದು ಅರ್ಥ. 'ತು' ಶಬ್ದವು 'ಮನಸಶ್ಚ ವಿಜ್ಞಾನಂ' ಎಂಬ ಶ್ರುತಿಗೆ ಹೀಗೆ ವ್ಯಾಖ್ಯಾನದ ಸಾಧ್ಯತೆಯನ್ನು ಸೂಚಿಸುವುದು ಮನಸ್ ಇತ್ಯಾದಿ ಪದಗಳ ಬದಲಾಗಿ ಚರಾಚರವ್ಯಪಾಶ್ರಯ ಎಂದು ಹೇಳಿರುವುದು 'ತದ್ಭಾವ' ಪದಕ್ಕೆ ವಿಶೇಷಣವಾಗಿ ಸೇರಿಸಲು.

**'ತದ್ಭಾವಭಾವಿತ್ವಾತ್' ಎಂಬ ಪದಕ್ಕೆ ವ್ಯಾಖ್ಯಾನಾಂತರ**

'ತತ್' ಪದವನ್ನು ಆವೃತ್ತಿಮಾಡಬೇಕು. ತತ್ರ–ಚರಾಚರ ವಿಷಯಗಳಲ್ಲಿ, ತಸ್ಯ ಭಾವೇನ–ಮನಸ್ಸಿನ ಭಾವ ಅಂದರೆ ಆಲೋಚನೆಯಿಂದ, ಭಾವಿತ್ವಾತ್–ವಿಜ್ಞಾನವು ಹುಟ್ಟುವುದರಿಂದ ಎಂದು ಅರ್ಥವನ್ನು ಕೆಲವರು ಹೇಳುವರು. ಮನಃ ಶಬ್ದವು ಮನೋರೂಪ ಇಂದ್ರಿಯ, ಮನಸ್ತತ್ತ್ವ ಇವುಗಳನ್ನೂ, ವಿಜ್ಞಾನ ಶಬ್ದವು ವೃತ್ತಿಜ್ಞಾನ ಮತ್ತು ವಿಜ್ಞಾನತತ್ತ್ವ ಇವುಗಳನ್ನೂ ಹೇಳುವವು. ಆದ್ದರಿಂದ, 'ಮನಸೋ ವಿಜ್ಞಾನಂ' ಎಂಬ ಶ್ರುತಿಯು ಆಲೋಚನೆಯಿಂದಾಗಿ ಪದಾರ್ಥಗಳ

वृत्तेर्जायमानत्वात् मनोरूपेन्द्रियतज्जन्यवृत्तिविषया न तत्त्वविषया इति न तल्लिङ्गमिति भावः । भागवाचिभक्तशब्दात् तस्येदमिति सम्बन्धमात्रेऽपि कृते भाक्तो भागविषय इति सिद्ध्यतीति ध्येयम् ॥ ९ ॥

आत्माधिकरणम्—१०

## ॥ ॐ नात्माऽश्रुतेर्नित्यत्वाच्च ताभ्यः ॐ ॥
## २-३-१७

अत्र ब्रह्मलयालयश्रुत्यविरोध उच्यते । प्रकरणाल्लयवानिति लभ्यते । आत्मा परमात्मा देहनाशाख्यलयवान्न भवति । अश्रुतेः

---

ವಿಷಯದಲ್ಲಿ ವೃತ್ತಿಜ್ಞಾನವು ಹುಟ್ಟುವುದರಿಂದ ಮನೋರೂಪ ಇಂದ್ರಿಯ ಮತ್ತು ತಜ್ಜನ್ಯವಾದ ವೃತ್ತಿಜ್ಞಾನ ಇವುಗಳಿಗೆ ಸಂಬಂಧಿಸಿದುದೇ ಹೊರತು ತತ್ತ್ವಗಳಿಗೆ ಸಂಬಂಧಿಸಿದ್ದಲ್ಲವಾದ್ದರಿಂದ ತತ್ತ್ವಗಳ ವಿಷಯದಲ್ಲಿ ಪ್ರಮಾಣವಾಗಲಾರದು ಎಂದು ಭಾವ.

**'ಭಾಕ್ತ' ಶಬ್ದದ ಅರ್ಥ**

ಏಕದೇಶ ಎಂಬ ಅರ್ಥದ ಭಕ್ತ ಶಬ್ದದ ಮುಂದೆ 'ತಸ್ಯೇದಂ' (ಪಾ. ಸೂ. ೪-೩-೧೨೦) ಎಂಬ ಸೂತ್ರದಿಂದ ಸಂಬಂಧ ಎಂಬ ಅರ್ಥದಲ್ಲಿ ಅಣ್ ಪ್ರತ್ಯಯವನ್ನು ಸೇರಿಸಿದಾಗ ಏಕದೇಶಕ್ಕೆ ಸಂಬಂಧಿಸಿದುದು ಎಂಬ ಅರ್ಥದ ಭಾಕ್ತ ಶಬ್ದವು ಸಿದ್ಧಿಸುವುದೆಂದು ತಿಳಿಯಬೇಕು.

ಆತ್ಮಾಧಿಕರಣ—೧೦

## ಓಂ ನಾತ್ಮಾಽಶ್ರುತೇರ್ನಿತ್ಯತ್ವಾಚ್ಚ ತಾಭ್ಯಃ ಓಂ
## (೨-೩-೧೭)

**ಅಧಿಕರಣದ ವಿಷಯ ಮತ್ತು ಸೂತ್ರಾರ್ಥ**

ಈ ಅಧಿಕರಣದಲ್ಲಿ ಬ್ರಹ್ಮನಿಗೆ ಲಯವಿದೆಯೆಂದೂ, ಇಲ್ಲವೆಂದೂ ಹೇಳುವ ಶ್ರುತಿಗಳಿಗೆ ಅವಿರೋಧವನ್ನು ಹೇಳಲಾಗುವುದು.

ಪ್ರಕರಣವಶಾತ್ 'ಲಯವಾನ್' ಎಂಬ ಪದವು ಲಭಿಸುವುದು. ಆತ್ಮಾ–ಪರಮಾತ್ಮನು, ಲಯವಾನ್ ನ ಭವತಿ–ದೇಹನಾಶರೂಪವಾದ ಲಯವುಳ್ಳವನಲ್ಲ.

ब्रह्मलयस्याश्रवणात् । "सर्वं विलाप्यान्तस्तमसि निलीनः" इति श्रुतिस्त्वपिहितत्वपरेति भावः । कुत एवमन्यार्थकल्पनेत्यतः श्रुतेरिति विच्छिद्य योज्यम् । "तुच्छेनाभ्वपिहितं यदासीत्" इति श्रुतेरित्यर्थः । अस्यां "नासदासीत्" इति सर्वस्य लयमुक्त्वा "तम आसीत्" इति प्रकृतेः स्थितिमुक्त्वा ब्रह्मणस्तदपिहितत्वस्य पुनः प्रादुर्भावस्य चोक्तेः । तस्मात्तत्समाख्यानादिति भावः । कुत एवम् ? लय एव किं नस्यात् ? समाख्यातो निलीनश्रुतेः प्राबल्यात् । अत उक्तं नित्यत्वाच्च ताभ्य इति । ताभ्यो नित्यत्वाच्च आत्मनो निलीनश्रुति-

ಅಶ್ರುತೇಃ—ಬ್ರಹ್ಮನಿಗೆ ಲಯವಿದೆಯೆಂದು ಯಾವ ಶ್ರುತಿಯಿಂದಲೂ ತಿಳಿದುಬರುವುದಿಲ್ಲ ವಾದ್ದರಿಂದ. "ಸರ್ವಂ ವಿಲಾಪ್ಯ ಅಂತಸ್ತಮಸಿ ನಿಲೀನಃ"[1] ಎಂಬ ಶ್ರುತಿಯು ಬ್ರಹ್ಮನಿಗೆ ಆಚ್ಛಾದನೆಯನ್ನು ಮಾತ್ರ ಹೇಳುವ ಅಭಿಪ್ರಾಯವುಳ್ಳದ್ದೆಂದು ಭಾವ. ಹೀಗೆ ಈ ಶ್ರುತಿಗೆ ಬೇರೆ ಅರ್ಥವನ್ನೇಕೆ ಕಲ್ಪಿಸಬೇಕು ಎಂಬ ಆಶಂಕೆಗೆ ಉತ್ತರವಾಗಿ 'ಶ್ರುತೇಃ' ಎಂದು ಪದವನ್ನು ವಿಭಾಗಿಸಿ ಯೋಜಿಸಿಕೊಳ್ಳಬೇಕು. [2]'ತುಚ್ಛೇನಾಭ್ವಪಿಹಿತಂ ಯದಾಸೀತ್' (ಋ. ೧೦–೧೨೯–೩) ಎಂಬ ಶ್ರುತಿಯಿಂದ ಎಂದು ಅರ್ಥ. ಈ ಶ್ರುತಿಯಲ್ಲಿ 'ನಾಸದಾಸೀತ್ ನೋ ಸದಾಸೀತ್' ಎಂದು ಸಮಸ್ತ ಜಗತ್ತಿಗೂ ಲಯ ವನ್ನು ಹೇಳಿ, 'ತಮ ಆಸೀತ್' ಎಂಬ ವಾಕ್ಯದಿಂದ ಪ್ರಕೃತಿಗೆ ಅಸ್ತಿತ್ವವನ್ನೂ ಹೇಳಿ, ಅನಂತರ ಬ್ರಹ್ಮನಿಗೆ ಆ ಪ್ರಕೃತಿಯಿಂದ ಆಚ್ಛಾದನೆಯನ್ನೂ ಪುನಃ ಪ್ರಾದುರ್ಭಾವ ವನ್ನೂ ಹೇಳಲಾಗಿದೆ. ಹೀಗೆ ಶ್ರುತಿಯ ಸಮಾಖ್ಯೆ ಇರುವುದರಿಂದ ಬ್ರಹ್ಮನು ತಮಸ್ಸಿ ನಲ್ಲಿ ನಿಲೀನನೆಂದರೆ ಪ್ರಕೃತಿಯಿಂದ ಆಚ್ಛಾದಿತನೆಂದು ಭಾವ.

ಹೀಗೇಕೆ ಹೇಳಬೇಕು ? ಬ್ರಹ್ಮನಿಗೆ ಲಯವೇ ಏಕಾಗಬಾರದು ? ಸಮಾಖ್ಯಾ ಪ್ರಮಾಣಕ್ಕಿಂತಲೂ ಬ್ರಹ್ಮನು ತಮಸ್ಸಿನಲ್ಲಿ ನಿಲೀನನೆಂದು ಹೇಳುವ ಶ್ರುತಿಪ್ರಮಾಣವೇ ಪ್ರಬಲವಷ್ಟೇ ?—ಎಂಬ ಆಶಂಕೆಗೆ ಉತ್ತರ—'ನಿತ್ಯತ್ವಾಚ್ಚ ತಾಭ್ಯಃ'. ಬ್ರಹ್ಮನು ದೇಹದಿಂದಲೂ ನಿತ್ಯನೆಂದು ಶ್ರುತಿಗಳಿಂದ ತಿಳಿದುಬರುವುದು. ಆದ್ದರಿಂದ ಪರಮಾತ್ಮನು ತಮಸ್ಸಿನಲ್ಲಿ ಲಯಹೊಂದುವನೆಂದು ಹೇಳುವಂತೆ ತೋರುವ ಶ್ರುತಿಯು ಬೇರೆಯೇ

1. "ಸ ಇದಂ ಸರ್ವಂ ವಿಲಾಪ್ಯ ಅಂತಸ್ತಮಸಿ ನಿಲೀನಃ ತದ್ವಿಲಾಪ್ಯ ವ್ಯಕ್ತಿಸ್ಥತೇ" ಎಂದು ಶ್ರುತಿ. ಪರಮಾತ್ಮನು ಈ ಜಗತ್ತೆಲ್ಲವನ್ನೂ ಚಿತ್ಪ್ರಕೃತಿಯಿಂದ ಆಚ್ಛಾದಿಸಿ, ತಾನೂ ಪ್ರಕೃತಿಯಿಂದ ಆಚ್ಛಾದಿತನಾಗಿ ಅನಂತರ ಆ ಪ್ರಕೃತಿಯನ್ನು ಉಪಸಂಹರಿಸಿ ಪ್ರಾದುರ್ಭಾವ ಗೊಳ್ಳುವನು ಎಂದು ಸಿದ್ಧಾಂತದಲ್ಲಿ ಶ್ರುತ್ಯರ್ಥ.

2. ವಿಭುವಾದ ಬ್ರಹ್ಮನು ಪ್ರಕೃತಿಯಿಂದ ಆಚ್ಛಾದಿತನಾಗಿದ್ದನು ಎಂದು ಅರ್ಥ.

रन्यार्थेत्यर्थः । प्राबल्याय बाहुल्योक्तिः । असम्भव इत्यत्राजन्मोक्तावपि लीलादेहग्रहणत्यागावपि नेति वक्तुमयं योगः । "नित्यो नित्यानाम्" इति देहनित्यत्वस्याप्युक्तेः ॥ १० ॥

ज्ञाधिकरणम्—११

## ॥ ॐ ज्ञोऽत एव ॐ ॥ २-३-१८

एवमधिभूताधिदैवब्रह्मविषयश्रुत्यविरोधमुक्त्वा इतः परमापादसमाप्ति जीवश्रुत्यविरोध उच्यते । अत्र "नित्यो नित्यानां", "आत्मानो व्युच्चरन्ति" इति जीवजन्माजन्मश्रुत्यविरोध उच्यते ।

---

ಅರ್ಥವುಳ್ಳದ್ದೆಂದು ಅರ್ಥ. ಬ್ರಹ್ಮನು ನಿತ್ಯನೆಂದು ಹೇಳುವ ಶ್ರುತಿಗಳ ಪ್ರಾಬಲ್ಯವನ್ನು ಸೂಚಿಸಲು 'ತಾಭ್ಯಃ' ಎಂದು ಬಹುವಚನದಿಂದ ಆ ಶ್ರುತಿಗಳ ಬಾಹುಳ್ಯವನ್ನು ಹೇಳಲಾಗಿದೆ.

**ಈ ಸೂತ್ರಕ್ಕೆ ಪುನರುಕ್ತಿದೋಷವಿಲ್ಲ**

'ಅಸಂಭವಃ' (ಬ್ರ ಸೂ. ೨-೩-೯) ಎಂಬ ಸೂತ್ರದಲ್ಲಿ ಬ್ರಹ್ಮನಿಗೆ ಉತ್ಪತ್ತಿಯಿಲ್ಲವೆಂದು ಹೇಳಿದ್ದರೂ, 'ನಿತ್ಯೋ ನಿತ್ಯಾನಾಂ' (ಕಠ. ೫-೧೩) ಎಂಬ ಶ್ರುತಿಯಲ್ಲಿ ಬ್ರಹ್ಮನ ದೇಹವೂ ನಿತ್ಯವೆಂದು ಹೇಳಿರುವುದರಿಂದ, ಲೀಲೆಯಿಂದ ದೇಹವನ್ನು ಸ್ವೀಕರಿಸುವುದು ಮತ್ತು ತ್ಯಜಿಸುವುದು—ಇವುಗಳೂ ಇಲ್ಲವೆಂದು ಹೇಳಲು ಈ ಸೂತ್ರ ಬಂದಿದೆ.

ಜ್ಞಾಧಿಕರಣ—೧೧

## ಓಂ ಜ್ಞೋಽತ ಏವ ಓಂ (೨-೩-೧೮)

**ಈ ಪಾದದ ಉಳಿದ ಅಧಿಕರಣಗಳ ಮತ್ತು ಈ ಅಧಿಕರಣದ ವಿಷಯ**

ಹೀಗೆ ಭೂತಗಳಿಗೆ ಮತ್ತು ದೇವತೆಗಳಿಗೆ ಸಂಬಂಧಿಸಿದ ಶ್ರುತಿಗಳಿಗೂ ಬ್ರಹ್ಮವಿಷಯಕವಾದ ಶ್ರುತಿಗಳಿಗೂ ಅವಿರೋಧವನ್ನು ಹೇಳಿದ ನಂತರ ಇಲ್ಲಿಂದ ಮುಂದೆ ಈ ಪಾದ ಮುಗಿಯುವವರೆಗೆ ಜೀವವಿಷಯಕವಾದ ಶ್ರುತಿಗಳಿಗೆ ಅವಿರೋಧವನ್ನು ಹೇಳಲಾಗುವುದು. ಈ ಅಧಿಕರಣದಲ್ಲಿ 'ನಿತ್ಯೋ ನಿತ್ಯಾನಾಂ' (ಕಠ ೫-೧೩) ಎಂಬ ಜೀವನಿಗೆ ಜನ್ಮವಿಲ್ಲವೆಂದು ಹೇಳುವ ಶ್ರುತಿಗೂ 'ಆತ್ಮಾನೋ ವ್ಯುಚ್ಚರಂತಿ' ಎಂಬ ಜೀವನಿಗೆ ಜನ್ಮವನ್ನು ಹೇಳುವ ಶ್ರುತಿಗೂ ಅವಿರೋಧವನ್ನು ಹೇಳಲಾಗುವುದು.

उत्पद्यत इति शेषः । अत एवेति तन्त्रावृत्त्योरन्यतरः । जानातीति ज्ञः जीवः, इगुपधज्ञाप्रीकिरः कः, अत एव प्रकृतात्मन एवोत्पद्यते । अत एवाविनष्टा एवोत्पद्यन्त इति श्रुतत्वेन प्रकृतश्रुतेरेवेत्यर्थः । "नित्यो नित्यानाम्" इति जीवनित्यत्वश्रुतिः स्वरूपपरेति भावः ।

अनादिनित्यस्य जीवस्य जनिरयुक्तेत्यत आह—

॥ ॐ युक्तेश्च ॐ ॥ २-३-१९

तादृशस्यापि जनेर्युक्तत्वाच्चेत्यर्थः । पराधीनदेहरूपविशेषावाप्तिलक्षणोत्पत्तेरुपपन्नत्वादिति भावः । देहोत्पत्तिनिमित्तविरोधस्तु

---

**ಸೂತ್ರಾರ್ಥ**

'ಉತ್ಪದ್ಯತೇ' ಎಂಬ ಶೇಷವನ್ನು ಸೇರಿಸಿಕೊಳ್ಳಬೇಕು. 'ಅತ ಏವ' ಎಂಬ ಪದಗಳನ್ನು [1]ತಂತ್ರ ಅಥವಾ ಆವೃತ್ತಿ ಮಾಡಿಕೊಳ್ಳಬೇಕು. 'ಜಾನಾತೀತಿ ಜ್ಞಃ' ಎಂಬ ವ್ಯುತ್ಪತ್ತಿಯಂತೆ ಜ್ಞ ಎಂದರೆ ತಿಳುವಳಿಕೆಯುಳ್ಳ ಜೀವನು—'ಇಗುಪಧಜ್ಞಾಪ್ರೀಕಿರಃ ಕಃ' (ಪಾ. ಸೂ. ೩-೧ ೧೩೫) ಎಂಬ ಸೂತ್ರದಿಂದ ಜ್ಞಾ ಧಾತುವಿಗೆ 'ಕ' ಪ್ರತ್ಯಯ ಸೇರಿ ಜ್ಞಃ ಎಂದು ರೂಪವಾಗಿದೆ—ಅತ ಏವ-ಪ್ರಸಕ್ತನಾದ ಪರಮಾತ್ಮನಿಂದಲೇ, ಉತ್ಪದ್ಯತೇ-ಹುಟ್ಟುವನು. ಅತ ಏವ 'ಅವಿನಷ್ಟಾ ಏವೋತ್ಪದ್ಯಂತೇ' (ಕಾಷಾಯಣ ಶ್ರುತಿ) ಎಂಬ ಶ್ರುತಿಯೇ ಇದಕ್ಕೆ ಆಧಾರವೆಂದು ಅರ್ಥ. 'ನಿತ್ಯೋ ನಿತ್ಯಾನಾಂ' ಎಂಬ ಜೀವನಿಗೆ ನಿತ್ಯತ್ವವನ್ನು ಹೇಳುವ ಶ್ರುತಿಯು ಜೀವಸ್ವರೂಪದ ನಿತ್ಯತ್ವವನ್ನು ಹೇಳುವುದೆಂದು ಭಾವ.

ಅನಾದಿನಿತ್ಯನಾದ ಜೀವನಿಗೆ ಉತ್ಪತ್ತಿಯು ಯುಕ್ತವಲ್ಲ ಎಂಬ ಆಶಂಕೆಗೆ ಉತ್ತರ—

ಓಂ ಯುಕ್ತೇಶ್ಚ ಓಂ (೨-೩-೧೯)

**ಸೂತ್ರಾರ್ಥ**

ಅಂತಹವನಿಗೂ ಜನನವು ಯುಕ್ತವಾಗಿರುವುದರಿಂದ ಎಂದು ಅರ್ಥ. ಪರಾಧೀನ ವಾದ ದೇಹವೆಂಬ ವಿಶೇಷದ ಪ್ರಾಪ್ತಿರೂಪವಾದ ಉತ್ಪತ್ತಿಯು ಜೀವನಿಗೆ ಯುಕ್ತ

---

1. ಸಕೃದುಚ್ಚರಿತಸ್ಯ ಅನೇಕೋಪಕಾರಕತ್ವಂ ತಂತ್ರವತ್—ಒಮ್ಮೆ ಉಚ್ಚರಿಸುವ ಶಬ್ದವು ಅನೇಕೋಪಕಾರಕವಾಗಿರುವುದು ತಂತ್ರ. ಸಕೃದುಚ್ಚರಿತಸ್ಯ ಪುನರುಚ್ಚಾರಣಂ ಆವೃತ್ತಿಃ—ಒಮ್ಮೆ ಉಚ್ಚರಿತವಾದ ಶಬ್ದವನ್ನು ಪುನರುಚ್ಚರಿಸುವುದು ಆವೃತ್ತಿ.

यावदात्मेत्यत्र निरसिष्यते। एवंरूपजने जीवे वियन्नयेन सिद्धावप्युत्पत्ति श्रुतिः पराधीनविशेषावाप्तिरूपोत्पत्तिपरा चेदनुत्पत्तिश्रुतिरपीश इव जीववियदादावपि तदभावपरेति पूर्वाक्षेपे तादृशजनिश्रुतिरीशे नास्ति। जीवादौ तु "प्रकृतिः पुरुषः कालो वेदाश्चेति चतुष्टयम् । नित्यं स्वरूपतो विष्णोर्विशेषावाप्तिमात्रतः । उत्पत्तिमत्" इत्यादिकाऽस्तीति समाधानार्थमिदमिति बोध्यम् ॥ ११ ॥

उत्क्रान्त्यधिकरणम् — १२

## ॥ ॐ उत्क्रान्तिगत्यागतीनाम् ॐ ॥ २-३-२०

---

ವಾಗಿರುವುದರಿಂದ—ಎಂದು ಭಾವ. ಜೀವನಿಗೆ ದೇಹತಃ ಉತ್ಪತ್ತಿಯನ್ನು ಅಂಗೀಕರಿಸುವುದರಿಂದ ಬರುವ ಶ್ರುತಿವಿರೋಧವನ್ನು 'ಯಾವದಾತ್ಮ' (ಬ್ರ. ಸೂ. ೨-೩-೩೦) ಎಂಬ ಸೂತ್ರದಲ್ಲಿ ನಿರಾಕರಿಸಲಾಗುವುದು.

**ವಿಯದಧಿಕರಣದಿಂದ ಈ ಅಧಿಕರಣವು ಗತಾರ್ಥವಲ್ಲ**

ಈ ರೀತಿಯಾದ ಉತ್ಪತ್ತಿಯು ಜೀವನಿಗಿರುವುದೆಂದು ವಿಯದಧಿಕರಣದಿಂದಲೇ ಸಿದ್ಧವಾಗಿದೆ. ಆದರೂ, ಜೀವನಿಗೆ ಉತ್ಪತ್ತಿಯನ್ನು ಹೇಳುವ ಶ್ರುತಿಯು ಪರಾಧೀನ ವಿಶೇಷಾವಾಪ್ತಿರೂಪ ಉತ್ಪತ್ತಿಯಲ್ಲಿ ತಾತ್ಪರ್ಯವನ್ನು ಪಡೆದಿದ್ದಲ್ಲಿ ಜೀವನಿಗೆ ಅನುತ್ಪತ್ತಿಯನ್ನು ಹೇಳುವ ಶ್ರುತಿಯೂ ಪರಮಾತ್ಮನಿಗೆ ಹೇಗೋ ಹಾಗೆ ಜೀವ, ಆಕಾಶ ಮೊದಲಾದವುಗಳಿಗೆ ಪರಾಧೀನವಿಶೇಷಾವಾಪ್ತಿರೂಪವಾದ ಉತ್ಪತ್ತಿಯಿಲ್ಲವೆಂದು ಹೇಳುವ ತಾತ್ಪರ್ಯವುಳ್ಳದ್ದು ಎಂಬುದಾಗಿ ಹಿಂದೆ ಹೇಳಿದುದನ್ನು ಆಕ್ಷೇಪಿಸಿದಲ್ಲಿ, ಅಂತಹ ಉತ್ಪತ್ತಿಯು ಈಶ್ವರನಿಗಿರುವುದೆಂದು ಹೇಳುವ ಶ್ರುತಿಯೇ ಇಲ್ಲ. ಜೀವಾದಿಗಳ ವಿಷಯದಲ್ಲಾದರೋ—

ಪ್ರಕೃತಿಃ ಪುರುಷಃ ಕಾಲೋ ವೇದಾಶ್ಚೇತಿ ಚತುಷ್ಟಯಮ್ ।
ನಿತ್ಯಂ ಸ್ವರೂಪತೋ ವಿಷ್ಣೋಃ ವಿಶೇಷಾವಾಪ್ತಿಮಾತ್ರತಃ ॥
ಉತ್ಪತ್ತಿಮತ್ .... ....

ಇತ್ಯಾದಿ ಶ್ರುತಿಗಳಿವೆ ಎಂಬ ಸಮಾಧಾನವನ್ನು ನೀಡುವುದಕ್ಕಾಗಿ ಈ ಅಧಿಕರಣವು ಬಂದಿದೆ ಎಂದು ತಿಳಿಯಬೇಕು.

ಉತ್ಕ್ರಾಂತ್ಯಧಿಕರಣ—೧೨

## ಓಂ ಉತ್ಕ್ರಾಂತಿಗತ್ಯಾಗತೀನಾಮ್ ಓಂ (೨-೩-೨೦)

अत्र "व्याप्ता ह्यात्मानः", "अणुर्ह्येष आत्मा" इति जीवपरिमाणश्रुत्यविरोध उच्यते । ज्ञ इत्यस्ति । अणुरिति वक्ष्यमाणं हेतुबलाद्वा अन्वेति । जीवोऽणुरुत्क्रान्तिगत्यागतीनां हेतूनां सकाशादिति शेषः । उत्क्रान्त्यादिमत्त्वादिति यावत् । "सोऽस्माच्छरीरादुत्क्रम्यामुं लोकं गच्छत्यमुष्मादिमं लोकमागच्छति" इति श्रुतौ तासां श्रुतत्वात् । व्याप्तस्य तदयोगात् मध्यमपरिमाणत्वेऽप्यनित्यत्वापत्तेरुक्तत्वादणुरेव । व्याप्तस्यापीशस्य भूमज्योतिर्नययोरुत्क्रान्त्याद्युक्तिः अक्षरनयन्यायेनाणुत्वस्यापि सत्त्वादिति भावः ॥

---

**ಅಧಿಕರಣದ ವಿಷಯ ಮತ್ತು ಸೂತ್ರಾರ್ಥ**

ಈ ಅಧಿಕರಣದಲ್ಲಿ 'ವ್ಯಾಪ್ತಾ ಹ್ಯಾತ್ಮಾನಃ' ಮತ್ತು 'ಅಣುರ್ಹ್ಯೇಷ ಆತ್ಮಾ' ಎಂಬ ಜೀವನ ಪರಿಮಾಣವನ್ನು ಹೇಳುವ ಶ್ರುತಿಗಳಿಗೆ ವಿರೋಧವಿಲ್ಲವೆಂದು ಹೇಳಲಾಗುವುದು. 'ಜ್ಞಃ' ಎಂಬ ಪದವು ಅನುವೃತ್ತವಾಗುವುದು. ಮುಂದೆ ಬರುವ 'ಅಣುಃ' ಎಂಬ ಪದವು ಇಲ್ಲಿ ಅನ್ವಯವನ್ನು ಪಡೆಯುವುದು. ಅಥವಾ ಈ ಸೂತ್ರದಲ್ಲಿ ಹೇಳುವ ಹೇತುವಿನ ಸಾಮರ್ಥ್ಯದಿಂದಾಗಿ 'ಅಣುಃ' ಎಂಬ ಪದವು ಇಲ್ಲಿ ಅನ್ವಯವನ್ನು ಪಡೆಯುವುದು. ದೇಹದಿಂದ ಉತ್ಕ್ರಮಣ, ಪರಲೋಕಗಮನ, ಪುನಃ ಈ ಲೋಕಕ್ಕೆ ಆಗಮನ—ಈ ಹೇತುಗಳಿಂದ ಜೀವನು ಅಣುಪರಿಮಾಣವುಳ್ಳವನು. 'ಈ ಹೇತುಗಳಿಂದ' ಎಂಬ ಶೇಷವನ್ನು ಈ ಸೂತ್ರಕ್ಕೆ ಸೇರಿಸಬೇಕು. ಜೀವನಿಗೆ ಉತ್ಕ್ರಮಣಾದಿಗಳಿರುವುದರಿಂದ ಎಂದು ಒಟ್ಟು ಅರ್ಥ.

"ಸೋಽಸ್ಮಾತ್ ಶರೀರಾತ್ ಉತ್ಕ್ರಮ್ಯ ಅಮುಂ ಲೋಕಂ ಗಚ್ಛತ್ಯಮುಷ್ಮಾದಿಮಂ ಲೋಕಮಾಗಚ್ಛತಿ" (ಪೌಷ್ಯಾಯಣ ಶ್ರುತಿ) ಎಂಬ ಶ್ರುತಿಯಲ್ಲಿ ಜೀವನಿಗೆ ಉತ್ಕ್ರಾಂತ್ಯಾದಿಗಳಿರುವುದೆಂದು ಶ್ರುತವಾಗಿದೆ. ಸರ್ವತ್ರ ವ್ಯಾಪ್ತನಾದ ಜೀವನಿಗೆ ಉತ್ಕ್ರಮಣಾದಿಗಳು ಅಯುಕ್ತವಾಗುವುದರಿಂದ, ಮಧ್ಯಮಪರಿಮಾಣವನ್ನು ಹೊಂದಿದಲ್ಲಿ ಅನಿತ್ಯವಾಗಬೇಕಾದೀತೆಂದು ಹಿಂದೆ ಹೇಳಿರುವುದರಿಂದ ಜೀವನು ಅಣುವೇ. ಭಗವಂತನು ವ್ಯಾಪ್ತನಾಗಿದ್ದರೂ ಅಕ್ಷರಾಧಿಕರಣದ ನ್ಯಾಯದಂತೆ ಅಣುವೂ ಆಗಿರುವುದರಿಂದ ಭೂಮಾಧಿಕರಣ, ಜ್ಯೋತಿರಧಿಕರಣಗಳಲ್ಲಿ ಅವನಿಗೆ ಉತ್ಕ್ರಮಣಾದಿಗಳನ್ನು ಹೇಳಲಾಗಿದೆ ಎಂದು ಭಾವ.

प्रसङ्गादुत्क्रान्त्यादेः परायत्ततामाह—

## ॥ ॐ स्वात्मना चोत्तरयोः ॐ ॥ २-३-२१

सकाशादित्यस्ति । च एव । परमात्मनैव ज्ञस्योत्क्रान्त्यादयो न स्वत इति विपरिणामेनानुवृत्तिः । उत्तरयोरुत्तरवाक्ययोः सकाशादित्यर्थः । "सोऽस्माच्छरीरात्" इति वाक्ये उत्क्रान्त्यादौ स्वातन्त्र्यप्रतीतावपि "स्वात्मना परेणेमं गर्भमनुप्रविशति" इति, "एष ह्येनं जीवमभिजीवयति" इति चोत्तरवाक्यद्वये परायत्तत्वोक्तेरिति भावः । स्वेनेति वा आत्मनेति वा वाच्ये स्वात्मनेत्युक्तिः श्रुत्यनुसारात् । तेन शुभमादत्त इत्यर्थकेन स्वात्मशब्देन ईशस्योत्क्रान्त्यादिना जीववन्न दुःखमिति दर्शितम् ॥

---

ಪ್ರಾಸಂಗಿಕವಾಗಿ, ಜೀವನ ಉತ್ಕ್ರಮಣಾದಿಗಳು ಭಗವದಧೀನವೆಂದು ಹೇಳುವ ಸೂತ್ರ—

## ಓಂ ಸ್ವಾತ್ಮನಾ ಚೋತ್ತರಯೋಃ ಓಂ (೨-೩-೨೧)

**ಸೂತ್ರಾರ್ಥ**

'ಸಕಾಶಾತ್' ಎಂಬ ಪದವು ಅನ್ವಿತವಾಗುವುದು. 'ಚ' ಶಬ್ದಕ್ಕೆ 'ಏವ' ಎಂದು ಅರ್ಥ. ಜೀವನಿಗೆ ಉತ್ಕ್ರಾಂತ್ಯಾದಿಗಳು ಪರಮಾತ್ಮನಿಂದಲೇ ಹೊರತು ತನ್ನಿಂದಲೇ ಅಲ್ಲ. ಹಿಂದಿನ ಸೂತ್ರದಲ್ಲಿರುವ 'ಜ್ಞಃ' ಎಂಬ ಪದವನ್ನು 'ಜ್ಞಸ್ಯ' (ಜೀವನಿಗೆ) ಎಂದು ಬದಲಾಯಿಸಿ ಇಲ್ಲಿ ಅನುವೃತ್ತಿಮಾಡಿಕೊಳ್ಳಲಾಗಿದೆ. ಉತ್ತರಯೋಃ–ಮುಂದಿನ ಎರಡು ವಾಕ್ಯಗಳಿಂದಾಗಿ ಎಂದು ಅರ್ಥ. 'ಸೋಽಸ್ಮಾತ್ ಶರೀರಾತ್' ಎಂಬ ವಾಕ್ಯದಲ್ಲಿ ಜೀವನಿಗೆ ಉತ್ಕ್ರಮಣಾದಿಗಳಲ್ಲಿ ಸ್ವಾತಂತ್ರ್ಯವಿದೆಯೆಂದು ತೋರಿದರೂ, 'ಸ್ವಾತ್ಮನಾ ಪರೇಣ ಇಮಂ ಗರ್ಭಮನುಪ್ರವಿಶತಿ' ಎಂಬ ಮತ್ತು 'ಏಷ ಹ್ಯೇವಂ ಜೀವಮಭಿಜೀವಯತಿ' ಎಂಬ ಮುಂದಿನ ಎರಡು ವಾಕ್ಯಗಳಲ್ಲಿ ಜೀವನ ಉತ್ಕ್ರಮಣಾದಿಗಳನ್ನು ಭಗವದಧೀನವೆಂದು ಹೇಳಲಾಗಿದೆ ಎಂದು ಭಾವ.

**ಸೂತ್ರದಲ್ಲಿ 'ಸ್ವಾತ್ಮನಾ' ಎಂಬ ಪ್ರಯೋಗದ ಉದ್ದೇಶ**

'ಸ್ವೇನ' ಎಂದಾಗಲೀ 'ಆತ್ಮನಾ' ಎಂದಾಗಲೀ ಹೇಳಬಹುದಾಗಿದ್ದರೂ "ಸ್ವಾತ್ಮನಾ ಪರೇಣ ಇಮಂ ಗರ್ಭಂ" ಇತ್ಯಾದಿ ಶ್ರುತಿಯನ್ನನುಸರಿಸಿ ಸೂತ್ರದಲ್ಲಿ 'ಸ್ವಾತ್ಮನಾ' ಎಂದು ಹೇಳಲಾಗಿದೆ. ಹೀಗೆ 'ಶುಭವನ್ನು ಸ್ವೀಕರಿಸುವವನು' ಎಂಬರ್ಥದ 'ಸ್ವಾತ್ಮ' ಶಬ್ದದ ಪ್ರಯೋಗದಿಂದ ಭಗವಂತನಿಗೆ ಉತ್ಕ್ರಮಣಾದಿಗಳಿಂದಾಗಿ ಜೀವನಂತೆ ದುಃಖವಿಲ್ಲವೆಂದು ತಿಳಿಸಲಾಗಿದೆ.

प्रागुक्तमाक्षिप्याह—

॥ ॐ नाणुरतच्छ्रुतेरिति चेन्नेतराधिकारात् ॐ ॥ २-३-२२

ज्ञोऽणुर्न । अतच्छ्रुतेः । "व्याप्ता ह्यात्मान" इत्यनणुत्वश्रुतेः । उत्क्रान्त्यादिकं तु मनोगतमात्मन्युपचर्यत इति चेन्न । श्रुतेर्ब्रह्मपरत्वादिति योज्यम् । कुत एवमित्यत इतराधिकारात् । इतरस्य प्रकृतजीवभिन्नस्य ब्रह्मणोऽधिकारात् । "आत्मेदं सृजति" इति प्रकरणात् आत्मान इति बहुवचनबाधनेन ब्रह्मपरत्वमित्यर्थः ॥

अधिकारमात्रेण न बहुवचनश्रुतिबाधो युक्त इत्यत आह—

॥ ॐ स्वशब्दोन्मानाभ्यां च ॐ ॥ २-३-२३

---

ಹಿಂದೆ ಹೇಳಿದುದನ್ನು ಆಕ್ಷೇಪಿಸಿ ಸಮಾಧಾನ ನೀಡುವ ಸೂತ್ರ—

ಓಂ ನಾಣುರತಚ್ಛ್ರುತೇರಿತಿ ಚೇನ್ನ ಇತರಾಧಿಕಾರಾತ್ ಓಂ (೨-೩-೨೨)

**ಸೂತ್ರಾರ್ಥ**

ಜೀವನು ಅಣುವಲ್ಲ. ಅತಚ್ಛ್ರುತೇಃ–'ವ್ಯಾಪ್ತಾ ಹ್ಯಾತ್ಮಾನಃ' ಎಂಬುದಾಗಿ ಜೀವನು ಅಣುವಲ್ಲ ಎಂದು ಶ್ರುತವಾಗಿರುವುದರಿಂದ, ಉತ್ಕ್ರಮಣಾದಿಗಳಾದರೋ ಮನಸ್ಸಿಗೆ ಸಂಬಂಧಪಟ್ಟದ್ದು. ಅವುಗಳನ್ನು ಜೀವನಲ್ಲಿ ಔಪಚಾರಿಕವಾಗಿ ಹೇಳಲಾಗಿದೆ ಎಂದರೆ ಅದು ಸರಿಯಲ್ಲ. "'ವ್ಯಾಪ್ತಾ ಹ್ಯಾತ್ಮಾನಃ' ಎಂಬ ಶ್ರುತಿಯು ಬ್ರಹ್ಮಪರವಾದುದರಿಂದ" ಎಂಬ ಪದಗಳನ್ನು ಇಲ್ಲಿ ಯೋಜಿಸಿಕೊಳ್ಳಬೇಕು ಆ ಶ್ರುತಿ ಬ್ರಹ್ಮಪರವೆಂದು ಹೇಳಲು ಆಧಾರವೇನು ? ಎಂಬ ಪ್ರಶ್ನೆಗೆ ಉತ್ತರ — 'ಇತರಾಧಿಕಾರಾತ್'. ಇತರ ಅಂದರೆ ಪ್ರಕೃತ ಜೀವಭಿನ್ನನಾದ ಬ್ರಹ್ಮನ, ಅಧಿಕಾರಾತ್–ಪ್ರಕರಣವಾದುದರಿಂದ. 'ಆತ್ಮೇದಂ ಸೃಜತಿ' ಎಂಬುದಾಗಿ ಬ್ರಹ್ಮಪ್ರಕರಣವಾದುದರಿಂದ 'ವ್ಯಾಪ್ತಾ ಹ್ಯಾತ್ಮಾನಃ' ಎಂಬಲ್ಲಿ 'ಆತ್ಮಾನಃ' ಎಂದು ಬಹುವಚನವಿದ್ದರೂ ಅದನ್ನು ಬಾಧಿಸಿ ಆ ಶ್ರುತಿಯು ಬ್ರಹ್ಮಪರವಾಗುವುದೆಂದು ಅರ್ಥ.

ಕೇವಲ ಪ್ರಕರಣದಿಂದ ಬಹುವಚನ ಶ್ರುತಿಯನ್ನು ಬಾಧಿಸುವುದು ಯುಕ್ತವಲ್ಲ ಎಂಬ ಆಕ್ಷೇಪಕ್ಕೆ ಸಮಾಧಾನ—

ಓಂ ಸ್ವಶಬ್ದೋನ್ಮಾನಾಭ್ಯಾಂ ಚ ಓಂ (೨-೩-೨೩)

स्वेति शब्द इति वा, स्वस्य ब्रह्मणः शब्द इति वा स्वशब्द आत्मशब्दः । स्वशब्दादित्यनेन सममेतत् । उन्मानमपरिमितम् । भावप्रधानम् । आत्मशब्दापरिमितत्वलिङ्गाभ्यां च ईशपरत्वं श्रुतेः । न केवलमधिकारादिति चार्थः । "एषो ह्यात्माध्युद्गतो मानशक्तेः" इति वाक्यशेषे तयोः श्रवणादिति भावः ।

अणोर्देहे व्याप्त्ययोगेन तत्र तत्र परिज्ञानायोग इत्यत आह—

॥ ॐ अविरोधश्चन्दनवत् ॐ ॥ २-३-२४

ज्ञस्याणुत्वेऽपीत्यन्वेति । अविरोधो देहव्याप्त्यविरोधः चन्दनवत् चन्दनबिन्दुवत् । एकदेशपतितहरिचन्दनबिन्दोः स्वांशैः

---

**ಸೂತ್ರಾರ್ಥ**

'ಸ್ವ' ಎಂಬ ಶಬ್ದ ಎಂದಾಗಲೀ ಅಥವಾ ಸ್ವ ಅಂದರೆ ಬ್ರಹ್ಮನ ಶಬ್ದ ಎಂದಾಗಲೀ ವ್ಯಾಖ್ಯಾನದಿಂದ ಸ್ವಶಬ್ದವೆಂದರೆ ಆತ್ಮಶಬ್ದ. 'ದ್ಯುಭ್ವಾದ್ಯಾಯತನಂ ಸ್ವಶಬ್ದಾತ್' (ಬ್ರ. ಸೂ ೧-೩-೧) ಎಂಬಲ್ಲಿ ಸ್ವಶಬ್ದಕ್ಕೆ ಹೇಗೆ ವ್ಯಾಖ್ಯಾನವೋ ಹಾಗೆಯೇ ಇಲ್ಲೂ ವ್ಯಾಖ್ಯಾನ. ಉನ್ಮಾನ ಎಂದರೆ ಅಪರಿಮಿತ. ಈ ಶಬ್ದವು ಭಾವಪ್ರಧಾನವಾಗಿದ್ದು ಅಪರಿಮಿತತ್ವ ಎಂಬ ಅರ್ಥವನ್ನು ಕೊಡುವುದು. ಆತ್ಮಶಬ್ದ ಮತ್ತು ಅಪರಿಮಿತತ್ವ ಲಿಂಗಗಳಿಂದಲೂ 'ವ್ಯಾಪ್ತಾ ಹ್ಯಾತ್ಮಾನಃ' ಎಂಬ ಶ್ರುತಿಯು ಭಗವತ್ಪರವಾಗಿದೆ; ಕೇವಲ ಪ್ರಕರಣದಿಂದಲ್ಲ—ಎಂದು 'ಚ' ಶಬ್ದದ ಅರ್ಥ. "ಏಷೋ ಹ್ಯಾತ್ಮಾಽಧ್ಯುದ್ಗತೋ ಮಾನಶಕ್ತೇಃ" ಎಂಬ ವಾಕ್ಯಶೇಷದಲ್ಲಿ ಆತ್ಮಶಬ್ದ ಮತ್ತು ಅಪರಿಮಿತತ್ವ ಲಿಂಗಗಳು ಶ್ರುತವಾಗಿರುವುದರಿಂದ ಎಂದು ಭಾವ.

ಅಣುವಾದ ಜೀವನಿಗೆ ದೇಹದಲ್ಲಿ ವ್ಯಾಪ್ತಿ ಇರುವುದು ಸಾಧ್ಯವಿಲ್ಲವಾದ್ದರಿಂದ ದೇಹದ ಬೇರೆಬೇರೆ ಭಾಗದಲ್ಲಿ ಜೀವನಿಗೆ ಜ್ಞಾನ ಉಂಟಾಗಲು ಸಾಧ್ಯವಿಲ್ಲ ಎಂಬ ಆಕ್ಷೇಪಕ್ಕೆ ಸಮಾಧಾನ—

ಓಂ ಅವಿರೋಧಶ್ಚಂದನವತ್ ಓಂ (೨-೩-೨೪)

**ಸೂತ್ರಾರ್ಥ**

'ಜೀವನು ಅಣುವಾಗಿದ್ದರೂ' ಎಂಬ ಪದಗಳು ಇಲ್ಲಿ ಅನ್ವಯವನ್ನು ಪಡೆಯುತ್ತವೆ. ಅವಿರೋಧಃ-ದೇಹದಲ್ಲಿ ವ್ಯಾಪ್ತಿಯು ವಿರೋಧವಿಲ್ಲ. ಚಂದನವತ್-ಚಂದನದ ಬಿಂದುವಿನಂತೆ. ಶರೀರದ ಒಂದು ಭಾಗದಲ್ಲಿ ಬಿದ್ದ ಹರಿಚಂದನ ಬಿಂದುವಿಗೆ ತನ್ನ

शरीरव्याप्तिः । तद्वज्ज्ञस्यापि स्वांशैर्देहव्याप्तिर्युज्यत इति भावः । चन्दनेत्युक्त्या "अणुमात्रोऽप्ययं जीवः" इति स्मृतिः सूचिता ॥

उक्तमाक्षिप्याह—

## ॥ ॐ अवस्थितिवैशेष्यादिति चेन्नाभ्युपगमाद् हृदि हि ॐ ॥ २—३—२५

चन्दनस्येत्यस्ति । चन्दनबिन्दोर्देहे क्वचित् सम्यगन्यत्रासम्यगित्यवस्थानवैशेष्याद् व्याप्त्ययोगेऽपि ज्ञस्य तदभावान्न युक्ता देहव्याप्तिरिति चेन्न । अभ्युपगमात् ज्ञस्याप्यवस्थितिवैशेष्यस्येत्यन्वेति । हृदि हीति श्रुतिप्रतीकोक्तिः । "हृदि ह्येष आत्मा" इति श्रुत्येत्यर्थः । ज्ञस्यापि हृदि सम्यगन्यत्रासम्यगवस्थित्यभ्युपगमात् न वैषम्यमिति भावः ।

---

ಅಂಶಗಳಿಂದ ಶರೀರದಲ್ಲಿ ವ್ಯಾಪ್ತಿಯಿರುವಂತೆ ಜೀವನಿಗೂ ತನ್ನ ಅಂಶಗಳಿಂದ ದೇಹ ವ್ಯಾಪ್ತಿ ಯುಕ್ತವಾಗಿದೆ ಎಂದು ಭಾವ. 'ಚಂದನ' ಶಬ್ದದಿಂದ "ಅಣುಮಾತ್ರೋಽಪ್ಯಯಂ ಜೀವಃ' ಎಂಬ ಸ್ಮೃತಿಯು ಸೂಚಿತವಾಗುವುದು.

ಈಗ ಹೇಳಿದುದನ್ನು ಆಕ್ಷೇಪಿಸಿ ಸಮಾಧಾನ ನೀಡುವ ಸೂತ್ರ—

## ಓಂ ಅವಸ್ಥಿತಿವೈಶೇಷ್ಯಾದಿತಿ ಚೇನ್ನಾಭ್ಯುಪಗಮಾತ್ ಹೃದಿ ಹಿ ಓಂ (೨-೩-೨೫)

**ಸೂತ್ರಾರ್ಥ**

'ಚಂದನಸ್ಯ' ಎಂಬ ಪದವು ಅಧ್ಯಾಹಾರವನ್ನು ಪಡೆಯುವುದು. ಚಂದನ ಬಿಂದುವಿಗೆ ದೇಹದ ಒಂದೆಡೆಯಲ್ಲಿ ಸಮ್ಯಕ್ ಇರುವಿಕೆ, ಇತರೆಡೆಗಳಲ್ಲಿ ಸಾಮಾನ್ಯವಾಗಿ ಇರುವಿಕೆ—ಹೀಗೆ ಅದರ ಇರುವಿಕೆಯಲ್ಲಿ ವಿಶೇಷವಿರುವುದರಿಂದ ಶರೀರವ್ಯಾಪ್ತಿ ಇರಬಹುದಾದರೂ ಜೀವನಿಗೆ ಹಾಗಿಲ್ಲದಿರುವುದರಿಂದ ಶರೀರದಲ್ಲಿ ವ್ಯಾಪ್ತಿಯು ಯುಕ್ತವಲ್ಲವೆಂದರೆ ಅದು ಸರಿಯಲ್ಲ—ಅಭ್ಯುಪಗಮಾತ್—'ಜೀವನಿಗೂ ಇರುವಿಕೆಯ ವಿಶೇಷದ' ಎಂಬ ಪದಗಳು ಇಲ್ಲಿ ಅನ್ವಿತವಾಗುತ್ತವೆ. 'ಹೃದಿ ಹಿ' ಎಂದು ಶ್ರುತಿಯ ಪ್ರತೀಕವನ್ನು ಹೇಳಲಾಗಿದೆ 'ಹೃದಿ ಹ್ಯೇಷ ಆತ್ಮಾ' ಎಂಬ ಶ್ರುತಿಯಿಂದ ಎಂದು ಅರ್ಥ. ಜೀವನಿಗೂ ಹೃದಯದಲ್ಲಿ ಸಮ್ಯಕ್ ಇರುವಿಕೆ, ಬೇರೆಡೆಯಲ್ಲಿ ಅಸಮ್ಯಕ್ ಇರುವಿಕೆಗಳನ್ನು ಒಪ್ಪಿರುವುದರಿಂದ ಚಂದನದ ವೈಷಮ್ಯವಿಲ್ಲವೆಂದು ಭಾವ.

सुराणामंशतस्तथात्वेऽप्यन्येषां तदभावात् प्रकारान्तरेण देहव्याप्तिमाह—

## ॥ ॐ गुणाद्वा लोकवत् ॐ ॥ २—३—२६

अणोरपि ज्ञस्य गुणाच्चिद्गुणाद्देहव्याप्तिरालोकवत् । आलोकस्य दीपादेः स्वरूपेण दीपिकादावप्येकत्रावस्थानेऽपि प्रकाशगुणेनावरकादिव्याप्तिः । तथा ज्ञस्य स्वरूपेण हृदि स्थितस्यापि चिद्गुणेन देहे व्याप्तिरिति । गुणादित्युक्त्या "चिद्गुणस्य स्वरूपत्वात्तद्व्याप्तिश्च" इति स्मृतिः सूचिता । अणुजीवाभिन्नस्य चिद्गुणस्य कथं व्याप्तिरित्यत आलोकवदित्युक्तम् ॥ १२ ॥

---

ದೇವತೆಗಳಿಗೆ ಅಂಶಗಳಿಂದ ವ್ಯಾಪ್ತಿ ಇರಬಹುದಾದರೂ ಇತರ ಜೀವರಿಗೆ ಅಂಶದಿಂದ ವ್ಯಾಪ್ತಿಯಿಲ್ಲವಾದುದರಿಂದ ಪ್ರಕಾರಾಂತರದಿಂದ ಅವರಿಗೆ ದೇಹವ್ಯಾಪ್ತಿಯನ್ನು ಹೇಳುವ ಸೂತ್ರ—

## ಓಂ ಗುಣಾದ್ವಾ ಲೋಕವತ್ ಓಂ (೨-೩-೨೬)

**ಸೂತ್ರಾರ್ಥ**

ಜೀವನು ಅಣುವಾಗಿದ್ದರೂ, ಗುಣಾತ್–ಚಿದ್ಗುಣದಿಂದ ದೇಹವ್ಯಾಪ್ತಿಯಿರುವುದು. ಆಲೋಕವತ್–ಆಲೋಕ ಎಂದರೆ ದೀಪ ಮೊದಲಾದವುಗಳಿಗೆ, ದೀಪವು ಸ್ವರೂಪತಃ ಉರಿಯುವ ಹಣತೆಯಲ್ಲಿ ಒಂದೆಡೆ ಮಾತ್ರ ಇರುವಿಕೆ ಇದ್ದರೂ ಪ್ರಕಾಶಗುಣದಿಂದ ದೀಪಕ್ಕೆ ಆವರಣವಾಗಿರುವ ಇಡೀ ಗೃಹದಲ್ಲಿ ವ್ಯಾಪ್ತಿ ಇರುವಂತೆ ಸ್ವರೂಪತಃ ಹೃದಯದಲ್ಲಿರುವ ಜೀವನಿಗೂ ಚಿದ್ಗುಣದಿಂದ ಇಡೀ ದೇಹದಲ್ಲಿ ವ್ಯಾಪ್ತಿಯಿರುವುದು.

### ಸೂತ್ರದಲ್ಲಿ 'ಗುಣ' ಮತ್ತು 'ಆಲೋಕ' ಶಬ್ದಗಳ ಪ್ರಯೋಗದ ಪ್ರಯೋಜನ

'ಗುಣಾತ್' ಎಂಬ ಪದದಿಂದ "ಚಿದ್ಗುಣಸ್ಯ ಸ್ವರೂಪತ್ವಾತ್ ತದ್ವ್ಯಾಪ್ತಿಶ್ಚ" ಎಂಬ ಸ್ಮೃತಿಯು ಸೂಚಿತವಾಗುವುದು. ಅಣುವಾದ ಜೀವನಿಂದ ಅಭಿನ್ನವಾದ ಚಿದ್ಗುಣಕ್ಕೆ ದೇಹದಲ್ಲಿ ವ್ಯಾಪ್ತಿಯಿರುವುದು ಹೇಗೆಂಬ ಆಶಂಕೆಗೆ ಉತ್ತರವಾಗಿ 'ಆಲೋಕವತ್' ಎಂದು ಹೇಳಲಾಗಿದೆ.

व्यतिरेकाधिकरणम् — १३

## ॥ ॐ व्यतिरेको गन्धवत्तथा च दर्शयति ॐ ॥ २—३—२७

अत्र ज्ञस्यैकरूपत्वानेकरूपत्वश्रुत्यविरोध उच्यते । ज्ञस्येत्यस्ति । अंशैरिति शेषः । तथाशब्दोऽणोरपीत्यर्थकः । तथाऽणोरपि तदंशैर्व्यतिरेको भेदोऽस्ति । यद्वा व्यतिरेको विभागः । बहुरूपत्वमस्तीत्यर्थः । अत्यन्तभेदहीनस्य भेदोऽसम्भावित इत्यतो गन्धवदिति । यथा पुष्पगन्धस्य स्वांशैर्विभागस्तथेति । तथा च "स पञ्चधा सप्तधा दशधा" इति श्रुत्युक्तं बहुरूपत्वं युक्तमिति भावः । कुतः ? दर्शयति । "अथैक एव सन् गन्धवद्व्यतिरिच्यते अथैकीभवत्यथ बह्वीभवति"

---

ವ್ಯತಿರೇಕಾಧಿಕರಣ—೧೩

## ಓಂ ವ್ಯತಿರೇಕೋ ಗಂಧವತ್ತಥಾ ಚ ದರ್ಶಯತಿ ಓಂ (೨-೩-೨೭)

**ಅಧಿಕರಣದ ವಿಷಯ ಮತ್ತು ಸೂತ್ರಾರ್ಥ**

ಈ ಅಧಿಕರಣದಲ್ಲಿ ಜೀವನು ಏಕರೂಪನು ಎಂದು ಹೇಳುವ ಶ್ರುತಿಗೂ ಅನೇಕ ರೂಪನು ಎಂದು ಹೇಳುವ ಶ್ರುತಿಗೂ ಅವಿರೋಧವನ್ನು ಹೇಳಲಾಗುವುದು. 'ಜ್ಞಸ್ಯ' ಎಂಬ ಪದವು ಅನುವೃತ್ತವಾಗುವುದು. 'ಅಂಶೈಃ' ಎಂಬ ಶೇಷವನ್ನು ಸೇರಿಸಬೇಕು. 'ತಥಾ' ಶಬ್ದಕ್ಕೆ ಅಣುವಾಗಿದ್ದರೂ ಎಂದು ಅರ್ಥ. ತಥಾ-ಅಣುವಾಗಿದ್ದರೂ, ಜೀವನಿಗೆ ಅವನ ಅಂಶಗಳಿಂದ, ವ್ಯತಿರೇಕಃ ಭೇದವಿದೆ. ಅಥವಾ, ವ್ಯತಿರೇಕವೆಂದರೆ ವಿಭಾಗ– ಅನೇಕ ರೂಪಗಳಿವೆ ಎಂದು ಅರ್ಥ. ಸರ್ವಥಾ ತನ್ನ ಭೇದ ತನಗಿಲ್ಲದಿರುವ ಜೀವನಿಗೆ ಅಂಶಗಳಿಂದ ಭೇದ ಅಸಂಭಾವಿತವಾದುದು ಎಂಬ ಆಶಂಕೆಗೆ ಉತ್ತರ— 'ಗಂಧವತ್' ಎಂದು. ಹೇಗೆ ಪುಷ್ಪಗಂಧಕ್ಕೆ ತನ್ನ ಅಂಶಗಳಿಂದ ವಿಭಾಗವಿದೆಯೋ ಹಾಗೆ ಜೀವನಿಗೂ ತನ್ನ ಅಂಶಗಳಿಂದ ವಿಭಾಗವಿದೆ. ಆದ್ದರಿಂದ 'ಸ ಪಂಚಧಾ ಸಪ್ತಧಾ ದಶಧಾ' ಎಂಬ ಶ್ರುತಿಯಲ್ಲಿ ಜೀವನಿಗೆ ಅನೇಕ ರೂಪಗಳನ್ನು ಹೇಳಿರುವುದು ಯುಕ್ತವೆಂದು ಭಾವ. ಜೀವನಿಗೆ ಅನೇಕ ರೂಪಗಳಿರುವುದರಲ್ಲಿ ಆಧಾರವೇನು ? ಎಂಬ ಪ್ರಶ್ನೆಗೆ ಉತ್ತರ— 'ದರ್ಶಯತಿ' ಎಂದು. "ಅಥೈಕ ಏವ ಸನ್ ಗಂಧವದ್ವ್ಯತಿರಿಚ್ಯತೇ ಅಥೈಕೀಭವತ್ಯಥ

इति श्रुतिः । चशब्दात् "अचिन्त्ययेशशक्त्यैव" इति स्मृतिश्च । यतोऽत इति भिन्नांशशून्यत्वेऽपि ज्ञस्य योगाराधितेश्वरप्रसादायत्तयोगसम्पदांशविभागसम्भवेन बहुरूपत्वोपपत्तेः । स एकधा न सप्तधेत्येकरूपत्वश्रुतेः स्वरूपैक्यपरत्वादिति भावः । श्रुतिः स्मृतिश्च तथा दर्शयतीति वा तथेत्यस्यान्वयः ॥ १३ ॥

पृथगुपदेशाधिकरणम्—१४

## ॥ ॐ पृथगुपदेशात् ॐ ॥ २-३-२८

अत्र जीवेशभेदाभेदश्रुत्यविरोध उच्यते । ज्ञ इति स्वात्मनेति च वर्तते । स्वात्मना परमात्मना पृथग्भिन्नः न त्वभिन्नः । कुतः ? उपदेशात् । "भिन्नोऽचिन्त्यः परमो जीवसङ्घात्" इति श्रुतेरित्यर्थः ।

---

ಬಹ್ವೀ ಭವತಿ" ಎಂಬ ಶ್ರುತಿ ಮತ್ತು 'ಚ' ಶಬ್ದ ಸೂಚಿಸುವ 'ಅಚಿಂತ್ಯಯಾ ಈಶಶಕ್ತ್ಯೈವ' ಎಂಬ ಸ್ಮೃತಿ ಇವುಗಳ ಆಧಾರದಿಂದ ಜೀವನಿಗೆ ಭಿನ್ನಾಂಶಗಳಿಲ್ಲದಿದ್ದರೂ ಯೋಗಾನುಷ್ಠಾನದಿಂದ ಆರಾಧಿತನಾದ ಭಗವಂತನ ಅನುಗ್ರಹದಿಂದ ಲಭಿಸಿದ ಯೋಗ ಸಂಪತ್ತಿನಿಂದ ಅಂಶವಿಭಾಗಗಳಿರಲು ಸಾಧ್ಯ. ಆದ್ದರಿಂದ ಅವನಿಗೆ ಅನೇಕ ರೂಪ ಗಳಿರುವುದು ಯುಕ್ತವಾಗಿದೆ. 'ಸ ಏಕಧಾ ನ ಸಪ್ತಧಾ' ಎಂದು ಜೀವನಿಗೆ ಒಂದೇ ರೂಪವೆಂದು ಹೇಳುವ ಶ್ರುತಿಯು ಜೀವಸ್ವರೂಪವು ಒಂದೇ ಎಂದು ಹೇಳುವ ಅಭಿಪ್ರಾಯ ವುಳ್ಳದ್ದೆಂದು ಭಾವ. ಶ್ರುತಿ ಮತ್ತು ಸ್ಮೃತಿಗಳು ಹೀಗೆ ತಿಳಿಸುತ್ತವೆ ಎಂಬ ಅರ್ಥ ಬರುವಂತೆಯೂ 'ತಥಾ' ಶಬ್ದದ ಅನ್ವಯವನ್ನು ಮಾಡಬಹುದು.

ಪೃಥಗಧಿಕರಣ—೧೪

## ಓಂ ಪೃಥಗುಪದೇಶಾತ್ ಓಂ (೨-೩-೨೮)

**ಅಧಿಕರಣದ ವಿಷಯ ಮತ್ತು ಸೂತ್ರಾರ್ಥ**

ಈ ಅಧಿಕರಣದಲ್ಲಿ ಜೀವೇಶ್ವರರಿಗೆ ಭೇದವನ್ನು ಹೇಳುವ ಶ್ರುತಿಗಳಿಗೂ ಅಭೇದ ವನ್ನು ಹೇಳುವ ಶ್ರುತಿಗಳಿಗೂ ವಿರೋಧವನ್ನು ಪರಿಹರಿಸಲಾಗುವುದು.

'ಜ್ಞಃ' ಮತ್ತು 'ಸ್ವಾತ್ಮನಾ' ಎಂಬ ಪದಗಳು ಅನುವೃತ್ತಿಯನ್ನು ಪಡೆಯುತ್ತವೆ ಜೀವನು, ಸ್ವಾತ್ಮನಾ–ಪರಮಾತ್ಮನಿಂದ, ಪೃಥಗ್–ಭಿನ್ನನು ಹೊರತು ಅಭಿನ್ನ ನಲ್ಲ. ಏಕೆಂದರೆ, ಉಪದೇಶಾತ್–"ಭಿನ್ನೋಽಚಿಂತ್ಯಃ ಪರಮೋ ಜೀವಸಂಘಾತ್" (ಕೌಶಿಕ ಶ್ರುತಿ) ಎಂಬ ಶ್ರುತಿಯಿಂದ ಎಂದು ಅರ್ಥ. ಜೀವೇಶ್ವರರು ವಿರುದ್ಧಧರ್ಮ

विरुद्धधर्माधिकरणत्वयुक्त्युपेतत्वेन भेदश्रुतेः प्राबल्यात् न तत्त्वमस्यादिश्रुतितः अभेदो ग्राह्य इति भावः ॥

एवं तर्ह्यद्वैतश्रुतिर्निर्विषया स्यादित्यत आह—

॥ ॐ तद्गुणसारत्वात्तु तद्व्यपदेशः प्राज्ञवत् ॐ ॥
२–३–२९

ज्ञस्येत्यन्वेति । तदिति स्वात्मोच्यते । तद्गुणशब्दः तद्गुणसदृशगुणपरः । सारः स्वरूपम् । तद्व्यपदेशो ज्ञस्य पराभेदव्यपदेशः परमात्मगुणसदृशानन्दादिगुणस्वरूपत्वादेव । न त्वभेदात् । प्राज्ञवत् प्राज्ञस्य ब्रह्मणो यथा "सर्वं खल्विदं ब्रह्म" इति जगदभेदव्यपदेशो

---

ಗಳಿಗೆ ಆಶ್ರಯರಾಗಿರುವರು ಎಂಬ ಯುಕ್ತಿಯಿಂದ ಸಹಿತವಾದ ಭೇದಶ್ರುತಿಯು ಪ್ರಬಲವಾದುದರಿಂದ 'ತತ್ತ್ವಮಸಿ' ಇತ್ಯಾದಿ ಶ್ರುತಿಗಳಿಂದ ಅಭೇದವನ್ನು ತಿಳಿಯ ತಕ್ಕದ್ದಲ್ಲ ಎಂದು ಭಾವ.

ಹಾಗಾದಲ್ಲಿ ಅದ್ವೈತಶ್ರುತಿಗಳಿಗೆ ವಿಷಯುವೇ ಇಲ್ಲವೆಂದಾದೀತು ಎಂಬ ಆಶಂಕೆಗೆ ಸಮಾಧಾನ ನೀಡುವ ಸೂತ್ರ—

ಓಂ ತದ್ಗುಣಸಾರತ್ವಾತ್ ತದ್ವ್ಯಪದೇಶಃ ಪ್ರಾಜ್ಞವತ್ ಓಂ
(೨–೩–೨೯)

**ಸೂತ್ರಾರ್ಥ**

'ಜ್ಞಸ್ಯ' ಎಂಬ ಪದವು ಅನ್ವಯುವನ್ನು ಪಡೆಯುವುದು. 'ತತ್' ಶಬ್ದವು ಸ್ವಾತ್ಮ ಅಂದರೆ ಪರಮಾತ್ಮನನ್ನು ಹೇಳುವುದು. 'ತದ್ಗುಣ' ಶಬ್ದವು 'ಪರಮಾತ್ಮನ ಗುಣಗಳಿಗೆ ಸದೃಶವಾದ ಗುಣ' ಎಂಬ ಅರ್ಥದಲ್ಲಿ ತಾತ್ಪರ್ಯ ಉಳ್ಳದ್ದು. 'ಸಾರ' ಎಂದರೆ ಸ್ವರೂಪ. ತದ್ವ್ಯಪದೇಶಃ–ಜೀವನಿಗೆ ಪರಮಾತ್ಮನ ಅಭೇದವಿದೆಯೆಂಬ ವ್ಯವಹಾರವು ಜೀವನು ಪರಮಾತ್ಮನ ಗುಣಗಳಿಗೆ ಸದೃಶವಾದ ಆನಂದಾದಿಗುಣಗಳ ಸ್ವರೂಪನಾದುದರಿಂದ ಹೊರತು ಪರಮಾತ್ಮನ ಅಭೇದದಿಂದಲ್ಲ. ಪ್ರಾಜ್ಞವತ್–ಪ್ರಾಜ್ಞಶಬ್ದವಾಚ್ಯನಾದ ಬ್ರಹ್ಮನು ಜಗತ್ತಿನಿಂದ ಅಭಿನ್ನನಾಗಿದ್ದಾನೆಂಬ ವ್ಯವಹಾರ ವನ್ನು "ಸರ್ವಂ ಖಲ್ವಿದಂ ಬ್ರಹ್ಮ" (ಛಾಂ. ೩–೧೪–೧) ಎಂಬ ಶ್ರುತಿಯಲ್ಲಿ ಪ್ರಾಜ್ಞನು ಜಗತ್ತಿನ ಗುಣಗಳಿಗೆ ಸದೃಶವಾದ ಗುಣಗಳ ಸ್ವರೂಪನಾದ ಪ್ರಯುಕ್ತ ಹೇಗೆ ಮಾಡಲಾಗಿದೆಯೋ ಹಾಗೆ ಎಂದು ಅರ್ಥ.

जगद्गुणसदृशगुणस्वरूपत्वात्तद्वदित्यर्थः । "सर्वभूतगुणैर्युक्तं दैवं त्वं ज्ञातुमर्हसि" इति, "गामाविश्य च भूतानि धारयामि" इति भूम्यादिगतधारकत्वादिगुणसदृशगुणात्मकत्वोक्तेर्जगद्गुणसारत्वं प्राज्ञस्य बोध्यम् । शास्त्रस्य सदधिकारिकतया मुक्त्ययोग्यानामनानन्दादिरूपत्वेऽपि तान् प्रति तत्त्वमसीत्यनुक्तेस्तद्गुणसारत्वाद्युक्तिर्युक्तेति ध्येयम् । सूर्यकादिवदित्यनेनागतत्वं तत्रैव व्यक्तम् ॥ १४ ॥

यावदधिकरणम् — १५

## ॥ ॐ यावदात्मभावित्वाच्च न दोषस्तद्दर्शनात् ॐ ॥ २-३-३०

---

**ಪ್ರಾಜ್ಞನು ಜಗದ್ಗುಣಸಾರನು ಎಂಬುದರ ವಿವರಣೆ ಮತ್ತು ಜೀವರು ಬ್ರಹ್ಮಗುಣಸಾರರು ಎಂಬ ಹೇಳಿಕೆಯ ಔಚಿತ್ಯ**

"ಸರ್ವಭೂತಗುಣೈರ್ಯುಕ್ತಂ ದೈವಂ ತ್ವಂ ಜ್ಞಾತುಮರ್ಹಸಿ" ಎಂಬುದಾಗಿ ಮತ್ತು "ಗಾಮಾವಿಶ್ಯ ಚ ಭೂತಾನಿ ಧಾರಯಾಮಿ" ಎಂಬುದಾಗಿ ಭೂಮಿ ಮೊದಲಾದವುಗಳಲ್ಲಿರುವ ಧಾರಕತ್ವವೇ ಮೊದಲಾದ ಗುಣಗಳಿಗೆ ಸದೃಶವಾದ ಗುಣಗಳುಳ್ಳವನೆಂದು ಭಗವಂತನನ್ನು ಹೇಳಿರುವುದರಿಂದ ಪ್ರಾಜ್ಞನು ಜಗದ್ಗುಣಸಾರನೆಂದು ತಿಳಿಯಬೇಕು. ಶಾಸ್ತ್ರಕ್ಕೆ ಸಜ್ಜನರೇ ಅಧಿಕಾರಿಗಳಾದುದರಿಂದ, ಮುಕ್ತಿಯೋಗ್ಯರಲ್ಲದ ಜೀವರು ಆನಂದಸ್ವರೂಪರಲ್ಲದಿದ್ದರೂ ಅವರನ್ನು ಕುರಿತು 'ತತ್ತ್ವಮಸಿ' ಎಂಬ ಉಪದೇಶವನ್ನು ಮಾಡಿಲ್ಲವಾದ್ದರಿಂದ ಜೀವರನ್ನು ಬ್ರಹ್ಮಗುಣಸಾರರೆಂದು ಇಲ್ಲಿ ಹೇಳಿರುವುದು ಯುಕ್ತವೆಂದು ಗ್ರಹಿಸಬೇಕು [1] 'ಸೂರ್ಯಕಾದಿವತ್' (ಬ್ರ. ಸೂ. ೩-೨-೧೮) ಎಂಬ ಸೂತ್ರದಿಂದ ಈ ಸೂತ್ರ ಗತಾರ್ಥವಲ್ಲವೆನ್ನುವುದು ಆ ಸೂತ್ರದಲ್ಲಿಯೇ ಸ್ಪಷ್ಟವಾಗಿದೆ.

**ಯಾವದಧಿಕರಣ—೧೫**

## ಓಂ ಯಾವದಾತ್ಮಭಾವಿತ್ವಾಚ್ಚ ನ ದೋಷಸ್ತದ್ದರ್ಶನಾತ್ ಓಂ (೨-೩-೩೦)

---

1. ಶಾಸ್ತ್ರಾಧಿಕಾರಿಗಳಾದ ಸಜ್ಜನರು ಆನಂದಸ್ವರೂಪರಾದುದರಿಂದ ಅವರನ್ನು ಕುರಿತೇ 'ತತ್ತ್ವಮಸಿ' ಎಂದು ಉಪದೇಶಿಸಿರುವುದರಿಂದ ಅಂತಹ ಜೀವರನ್ನೇ ಈ ಸೂತ್ರದಲ್ಲಿ ತದ್ಗುಣಸಾರರೆಂದು ಹೇಳಲಾಗಿದೆಯೆಂದು ಭಾವ.

अत्र जीवस्वरूपानुत्पत्तितदुपाध्युत्पत्तिश्रुत्योरुपाध्युत्पत्तौ जीवानुत्पत्त्ययोगादिति प्राप्तविरोधो निरस्यते। चः समुच्चये। दर्शनाच्चेत्यन्वेति। उपाधेश्चेति वा। ज्ञस्येत्यस्ति। आत्मेति ब्रह्मोच्यते। ज्ञस्य जीवस्य तदुपाधेश्च यावदात्मभावित्वात् यावत्परमात्मभावित्वान्न दोषः। "सोऽनादिना पुण्येन पापेनानुबद्धः" इत्यादिनाऽनादिपुण्यादिसम्बन्धबोधकश्रुत्यप्रामाण्यदोषे नेत्यर्थः। कुतः? तद्दर्शनात् स्मरणाच्च। "नित्यः परो नित्यो जीव" इति श्रुतेः, "आत्मा नित्यः सुखदुःखे त्वनित्ये" इति स्मृतेश्चेत्यर्थः। "अविनष्टा एवोत्पद्यन्त" इति उपाध्युत्पत्तिवचनं तु बाह्योपाधिविषयमिति भावः। "जीवोपाधिर्द्विधा प्रोक्तः स्वरूपं बाह्य एव च" इति स्मृतेः।

---

**ಈ ಅಧಿಕರಣದ ವಿಷಯ ಮತ್ತು ಸೂತ್ರಾರ್ಥ**

ಈ ಅಧಿಕರಣದಲ್ಲಿ ಜೀವಸ್ವರೂಪಕ್ಕೆ ಉತ್ಪತ್ತಿಯಿಲ್ಲವೆಂದು ಹೇಳುವ ಶ್ರುತಿಗಳಿಗೂ ಜೀವಸ್ವರೂಪೋಪಾಧಿಗೆ ಉತ್ಪತ್ತಿಯನ್ನು ಹೇಳುವ ಶ್ರುತಿಗಳಿಗೂ, ಜೀವಸ್ವರೂಪೋಪಾಧಿಗೆ ಉತ್ಪತ್ತಿ ಇರುವುದಾದಲ್ಲಿ ಜೀವನಿಗೆ ಅನುತ್ಪತ್ತಿಯು ಯುಕ್ತವಾಗಲಾರದ ಕಾರಣ ಬಂದೊದಗುವ ವಿರೋಧವನ್ನು ನಿರಾಕರಿಸಲಾಗುವುದು. 'ಚ' ಶಬ್ದಕ್ಕೆ ಸಮುಚ್ಚಯ ಅರ್ಥ. 'ಚ' ಶಬ್ದವು 'ದರ್ಶನಾಚ್ಚ' ಎಂದು ಅನ್ವಯವನ್ನು ಪಡೆಯುವುದು ಅಥವಾ 'ಉಪಾಧೇಶ್ಚ' ಎಂದು ಅನ್ವಯವನ್ನು ಹೊಂದುವುದು. 'ಜ್ಞಸ್ಯ' ಎಂಬ ಪದವು ಅನುವೃತ್ತಿಯನ್ನು ಪಡೆಯುವುದು. ಸೂತ್ರದಲ್ಲಿರುವ 'ಆತ್ಮ' ಶಬ್ದವು ಬ್ರಹ್ಮನನ್ನು ಹೇಳುವುದು. ಜ್ಞಸ್ಯ ಜೀವನಿಗೂ, ತದುಪಾಧೇಶ್ಚ- ಜೀವಸ್ವರೂಪೋಪಾಧಿಗೂ, ಯಾವದಾತ್ಮಭಾವಿತ್ವಾತ್–ಪರಮಾತ್ಮ ಇರುವ ಕಾಲದಲ್ಲೆಲ್ಲ ಅಸ್ತಿತ್ವವಿರುವುದರಿಂದ, ನ ದೋಷಃ – "ಸೋಽನಾದಿನಾ ಪುಣ್ಯೇನ ಪಾಪೇನಾನುಬದ್ಧಃ" ಇತ್ಯಾದಿಯಾದ, ಜೀವನಿಗೆ ಅನಾದಿಪುಣ್ಯಪಾಪಗಳ ಸಂಬಂಧವನ್ನು ತಿಳಿಸುವ ಶ್ರುತಿಗಳಿಗೆ ಅಪ್ರಾಮಾಣ್ಯದೋಷವಿಲ್ಲ. ಏಕೆಂದರೆ. ತದ್ದರ್ಶನಾಚ್ಚ–ದರ್ಶನ ಮತ್ತು ಸ್ಮರಣಗಳಿಂದ—"ನಿತ್ಯಃ ಪರೋ ನಿತ್ಯೋ ಜೀವಃ" ಎಂಬ ಶ್ರುತಿ ಮತ್ತು "ಆತ್ಮಾ ನಿತ್ಯಃ ಸುಖದುಃಖೇ ತ್ವನಿತ್ಯೇ" ಎಂಬ ಸ್ಮೃತಿಗಳಿಂದ ಎಂದು ಅರ್ಥ.

**ಉಪಾಧ್ಯುತ್ಪತ್ತಿಶ್ರುತಿಯ ವಿವರಣೆ ಮತ್ತು ಸೂತ್ರಾಕ್ಷರಸ್ವಾರಸ್ಯ**

'ಅವಿನಷ್ಟಾ ಏವ ಉತ್ಪದ್ಯಂತೇ' ಎಂಬುದಾಗಿ ಜೀವೋಪಾಧಿಗಳಿಗೆ ಉತ್ಪತ್ತಿಯನ್ನು ಹೇಳಿರುವುದು ಬಾಹ್ಯೋಪಾಧಿಗಳಿಗೆ ಸಂಬಂಧಿಸಿದ್ದು. "ಜೀವೋಪಾಧಿರ್ದ್ವಿಧಾ

*

अनाद्यनन्ताज्ज्ञस्य न दोष इति वाच्ये यावदित्याद्युक्तिर्बिम्बोपाधितत्सन्निधीनां त्रयाणामप्यन्तवत्त्वं न । येन ज्ञस्य तथात्वं स्यादिति सूचयितुम् ॥ १५ ॥

पुंस्त्वाधिकरणम्—१६

## ॥ ॐ पुंस्त्वादिवत् त्वस्य सतोऽभिव्यक्तियोगात् ॐ ॥ २-३-३१

अत्र ज्ञस्य सुखादिरूपत्वतदभावश्रुत्यविरोध उच्यते । तुरेव । अस्येति तद्गुणसारत्वपरामर्शः । ज्ञस्येत्यस्ति । ज्ञस्य जीवस्य सतस्तु

---

ಪ್ರೋಕ್ತಃ ಸ್ವರೂಪಂ ಬಾಹ್ಯ ಏವ ಚ" ಎಂಬ ಸ್ಮೃತಿಯಲ್ಲಿ ಜೀವಸ್ವರೂಪಭೂತವಾದ ಮತ್ತು ಜೀವಸ್ವರೂಪಬಾಹ್ಯವಾದ—ಹೀಗೆ ಎರಡು ವಿಧವಾದ ಉಪಾಧಿಗಳನ್ನು ಹೇಳಲಾಗಿದೆ. "ಜೀವನು ಅನಾದಿಯೂ ಅನಂತನೂ ಆಗಿರುವುದರಿಂದ ದೋಷವಿಲ್ಲ" ಎಂದು ಹೇಳಬೇಕಾಗಿದ್ದರೂ, ಯಾವುದರಿಂದಾಗಿ ಜೀವನಿಗೆ ನಾಶವಾಗಬಹುದೋ ಅಂತಹ ಬಿಂಬ, ಉಪಾಧಿ, ಅವುಗಳ ಸಾನ್ನಿಧ್ಯ—ಈ ಮೂರಕ್ಕೂ ನಾಶವೇ ಇಲ್ಲ ಎಂಬುದನ್ನು ಸೂಚಿಸಲು "ಯಾವದಾತ್ಮಭಾವಿತ್ವಾಚ್ಚ ನ ದೋಷಃ" ಎಂದು ಹೇಳಲಾಗಿದೆ.[1]

ಪುಂಸ್ತ್ವಾಧಿಕರಣ—೧೬

## ಓಂ ಪುಂಸ್ತ್ವಾದಿವತ್ ತ್ವಸ್ಯ ಸತೋಽಭಿವ್ಯಕ್ತಿಯೋಗಾತ್ ಓಂ (೨-೩-೩೧)

### ಅಧಿಕರಣದ ವಿಷಯ ಮತ್ತು ಸೂತ್ರಾರ್ಥ

ಈ ಅಧಿಕರಣದಲ್ಲಿ ಜೀವನು ಸುಖಾದಿಸ್ವರೂಪನು—ಸುಖಾದಿಸ್ವರೂಪನಲ್ಲ ಎಂದು ಹೇಳುವ ಶ್ರುತಿಗಳಿಗೆ ಅವಿರೋಧವನ್ನು ಹೇಳಲಾಗುವುದು. 'ತು' ಶಬ್ದಕ್ಕೆ ಏವ ಎಂದು ಅರ್ಥ. 'ಅಸ್ಯ' ಎಂಬ ಪದವು ತದ್ಗುಣಸಾರತ್ವವನ್ನು ಪರಾಮರ್ಶಿಸುವುದು. 'ಜ್ಞಸ್ಯ' ಎಂಬ ಪದವು ಅನುವೃತ್ತವಾಗುವುದು. ಜ್ಞಸ್ಯ—ಜೀವನಿಗೆ, ಸತಸ್ತು—ಸತ ಏವ ಅಂದರೆ ಮೊದಲೇ ಇರುವ, ಅಸ್ಯ—ಜ್ಞಾನಾನಂದಸ್ವರೂಪತ್ವಕ್ಕೆ,

---

1. ಪರಮಾತ್ಮನಿರುವ ಎಲ್ಲ ಕಾಲದಲ್ಲೂ ಜೀವನ ಅಸ್ತಿತ್ವವಿದೆ ಎಂಬರ್ಥದ 'ಯಾವತ್' ಇತ್ಯಾದಿ ಸೂತ್ರದಿಂದ ಬಿಂಬನಾದ ಪರಮಾತ್ಮ, ಜೀವಸ್ವರೂಪೋಪಾಧಿ ಇವುಗಳ ಸಂಬಂಧ ಅನಾದಿ ನಿತ್ಯವೆಂದು ಹೇಳಿದಂತಾಗುವುದೆಂದು ಭಾವ.

सत एव प्राग्विद्यमानस्यैवास्य ज्ञानानन्दस्वरूपत्वस्य पुंस्त्वादिवत् बाल्ये पुंस्त्वस्त्रीत्वादेरिवाभिव्यक्तियोगात् अभिव्यक्त्या अभितः सुष्ठु व्यक्त्या निमित्तेन योगात् स दुःखाद्विमुक्त आनन्दीभवतीत्यादि-व्यपदेशस्योपपत्तेरित्यर्थः । अपत्योत्पत्तिशक्तिरूपपुंस्त्वादेर्यौवनेऽभि-व्यक्तेर्नायं प्राक् पुमान् इदानीं पुमानित्युक्तिर्यथा एवं ज्ञस्वरूपा-नन्दादेरावरणनिवृत्तिरूपव्यक्त्या "दुःखाद्विमुक्त आनन्दीभवति" इत्याद्युपपत्तेरेतच्छ्रुतिविरोधेन "विज्ञानात्मा सह देवैश्च सर्वैः स आनन्दः" इत्यस्याप्रामाण्यानापत्तेर्ज्ञो ज्ञानानन्दादिरूप एवेति भावः । सत एवेत्यर्थकतुस्तु पूर्वपक्षद्योतनाय । अभीत्युक्तिः सुप्तावानन्दादे-र्व्यक्तावपि मुक्ताविव न सम्यक् । तेन साऽपि न व्यपदेशहेतुरिति

ಪುಂಸ್ತ್ವಾದಿವತ್–ಬಾಲ್ಯದಲ್ಲೇ ಇರುವ ಪುಂಸ್ತ್ವ, ಸ್ತ್ರೀತ್ವ ಮೊದಲಾದವುಗಳಿಗೆ ಹೇಗೋ ಹಾಗೆ, ಅಭಿವ್ಯಕ್ತಿಯೋಗಾತ್—ಅಭಿತಃ- ಚೆನ್ನಾಗಿ ವ್ಯಕ್ತವಾಗುವಿಕೆ ಎಂಬ ನಿಮಿತ್ತದ ಸಂಬಂಧದಿಂದಾಗಿ "ಸ ದುಃಖಾದ್ವಿಮುಕ್ತಃ ಆನಂದೀ ಭವತಿ" (ಪೈಂಗಿ ಶ್ರುತಿ) ಇತ್ಯಾದಿ ವ್ಯವಹಾರವು ಉಪಪನ್ನವಾಗುವುದು ಎಂದು ಅರ್ಥ. ಸಂತಾನೋತ್ಪತ್ತಿ ಮಾಡುವ ಶಕ್ತಿಯೇ ಪುಂಸ್ತ್ವ. ಇಂತಹ ಪುಂಸ್ತ್ವ ಮೊದಲಾದವುಗಳು ಯೌವನದಲ್ಲಿ ಅಭಿವ್ಯಕ್ತವಾಗುವುದರಿಂದ "ಇವನು ಹಿಂದೆ ಪುರುಷನಾಗಿರಲಿಲ್ಲ, ಈಗ ಪುರುಷನಾಗಿದ್ದಾನೆ" ಎಂಬ ಮಾತು ಹೇಗೋ ಹಾಗೆ ಜೀವಸ್ವರೂಪಭೂತವಾದ ಆನಂದ ಮೊದಲಾದವುಗಳಿಗೆ ಆವರಣನಿವೃತ್ತಿರೂಪವಾದ ಅಭಿವ್ಯಕ್ತಿಯಾಗುವುದರಿಂದ "ಸ ದುಃಖಾ-ದ್ವಿಮುಕ್ತಃ ಆನಂದೀ ಭವತಿ" ಇತ್ಯಾದಿ ಶ್ರುತಿಗಳು ಉಪಪನ್ನವಾಗುವುವು. ಆದ್ದರಿಂದ ಇಂತಹ ಶ್ರುತಿಗಳ ವಿರೋಧವಿರುವುದರಿಂದ "ವಿಜ್ಞಾನಾತ್ಮಾ ಸಹ ದೇವೈಶ್ಚ ಸರ್ವೈಃ", "ಸ ಆನಂದಃ" ಎಂಬ ಶ್ರುತಿಗಳು ಅಪ್ರಮಾಣಗಳಾಗಲೆಂಬ ಆಪತ್ತಿ ಇಲ್ಲವಾದ್ದರಿಂದ ಜೀವನು ಜ್ಞಾನಾನಂದರೂಪನಾಗಿರುವುದು ಸರ್ವಥಾ ಯುಕ್ತವೆಂದು ಭಾವ.

## ಸೂತ್ರದ ಕೆಲವು ಪದಗಳ ಸ್ವಾರಸ್ಯ

ಈ ಅಧಿಕರಣದ ಪೂರ್ವಪಕ್ಷವನ್ನು ಸೂಚಿಸುವ[1] ಸಲುವಾಗಿ 'ಸತ ಏವ' ಎಂದು ಏವಾರ್ಥಕವಾದ 'ತು' ಶಬ್ದವನ್ನು ಪ್ರಯೋಗಿಸಲಾಗಿದೆ. ಸುಷುಪ್ತಿಯಲ್ಲಿ ಜೀವಸ್ವರೂಪಭೂತವಾದ ಆನಂದವು ವ್ಯಕ್ತವಾಗುವುದಾದರೂ ಸುಷುಪ್ತನಾದ ಜೀವನನ್ನು

1. ಇದ್ದುದೇ ವ್ಯಕ್ತವಾಗುವುದು ಎಂಬ ಸಿದ್ಧಾಂತದಿಂದ ಸಂಸಾರಕಾಲದಲ್ಲಿಲ್ಲದ ಜ್ಞಾನಾನಂದಾದಿಗಳು ಜೀವಸ್ವರೂಪವಲ್ಲವೆಂಬ ಪೂರ್ವಪಕ್ಷ ಸೂಚಿತವಾಗುವುದೆಂದು ಭಾವ.

न शङ्क्यमिति सूचयितुम् । तुः सुष्ठ्वर्थः सन्नभिव्यक्तेः विशेषणीभूय इममर्थमाहेत्येके ॥

अस्तु "नित्यानन्दो नित्यज्ञानः" इत्यादिश्रुत्या आनन्दादिरूपत्वं ज्ञस्य । तथाप्यावरणं नोपेयमित्यत आह—

॥ ॐ नित्योपलब्ध्यनुपलब्धिप्रसङ्गोऽन्यतरनियमो वाऽन्यथा ॐ ॥ २-३-३२

अस्येत्यस्ति । त्रिविधजीवराशिपरो ज्ञशब्दश्च । अन्यतरेति प्रागुक्तद्वयं गृह्यते । स्वाप्ययसम्पत्त्योरन्यतरेत्यत्रेव वाशब्दो व्यवस्थित-

---

ಕುರಿತು 'ದುಃಖಾದ್ ವಿಮುಕ್ತಃ ಆನಂದೀ ಭವತಿ' ಎಂದು ವ್ಯವಹರಿಸುವುದಿಲ್ಲ. ಆದ್ದರಿಂದ ಮುಕ್ತಿಯಲ್ಲಾಗುವ ಆನಂದದ ವ್ಯಕ್ತಿಯೂ ಅಂತಹ ವ್ಯವಹಾರಕ್ಕೆ ಕಾರಣವಾಗಲಾರದು ಎಂಬ ಶಂಕೆಯನ್ನು ಮಾಡತಕ್ಕದ್ದಲ್ಲ ಎಂದು ಸೂಚಿಸಲು 'ಅಭಿವ್ಯಕ್ತಿ' ಎಂಬಲ್ಲಿ 'ಅಭಿ' ಎಂಬ ಪದವನ್ನು ಪ್ರಯೋಗಿಸಲಾಗಿದೆ. ಸುಪ್ತಿಯಲ್ಲಾಗುವ ಆನಂದದ ವ್ಯಕ್ತಿಯು ಮುಕ್ತಿಯಲ್ಲಾಗುವಂತೆ ಸಮ್ಯಕ್ ವ್ಯಕ್ತಿಯಲ್ಲ. ಆದ್ದರಿಂದ ಸುಪ್ತಿಯಲ್ಲಾಗುವ ಆನಂದವ್ಯಕ್ತಿಯು 'ಆನಂದೀ ಭವತಿ' ಎಂಬ ವ್ಯವಹಾರಕ್ಕೆ ಕಾರಣವಾಗದಿದ್ದರೂ ಮುಕ್ತಿಯಲ್ಲಾಗುವ ಆನಂದ ಅಭಿವ್ಯಕ್ತಿಯು ಅಂತಹ ವ್ಯವಹಾರಕ್ಕೆ ಕಾರಣವಾಗುವುದೆಂದು ಅಭಿ ಶಬ್ದವು ಸೂಚಿಸುವುದು. 'ತು' ಶಬ್ದವು 'ಚೆನ್ನಾಗಿ' ಎಂಬ ಅರ್ಥವುಳ್ಳದ್ದಾಗಿ 'ಅಭಿವ್ಯಕ್ತಿ'ಗೆ ವಿಶೇಷಣವಾಗಿದ್ದು ಈ ಅರ್ಥವನ್ನು ಹೇಳುವುದೆಂದು ಕೆಲವರ ಅಭಿಪ್ರಾಯ.

'ನಿತ್ಯಾನಂದಃ ನಿತ್ಯಜ್ಞಾನಃ' ಇತ್ಯಾದಿ ಶ್ರುತಿಗಳ ಆಧಾರದಿಂದ ಜೀವನು ಆನಂದಾದಿರೂಪನಾಗಿರಲಿ ; ಆದರೂ, ಆನಂದಾದಿಗಳಿಗೆ ಆವರಣವನ್ನು ಒಪ್ಪತಕ್ಕದ್ದಲ್ಲ ಎಂಬ ಆಕ್ಷೇಪಕ್ಕೆ ಉತ್ತರ ನೀಡುವ ಸೂತ್ರ—

ಓಂ ನಿತ್ಯೋಪಲಬ್ಧ್ಯನುಪಲಬ್ಧಿಪ್ರಸಂಗೋಽನ್ಯತರ-
ನಿಯಮೋ ವಾಽನ್ಯಥಾ ಓಂ (೨-೩-೩೨)

**ಸೂತ್ರಾರ್ಥ**

'ಅಸ್ಯ' ಎಂಬ ಪದವು ಅನುವೃತ್ತವಾಗುವುದು. ತ್ರಿವಿಧ ಜೀವರಾಶಿ ಎಂಬ ಅಭಿಪ್ರಾಯದ 'ಜ್ಞ' ಶಬ್ದವೂ ಅನುವೃತ್ತವಾಗುವುದು. 'ಸ್ವಾಪ್ಯಯಸಂಪತ್ತ್ಯೋರನ್ಯತರ' (೪-೪-೧೬) ಎಂಬಲ್ಲಿಯಂತೆ 'ಅನ್ಯತರ' ಪದದಿಂದ ಇದೇ ಸೂತ್ರದಲ್ಲಿ

विकल्पार्थः । अन्यथा आवरणानङ्गीकारे ज्ञानां मुक्तियोग्यानां तमोयोग्यानां च जीवानामस्यानन्दादिरूपत्वस्य यथाक्रमं नित्योपलब्ध्यनुपलब्ध्योः प्रसङ्गः सतां नियमानन्दानुभवः स्यादसतां नित्यमानन्दाद्यनुपलब्धिः स्यात् । आनन्दाद्यनुपलब्धिपदेन तद्विरुद्धदुःखानुभव उच्यते । असुरा इत्यादाविव । नित्यं दुःखानुभवः स्यात् इत्यर्थः । मध्यमजीवानां त्वन्यतरनियमः स्यात् । सुखदुःखोभयानुभवः स्याद्विमिश्रत्वात्तेषामित्यर्थः । आवृतेरभावेऽनुभवाभावायोगादिति भावः । तद्गुणेति सतां प्रकृतत्वाद्भावत्वाच्चोपलब्धिः प्रागुक्ता । तदुभयेति वाच्येऽन्यतरेत्युक्तिः सुखदुःखयोरेकानुभवकाल एवान्यत-

---

ಹಿಂದೆ ಹೇಳಿರುವ 'ನಿತ್ಯೋಪಲಬ್ಧ್ಯನುಪಲಬ್ಧಿ'ಗಳನ್ನು ಗ್ರಹಿಸಬೇಕು. 'ವಾ' ಶಬ್ದವು [1]ವ್ಯವಸ್ಥಿತ ವಿಕಲ್ಪಾರ್ಥಕವಾಗಿದೆ. ಅನ್ಯಥಾ–ಆವರಣವನ್ನು ಅಂಗೀಕರಿಸದಿದ್ದಲ್ಲಿ, ಜ್ಞಾನಾಂ–ಮುಕ್ತಿಯೋಗ್ಯ ಮತ್ತು ತಮೋಯೋಗ್ಯ ಜೀವರಿಗೆ ಕ್ರಮವಾಗಿ, ಅಸ್ಯ–ಆನಂದಾದಿಸ್ವರೂಪವಾಗಿರುವುದರ, ನಿತ್ಯೋಪಲಬ್ಧ್ಯನುಪಲಬ್ಧ್ಯೋಃ ಪ್ರಸಂಗಃ –ಸಜ್ಜನರಿಗೆ ನಿತ್ಯವೂ ಆನಂದಾನುಭವವಾಗಬೇಕಾದೀತು, ಅಸಜ್ಜನರಿಗೆ, ನಿತ್ಯವೂ ಆನಂದಾದಿಗಳ ಅನುಪಲಬ್ಧಿಯಾಗಬೇಕಾದೀತು. 'ಅಸುರಾ' ಎಂಬ ಪದದಿಂದ ಸುರವಿರೋಧಿಗಳಾದ ದೇವತೆಗಳನ್ನು ಹೇಳುವಂತೆ ಆನಂದಾದ್ಯನುಪಲಬ್ಧಿ ಪದದಿಂದ ಇಲ್ಲಿ ಆನಂದವಿರುದ್ಧವಾದ ದುಃಖಾನುಭವವನ್ನು ಹೇಳಲಾಗಿದೆ. ನಿತ್ಯವೂ ದುಃಖಾನುಭವವಾಗಲಿ ಎಂದು ಅರ್ಥ. ಮಧ್ಯಮಜೀವರಿಗಾದರೋ, ಅನ್ಯತರನಿಯಮಃ ಸ್ಯಾತ್–ಅವರು ಮಿಶ್ರಜೀವರಾದ್ದರಿಂದ ಸುಖದುಃಖಗಳೆರಡರ ಅನುಭವವೂ ಆಗಲಿ ಎಂದು ಅರ್ಥ. ಆವರಣವೇ ಇಲ್ಲದಿದ್ದಾಗ ಅನುಭವವಿಲ್ಲದಿರುವುದು ಸಾಧ್ಯವಾಗಲಾರದೆಂದು ಭಾವ.

**ಸೂತ್ರದ ಕೆಲವು ಪದಗಳ ಸ್ವಾರಸ್ಯ**

'ತದ್ಗುಣಸಾರತ್ವಾತ್' (ಬ್ರ.ಸೂ. ೨–೩–೨೯) ಎಂಬಲ್ಲಿ ಸಜ್ಜನರೇ ಪ್ರಸ್ತುತರಾಗಿರುವುದರಿಂದ ಮತ್ತು ಉಪಲಬ್ಧಿಯು ಭಾವರೂಪವಾಗಿರುವುದರಿಂದ ಅದನ್ನೇ ಮೊದಲು ಹೇಳಲಾಗಿದೆ. 'ತದುಭಯ' ಎಂದು ಹೇಳುವ ಬದಲು 'ಅನ್ಯತರ'

---

1. ಮುಕ್ತಿಯೋಗ್ಯರಿಗೆ ನಿತ್ಯವೂ ಆನಂದಾನುಭವವಾಗಲಿ ಅಥವಾ ತಮೋಯೋಗ್ಯರಿಗೆ ನಿತ್ಯವೂ ದುಃಖಾನುಭವವಾಗಲಿ ಅಥವಾ ನಿತ್ಯಸಂಸಾರಿಗಳಿಗೆ ನಿತ್ಯವೂ ಸುಖದುಃಖಗಳೆರಡರ ಅನುಭವವಾಗಲಿ ಎಂದು ಒಂದೊಂದು ಪಕ್ಷಕ್ಕೆ ಒಂದೊಂದನ್ನು ವ್ಯವಸ್ಥಿತಗೊಳಿಸಿ ವಿಕಲ್ಪವನ್ನು ಹೇಳಿದರೆ ಅದು ವ್ಯವಸ್ಥಿತವಿಕಲ್ಪ.

रानुभवः साम्येन स्यादिति दर्शयितुम् । तदुभयेत्युक्तौ कालभेदे-नेत्यपि प्रतीयेतेति केचित् । नित्येति मध्यमपरम् । अन्यतरेत्युक्त-माधमपरमित्येके ॥ १६ ॥

कर्तृत्वाधिकरणम्—१७

## ॥ ॐ कर्ता शास्त्रार्थवत्त्वात् ॐ ॥ २-३-३३

अत्र "यत्कर्म कुरुते तदभिसम्पद्यते", "नान्यः कर्ता" इति जीवकर्तृत्वाकर्तृत्वश्रुत्यविरोध उच्यते । ज्ञ इत्यस्ति । ज्ञः कर्ता । शास्त्रार्थवत्त्वात् विधिनिषेधरूपशास्त्रस्यार्थवत्त्वात् । अन्यथा शास्त्र-सार्थक्यं न स्यादित्यर्थः । जडेशमुक्तानां तदविषयत्वादिति भावः ॥

---

ಎಂದು ಹೇಳಿರುವುದು, ಸುಖದುಃಖಗಳಲ್ಲಿ ಒಂದನ್ನು ಅನುಭವಿಸುವ ಸಮಯದಲ್ಲೇ ಮತ್ತೊಂದರ ಅನುಭವವೂ ಇನ್ನೊಂದರಂತೆ ಆಗಲಿ ಎಂದು ತಿಳಿಸಲು. 'ತದುಭಯ' ಎಂದಿದ್ದಲ್ಲಿ ಕಾಲಭೇದದಿಂದ ಸುಖದುಃಖಗಳೆರಡರ ಅನುಭವವಾಗಲಿ ಎಂಬ ಅರ್ಥವು ತೋರಬಹುದು ಎಂದು ಕೆಲವರು ಹೇಳುವರು. ಕೆಲವರು, 'ನಿತ್ಯ' ಇತ್ಯಾದಿ ಪದವು ಮಧ್ಯಮಜೀವರ ಅಭಿಪ್ರಾಯವುಳ್ಳದ್ದೆಂದೂ, 'ಅನ್ಯತರ' ಪದವು ಉತ್ತಮ ಮತ್ತು ಅಧಮ ಜೀವರ ಅಭಿಪ್ರಾಯವುಳ್ಳದ್ದೆಂದೂ ಹೇಳುವರು.

ಕರ್ತೃತ್ವಾಧಿಕರಣ—೧೭

## ಓಂ ಕರ್ತಾ ಶಾಸ್ತ್ರಾರ್ಥವತ್ತ್ವಾತ್ ಓಂ (೨–೩–೩೩)

**ಅಧಿಕರಣದ ವಿಷಯ ಮತ್ತು ಸೂತ್ರಾರ್ಥ**

ಈ ಅಧಿಕರಣದಲ್ಲಿ "ಯತ್ಕರ್ಮ ಕುರುತೇ ತದಭಿಸಂಪದ್ಯತೇ" ಎಂಬ ಜೀವನಿಗೆ ಕರ್ತೃತ್ವವನ್ನು ಹೇಳುವ ಶ್ರುತಿಗೂ 'ನಾನ್ಯಃ ಕರ್ತಾ' ಎಂಬ ಜೀವನಿಗೆ ಕರ್ತೃತ್ವ ವಿಲ್ಲವೆಂದು ಹೇಳುವ ಶ್ರುತಿಗೂ ಅವಿರೋಧವನ್ನು ಹೇಳಲಾಗುವುದು. 'ಜ್ಞ' ಎಂಬ ಪದವು ಅನುವೃತ್ತವಾಗುವುದು. ಜೀವನು ಕರ್ತೃವಾಗಿದ್ದಾನೆ. ಶಾಸ್ತ್ರಾರ್ಥ-ವತ್ತ್ವಾತ್–ವಿಧಿನಿಷೇಧರೂಪವಾದ ಶಾಸ್ತ್ರವು ಸಪ್ರಯೋಜನವಾದದ್ದರಿಂದ. ಜೀವನು ಕರ್ತೃವಲ್ಲದಿದ್ದಲ್ಲಿ ಶಾಸ್ತ್ರವು ಸಾರ್ಥಕವಾಗಲಾರದು ಎಂದು ಅರ್ಥ. ಜಡವಾಗಲೀ, ಭಗವಂತನಾಗಲೀ, ಮುಕ್ತಜೀವರಾಗಲೀ ಶಾಸ್ತ್ರವಿಷಯವಾಗದಿರುವುದರಿಂದ ಎಂದು ಭಾವ.

ज्ञस्याकर्तृत्वेऽपि काल्पनिककर्तृत्वेन शास्त्रसार्थक्यमस्त्वित्यत आह—

॥ ॐ विहारोपदेशात् ॐ ॥ २-३-३४

ज्ञः कर्तैव न कल्पितकर्तृत्ववान् । "जक्षन् क्रीडन् रममाणः स्त्रीभिर्वा यानैर्वा" इति मुक्तौ विहारकर्तृत्वोपदेशादित्यर्थः ॥

अस्त्वेवं मुक्तौ । संसारे तु काल्पनिकमस्तु कर्तृत्वम् । तावता शास्त्रसार्थक्यादित्यत आह—

॥ ॐ उपादानात् ॐ ॥ २-३-३५

मोक्षाद्युद्देशेन साधनाद्युपादानात् उपादानप्रतीतेर्ज्ञः कर्तैवेत्यर्थः । प्रत्यक्षसिद्धत्वात् कर्तृत्वं न काल्पनिकमिति भावः ।

---

ಜೀವನು ವಾಸ್ತವಿಕವಾಗಿ ಕರ್ತೃವಲ್ಲದಿದ್ದರೂ ಕಾಲ್ಪನಿಕ ಕರ್ತೃತ್ವವನ್ನು ಪಡೆದಿರುವುದರಿಂದ ಶಾಸ್ತ್ರವು ಸಾರ್ಥಕವಾಗಬಹುದು ಎಂಬ ಆಶಂಕೆಗೆ ಉತ್ತರ—

ಓಂ ವಿಹಾರೋಪದೇಶಾತ್ ಓಂ (೨-೩-೩೪)

**ಸೂತ್ರಾರ್ಥ**

ಜೀವನು ನಿಶ್ಚಿತವಾಗಿ ಕರ್ತೃವಾಗಿದ್ದಾನೆ. ಅಸತ್ಯವಾದ ಕರ್ತೃತ್ವವುಳ್ಳವನಲ್ಲ. "ಜಕ್ಷನ್ ಕ್ರೀಡನ್ ರಮಮಾಣಃ ಸ್ತ್ರೀಭಿರ್ವಾ ಯಾನೈರ್ವಾ" ಎಂಬ ಶ್ರುತಿಯಲ್ಲಿ ಜೀವನು ಮುಕ್ತಿಯಲ್ಲಿ ವಿಹರಿಸುವನೆಂದು ಹೇಳಿರುವುದರಿಂದ ಎಂದು ಅರ್ಥ.

ಮುಕ್ತಿಯಲ್ಲಿ ಜೀವನು ಕರ್ತೃವಾಗಿರಬಹುದು. ಸಂಸಾರದಲ್ಲಿ ಮಾತ್ರ ಜೀವನ ಕರ್ತೃತ್ವವು ಮಿಥ್ಯಾಭೂತವಾದದ್ದು. ಕಾಲ್ಪನಿಕಕರ್ತೃತ್ವವಿರುವುದರಿಂದಲೇ ಶಾಸ್ತ್ರವು ಸಾರ್ಥಕವಾಗುವುದು ಎಂಬ ಆಶಂಕೆಗೆ ಉತ್ತರ—

ಓಂ ಉಪಾದಾನಾತ್ ಓಂ (೨--೩--೩೫)

**ಸೂತ್ರಾರ್ಥ**

ಮೋಕ್ಷಾದಿಗಳಿಗೋಸ್ಕರ ಸಾಧನಗಳನ್ನು, ಉಪಾದಾನಾತ್–ಅನುಷ್ಠಾನ ಮಾಡುವುದು ದೃಷ್ಟವಾಗಿರುವುದರಿಂದ ಜೀವನು ಕರ್ತೃವಾಗಿಯೇ ಇದ್ದಾನೆ ಎಂದು ಅರ್ಥ. ಕರ್ತೃತ್ವವು ಪ್ರತ್ಯಕ್ಷಸಿದ್ಧವಾಗಿರುವುದರಿಂದ ಮಿಥ್ಯೆಯಲ್ಲ ಎಂದು ಭಾವ.

एवं शास्त्रसार्थक्यान्यथानुपपत्त्या प्रत्यक्षेण च कर्तृत्वं प्रसाध्य श्रुत्याऽप्याह—

॥ ॐ व्यपदेशाच्च क्रियायां न चेन्निर्देशविपर्ययः ॐ ॥ २-३-३६

"आत्मानमेव लोकमुपासीत" इति उपासनादिक्रियायां कर्तृत्वेन व्यपदेशाच्च ज्ञः कर्ता। न चेत् जीवस्योपासीतेत्यत्र कर्तृत्वोपदेशो न चेत् परमात्मन एव कर्तृत्वापत्त्या आत्मानमिति निर्देशस्य विपर्ययो व्यत्यासः स्यात्। आत्मेति निर्देशः स्यादित्यर्थः।

एवमक्षयुक्तिश्रुतिभ्यो ज्ञः कर्ता चेत् कथं "नान्यः कर्ता" इति श्रुतिः, "इतर" इति सूत्रे प्राक् कर्तृत्वनिरासश्चेत्यतस्तदाशयमाह—

---

ಹೀಗೆ ಜೀವನು ಕರ್ತೃವಲ್ಲದಿದ್ದಲ್ಲಿ ಶಾಸ್ತ್ರಸಾರ್ಥಕ್ಯವು ಯುಕ್ತವಾಗಲಾರದು ಎಂಬ ಯುಕ್ತಿಯಿಂದ ಮತ್ತು ಪ್ರತ್ಯಕ್ಷಪ್ರಮಾಣದಿಂದ ಜೀವನಿಗೆ ಕರ್ತೃತ್ವವನ್ನು ಸಾಧಿಸಿ ಶ್ರುತಿಯಿಂದಲೂ ಕರ್ತೃತ್ವವನ್ನು ಸಾಧಿಸುವ ಸೂತ್ರ—

ಓಂ ವ್ಯಪದೇಶಾಚ್ಚ ಕ್ರಿಯಾಯಾಂ ನ ಚೇನ್ನಿರ್ದೇಶ-ವಿಪರ್ಯಯಃ ಓಂ (೨-೩-೩೬)

**ಸೂತ್ರಾರ್ಥ**

"ಆತ್ಮಾನಮೇವ ಲೋಕಮುಪಾಸೀತ"1 (ಬೃ. ೩-೪-೧೫) ಎಂದು ಉಪಾಸನೆಯೇ ಮೊದಲಾದ ಕ್ರಿಯೆಗಳಲ್ಲಿ ಜೀವನನ್ನು ಕರ್ತೃವೆಂದು ಹೇಳಿರುವುದರಿಂದಲೂ ಜೀವನು ಕರ್ತೃವಾಗಿದ್ದಾನೆ. ನ ಚೇತ್–'ಉಪಾಸೀತ' ಎಂಬಲ್ಲಿ ಜೀವನನ್ನು ಕರ್ತೃವೆಂದು ಹೇಳಿಲ್ಲವಾದಲ್ಲಿ ಪರಮಾತ್ಮನೇ ಕರ್ತೃವಾಗಬೇಕಾಗುವುದರಿಂದ 'ಆತ್ಮಾನಂ' ಎಂಬ ನಿರ್ದೇಶದ, ವಿಪರ್ಯಯಃ–ವ್ಯತ್ಯಾಸವಾಗಬೇಕಾದೀತು. 'ಆತ್ಮಾ' ಎಂದು ನಿರ್ದೇಶವಿರಬೇಕಾದೀತು ಎಂದು ಅರ್ಥ.

ಹೀಗೆ ಪ್ರತ್ಯಕ್ಷ, ಅನುಮಾನ, ಆಗಮಗಳಿಂದ ಜೀವನು ಕರ್ತೃವೆಂದು ಸಿದ್ಧಿಸುವುದಾದಲ್ಲಿ 'ನಾನ್ಯಃ ಕರ್ತಾ' ಎಂಬ ಶ್ರುತಿಯ ಅಭಿಪ್ರಾಯವೇನು ? ಅಲ್ಲದೆ 'ಇತರಃ' (ಬ್ರ. ಸೂ. ೨-೧-೨೨) ಎಂಬ ಸೂತ್ರದಲ್ಲಿ ಹಿಂದೆ ಜೀವನಿಗೆ ಕರ್ತೃತ್ವವನ್ನು

---

1. ಪರಮಾತ್ಮನನ್ನೇ ಸರ್ವಾಶ್ರಯನೆಂದು ಉಪಾಸಿಸಬೇಕು ಎಂದು ಶ್ರುತ್ಯರ್ಥ.

॥ ॐ उपलब्धिवदनियमः ॐ ॥ २-३-३७

क्रियायामित्यस्ति। उपलब्धावनियमो यथा एवं क्रियायामनियम इत्यर्थः। इदं सुरूपं सुगन्धं सुखरूपं वा ज्ञास्यामि विपरीतं न पश्यामि न जिघ्रामि इति स्पृहयतोऽपि तज्ज्ञानलाभो यथा एवमिदं कुर्यामितीच्छतोऽपि न क्रियायां नियम इति नियतकर्तृत्वाभावपरं तद्द्वयमिति भावः॥

कुतो ह्यस्यानियमः? क्रियादावस्वतन्त्रत्वादिति भावेनास्वातन्त्र्ये हेतुमाह—

॥ ॐ शक्तिविपर्ययात् ॐ ॥ २-३-३८

---

ನಿರಾಕರಿಸಿರುವುದು ಹೇಗೆ ಸಮಂಜಸವಾದೀತು ಎಂಬ ಆಕ್ಷೇಪವನ್ನು ಪರಿಹರಿಸಲು ಆ ಶ್ರುತಿಸೂತ್ರಗಳ ಆಶಯವನ್ನು ಹೇಳುವ ಸೂತ್ರ—

ಓಂ ಉಪಲಬ್ಧಿವದನಿಯಮಃ ಓಂ (೨-೩-೩೭)

**ಸೂತ್ರಾರ್ಥ**

'ಕ್ರಿಯಾಯಾಂ' ಎಂಬ ಪದವು ಹಿಂದಿನ ಸೂತ್ರದಿಂದ ಅನುವೃತ್ತವಾಗುವುದು. ಜ್ಞಾನದ ವಿಷಯದಲ್ಲಿ ಹೇಗೆ ನಿಯಮವಿಲ್ಲವೋ ಹಾಗೆ ಕ್ರಿಯೆಯ ವಿಷಯದಲ್ಲೂ ನಿಯಮವಿಲ್ಲವೆಂದು ಅರ್ಥ. "ಸುಂದರವೂ, ಸುಗಂಧವೂ, ಸುಖಕರವೂ ಆದ ವಸ್ತುವನ್ನು ಗ್ರಹಿಸುವೆನು. ಕುರೂಪವೂ, ದುರ್ಗಂಧವೂ ಆಗಿರುವುದನ್ನು ನೋಡಲಾರೆ, ಆಘ್ರಾಣಿಸಲಾರೆ" ಎಂದು ಆಸೆಪಡುವವನಿಗೂ ಆ ವಸ್ತುವಿನ ಅನುಭವ ಹೇಗೆ ದೊರಕುವುದಿಲ್ಲವೋ ಹಾಗೆ 'ಈ ಕಾರ್ಯವನ್ನು ಮಾಡುವೆನು' ಎಂದು ಇಚ್ಛಿಸಿದವನೂ ಆ ಕ್ರಿಯೆಯನ್ನು ಮಾಡಿಯೇ ಮಾಡುವನೆಂಬ ನಿಯಮವಿಲ್ಲವಾದ್ದರಿಂದ ಆ ಶ್ರುತಿಸೂತ್ರಗಳೆರಡೂ ಜೀವನಿಗೆ [1]ನಿಯತಕರ್ತೃತ್ವವಿಲ್ಲವೆಂದು ಹೇಳುವ ಅಭಿಪ್ರಾಯವುಳ್ಳದ್ದೆಂದು ಭಾವ.

ಜೀವನಿಗೆ ಕರ್ತೃತ್ವನಿಯಮವಿಲ್ಲದಿರುವುದರ ಕಾರಣ ಅವನು ಅಸ್ವತಂತ್ರನಾಗಿರುವುದು ಎಂಬ ಅಭಿಪ್ರಾಯದಿಂದ ಜೀವನ ಅಸ್ವಾತಂತ್ರ್ಯಕ್ಕೆ ಕಾರಣವನ್ನು ಹೇಳುವ ಸೂತ್ರ—

ಓಂ ಶಕ್ತಿವಿಪರ್ಯಯಾತ್ ಓಂ (೨-೩-೩೮)

---

1. ಕರ್ತೃತ್ವವಿದ್ದೇ ಇರುವುದೆಂಬ ನಿಯಮವಿಲ್ಲ.

ईशशक्त्यपेक्षया ज्ञस्य विपर्ययादल्पशक्तित्वादस्वातन्त्र्यमिति शेषः ॥

इतश्चास्वातन्त्र्यमित्याह—

**॥ ॐ समाध्यभावाच्च ॐ ॥ २-३-३९**

समाधिरलम्बुद्धिः । तदभावाच्चापूर्णकामत्वाच्चास्वातन्त्र्यं ज्ञायत इत्यर्थः । ततश्चानियम इति परम्परया इमौ हेतू बोध्यौ ॥

ननु ज्ञस्यास्वतन्त्रकर्तृत्वे कथं कर्तेत्युक्तिः । स्वतन्त्रः खलु कर्तेत्यत आह—

**॥ ॐ यथा च तक्षोभयथा ॐ ॥ २-३-४०**

---

**ಸೂತ್ರಾರ್ಥ**

ಭಗವಂತನ ಶಕ್ತಿಯ ದೃಷ್ಟಿಯಿಂದ ಜೀವನಿಗೆ, ವಿಪರ್ಯಯಾತ್–ಅಲ್ಪಶಕ್ತಿ ಇರುವುದರಿಂದ ಅಸ್ವಾತಂತ್ರ್ಯವಿದೆ. ಇಲ್ಲಿ 'ಅಸ್ವಾತಂತ್ರ್ಯವಿದೆ' ಎಂಬ ಶೇಷವನ್ನು ಸೇರಿಸಬೇಕು.

ಈ ಮುಂದಿನ ಕಾರಣದಿಂದಲೂ ಜೀವನಿಗೆ ಅಸ್ವಾತಂತ್ರ್ಯವಿರುವುದೆಂದು ಹೇಳುವ ಸೂತ್ರ—

**ಓಂ ಸಮಾಧ್ಯಭಾವಾಚ್ಚ ಓಂ (೨-೩-೩೯)**

**ಸೂತ್ರಾರ್ಥ**

ಸಮಾಧಿ ಎಂದರೆ ಸಾಕೆನ್ನುವ ಬುದ್ಧಿ. ಅದಿಲ್ಲದಿರುವುದರಿಂದಲೂ ಅಂದರೆ ಪೂರ್ಣಕಾಮನಾಗದಿರುವುದರಿಂದಲೂ ಜೀವನಿಗೆ ಅಸ್ವಾತಂತ್ರ್ಯವಿದೆಯೆಂದು ತಿಳಿಯುವುದೆಂದು ಅರ್ಥ. ಹೀಗೆ ಜೀವನು ಅಸ್ವತಂತ್ರನಾಗಿರುವುದರಿಂದ ಕರ್ತೃತ್ವಾನಿಯಮವಿಲ್ಲವೆಂಬುದಾಗಿ ಶಕ್ತಿವಿಪರ್ಯಯ ಮತ್ತು ಸಮಾಧ್ಯಭಾವಗಳೆರಡೂ ಕರ್ತೃತ್ವನಿಯಮವನ್ನು ಸಾಧಿಸಲು ಪರಂಪರೆಯಿಂದ ಹೇತುಗಳಾಗಿವೆ ಎಂದು ತಿಳಿಯಬೇಕು.

ಜೀವನು ಅಸ್ವತಂತ್ರ ಕರ್ತೃವಾಗಿರುವುದಾದಲ್ಲಿ ಕರ್ತೃವೆಂದು ಹೇಳಿರುವುದು ಹೇಗೆ ? ಸ್ವತಂತ್ರನಾಗಿರುವವನೇ ಕರ್ತೃವಷ್ಟೇ ಎಂಬ ಆಶಂಕೆಗೆ ಸಮಾಧಾನ—

**ಓಂ ಯಥಾ ಚ ತಕ್ಷೋಭಯಥಾ ಓಂ (೨-೩-೪೦)**

यथा तक्षा उभयथा कारयितृनियतत्वेन कर्तृत्वेन चोच्यते तथा ज्ञोऽपीशनियतोऽपि कर्तोच्यत इत्यर्थः । चस्तु दार्ष्टान्तिकसमुच्चायकः ॥

किं तक्षवदस्य कर्तृत्वशक्तिः स्वाधीना । नेत्याह—

॥ ॐ परात्तु तच्छ्रुतेः ॐ ॥ २-३-४१

तुरेव । शक्तिरिति विभज्य अस्ति । ज्ञस्य कर्तृत्वशक्तिः परादेव ईशाधीनैव । तच्छ्रुतेः । "कर्तृत्वं कारणत्वं च" इतीशाधीनत्वश्रुतेरित्यर्थः ॥

एवं तर्हीशस्यैव स्यात् कर्तृत्वम् । न ज्ञस्येति पुनः शास्त्रवैयर्थ्यमित्यत आह—

---

**ಸೂತ್ರಾರ್ಥ**

ಹೇಗೆ ಒಬ್ಬ ಬಡಗಿಯು, ಉಭಯಥಾ–ಕೆಲಸಮಾಡಿಸುವ ಯಜಮಾನನ ನಿಯಮಕ್ಕೊಳಪಟ್ಟವನೆಂದೂ, ಹಾಗೆಯೇ ಕರ್ತೃವೆಂದೂ ಹೇಳಲ್ಪಡುವನೋ ಹಾಗೆ ಜೀವನೂ ಭಗವಂತನ ನಿಯಮಕ್ಕೊಳಪಟ್ಟವನೆಂದೂ ಕರ್ತೃವೆಂದೂ ಹೇಳಲ್ಪಡುವನೆಂದು ಅರ್ಥ. 'ಚ' ಶಬ್ದವು ದಾರ್ಷ್ಟಾಂತಿಕನಾದ ಜೀವನ ಸಮುಚ್ಚಯವನ್ನು ಹೇಳುವುದು.

ಬಡಗಿಗೆ ಕರ್ತೃತ್ವಸಾಮರ್ಥ್ಯವು ಸ್ವಾಧೀನವಾಗಿರುವಂತೆ ಜೀವನಿಗೂ ಕರ್ತೃತ್ವಸಾಮರ್ಥ್ಯವು ಸ್ವಾಧೀನವೇ ? ಎಂಬ ಪ್ರಶ್ನೆಗೆ ಅಲ್ಲನೆಂದು ಉತ್ತರ ನೀಡುವ ಸೂತ್ರ—

ಓಂ ಪರಾತ್ತು ತಚ್ಛ್ರುತೇಃ ಓಂ (೨–೩–೪೧)

**ಸೂತ್ರಾರ್ಥ**

'ತು' ಶಬ್ದಕ್ಕೆ ಏವ ಎಂದು ಅರ್ಥ. 'ಶಕ್ತಿವಿಪರ್ಯಯಾತ್' (ಬ್ರ ಸೂ. ೨–೩–೩೮) ಎಂಬ ಸೂತ್ರದಿಂದ 'ಶಕ್ತಿಃ' ಎಂದು ಪದವನ್ನು ವಿಭಾಗಿಸಿ ಅನುವೃತ್ತಿ ಮಾಡಿಕೊಳ್ಳಬೇಕು. ಜೀವನ ಕರ್ತೃತ್ವಶಕ್ತಿಯು, ಪರಾದೇವ–ಭಗವಂತನಿಗೆ ಅಧೀನವಾಗಿಯೇ ಇದೆ. ತಚ್ಛ್ರುತೇಃ–'ಕರ್ತೃತ್ವಂ ಕರಣತ್ವಂ ಚ' ಎಂದು ಭಗವದಧೀನತ್ವವನ್ನು ಹೇಳುವ ಶ್ರುತಿಯಿಂದ ಎಂದು ಅರ್ಥ.

## ॥ ॐ कृतप्रयत्नापेक्षस्तु विहितप्रतिषेधावैयर्थ्यादिभ्यः ॐ ॥ २-३-४२

तुरेव । पर इत्यनुषज्यते । कृतमिति कर्मोच्यते । प्रयत्नेत्युपलक्षणम् । आदिपदाद्वैषम्यादि गृह्यते । जीवानादिकर्मप्रयत्नयोग्यतापेक्ष एव परः ज्ञं प्रेरयतीति शेषः । किमशक्त्या नेत्याह । विहितेति । विधिनिषेधशास्त्रावैयर्थ्याय । स्वस्य वैषम्यनैर्घृण्यनिरासायेति चार्थः । एतदर्थमेव कर्माद्यपेक्षेति भावः । प्रागुक्तावैषम्यादि अत्र आदिपदेन स्मारितमिति ध्येयम् ॥ १७ ॥

---

ಹಾಗಾದಲ್ಲಿ ಭಗವಂತನಿಗೇ ಕರ್ತೃತ್ವವಿದೆಯೆಂದಾಯಿತು ಹೊರತು ಜೀವನಿಗಲ್ಲ. ಆದ್ದರಿಂದ ಶಾಸ್ತ್ರವೈಯರ್ಥ್ಯದೋಷವು ಪುನಃ ಬರುವುದು ಎಂಬ ಆಕ್ಷೇಪಕ್ಕೆ ಸಮಾಧಾನ—

## ಓಂ ಕೃತಪ್ರಯತ್ನಾಪೇಕ್ಷಸ್ತು ವಿಹಿತಪ್ರತಿಷೇಧಾವೈಯರ್ಥ್ಯಾದಿಭ್ಯಃ ಓಂ (೨–೩–೪೨)

**ಸೂತ್ರಾರ್ಥ**

'ತು' ಶಬ್ದಕ್ಕೆ ಏವ ಎಂದು ಅರ್ಥ. 'ಪರ' ಎಂಬ ಪದವು ಅನುವೃತ್ತವಾಗುವುದು. 'ಕೃತ' ಎಂಬ ಪದವು ಕರ್ಮ ಎಂಬ ಅರ್ಥವನ್ನು ಹೇಳುವುದು. 'ಪ್ರಯತ್ನ' ಎಂಬ ಪದವು ಉಪಲಕ್ಷಣ. 'ಆದಿ' ಪದದಿಂದ 'ಅವೈಷಮ್ಯ' ಮೊದಲಾದವುಗಳನ್ನು ಗ್ರಹಿಸಬೇಕು. ಜೀವನ ಅನಾದಿ ಕರ್ಮ, ಪ್ರಯತ್ನ, ಯೋಗ್ಯತೆ ಇವುಗಳನ್ನು ಅಪೇಕ್ಷಿಸಿಯೇ ಭಗವಂತನು ಜೀವನನ್ನು ಪ್ರೇರಿಸುವನು. 'ಭಗವಂತನು ಜೀವನನ್ನು ಪ್ರೇರಿಸುವನು' ಎಂಬ ಶೇಷವನ್ನು ಇಲ್ಲಿ ಸೇರಿಸಲಾಗಿದೆ. ಭಗವಂತನು ಕರ್ಮಾದಿಗಳನ್ನು ಅಪೇಕ್ಷಿಸುವುದು ಸಾಮರ್ಥ್ಯವಿಲ್ಲದಿರುವುದರಿಂದೇನು ? ಎಂಬ ಶಂಕೆಗೆ ಅಲ್ಲವೆಂದು ಉತ್ತರ ಕೊಡುವ ಸೂತ್ರಭಾಗ 'ವಿಹಿತ' ಎಂದು. ವಿಧಿ-ನಿಷೇಧ ಶಾಸ್ತ್ರಗಳು ವ್ಯರ್ಥವಾಗದಿರುವುದಕ್ಕಾಗಿ ; 'ತನಗೆ ವೈಷಮ್ಯನೈರ್ಘೃಣ್ಯಗಳನ್ನು ನಿರಾಕರಿಸಲು' ಎಂದು 'ಚ' ಶಬ್ದದ ಅರ್ಥ. ತನಗೆ ವೈಷಮ್ಯನೈರ್ಘೃಣ್ಯಗಳ ಪರಿಹಾರಕ್ಕಾಗಿಯೇ ಭಗವಂತನು ಕರ್ಮಾದಿಗಳನ್ನು ಅಪೇಕ್ಷಿಸುವುದು ಎಂದು ಭಾವ. ಹಿಂದೆ ಹೇಳಲ್ಪಟ್ಟ ವೈಷಮ್ಯಾದಿಗಳಿಲ್ಲದಿರುವುದು ಇಲ್ಲಿ 'ಆದಿ' ಪದದಿಂದ ಜ್ಞಾಪಿತವಾಗಿದೆ ಎಂದು ತಿಳಿಯಬೇಕು.

अंशाधिकरणम्—१८

## ॥ ॐ अंशो नानाव्यपदेशादन्यथा चापि दाशकितवादित्वमधीयत एके ॐ ॥ २–३–४३

अत्र ज्ञस्येशांशत्वानंशत्वश्रुत्यविरोध उच्यते । ज्ञ इत्यस्ति । परस्येत्यनुषङ्गः । अन्यथा चेति पूर्वत्रोत्तरत्र चान्वेति । अपिरादित्वमपीत्यन्वेति । ज्ञो जीवः परस्यांशः तद्गर्भवासित्वेन तदन्तर्भूतत्वात् । अंश इवांशः पितापुत्रादिसम्बन्धैः केवलं तदुपजीवकत्वेन तच्छेषभूत इत्यर्थः । यद्वा ततो न्यूनत्वे सति किञ्चित्तत्सदृशरूपांश इत्यर्थः ।

---

ಅಂಶಾಧಿಕರಣ—೧೮

## ಓಂ ಅಂಶೋ ನಾನಾವ್ಯಪದೇಶಾದನ್ಯಥಾ ಚಾಪಿ ದಾಶಕಿತವಾದಿತ್ವಮಧೀಯತ ಏಕೇ ಓಂ (೨–೩–೪೩)

**ಅಧಿಕರಣದ ವಿಷಯ ಮತ್ತು ಸೂತ್ರಾರ್ಥ**

ಈ ಅಧಿಕರಣದಲ್ಲಿ ಜೀವನು ಈಶನ ಅಂಶನೆಂದೂ, ಅಂಶನಲ್ಲವೆಂದೂ ಹೇಳುವ ಶ್ರುತಿಗಳಿಗೆ ಅವಿರೋಧವನ್ನು ಹೇಳಲಾಗುವುದು. 'ಜ್ಞಃ' ಎಂಬ ಪದವು ಅಧ್ಯಾಹೃತವಾಗುವುದು. 'ಪರಸ್ಯ' ಎಂಬ ಪದವು ಅನುವೃತ್ತವಾಗುವುದು. 'ಅನ್ಯಥಾ ಚ' ಎಂಬ ಪದಗಳು [1]ಹಿಂದೆ ಮತ್ತು ಮುಂದೆ—ಎರಡೂ ಕಡೆ ಅನ್ವಯವನ್ನು ಪಡೆಯುತ್ತವೆ. 'ಅಪಿ' ಶಬ್ದವು 'ದಾಶಕಿತವಾದಿತ್ವಮಪಿ' ಎಂದು ಅನ್ವಯವನ್ನು ಹೊಂದುವುದು. ಜ್ಞಃ—ಜೀವನು, ಪರಸ್ಯ—ಭಗವಂತನ, ಅಂಶಃ—ಅಂಶನು. ಪರಮಾತ್ಮನ ಗರ್ಭವಾಸಿಯಾಗಿದ್ದು ಅವನ ಅಂತರ್ಭಾವವನ್ನು ಪಡೆದಿರುವುದರಿಂದ. ಅಂಶ ಎಂದರೆ ಅಂಶದಂತೆ. ಪಿತಾ-ಪುತ್ರ ಮೊದಲಾದ ಸಂಬಂಧಗಳಿಂದ ಆ ಭಗವಂತನಿಗೆ ಅಧೀನವಾಗಿರುವುದರಿಂದ ಅವನಿಗೆ ಶೇಷಭೂತನಾಗಿದ್ದಾನೆ ಎಂದು ಅರ್ಥ. ಅಥವಾ ಭಗವಂತನ ಅಂಶನೆಂದರೆ ಭಗವದಪೇಕ್ಷಯಾ ನ್ಯೂನನಾಗಿ, ಭಗವಂತನಿಂದ ಕಿಂಚಿತ್ ಸದೃಶನಾಗಿದ್ದಾನೆ ಎಂದು ಅರ್ಥ.

---

1. "ಅನ್ಯಥಾ ಚ ವ್ಯಪದೇಶಾತ್, ಅನ್ಯಥಾ ಚ ದಾಶಕಿತವಾದಿತ್ವಮಧೀಯತ ಏಕೇ" ಹೀಗೆ ಎರಡೂ ಕಡೆ.

कुतः नानाव्यपदेशादन्यथा च व्यपदेशादित्यन्वयः । "नाना ह्येनं व्यपदिशन्ति पितेति पुत्रेति भ्रातेति च" इति श्रुतौ पितापुत्रत्वादि-नानाप्रकारेण सम्बन्धव्यपदेशात् । नासावस्य कुतश्चनेति नैवांशो न सम्बन्ध इति चान्यथा च सम्बन्धाभावेन च व्यपदेशादित्यर्थः । तदुभयबलाज्जीवः केवलं परेणोपकार्य एव न कदाचित्तस्योपकर्तेति तदुपजीवकरूपांश इति ज्ञायते । उपकार्यत्वेन सम्बन्धव्यपदेशस्योप-कर्तृत्वाभावेन सम्बन्धाभावस्य चोपपत्तेरिति भावः । अयं च हेतु-राद्येऽर्थे । अन्त्ये त्वन्यथा च दाशकितवादित्वमधीयत इति एके

---

### ಮೇಲೆ ಹೇಳಿದ ಎರಡು ವಿಧವಾದ ಅಂಶತ್ವಗಳಲ್ಲಿ ಮೊದಲನೆಯದನ್ನು ಸಾಧಿಸುವ ಸೂತ್ರಾಂಶದ ವಿವರಣೆ

ಹೀಗೆ ಜೀವನು ಭಗವಂತನ ಅಂಶವಾಗಿರುವುದರಲ್ಲಿ ಆಧಾರವೇನೆಂಬ ಪ್ರಶ್ನೆಗೆ ಉತ್ತರ—ನಾನಾವ್ಯಪದೇಶಾತ್, ಅನ್ಯಥಾ ಚ ವ್ಯಪದೇಶಾತ್ ಎಂದು ಅನ್ವಯಿಸಬೇಕು. "ನಾನಾ ಹ್ಯೇನಂ ವ್ಯಪದಿಶಂತಿ ಪಿತೇತಿ ಪುತ್ರೇತಿ ಭ್ರಾತೇತಿ ಚ" ಎಂಬ ಶ್ರುತಿಯಲ್ಲಿ, ಜೀವನು ಭಗವಂತನ [2]ಪಿತೃವಾಗಿದ್ದಾನೆ, ಪುತ್ರನಾಗಿದ್ದಾನೆ, ಇತ್ಯಾದಿಯಾಗಿ ನಾನಾರೀತಿಯಾಗಿ ಭಗವಂತನ ಸಂಬಂಧಗಳನ್ನು ಹೇಳಿರುವುದರಿಂದ, ಮತ್ತು [3]'ನಾಸಾವಸ್ಯ ಕುತಶ್ಚನ' ಎಂದೂ, 'ನೈವಾಂಶೋ ನ ಸಂಬಂಧಃ' ಎಂದೂ ಅನ್ಯಥಾ ಚ_ಸಂಬಂಧವಿಲ್ಲವೆಂದೂ ಹೇಳಿರುವುದರಿಂದ ಎಂದು ಅರ್ಥ. ಈ ಎರಡೂ ಶ್ರುತಿಗಳ ಆಧಾರದಿಂದ ಜೀವನು ಭಗವಂತನಿಂದ ಉಪಕೃತನಷ್ಟೇ ಹೊರತು ಭಗವಂತನಿಗೆ ಎಂದೂ ಉಪಕಾರಕನಲ್ಲವಾದ್ದರಿಂದ ಭಗವಂತನ ಅಂಶ ಎಂದರೆ ಅವನನ್ನು ಆಶ್ರಯಿಸಿರುವವನು ಎಂದು ತಿಳಿಯುವುದು. ಭಗವಂತನಿಂದ ಉಪಕಾರವನ್ನು ಹೊಂದುವುದರಿಂದ ಭಗವಂತನ ಸಂಬಂಧವಿದೆಯೆಂಬ ವ್ಯವಹಾರವೂ, ಭಗವಂತನಿಗೆ ಉಪಕಾರಕನಲ್ಲದಿರುವುದರಿಂದ ಸಂಬಂಧವಿಲ್ಲವೆಂಬ ವ್ಯವಹಾರವೂ ಯುಕ್ತವೆಂದು ಭಾವ. ಅಂಶಶಬ್ದಕ್ಕೆ ಹಿಂದೆ ಹೇಳಿರುವ ಎರಡು ಅರ್ಥಗಳಲ್ಲಿ ಮೊದಲನೆಯ ಅರ್ಥವನ್ನು ವಿವಕ್ಷಿಸಿದಾಗ ಈ ಮೇಲೆ ಹೇಳಿರುವ ನಾನಾವ್ಯಪದೇಶ ಮತ್ತು ಅನ್ಯಥಾ ವ್ಯಪದೇಶಗಳು ಹೇತುವಾಗುವವು.

---

2. ಭಗವಂತನನ್ನು ಯಥಾವತ್ತಾಗಿ ತಿಳಿದ ಜೀವನು ಭಗವಂತನ ಅಭಿವ್ಯಕ್ತಿಗೆ ಕಾರಣವಾದುದರಿಂದ ಭಗವಂತನ ಪಿತೃವೆಂದು ಶ್ರುತಿಯ ಭಾವ.

3. ಪರಮಾತ್ಮನು ಜೀವನಿಂದ ಯಾವ ರೀತಿಯಿಂದಲೂ ಉಪಕೃತನಲ್ಲವೆಂದು ತಾತ್ಪರ್ಯ.

शाखिनः । ज्ञस्य जीवस्य "ब्रह्म दाशा ब्रह्म कितवा ब्रह्मैवेमे दाशाः" इति ब्रह्माभेदमधीयते । अन्यथा च अन्यः परोऽन्यो जीव इति भेदं चाधीयत एके यतोऽत इति योज्यम् । ईशजीवयोर्भेदाभेदोक्त्यन्यथानुपपत्त्या भेदमुपेत्याभेदस्थाने तन्न्यूनत्वे सति किञ्चित् तत्सदृशरूपांशत्वं निवेश्यते । अभेदस्य बाधादिति भावः । टीकायामन्यथेति पदमुत्तरेण योजितम् । तत्त्वप्रदीपे तु पूर्वेण । पक्षद्वयेऽपि भाष्ये स्वारस्यदर्शनाच्चन्द्रिकायामुभयत्र योजितम् । यद्वा टीकारीत्या नानाव्यपदेशादित्येवार्थेऽर्थे हेतुः ॥

---

**ಇನ್ನೊಂದು ರೀತಿಯ ಅಂಶತ್ವವನ್ನು ಸಮರ್ಥಿಸುವ ಸೂತ್ರಾಂಶದ ವಿವರಣೆ :**

ಎರಡನೆಯ ಅಂಶತ್ವವನ್ನು ಸಮರ್ಥಿಸುವ ಸೂತ್ರಾಂಶ—'ಅನ್ಯಥಾ ಚ ದಾಶ-ಕಿತವಾದಿತ್ವಮಧೀಯತೇ' ಎಂದು. ಏಕೇ—ಕೆಲವು ಶಾಖಿಗಳು,[1] ಜ್ಞಸ್ಯ—ಜೀವನಿಗೆ, "ಬ್ರಹ್ಮ ದಾಶಾಃ ಬ್ರಹ್ಮ ಕಿತವಾಃ ಬ್ರಹ್ಮೈವೇಮೇ ದಾಶಾಃ"[2] ಎಂದು ಬ್ರಹ್ಮನ ಅಭೇದವನ್ನು ಅಧ್ಯಯನಮಾಡುವರು. ಅನ್ಯಥಾ ಚ—"ಅನ್ಯಃ ಪರೋ ಅನ್ಯೋ ಜೀವಃ" ಎಂದು ಭೇದವನ್ನೂ ಅವರು ಅಧ್ಯಯನ ಮಾಡುವರು. ಹೀಗೆ ಅಧ್ಯಯನ ಮಾಡುವ ಕಾರಣದಿಂದ ಎಂಬರ್ಥದ 'ಯತಃ', 'ಅತಃ' ಎಂಬ ಪದಗಳನ್ನು ಇಲ್ಲಿ ಯೋಜಿಸಿಕೊಳ್ಳಬೇಕು. ಈಶ-ಜೀವರಿಗೆ ಪರಸ್ಪರವಾಗಿ ಭೇದವನ್ನೂ, ಅಭೇದವನ್ನೂ ಹೇಳಿರುವುದು ಜೀವನು ಭಗವಂತನ ಅಂಶವೆಂದು ಹೇಳದಿದ್ದಲ್ಲಿ ಉಪಪನ್ನವಾಗಲಾರದು. ಈಶ-ಜೀವರಿಗೆ ಭೇದವನ್ನು ಅಂಗೀಕರಿಸಿ, ಅಭೇದವು ಬಾಧಿತವಾದುದರಿಂದ ಅದನ್ನು ತಿರಸ್ಕರಿಸಿ ಅದರ ಸ್ಥಾನದಲ್ಲಿ 'ಭಗವಂತನಿಂದ ನ್ಯೂನನೂ, ಭಗವಂತನಿಂದ ಕಿಂಚಿತ್ ಸದೃಶನೂ ಆಗಿದ್ದಾನೆ' ಎಂಬರ್ಥದ ಅಂಶತ್ವವನ್ನು ಸೇರಿಸಬೇಕೆಂದು ಭಾವ.

**'ಅನ್ಯಥಾ' ಪದದ ಯೋಜನೆಗಳಲ್ಲಿ ವೈವಿಧ್ಯ**

ತತ್ತ್ವಪ್ರಕಾಶಿಕೆಯಲ್ಲಿ 'ಅನ್ಯಥಾ' ಪದವನ್ನು ಮುಂದಿನ ಪದದೊಂದಿಗೆ ಯೋಜಿಸಲಾಗಿದೆ. ತತ್ತ್ವಪ್ರದೀಪದಲ್ಲಾದರೋ ಹಿಂದಿನ ಪದದೊಂದಿಗೆ ಯೋಜಿಸಲಾಗಿದೆ. ಎರಡು ಪಕ್ಷಗಳಿಗೂ ಭಾಷ್ಯವು ಅನುಕೂಲವಾಗಿರುವುದೆಂದು ತೋರುವುದರಿಂದ ಚಂದ್ರಿಕಾದಲ್ಲಿ ಎರಡು ಕಡೆಗೂ ಅನ್ವಯಿಸಲಾಗಿದೆ. ಅಥವಾ, ಜೀವನು

---

1. ಅಥರ್ವಣಶಾಖಿಗಳು.

2. ದಾಶರೆಂದರೆ ಬೆಸ್ತರು. ಕಿತವರು—ಜೂಜುಗಾರರು. ಇವರೆಲ್ಲರೂ ಬ್ರಹ್ಮನೆಂದೇ ಶ್ರುತಿಯ ಮೇಲುನೋಟದ ಅರ್ಥ. ಇವರೆಲ್ಲರೂ ಬ್ರಹ್ಮನ ಅಂಶರೆಂದು ಆಂತರ್ಯ.

23

इतश्चैवमित्याह—

॥ ॐ मन्त्रवर्णात ॐ ॥ २-३-४४

अपेराकर्षः । "पादोऽस्य विश्वा भूतानि" इति श्रुतेश्च ज्ञः परस्यांश इत्यर्थः । पादोंऽश इत्येकार्थत्वात् ॥

इतश्चैवमित्याह—

॥ ॐ अपि स्मर्यते ॐ ॥ २-३-४५

"ममैवांशो जीवलोके जीवभूतः" इति ज्ञः परस्यांश इति स्मर्यते । अतोऽप्यंश इत्यर्थः । जीवलोके जीवदेहे जीवभूतो जीवाख्यश्चेतन इत्यर्थः ॥

---

ಈಶ್ವರನ ಅಂಶವೆಂದರೆ ಈಶ್ವರನನ್ನು ಉಪಜೀವಿಸಿಕೊಂಡಿರುವವನೆಂಬ ಅಂಶಪದದ ಪದದ ಮೊದಲನೆಯ ಅರ್ಥವನ್ನು ಸಾಧಿಸಲು 'ನಾನಾ ವ್ಯಪದೇಶಾತ್' ಎಂದಿಷ್ಟೇ ತತ್ತ್ವಪ್ರಕಾಶಿಕಾ ರೀತ್ಯಾ ಹೇತುವಾಗಿದೆ.

ಈ ಮುಂದಿನ ಕಾರಣದಿಂದಲೂ ಜೀವನು ಈಶ್ವರನ ಅಂಶನೆಂದು ಸಾಧಿಸುವ ಸೂತ್ರ—

ಓಂ ಮಂತ್ರವರ್ಣಾತ್ ಓಂ (೨-೩-೪೪)

**ಸೂತ್ರಾರ್ಥ**

'ಅಪಿ' ಶಬ್ದವನ್ನು ಹಿಂದಿನ ಸೂತ್ರದಿಂದ ಇಲ್ಲಿಗೆ ತೆಗೆದುಕೊಳ್ಳಬೇಕು. 'ಪಾದೋಽಸ್ಯ ವಿಶ್ವಾ ಭೂತಾನಿ' ಎಂಬ ಶ್ರುತಿಯಿಂದಲೂ ಜೀವನು ಪರಮಾತ್ಮನ ಅಂಶನಾಗಿದ್ದಾನೆ. 'ಪಾದ' ಮತ್ತು 'ಅಂಶ' ಎಂಬ ಪದಗಳು ಸಮಾನಾರ್ಥಕ ಗಳಾಗಿವೆ.

ಈ ಮುಂದಿನ ಕಾರಣದಿಂದಲೂ ಜೀವನು ಈಶ್ವರನ ಅಂಶವೆಂದು ಹೇಳುವ ಸೂತ್ರ—

ಓಂ ಅಪಿ ಸ್ಮರ್ಯತೇ ಓಂ (೨-೩-೪೫)

**ಸೂತ್ರಾರ್ಥ**

"ಮಮೈವಾಂಶೋ ಜೀವಲೋಕೇ ಜೀವಭೂತಃ" (ಗೀ. ೧೫-೭) ಎಂದು ಜೀವನು ಪರಮಾತ್ಮನ ಅಂಶನೆಂದು ಸ್ಮೃತಿಯಲ್ಲಿ ಹೇಳಲಾಗಿದೆ. ಆದ್ದರಿಂದಲೂ ಜೀವನು ಈಶ್ವರನ ಅಂಶನೆಂದು ಅರ್ಥ. ಜೀವಲೋಕೇ–ಜೀವದೇಹದಲ್ಲಿ, ಜೀವ ಭೂತಃ–ಜೀವನೆಂಬ ಚೇತನನು ನನ್ನದೇ ಅಂಶವಾಗಿದ್ದಾನೆ ಎಂದು ಸ್ಮೃತಿಯ ಅರ್ಥ.

ज्ञस्य परांशत्वे मत्स्यादेर्ज्ञस्य च साम्यं स्यात् अनंशत्वश्रुति-विरोधश्चेत्यत आह—

॥ ॐ प्रकाशादिवन्नैवं परः ॐ ॥ २-३-४६

परो मत्स्यादिरूपी परमात्मा एवं भिन्नांशो नेत्यर्थः । कथं प्रकाशादिवत् । प्रकाशाद्यभिमानिवत् । यथा प्रकाशः कालाग्न्याद्यभिमानी खद्योताभिमानिवन्न । कालाग्न्याद्यभिमानिनस्तेजोजलपृथिव्यभिमानिवह्न्यादेरभिन्नांशत्वात्, खद्योताभिमानिनां तु भिन्नांशत्वात् । तथा मत्स्यादेः परमात्मस्वरूपत्वाज्जीवस्य तु भिन्नांशत्वान्न

---

ಜೀವನು ಭಗವಂತನ ಅಂಶನಾಗಿರುವುದಾದರೆ ಮತ್ಸ್ಯಾದಿ ಅವತಾರಗಳಿಗೂ ಜೀವನಿಗೂ ಸಾಮ್ಯ ಬಂದೀತು. ಜೀವನು ಈಶ್ವರನ ಅಂಶನಲ್ಲ ಎಂದು ಹೇಳುವ ಶ್ರುತಿಯು ವಿರೋಧವೂ ಬಂದೀತು ಎಂಬ ಆಶಂಕೆಗೆ ಸಮಾಧಾನ—

ಓಂ ಪ್ರಕಾಶಾದಿವನ್ನೈವಂ ಪರಃ ಓಂ(೨-೩-೪೬)

**ಸೂತ್ರಾರ್ಥ**

ಪರಃ–ಮತ್ಸ್ಯಾದಿರೂಪನಾದ ಪರಮಾತ್ಮನು, ಏವಂ–ಜೀವನಂತೆ ಭಿನ್ನಾಂಶನು, ನ–ಅಲ್ಲ ಎಂದು ಅರ್ಥ. ಹೇಗೆ ? ಎಂಬ ಪ್ರಶ್ನೆಗೆ ಉತ್ತರ—ಪ್ರಕಾಶಾದಿವತ್–ಪ್ರಕಾಶಾದಿಗಳ ಅಭಿಮಾನಿಗಳಂತೆ. ಹೇಗೆ, ಪ್ರಕಾಶ ಅಂದರೆ [1]ಕಾಲಾಗ್ನಿ ಮೊದಲಾದವುಗಳ ಅಭಿಮಾನಿಗಳು ಖದ್ಯೋತ ಮೊದಲಾದವುಗಳ ಅಭಿಮಾನಿಗಳಂತೆ ಅಲ್ಲವೋ ಹಾಗೆ. ಕಾಲಾಗ್ನಿ ಮೊದಲಾದವುಗಳ ಅಭಿಮಾನಿದೇವತೆಗಳು ತೇಜಸ್ಸು, ಜಲ ಮತ್ತು ಪೃಥಿವೀ ಇವುಗಳ ಅಭಿಮಾನಿಗಳಾದ ವಹ್ನಿ ಮೊದಲಾದವರ ಅಭಿನ್ನಾಂಶರಾಗಿದ್ದಾರೆ. ಖದ್ಯೋತಾಭಿಮಾನಿಗಳು ಭಿನ್ನಾಂಶರಾಗಿದ್ದಾರೆ. ಹೀಗೆಯೇ, ಮತ್ಸ್ಯಾದಿ ಅವತಾರಗಳು ಭಗವಂತನಿಂದ ಅಭಿನ್ನವಾಗಿವೆ. ಆದರೆ ಜೀವನು ಭಿನ್ನಾಂಶನಾಗಿದ್ದಾನೆ.

---

1. ಕಾಲಾಗ್ನಿ ಮತ್ತು ಖದ್ಯೋತಗಳಾಗಲೀ ಅವುಗಳ ಅಭಿಮಾನಿದೇವತೆಗಳಾಗಲೀ ತೇಜಸ್ಸಿನ ಅಥವಾ ತೇಜೋಽಭಿಮಾನಿ ದೇವತೆಗಳ ಅಂಶವೆಂದು ಹೇಳುವ ರೂಢಿಯಿದ್ದರೂ ಕಾಲಾಗ್ನಿ ಮತ್ತು ಅದರ ಅಭಿಮಾನಿದೇವತೆಗಳು ತೇಜಸ್ಸು ಮತ್ತು ಅದರ ಅಭಿಮಾನಿ ದೇವತೆಯ ಅಭಿನ್ನಾಂಶರೂ, ಖದ್ಯೋತ ಮತ್ತು ಅದರ ಅಭಿಮಾನಿದೇವತೆಗಳು ಭಿನ್ನಾಂಶರೂ ಆಗಿರುವಂತೆ ಮತ್ಸ್ಯಾದಿ ಅವತಾರಗಳು ಮತ್ತು ಜೀವರು ಪರಮಾತ್ಮನ ಅಂಶವೆಂದು ಹೇಳಿದರೂ ಆ ಅವತಾರಗಳು ಭಗವಂತನಿಂದ ಅಭಿನ್ನವಾದ ಅಂಶಗಳೆಂದೂ, ಜೀವರು ಭಿನ್ನರಾದ ಅಂಶಗಳೆಂದೂ, ಆದ್ದರಿಂದಲೇ ಇಬ್ಬರಿಗೂ ಸಾಮ್ಯವಿಲ್ಲವೆಂದು ಭಾವ.

*

तयोः साम्यमिति । एतेनानंशत्वश्रुतिः स्वरूपांशत्वनिषेधपरेत्युक्तं भवति ।

मत्स्यादेर्जीवस्य चाभिन्नांशत्वं किं न स्यात् ? दृष्टान्तमात्रस्यासाधकत्वादत आह—

॥ ॐ स्मरन्ति च ॐ ॥ २ ३-४७

जीवस्य भिन्नांशत्वं मत्स्यादेरभिन्नांशत्वम् । स्मृतिकर्तार इत्यर्थः । "एते स्वांशकलाः पुंसः कृष्णस्तु भगवान् स्वयम्" इति स्मृतौ । पूर्वं वराहादेर्जीवस्य च "जगृहे पौरुषं रूपम्" इत्यादिना "ऋषयो मनवो देवा" इत्यादिना च विष्णवंशत्वमुक्त्वा एते पुंसः पुरुषस्य स्वरूपांशविभागाः कृष्णस्तु कृष्ण एव मूलरूप्येव इति

---

ಆದ್ದರಿಂದ ಮತ್ಸ್ಯಾದಿ ಅವತಾರಗಳಿಗೂ ಜೀವನಿಗೂ ಸಾಮ್ಯವಿಲ್ಲ ಇದರಿಂದ, ಅನಂಶತ್ವಶ್ರುತಿಯು ಜೀವನು ಪರಮಾತ್ಮನ ಅಭಿನ್ನಾಂಶವೆನ್ನುವುದನ್ನು ನಿಷೇಧಿಸುವ ಅಭಿಪ್ರಾಯವುಳ್ಳದ್ದೆಂದು ಹೇಳಿದಂತಾಗುವುದು.

ಕೇವಲ ದೃಷ್ಟಾಂತವು ಯಾವುದನ್ನೂ ಸಾಧಿಸಲಾರದಾದ್ದರಿಂದ ಮತ್ಸ್ಯಾದಿಗಳೂ ಜೀವನೂ ಭಗವಂತನ ಅಭಿನ್ನಾಂಶರೆಂದೇ ಏಕಾಗಬಾರದು ಎಂಬ ಆಶಂಕೆಗೆ ಸಮಾಧಾನ ನೀಡುವ ಸೂತ್ರ—

ಓಂ ಸ್ಮರಂತಿ ಚ ಓಂ (೨-೩-೪೭)

**ಸೂತ್ರಾರ್ಥ**

ಜೀವನು ಭಗವಂತನ ಭಿನ್ನಾಂಶನೆಂದೂ, ಮತ್ಸ್ಯಾದಿಗಳು ಅಭಿನ್ನಾಂಶರೆಂದೂ ಸ್ಮೃತಿಕರ್ತೃಗಳು ಸ್ಮರಿಸಿದ್ದಾರೆ ಎಂದು ಅರ್ಥ "ಏತೇ ಸ್ವಾಂಶಕಲಾಃ ಪುಂಸಃ ಕೃಷ್ಣಸ್ತು ಭಗವಾನ್ ಸ್ವಯಮ್" (ಭಾಗ. ೧-೩-೨೮) ಎಂಬ ಸ್ಮೃತಿಯಲ್ಲಿ, ಈ ವಾಕ್ಯಕ್ಕೂ ಹಿಂದೆ "ಜಗೃಹೇ ಪೌರುಷಂ ರೂಪಂ" ಇತ್ಯಾದಿ ಶ್ಲೋಕದಿಂದ ಮತ್ತು "ಋಷಯೋ ಮನಯೋ ದೇವಾಃ" ಎಂಬ ಶ್ಲೋಕದಿಂದ ಕ್ರಮವಾಗಿ ವರಾಹಾದ್ಯವತಾರಗಳು ಮತ್ತು ಜೀವರು ಭಗವದಂಶರೆಂದು ಹೇಳಿದ ನಂತರ, ಏತೇ—ಈ ವರಾಹಾದ್ಯವತಾರಗಳೆಂಬ, ಪುಂಸಃ—ಪುರುಷನಾದ ನಾರಾಯಣನ, ಸ್ವಾಂಶಕಲಾಃ—ಸ್ವರೂಪಾಂಶಭೂತವಾದ ವಿಭಾಗಗಳು, ಕೃಷ್ಣಸ್ತು—ಕೃಷ್ಣನೇ, ಮೂಲರೂಪವೇ ಎಂಬುದಾಗಿ ವರಾಹಾದಿ ಅವತಾರಗಳು ಭಗವಂತನ ಅಭಿನ್ನಾಂಶರೆಂದು ಸ್ಮರಿಸಿದ್ದಾರೆ. ಆದರೆ ಜೀವರನ್ನು

वराहादेरभिन्नांशत्वं, जीवानां तु "अतः परं यदव्यक्तम्" इति स्मृतौ भिन्नांशत्वं, तथा "स्वांशश्चाथो विभिन्नांश" इति स्मृतौ स्वरूपास्वरूपलक्षणयोरुक्तेः तयोश्च "न त्वत्समोऽस्ति" इति स्मृत्या ईशे अनुभवेन जीवे सिद्धतया तयोर्भिन्नाभिन्नांशत्वं स्मरन्तीति भावः। बहुस्मृतिद्योतनाय बहुवचनम्। न केवलं दृष्टान्त इति चार्थ इत्येके। अन्यथा चापि दाशकितवेत्युक्तहेतूनां स्मृतीनां च समुच्चयार्थश्च इत्यन्ये। स्मर्यत इति ज्ञस्येशांशत्वे स्मृतिरुक्ता। अत्र तु भिन्नांशत्व इति भेदः।

---

ಕುರಿತು "ಅತಃ ಪರಂ ಯದವ್ಯಕ್ತಂ"[1] (ಭಾಗ. ೧-೩-೩೨) ಎಂಬ ಸ್ಮೃತಿಯಲ್ಲಿ ಭಗವಂತನ ಭಿನ್ನಾಂಶರೆಂದು ಹೇಳಲಾಗಿದೆ. ಹಾಗೆಯೇ "ಸ್ವಾಂಶಶ್ಚಾಥೋ ವಿಭಿನ್ನಾಂಶಃ" ಎಂಬ ಸ್ಮೃತಿಯಲ್ಲಿ ಸ್ವರೂಪಾಂಶ ಮತ್ತು ಭಿನ್ನಾಂಶಗಳ ಲಕ್ಷಣವನ್ನು ಹೇಳಿರುವುದರಿಂದ, ಆ ಲಕ್ಷಣಗಳು "ನ ತ್ವತ್ಸಮೋಽಸ್ತಿ" (ಗೀ. ೧೧-೪೩) ಎಂಬ ಸ್ಮೃತಿಯಿಂದ ಈಶನಲ್ಲೂ, ಅನುಭವದಿಂದ ಜೀವನಲ್ಲೂ ಸಿದ್ಧವಾಗಿರುವುದರಿಂದ ಭಗವದವತಾರಗಳನ್ನು ಸ್ವರೂಪಾಂಶವೆಂದೂ ಜೀವರನ್ನು ಭಿನ್ನಾಂಶರೆಂದೂ ಸ್ಮರಿಸಿದ್ದಾರೆ ಎಂದು ಭಾವ.

### ಬಹುವಚನ ಮತ್ತು 'ಚ' ಶಬ್ದಗಳ ಭಾವ, ಸೂತ್ರವು ಪುನರುಕ್ತವಲ್ಲ

ಜೀವರು ಭಿನ್ನಾಂಶರೆಂದೂ, ಭಗವದವತಾರಗಳು ಸ್ವರೂಪಾಂಶವೆಂದೂ ಪ್ರತಿಪಾದಿಸುವ ಅನೇಕ ಸ್ಮೃತಿಗಳಿರುವುದನ್ನು ಸೂಚಿಸಲು 'ಸ್ಮರಂತಿ' ಎಂದು ಬಹುವಚನವನ್ನು ಪ್ರಯೋಗಿಸಲಾಗಿದೆ. ಪ್ರಸಕ್ತ ವಿಷಯದಲ್ಲಿ ಹಿಂದಿನ ಸೂತ್ರದಲ್ಲಿ ಹೇಳಿದ ದೃಷ್ಟಾಂತಗಳು ಮಾತ್ರ ಸಾಧಕವಲ್ಲ. ಸ್ಮೃತಿಗಳೂ ಇವೆ ಎಂದು 'ಚ' ಶಬ್ದದ ಅರ್ಥವೆಂದು ಕೆಲವರು ಹೇಳುವರು. "ಅನ್ಯಥಾ ಚಾಪಿ ದಾಶಕಿತವ" (ಬ್ರ. ಸೂ. ೨-೩-೪೩) ಎಂಬಲ್ಲಿ ಹೇಳಿರುವ ಯುಕ್ತಿಗಳ ಮತ್ತು ಸ್ಮೃತಿಗಳ ಸಮುಚ್ಚಯವು 'ಚ' ಶಬ್ದದ ಅರ್ಥವೆಂದು ಮತ್ತೆ ಕೆಲವರು ಹೇಳುವರು. "ಅಪಿ ಸ್ಮರ್ಯತೇ" (ಬ್ರ. ಸೂ. ೨-೩-೪೫) ಎಂಬ ಸೂತ್ರದಲ್ಲಿ ಜೀವರು ಭಗವಂತನ ಅಂಶರೆಂಬ ವಿಷಯದಲ್ಲಿ ಸ್ಮೃತಿಗಳನ್ನು ಉದಾಹರಿಸಲಾಗಿದೆ. ಇಲ್ಲಾದರೋ ಜೀವರು ಭಿನ್ನಾಂಶರೆಂಬ ವಿಷಯದಲ್ಲಿ ಸ್ಮೃತಿಗಳನ್ನು ಹೇಳಲಾಗಿದೆ ಎಂದು ಎರಡೂ ಸೂತ್ರಗಳಿಗೆ ಭೇದವಿದೆ.

---

1. ಅತಃ ಪರಂ ಯದವ್ಯಕ್ತಂ ಅವ್ಯೂಢಗುಣಬೃಂಹಿತವರ್ | ಅದೃಷ್ಟಾಶ್ರುತವಸ್ತುತ್ವಾತ್ ಸ ಜೀವೋ ಯಃ ಪುನರ್ಭವಃ || ಎಂದು ಸ್ಮೃತಿ. ಪರಮಪುರುಷನಿಂದಲೂ ಜಡದಿಂದಲೂ ಭಿನ್ನನೂ, ಸೂಕ್ಷ್ಮನೂ, ಅನಾದಿಕಾಲದಿಂದ ಸತ್ತ್ವಾದಿಗುಣಗಳಿಂದ ಅವಿಯುಕ್ತನೂ, ಪರಮಾತ್ಮನ ಶ್ರವಣ, ಮನನ, ದರ್ಶನಗಳಿಲ್ಲದಿರುವುದರಿಂದ ಪುನಃ ಪುನಃ ಜನನ-ಮರಣಗಳನ್ನು ಪಡೆಯುವವನೂ ಆದ ಸಂಸಾರಿಯು ಜೀವನೆನಿಸುವನು ಎಂದು ಶ್ಲೋಕದ ಭಾವ.

इतश्चैवं पर इत्याह—

॥ ॐ अनुज्ञापरिहारौ देहसम्बन्धाज्ज्योतिरादिवत् ॐ ॥ २–३–४८

ज्ञस्येत्यस्ति । परादित्यन्वेति । अनुज्ञेति तत्पूर्वकप्रवृत्तिरुच्यते । परिहारो बन्धनिवृत्तिः । ज्ञस्य जीवस्य देहसम्बन्धाद्धेतोः परादनुज्ञापरिहारौ ईशानुज्ञाधीनप्रवृत्तिमोक्षौ स्तः । ज्योतिरादिवत् । यथा ज्योतिषो ह्यक्ष्यभिमानिनोऽपभ्रष्टस्य श्लेष्माभिमानिनश्च तत्तद्देहसम्बन्धात् सूर्यवरुणानुज्ञया तत्तत्प्रवृत्त्यादिस्तथेत्यर्थः । उपलक्षणमेतत् । परस्य च मत्स्यादेर्देहसम्बन्धाद्धेतोस्तौ न स्त इति नैवं पर इत्यपि ध्येयम् । कथम् ? ज्योतिरादिवत् । ज्योतिषः प्रभाभिमानिनो

---

ಈ ಮುಂದೆ ಹೇಳುವ ಕಾರಣದಿಂದಲೂ ಭಗವದವತಾರಗಳು ಜೀವರಂತಲ್ಲ ಎಂದು ಹೇಳುವ ಸೂತ್ರ—

ಓಂ ಅನುಜ್ಞಾಪರಿಹಾರೌ ದೇಹಸಂಬಂಧಾತ್ ಜ್ಯೋತಿರಾದಿವತ್ ಓಂ (೨-೩-೪೮)

**ಸೂತ್ರಾರ್ಥ**

'ಜ್ಞಸ್ಯ' ಎಂಬ ಪದವು ಅನುವೃತ್ತವಾಗುವುದು. 'ಪರಾತ್' ಎಂಬ ಪದವು ಅನ್ವಯವನ್ನು ಪಡೆಯುವುದು. 'ಅನುಜ್ಞಾ' ಪದವು ಭಗವದಾಜ್ಞಾಧೀನವಾದ ಪ್ರವೃತ್ತಿಯೆಂಬ ಅರ್ಥವನ್ನು ಹೇಳುವುದು. 'ಪರಿಹಾರ'ವೆಂದರೆ ಸಂಸಾರದ ನಿವೃತ್ತಿ. ಜ್ಞಸ್ಯ–ಜೀವನಿಗೆ, ದೇಹಸಂಬಂಧಾತ್–ಶರೀರಸಂಬಂಧದ ನಿಮಿತ್ತದಿಂದಾಗಿ, ಪರಾತ್ ಅನುಜ್ಞಾಪರಿಹಾರೌ–ಭಗವಂತನ ಆಜ್ಞಾಧೀನವಾದ ಪ್ರವೃತ್ತಿ ಮತ್ತು ಮೋಕ್ಷಗಳು ಉಂಟಾಗುವುವು. ಜ್ಯೋತಿರಾದಿವತ್–ಹೇಗೆ ಜ್ಯೋತಿ ಎಂದರೆ ಚಕ್ಷುರಭಿಮಾನಿಯಾದ ಅಪಭ್ರಷ್ಟದೇವತೆಗೂ, ಶ್ಲೇಷ್ಮಾಭಿಮಾನಿ ದೇವತೆಗೂ ಆಯಾಯಾ ದೇಹಸಂಬಂಧದ ಪ್ರಯುಕ್ತ ಕ್ರಮವಾಗಿ ಸೂರ್ಯ ಮತ್ತು ವರುಣನ ಅನುಜ್ಞೆಯಿಂದ ಆಯಾಯಾ ಪ್ರವೃತ್ತಿಗಳುಂಟಾಗುವವೋ ಹಾಗೆ ಎಂದು ಅರ್ಥ. ಇದು ಉಪಲಕ್ಷಣ. ಮತ್ಸ್ಯಾದಿರೂಪಗಳನ್ನು ತಳೆದ ಭಗವಂತನಿಗೆ ದೇಹಸಂಬಂಧದ ಪ್ರಯುಕ್ತ ಇತರಾಧೀನವಾದ ಪ್ರವೃತ್ತಿ ಮತ್ತು ಮೋಕ್ಷಗಳು ಇಲ್ಲದಿರುವುದರಿಂದ ಭಗವಂತನು ಜೀವರಂತಲ್ಲ ಎಂದೂ ತಿಳಿಯಬೇಕು. ಹೇಗೆ ? ಎಂಬ ಪ್ರಶ್ನೆಗೆ ಉತ್ತರ—ಜ್ಯೋತಿರಾದಿವತ್–

अमृताभ्यभिमानिनश्च यथा सूर्याद्यनुज्ञाधीनप्रवृत्त्यादिर्नास्तीत्यक्ष्याद्यभिमानिना साम्यं नास्ति तथेति योज्यम् । पूर्वं स्वरूपांशत्वभिन्नांशत्वयोः प्रकाशादिरत्रांश्यनुग्राह्यत्वाननुग्राह्यत्वयोर्ज्योतिरादिदृष्टान्त इति भेदः ॥

इतश्च न साम्यं तयोरित्याह—

॥ ॐ असन्ततेश्चाऽव्यतिकरः ॐ ॥ २-३-४९

शक्त्येति शेषः । ज्ञस्यासन्ततेः शक्त्या असन्ततेरपूर्णत्वाच्चेत्यर्थः । मत्स्यादेश्च तद्भावादिति बोध्यम् । अव्यतिकरो नैवं पर इत्युक्तस्याव्यतिकरो व्यत्यासाभाव इत्यर्थः ॥

---

ಜ್ಯೋತಿ ಎಂದರೆ ಪ್ರಕಾಶಾಭಿಮಾನಿಗೂ, ಅಮೃತಸಮುದ್ರಾಭಿಮಾನಿಗೂ ಹೇಗೆ ಸೂರ್ಯ ಮತ್ತು ವರುಣರ ಆಜ್ಞೆಗೆ ಅಧೀನವಾದ ಪ್ರವೃತ್ತ್ಯಾದಿಗಳಿಲ್ಲವೋ, ಆದ್ದರಿಂದಲೇ ಚಕ್ಷುರಾದ್ಯಭಿಮಾನಿ ದೇವತೆಗಳ ಸಾಮ್ಯವಿಲ್ಲವೋ ಹಾಗೆ—ಎಂದು ಯೋಜಿಸಬೇಕು.

**'ಪ್ರಕಾಶಾದಿವನ್ನೈವಂ ಪರಃ' (ಬ್ರ. ಸೂ. ೨-೩-೪೭) ಎಂಬ ಸೂತ್ರದಿಂದ ಈ ಸೂತ್ರಕ್ಕೆ ಭೇದ**

ಹಿಂದೆ ಸ್ವರೂಪಾಂಶ-ಭಿನ್ನಾಂಶಗಳಾಗಿರುವ ವಿಷಯದಲ್ಲಿ ಪ್ರಕಾಶ ಮೊದಲಾದವುಗಳನ್ನು ದೃಷ್ಟಾಂತವನ್ನಾಗಿ ನೀಡಲಾಯಿತು. ಇಲ್ಲಿ ಅಂಶಿಯಿಂದ ಅನುಗ್ರಾಹ್ಯವಾಗಿರುವುದು, ಆಗಿಲ್ಲದಿರುವುದು—ಈ ವಿಷಯದಲ್ಲಿ ಜ್ಯೋತಿರಾದಿಗಳನ್ನು ದೃಷ್ಟಾಂತವನ್ನಾಗಿ ನೀಡಲಾಗಿದೆ ಎಂದು ಎರಡೂ ಸೂತ್ರಗಳಿಗೆ ಭೇದವಿದೆ.

ಈ ಮುಂದಿನ ಕಾರಣದಿಂದಲೂ ಜೀವರಿಗೂ ಭಗವದವತಾರಗಳಿಗೂ ಹೋಲಿಕೆಯಿಲ್ಲವೆಂದು ಹೇಳುವ ಸೂತ್ರ—

ಓಂ ಅಸಂತತೇಶ್ಚಾವ್ಯತಿಕರಃ ಓಂ (೨-೩-೪೯)

**ಸೂತ್ರಾರ್ಥ**

'ಶಕ್ತ್ಯಾ' ಎಂಬ ಶೇಷವನ್ನು ಸೇರಿಸಬೇಕು. ಜೀವನು, ಅಸಂತತೇಃ_ಶಕ್ತಿಯ ವಿಷಯದಲ್ಲಿ ಅಪೂರ್ಣನಾಗಿರುವುದರಿಂದಲೂ ಎಂದು ಅರ್ಥ. ಮತ್ಸ್ಯಾದಿ ಅವತಾರಗಳಿಗಾದರೋ ಶಕ್ತಿಯ ವಿಷಯದಲ್ಲಿ ಪೂರ್ಣತೆ ಇರುವುದರಿಂದ—ಎಂದು ತಿಳಿಯಬೇಕು. ಅವ್ಯತಿಕರಃ_'ಭಗವಂತನು ಜೀವರಂತಲ್ಲ' ಎಂದು ಹೇಳಿದುದಕ್ಕೆ ಅವ್ಯತಿಕರ ಎಂದರೆ ವ್ಯತ್ಯಾಸವಿಲ್ಲವೆಂದು ಅರ್ಥ.

इतश्चैवमित्याह—

## ॥ ॐ आभास एव च ॐ ॥ २-३-५०

ज्ञ आभास एव ईशप्रतिबिम्ब एव । मत्स्यादिस्तु न तथा । अतश्चाव्यतिकर इति योज्यम् । योगविभागः प्रथमानिर्देशश्चोत्तरार्थः ॥ १८ ॥

अदृष्टाधिकरणम्— १९

## ॥ ॐ अदृष्टानियमात् ॐ ॥ २-३-५१

अत्र ज्ञस्येशाभासत्वानाभासत्वपरयोः "रूपं रूपं प्रतिरूपो बभूव" इति "नैवांशो न सम्बन्ध" इति श्रुत्योरविरोध उच्यते ।

---

ಈ ಮುಂದಿನ ಕಾರಣದಿಂದಲೂ ಮತ್ಸ್ಯಾದಿಗಳು ಜೀವರಂತೆ ಭಿನ್ನಾಂಶರಲ್ಲ ಎಂದು ಹೇಳುವ ಸೂತ್ರ—

## ಓಂ ಆಭಾಸ ಏವ ಚ ಓಂ (೨-೩-೫೦)

**ಸೂತ್ರಾರ್ಥ**

ಜೀವನು, ಆಭಾಸ ಏವ–ಈಶ್ವರನ ಪ್ರತಿಬಿಂಬನೇ ಆಗಿದ್ದಾನೆ. ಮತ್ಸ್ಯಾದಿಗಳಾದರೋ ಹಾಗಿಲ್ಲ. ಆದ್ದರಿಂದಲೂ ಹಿಂದೆ ಹೇಳಿದುದಕ್ಕೆ ವ್ಯತ್ಯಾಸವಿಲ್ಲವೆಂದು ಯೋಜಿಸಬೇಕು.

ಮುಂದಿನ ಸೂತ್ರದ ದೃಷ್ಟಿಯಿಂದ, ಈ ಸೂತ್ರವನ್ನು ಹಿಂದಿನ ಸೂತ್ರದಿಂದ ವಿಭಜಿಸಲಾಗಿದೆ ಮತ್ತು ಪ್ರಥಮಾವಿಭಕ್ತ್ಯಂತವಾಗಿ ನಿರ್ದೇಶಿಸಲಾಗಿದೆ.

ಅದೃಷ್ಟಾಧಿಕರಣ—೧೯

## ಓಂ ಅದೃಷ್ಟಾನಿಯಮಾತ್ ಓಂ (೨-೩-೫೧)

**ಅಧಿಕರಣದ ವಿಷಯ ಮತ್ತು ಸೂತ್ರಾರ್ಥ**

ಈ ಅಧಿಕರಣದಲ್ಲಿ ಜೀವನು ಈಶನ ಪ್ರತಿಬಿಂಬನೆಂದು ಹೇಳುವ "ರೂಪಂ ರೂಪಂ ಪ್ರತಿರೂಪೋ ಬಭೂವ" (ಕಠ. ೨-೫-೯) ಎಂಬ ಶ್ರುತಿಗೂ ಈಶನ ಪ್ರತಿಬಿಂಬನಲ್ಲವೆಂದು ಹೇಳುವಂತೆ ತೋರುವ "ನೈವಾಂಶೋ ನ ಸಂಬಂಧಃ" (ಭಾಲ್ಲವೇಯ ಶ್ರುತಿ) ಎಂಬ ಶ್ರುತಿಗೂ ವಿರೋಧವಿಲ್ಲವೆಂದು ಹೇಳಲಾಗುವುದು.

आभास एवेति ज्ञ इति चास्ति । अदृष्टेति विद्याद्युच्यते । ज्ञ आभास एव ईशप्रतिबिम्ब एव । अदृष्टानियमात् विद्याकर्मसंस्कारादिवैचित्र्यादित्यर्थः । बिम्बावैचित्र्येऽपि तत्तदीयानाद्यदृष्टवैचित्र्येण देवदानवमानवादिवैचित्र्यसम्भवेन प्रतिबिम्बत्वं युक्तमिति भावः । स्थानविशेषादित्यतो वैलक्षण्यं तत्रैव वक्ष्यते ॥

रागादिवैचित्र्यादेव प्रतिबिम्बवैचित्र्यमस्त्वित्यत आह—

॥ ॐ अभिसन्ध्यादिष्वपि चैवम् ॐ ॥ २—३—५२

अभिसन्धिरिच्छा । रागद्वेषमोहादिदोषेष्वप्येवं वैचित्र्यम् । अदृष्टानियमात् । न केवलमाभास इत्यपेरर्थः । रागादिवैचित्र्यं

---

'ಆಭಾಸ ಏವ', 'ಜ್ಞಃ' ಎಂಬ ಪದಗಳು ಅನುವೃತ್ತವಾಗುವುವು 'ಅದೃಷ್ಟ' ಪದವು ವಿದ್ಯೆ ಮೊದಲಾದವುಗಳನ್ನು ಹೇಳುವುದು. ಜೀವನು, ಆಭಾಸ ಏವ–ಈಶ್ವರನ ಪ್ರತಿಬಿಂಬನಾಗಿಯೇ ಇದ್ದಾನೆ. ಅದೃಷ್ಟಾನಿಯಮಾತ್–ವಿದ್ಯೆ, ಕರ್ಮ, ಸಂಸ್ಕಾರ ಮೊದಲಾದ ವೈಚಿತ್ರ್ಯದಿಂದ ಎಂದು ಅರ್ಥ. ಬಿಂಬನಾದ ಪರಮಾತ್ಮನಲ್ಲಿ ಯಾವ ವೈಚಿತ್ರ್ಯವಿಲ್ಲದಿದ್ದರೂ ಜೀವರ ಅನಾದಿಯಾದ ಅದೃಷ್ಟದ ವೈಚಿತ್ರ್ಯದಿಂದ ಜೀವರಲ್ಲಿ ದೇವತೆಗಳು, ದಾನವರು, ಮಾನವರು ಇವೇ ಮೊದಲಾದ ವೈಚಿತ್ರ್ಯಗಳು ಸಂಭವಿಸುವುದರಿಂದ ಜೀವನು ಭಗವಂತನ ಪ್ರತಿಬಿಂಬನೆನ್ನುವುದು ಯುಕ್ತವೆಂದು ಭಾವ. 'ಸ್ಥಾನವಿಶೇಷಾತ್' (ಬ್ರ ಸೂ ೩-೨-೩೪) ಎಂಬ ಸೂತ್ರದಿಂದ ಈ ಸೂತ್ರಕ್ಕಿರುವ ವ್ಯತ್ಯಾಸವನ್ನು ಅಲ್ಲಿಯೇ ಹೇಳಲಾಗುವುದು.

ರಾಗದ್ವೇಷಾದಿಗಳ ವೈಚಿತ್ರ್ಯದಿಂದಲೇ ಪ್ರತಿಬಿಂಬವೈಚಿತ್ರ್ಯವಿರಬಹುದು ಎಂಬ ಶಂಕೆಗೆ ಉತ್ತರ—

ಓಂ ಅಭಿಸಂಧ್ಯಾದಿಷ್ವಪಿ ಚೈವಮ್ ಓಂ (೨-೩-೫೨)

**ಸೂತ್ರಾರ್ಥ**

'ಅಭಿಸಂಧಿ' ಎಂದರೆ ಇಚ್ಛೆ ವಿದ್ಯೆ, ಕರ್ಮ ಮೊದಲಾದವುಗಳ ವೈಚಿತ್ರ್ಯದಿಂದಲೇ ರಾಗ, ದ್ವೇಷ, ಮೋಹ ಮೊದಲಾದವುಗಳ ವಿಷಯದಲ್ಲೂ ಹೀಗೆ ವೈಚಿತ್ರ್ಯವಿರುವುದು. ಪ್ರತಿಬಿಂಬ ವೈಚಿತ್ರ್ಯದಲ್ಲಿ ಮಾತ್ರವೇ ಅದೃಷ್ಟವೈಚಿತ್ರ್ಯವು ಕಾರಣವಲ್ಲವೆಂದು 'ಅಪಿ' ಶಬ್ದದ ಅರ್ಥ ರಾಗಾದಿಗಳ ವೈಚಿತ್ರ್ಯವೇಕೆ ಎಂಬ ಶಂಕೆಯುದ್ಭವಿಸಿದಾಗ ಅದೃಷ್ಟವೈಚಿತ್ರ್ಯವನ್ನೇ ಅನುಸರಿಸಬೇಕಾಗುವುದೆಂದು ಭಾವ.

कथमित्यपेक्षायां तस्यैवानुसर्तव्यत्वादिति भावः । पूर्वपूर्वरागादिवैचित्र्यादेव तदस्त्वित्यत उक्तं चेति । प्रतिक्षणं वैचित्र्यं चेति समुच्चीयते । रागाद्यवैचित्र्येऽप्येकस्मिन् पुंसि प्रतिक्षणं दृश्यमानं वैचित्र्यमदृष्टानियमादेव वाच्यमित्यर्थः ॥

तर्हि भूम्यादिस्थानवैचित्र्येणैव सुरनरवैचित्र्यमस्त्वित्याशङ्कयाह—

॥ ॐ प्रदेशादिति चेन्नान्तर्भावात् ॐ ॥
२–३–५३

एवमित्यस्ति । स्वर्गादिप्रदेशावैचित्र्यादेवं वैचित्र्यमाभासस्या-

---

**'ಚ' ಶಬ್ದದ ಸ್ವಾರಸ್ಯ**

ಹಿಂದುಹಿಂದಿನ ರಾಗಾದಿಗಳ ವೈಚಿತ್ರ್ಯದಿಂದಲೇ ಮುಂದಿನ ರಾಗಾದಿಗಳ ವೈಚಿತ್ರ್ಯವಿರಬಹುದು ಎಂಬ ಶಂಕೆಗೆ ಉತ್ತರವಾಗಿ 'ಚ' ಎಂದು ಹೇಳಲಾಗಿದೆ. ಪ್ರತಿಕ್ಷಣದಲ್ಲೂ ಉಂಟಾಗುವ ವೈಚಿತ್ರ್ಯದ ಸಮುಚ್ಚಯವನ್ನು 'ಚ' ಶಬ್ದವು ಹೇಳುವುದು. ರಾಗಾದಿಗಳ ವೈಚಿತ್ರ್ಯವಿಲ್ಲದಿದ್ದರೂ ಒಬ್ಬ ಮನುಷ್ಯನಲ್ಲಿ ಪ್ರತಿಕ್ಷಣ ದಲ್ಲೂ ಕಂಡುಬರುವ ವೈಚಿತ್ರ್ಯವು ಅದೃಷ್ಟದ ವೈಚಿತ್ರ್ಯದಿಂದಲೇ ಎಂದು ಹೇಳ ಬೇಕಾಗುವುದು ಎಂದು ಅರ್ಥ.

ಹಾಗಾದರೆ, ಭೂಮಿ, ಸ್ವರ್ಗ ಮೊದಲಾದ ಸ್ಥಾನದ ವೈಚಿತ್ರ್ಯದಿಂದಲೇ ದೇವ, ಮನುಷ್ಯ ಮೊದಲಾದ ವೈಚಿತ್ರ್ಯಗಳಿರಲಿ ಎಂಬ ಆಶಂಕೆಗೆ ಸಮಾಧಾನ—

ಓಂ ಪ್ರದೇಶಾದಿತಿ ಚೇನ್ನಾಂತರ್ಭಾವಾತ್ ಓಂ
(೨–೩–೫೩)

**ಸೂತ್ರಾರ್ಥ**

'ಏವಂ' ಎಂಬ ಪದವು ಅನುವೃತ್ತವಾಗುವುದು. ಸ್ವರ್ಗ ಮೊದಲಾದ ಪ್ರದೇಶ ಗಳ ವೈಚಿತ್ರ್ಯದಿಂದ ಪ್ರತಿಬಿಂಬರಾದ ಜೀವರ ವೈಚಿತ್ರ್ಯವಿರಲಿ ಎಂದರೆ ಅದು

स्त्विति चेन्न । अन्तर्भावात् । तद्वैचित्र्यस्याप्यदृष्टवैचित्र्य एवान्तर्भावादित्यर्थः । निर्निमित्तं तद्वैचित्र्यायोगादिति भावः ॥ १९ ॥

इति श्रीमद्राघवेन्द्रयतिकृत तन्त्रदीपिकायां द्वितीयाध्यायस्य
तृतीयः पादः समाप्तः ॥ श्रीकृष्णार्पणमस्तु ॥

---

ಸರಿಯಲ್ಲ. ಅಂತರ್ಭಾವಾತ್–ಅದೃಷ್ಟವೈಚಿತ್ರ್ಯದಲ್ಲೇ ಪ್ರದೇಶವೈಚಿತ್ರ್ಯವೂ ಅಂತರ್ಭಾವ ಹೊಂದುವುದರಿಂದ ಎಂದು ಅರ್ಥ. ಕಾರಣವೇ ಇಲ್ಲದೆ ಪ್ರದೇಶವೈಚಿತ್ರ್ಯವಿರಲು ಸಾಧ್ಯವಿಲ್ಲದಿರುವುದರಿಂದ ಎಂದು ಭಾವ.

ಶ್ರೀಮದ್ರಾಘವೇಂದ್ರಯತಿಗಳು ರಚಿಸಿರುವ ತಂತ್ರದೀಪಿಕೆಯಲ್ಲಿ
ದ್ವಿತೀಯಾಧ್ಯಾಯದ ತೃತೀಯಪಾದವು ಸಮಾಪ್ತವಾಯಿತು.

ಶ್ರೀಕೃಷ್ಣಾರ್ಪಣಮಸ್ತು

# अथ द्वितीयाध्यायस्य चतुर्थः पादः

यावद्विकारन्त्विवत्युक्तयुक्त्युपेतयाऽऽकाशादेरुत्पत्तिश्रुत्या अनुत्पत्तिश्रुतिर्गौणी चेत् तर्ह्युपादानाभावादियुक्त्युपेतया प्राणाद्यनुत्पत्तिश्रुत्या तदनित्यत्वश्रुतिर्गौणीति शङ्कां व्युदसितुमत्र पादे सयुक्तिकश्रुत्यविरोध उच्यते ॥

प्राणाधिकरणम्— १

## ॥ ॐ तथा प्राणाः ॐ ॥ २-४-१

अत्र नये "एतस्माज्जायते प्राणः" इतीन्द्रियजन्मश्रुतेः "प्राणा एवानादय" इति तदजन्मश्रुत्या "नोपादानं हीन्द्रियाणाम्" इति

---

# ದ್ವಿತೀಯಾಧ್ಯಾಯ—ಚತುರ್ಥಪಾದ

**ಪಾದಪ್ರತಿಪಾದ್ಯ ವಿಷಯ**

'ಯಾವದ್ವಿಕಾರಂ ತು' (ಬ್ರ. ಸೂ. ೨-೩-೭) ಎಂಬ ಸೂತ್ರದಲ್ಲಿ ಹೇಳಿದ ಯುಕ್ತಿಯಿಂದ ಸಹಿತವಾದ, ಆಕಾಶಾದಿಗಳಿಗೆ ಉತ್ಪತ್ತಿಯುಂಟೆಂದು ಹೇಳುವ ಶ್ರುತಿಯಿಂದಾಗಿ ಆಕಾಶಾದಿಗಳಿಗೆ ಉತ್ಪತ್ತಿಯಿಲ್ಲವೆಂದು ಹೇಳುವ ಶ್ರುತಿಯು ಗೌಣವಾಗುವುದಾದಲ್ಲಿ, ಉಪಾದಾನಕಾರಣವಿಲ್ಲದಿರುವಿಕೆಯೇ ಮೊದಲಾದ ಯುಕ್ತಿಗಳಿಂದ ಸಹಿತವಾದ ಪ್ರಾಣಾದಿಗಳ ಅನುತ್ಪತ್ತಿಯನ್ನು ಹೇಳುವ ಶ್ರುತಿಯಿಂದಾಗಿ ಪ್ರಾಣಾದಿಗಳಿಗೆ ಅನಿತ್ಯತ್ವವನ್ನು ಹೇಳುವ ಶ್ರುತಿಯು ಗೌಣವೆಂದಾಗಬೇಕಾದೀತು ಎಂಬ ಆಶಂಕೆಯನ್ನು ನಿರಾಕರಿಸಲು ಈ ಪಾದದಲ್ಲಿ ಯುಕ್ತಿಸಹಿತವಾದ ಶ್ರುತಿಗಳ ಅವಿರೋಧವನ್ನು ಹೇಳಲಾಗುವುದು

ಪ್ರಾಣೋತ್ಪತ್ತ್ಯಧಿಕರಣ—೧

## ಓಂ ತಥಾ ಪ್ರಾಣಾಃ ಓಂ (೨-೪-೧)

**ಅಧಿಕರಣದ ವಿಷಯ ಮತ್ತು ಸೂತ್ರಾರ್ಥ**

ಈ ಅಧಿಕರಣದಲ್ಲಿ, "ಏತಸ್ಮಾತ್ ಜಾಯತೇ ಪ್ರಾಣಃ" (ಮುಂ. ೨-೧-೩) ಎಂಬ ಇಂದ್ರಿಯಗಳಿಗೆ ಉತ್ಪತ್ತಿಯನ್ನು ಹೇಳುವ ಶ್ರುತಿಗೆ, 'ನೋಪಾದಾನಂ

युक्त्युपेतया अविरोध उच्यते । तथेति प्रागुक्तयुक्त्यनुकर्षणार्थम् । यथा वियदादयो जातास्तथा प्राणा इन्द्रियाणि ईशादेवोत्पत्तिमन्ति । अश्रुतेरित्याद्युक्तहेतुभ्य इत्यर्थः । अत्र प्राणा इतीन्द्रियाणि तदभिमानिनश्च । जनिरपि पराधीनविशेषरूपैव । सा च यथायोगमुपचयादिरूपा ध्येया । एवमग्रेऽपि ॥

ननु "प्राणा एव" इति श्रुतेरश्रुतेरिति कथमत आह—

॥ ॐ गौण्यसम्भवात् ॐ ॥ २ ४-२

अनादित्वश्रुतिर्गौणी, अनादिसूक्ष्मेन्द्रियपरा । असम्भवात् मुख्यानादित्वासम्भवात् । तथा "एतस्माज्जायते" इत्यादिश्रुत्य-

---

ಹೀಂದ್ರಿಯಾಣಾಂ' (ಭವಿಷ್ಯತ್ಪರ್ವ) ಎಂಬಲ್ಲಿ ಹೇಳಿರುವ ಉಪಾದಾನಕಾರಣವಿಲ್ಲವೆಂಬ ಯುಕ್ತಿಸಹಿತವಾದ 'ಪ್ರಾಣ ಏವ ಅನಾದಯಃ' (ಶಾಷಾಯಣಶ್ರುತಿ) ಎಂಬ ಇಂದ್ರಿಯಗಳಿಗೆ ಉತ್ಪತ್ತಿಯಿಲ್ಲವೆಂದು ಹೇಳುವ ಶ್ರುತಿಯ ಅವಿರೋಧವನ್ನು ಹೇಳಲಾಗುವುದು

ಹಿಂದೆ ವಿಯದಧಿಕರಣಾದಿಗಳಲ್ಲಿ ಹೇಳಿರುವ ಯುಕ್ತಿಗಳನ್ನು ಇಲ್ಲೂ ಗ್ರಹಿಸಬೇಕೆಂದು 'ತಥಾ' ಶಬ್ದವು ಸೂಚಿಸುವುದು. ಹೇಗೆ ಆಕಾಶಾದಿಗಳು ಉತ್ಪತ್ತಿಯುಳ್ಳವುಗಳೋ ಹಾಗೆ, ಪ್ರಾಣಾಃ—ಇಂದ್ರಿಯಗಳೂ, ಭಗವಂತನಿಂದಲೇ ಉತ್ಪತ್ತಿಯುಳ್ಳವು, 'ಅಶ್ರುತೇಃ' (೨-೧-೧) ಇತ್ಯಾದಿ ಸೂತ್ರಗಳಲ್ಲಿ ಹೇಳಿರುವ ಯುಕ್ತಿಗಳಿಂದ ಎಂದು ಅರ್ಥ. ಇಲ್ಲಿ ಪ್ರಾಣವೆಂದರೆ ಇಂದ್ರಿಯಗಳು ಮತ್ತು ಅವುಗಳ ಅಭಿಮಾನಿದೇವತೆಗಳು. ಉತ್ಪತ್ತಿಯೂ ಪರಾಧೀನವಿಶೇಷರೂಪವಾದದ್ದು. ಅದೂ ಕೂಡ, ಆಯಾ ವಸ್ತುವಿನ ಯೋಗ್ಯತೆಗೆ ಅನುಗುಣವಾಗಿ [1]ಉಪಚಯಾದಿರೂಪವಾದದ್ದು ಎಂದು ತಿಳಿಯಬೇಕು. ಹೀಗೆಯೇ ಮುಂದೂ ಕೂಡ.

'ಪ್ರಾಣಾ ಏವ ಅನಾದಯಃ' ಎಂಬ ಶ್ರುತಿ ಇರುವಾಗ ಇಂದ್ರಿಯಗಳು ಅನಾದಿಯೆಂದು ಹೇಳುವ ಶ್ರುತಿಯಿಲ್ಲವೆಂದು ಹೇಳಿದ್ದು ಹೇಗೆ ? ಎಂಬ ಆಶಂಕೆಗೆ ಉತ್ತರ—

ಓಂ ಗೌಣ್ಯಸಂಭವಾತ್ ಓಂ (೨-೪-೨)

---

1. ಇಂದ್ರಿಯಗಳಿಗೆ ಉತ್ಪತ್ತಿಯೆಂದರೆ ಉಪಚಯ, ವೃದ್ಧಿ ಅಥವಾ ಸ್ಥೂಲಭಾವವನ್ನು ಪಡೆಯುವಿಕೆ.

सम्भवादित्यर्थः । निरुपादानत्वादित्यधिकाशङ्कानिरासाय गौणीति पुनर्योगः । प्रागुक्तगौणत्वादन्यादृशगौणत्वोक्त्यर्थमयं योग इति केचित् ॥

इतश्चैवमित्याह—

॥ ॐ प्रतिज्ञानुपरोधाच्च ॐ ॥ २-४-३

"इदं सर्वमसृजत" इति प्रतिज्ञानुसाराच्च प्राणा उत्पत्तिमन्त इत्यर्थः । "स प्राणमसृजत", "स प्राणान्", "एतस्माज्जायते

**ಸೂತ್ರಾರ್ಥ**

ಇಂದ್ರಿಯಗಳು ಅನಾದಿಯೆಂದು ಹೇಳುವಂತೆ ತೋರುವ ಶ್ರುತಿಯು, ಗೌಣೀ—ಅನಾದಿ ಸೂಕ್ಷ್ಮೇಂದ್ರಿಯಪರವಾದುದು.1 ಅಸಂಭವಾತ್—ಮುಖ್ಯವಾದ ಅನಾದಿತ್ವವು ಅಸಂಭಾವಿತವಾದುದರಿಂದ. ಹಾಗೆಯೇ, 'ಏತಸ್ಮಾತ್ ಜಾಯತೇ' ಇತ್ಯಾದಿ ಶ್ರುತಿಗಳು ಇಂದ್ರಿಯಗಳಿಗೆ ಮುಖ್ಯವಾದ ಅನಾದಿತ್ವವಿದ್ದಲ್ಲಿ ಅನುಪಪನ್ನವಾಗುವುದರಿಂದ ಎಂದೂ ಅರ್ಥ. ಹಿಂದಿನ ಪಾದದಲ್ಲೇ ಇಂತಹ ಅನಾದಿತ್ವಶ್ರುತಿಗಳು ಗೌಣವೆಂದು ಹೇಳಿದ್ದರೂ, ಇಂದ್ರಿಯಗಳಿಗೆ ಉಪಾದಾನಕಾರಣವಿಲ್ಲದಿರುವುದರಿಂದ ಅನಾದಿಯೇ ಆಗಬೇಕು ಎಂಬ ಅಧಿಕ ಆಶಂಕೆಯನ್ನು ನಿರಾಕರಿಸಲು 'ಗೌಣ್ಯಸಂಭವಾತ್' ಎಂದು ಪುನಃ ಸೂತ್ರವನ್ನು ರಚಿಸಲಾಗಿದೆ. ಹಿಂದೆ ಹೇಳಿದ ಗೌಣತ್ವಕ್ಕಿಂತಲೂ ವಿಭಿನ್ನವಾದ ಗೌಣತ್ವವನ್ನು ಹೇಳುವ ಸಲುವಾಗಿ ಈ ಸೂತ್ರ ಬಂದಿದೆ ಎಂದೂ ಕೆಲವರು ಹೇಳುವರು.

ಈ ಮುಂದಿನ ಕಾರಣದಿಂದಲೂ ಇಂದ್ರಿಯಗಳು ಅನಾದಿಯಲ್ಲ ಎಂದು ಹೇಳುವ ಸೂತ್ರ—

ಓಂ ಪ್ರತಿಜ್ಞಾನುಪರೋಧಾಚ್ಚ ಓಂ (೨-೪-೩)

**ಸೂತ್ರಾರ್ಥ**

"ಇದಂ ಸರ್ವಮಸೃಜತ" (ತೈ. ೨-೬) ಎಂಬ ಪ್ರತಿಜ್ಞೆಗೆ ಅನುಸಾರವಾಗಿಯೂ ಇಂದ್ರಿಯಗಳು ಉತ್ಪತ್ತಿಯುಳ್ಳವು ಎಂದು ಅರ್ಥ. 'ಪ್ರಾಣಾ ಏವ ಅನಾದಯಃ' ಎಂಬ ಯುಕ್ತಿಸಹಿತವಾದ ವಿಶೇಷಶ್ರುತಿಗಿಂತಲೂ 'ಸ ಪ್ರಾಣಮಸೃಜತ', 'ಸ ಪ್ರಾಣಾನ್',

1. ಸೂಕ್ಷ್ಮರೂಪದಿಂದ ಇಂದ್ರಿಯಗಳು ಅನಾದಿನಿತ್ಯವೆಂದು ಹೇಳುವ ಅಭಿಪ್ರಾಯವುಳ್ಳದ್ದು.

प्राणः" इत्यादिविशेषश्रुतेः "प्राणा एवानादय" इति सयुक्तिक विशेषश्रुतितः प्राबल्यार्थं प्रागुक्तसामान्यश्रुतिस्मारणायायं योगः ॥ १ ॥

मनोऽधिकरणम्—२

## ॥ ॐ तत्प्राक्श्रुतेश्च ॐ ॥ २-४-४

अत्र "मनः सर्वेन्द्रियाणि च", "नित्यं मनोऽनादित्वात्" इत्यनयोर्मनोजन्माजन्मश्रुत्योरविरोध उच्यते । तदिति प्रस्तुत-प्राणोक्तिः । तत्प्रागित्युक्त्या मन इति लभ्यते । उत्पत्तिमदिति चास्ति । अनादीशादुत्पत्तिमत् । कुतः ? तेभ्यः प्राणेभ्यः प्राक् पूर्वं श्रुतेः । "एतस्माज्जायते प्राणो मनः सर्वेन्द्रियाणि च" इति

---

'ಏತಸ್ಮಾತ್ ಜಾಯತೇ ಪ್ರಾಣಃ' ಇತ್ಯಾದಿ ವಿಶೇಷ ಶ್ರುತಿಗಳಿಗೆ ಪ್ರಾಬಲ್ಯವನ್ನು ಸೂಚಿಸುವುದಕ್ಕಾಗಿ ಹಿಂದೆ ಹೇಳಿರುವ 'ಸ ಇದಂ ಸರ್ವಮಸೃಜತ' ಎಂಬ ಸಾಮಾನ್ಯ ಶ್ರುತಿಯನ್ನು ಸ್ಮರಣೆಗೆ ತಂದುಕೊಡಲು ಈ ಸೂತ್ರವನ್ನು ರಚಿಸಲಾಗಿದೆ.

ತತ್ಪ್ರಾಗಧಿಕರಣ—೨

## ಓಂ ತತ್ಪ್ರಾಕ್ ಶ್ರುತೇಶ್ಚ ಓಂ (೨-೪-೪)

**ಅಧಿಕರಣದ ವಿಷಯ ಮತ್ತು ಸೂತ್ರಾರ್ಥ**

ಈ ಅಧಿಕರಣದಲ್ಲಿ "ಮನಃ ಸರ್ವೇಂದ್ರಿಯಾಣಿ ಚ" (ಮು ೨-೧-೩) ಮತ್ತು "ನಿತ್ಯಂ ಮನೋಽನಾದಿತ್ವಾತ್" (ಗೌಪವನ ಶ್ರುತಿ) ಎಂಬ, ಮನಸ್ಸಿಗೆ ಜನ್ಮವಿದೆ–ಇಲ್ಲವೆಂದು ಹೇಳುವ ಶ್ರುತಿಗಳಿಗೆ ಅವಿರೋಧವನ್ನು ಹೇಳಲಾಗುವುದು. 'ತತ್' ಶಬ್ದವು ಹಿಂದಿನ ಸೂತ್ರದಲ್ಲಿ ಪ್ರಸ್ತುತವಾದ ಇಂದ್ರಿಯಗಳನ್ನು ಹೇಳುವುದು. 'ತತ್ಪ್ರಾಕ್' ಅಂದರೆ 'ಇಂದ್ರಿಯಗಳಿಗಿಂತ ಮುಂಚೆ' ಎಂದು ಹೇಳಿರುವುದರಿಂದ 'ಮನಸ್' ಎಂಬ ಪದವು ಲಭಿಸುವುದು. 'ಉತ್ಪತ್ತಿಮತ್' ಎಂಬ ಪದವು ಅಧ್ಯಾಹೃತವಾಗುವುದು. ಮನಸ್ಸು ಅನಾದಿಯಾದ ಭಗವಂತನಿಂದ ಉತ್ಪತ್ತಿಯನ್ನು ಪಡೆದಿದೆ. ಏಕೆಂದರೆ, ತೇಭ್ಯಃ–ಆ ಇಂದ್ರಿಯಗಳಿಗೂ, ಪ್ರಾಕ್–ಹಿಂದೆ, ಶ್ರುತೇಃ–'ಏತಸ್ಮಾಜ್ಜಾಯತೇ ಪ್ರಾಣಃ ಮನಃ ಸರ್ವೇಂದ್ರಿಯಾಣಿ ಚ' ಎಂಬುದಾಗಿ ಮನಸ್ಸಿಗೆ ಉತ್ಪತ್ತಿ ಇರುವುದು

तस्योत्पन्नत्वेन श्रवणादित्यर्थः । चशब्दोऽनुक्तसमुच्चये । तदनुत्पत्तिवचनमल्पोपचयकारणादिति वचनाच्चेत्यर्थः । तेन "नित्यं मनः" इत्यादिश्रुतिः सूक्ष्ममनःपरा । जन्मश्रुतिरुपचयरूपोत्पत्तिपरेति भावः । "वायोर्वाव रुद्र उदेति" इति वायोर्मनोजनिश्रुतिः द्वारपरेति न तद्विरोध इति ध्येयम् । तत्प्रागित्युक्तिः मनोरूपं विषयं पृथङ् मनसो विशिष्य जन्मोक्त्या जन्मश्रुतेरजन्मश्रुतितो निरवकाशत्वं पूर्वोत्पन्नत्वमल्पोपचयरूपोत्पत्तिभेदं च सूचयितुम् ॥ २ ॥

---

ಶ್ರುತವಾಗಿರುವುದರಿಂದ ಎಂದು ಅರ್ಥ 'ಚ' ಶಬ್ದವು ಅನುಕ್ತಸಮುಚ್ಚಯವನ್ನು ಹೇಳುವುದು 'ತದನುತ್ಪತ್ತಿವಚನಂ ಅಲ್ಪೋಪಚಯಕಾರಣಾತ್' (ವಾಯು ಪ್ರೋಕ್ತ) ಎಂಬ ವಚನದ ಆಧಾರದಿಂದಲೂ ಎಂದು ಅರ್ಥ. ಈ ಶ್ರುತಿಯಿಂದಾಗಿ 'ನಿತ್ಯಂ ಮನಃ' ಇತ್ಯಾದಿ ಶ್ರುತಿಯು ಸೂಕ್ಷ್ಮಮನಸ್ಸನ್ನು ಕುರಿತದ್ದು ; ಮನಸ್ಸಿಗೆ ಉತ್ಪತ್ತಿಯನ್ನು ಹೇಳುವ ಶ್ರುತಿಯು ಉಪಚಯರೂಪವಾದ ಉತ್ಪತ್ತಿಯ ತಾತ್ಪರ್ಯ ಉಳ್ಳದ್ದು ಎಂದು ಭಾವ 'ವಾಯೋರ್ವಾವ ರುದ್ರ ಉದೇತಿ' ಎಂಬುದಾಗಿ ವಾಯುವಿನಿಂದ ಮನಸ್ಸಿನ ಉತ್ಪತ್ತಿಯನ್ನು ಹೇಳುವ ಶ್ರುತಿಯು ವಾಯುದ್ವಾರಾ ಮನಸ್ಸಿನ ಉತ್ಪತ್ತಿಯನ್ನು ಹೇಳುವ ಅಭಿಪ್ರಾಯವುಳ್ಳದ್ದರಿಂದ ಭಗವಂತನಿಂದ ಮನಸ್ಸಿನ ಉತ್ಪತ್ತಿಯನ್ನು ಹೇಳುವ 'ಮನಃ ಸರ್ವೇಂದ್ರಿಯಾಣಿ ಚ' ಎಂಬ ಶ್ರುತಿಗೆ 'ವಾಯುರ್ವಾವ' ಎಂಬ ಶ್ರುತಿಯಿಂದ ವಿರೋಧವಿಲ್ಲವೆಂದು ತಿಳಿಯಬೇಕು.

### 'ತತ್ಪ್ರಾಕ್' ಎಂದು ಸೂತ್ರವಿನ್ಯಾಸದ ಪ್ರಯೋಜನ

ಈ ಅಧಿಕರಣದ ವಿಷಯ ಮನಸ್ಸು ; ಇತರ ಇಂದ್ರಿಯಗಳಿಂದ ಪ್ರತ್ಯೇಕವಾಗಿ ಮನಸ್ಸಿಗೆ ಉತ್ಪತ್ತಿಯನ್ನು ಹೇಳಿರುವುದರಿಂದ ಮನಸ್ಸಿಗೆ ಉತ್ಪತ್ತಿಯಿಲ್ಲವೆಂದು ಹೇಳುವ ಶ್ರುತಿಯ ದೃಷ್ಟಿಯಿಂದ ಮನಸ್ಸಿನ ಉತ್ಪತ್ತಿಯನ್ನು ಹೇಳುವ ಶ್ರುತಿಯು ನಿರವಕಾಶವಾಗಿದೆ ; ಮನಸ್ಸು ಇತರ ಇಂದ್ರಿಯಗಳಿಗಿಂತ ಮುಂಚೆ ಉತ್ಪನ್ನವಾಗಿದೆ ; ಮನಸ್ಸಿನ ಉತ್ಪತ್ತಿಯು ಇತರೇಂದ್ರಿಯಗಳ ಉತ್ಪತ್ತಿಗಿಂತ ವಿಲಕ್ಷಣವಾದ ಅಲ್ಪ ಉಪಚಯರೂಪವಾದ ಉತ್ಪತ್ತಿ—ಎಂಬ ಅಂಶಗಳನ್ನು ಸೂಚಿಸಲು 'ತತ್ಪ್ರಾಕ್' ಎಂದು ಹೇಳಲಾಗಿದೆ.

तत्पूर्वकत्वाधिकरणम्—३

## ॥ ॐ तत्पूर्वकत्वाद्वाचः ॐ ॥ २-४-५

अत्र वाग्जन्माजन्मश्रुत्यविरोध उच्यते । वाचो वागिन्द्रियस्य तत् प्रकृतं मनः पूर्वं कारणं यस्यास्तस्या भावः । तस्मात् तत्पूर्वकत्वात् "मनः पूर्वरूपं वागुत्तररूपम्" इति श्रुतात् मनःकारणत्वाद् वागुत्पत्तिमतीत्यर्थः । "वाग्वाव नित्या न ह्येषोत्पद्यते" इति श्रुतिस्तु नित्यवेदोच्चारणयोग्यत्वाद् गौणीति भावः ॥ ३ ॥

सप्तगत्यधिकरणम्—४

## ॥ ॐ सप्त गतेर्विशेषितत्वाच्च ॐ ॥ २-४-६

---

ತತ್ಪೂರ್ವಕತ್ವಾಧಿಕರಣ—೩

## ಓಂ ತತ್ಪೂರ್ವಕದ್ವಾಚಃ ಓಂ (೨-೪-೫)

**ಅಧಿಕರಣದ ವಿಷಯ ಮತ್ತು ಸೂತ್ರಾರ್ಥ**

ಈ ಅಧಿಕರಣದಲ್ಲಿ ವಾಗಿಂದ್ರಿಯಕ್ಕೆ ಉತ್ಪತ್ತಿಯಿದೆ—ಇಲ್ಲ ಎಂದು ಹೇಳುವ ಶ್ರುತಿಗಳಿಗೆ ಅವಿರೋಧವನ್ನು ಹೇಳಲಾಗುವುದು. ವಾಚಃ-ವಾಗಿಂದ್ರಿಯಕ್ಕೆ, 'ತತ್ ಪೂರ್ವಂ ಯಸ್ಯಾಃ ತಸ್ಯಾಃ ಭಾವಃ ತಸ್ಮಾತ್' ಎಂಬ ವಿಗ್ರಹಕ್ಕನುಸಾರವಾಗಿ, ಪ್ರಕೃತವಾದ ಮನಸ್ಸು ಕಾರಣವಾಗಿರುವುದರಿಂದ ; 'ಮನಃ ಪೂರ್ವರೂಪಂ ವಾಗುತ್ತರ ರೂಪಂ' ಎಂಬ ಶ್ರುತಿಯಲ್ಲಿ ವಾಗಿಂದ್ರಿಯಕ್ಕೆ ಮನಸ್ಸು ಕಾರಣವೆಂದು ಶ್ರುತವಾಗಿರುವುದರಿಂದ ವಾಗಿಂದ್ರಿಯವು ಉತ್ಪತ್ತಿಯುಳ್ಳದ್ದೆಂದು ಅರ್ಥ. 'ವಾಗ್ ವಾವ ನಿತ್ಯಾ ನ ಹ್ಯೇಷೋತ್ಪದ್ಯತೇ' (ಪೌಷ್ಯಾಯಣಶ್ರುತಿ) ಎಂಬ ಶ್ರುತಿಯಾದರೋ ನಿತ್ಯವಾದ ವೇದವನ್ನು ಉಚ್ಚರಿಸುವ ಯೋಗ್ಯತೆಯನ್ನು ಪಡೆದಿರುವುದರಿಂದ ವಾಗಿಂದ್ರಿಯವು ನಿತ್ಯವೆನಿಸಿಕೊಳ್ಳುತ್ತದೆ ಎಂಬರ್ಥದಲ್ಲಿ ಔಪಚಾರಿಕವಾದುದು ಎಂದು ಭಾವ.

ಸಪ್ತಗತ್ಯಧಿಕರಣ—೪

## ಓಂ ಸಪ್ತ ಗತೇರ್ವಿಶೇಷಿತತ್ವಾಚ್ಚ ಓಂ (೨-೪-೬)

अत्र प्राणसङ्ख्याश्रुत्यविरोध उच्यते । प्राणा इत्यस्ति । गतेर्ज्ञानस्य सम्बन्धिनः ज्ञानजनकाः प्राणाः सप्त । कुतः ? विशेषितत्वात् । "सप्त प्राणाः प्रभवन्ति" इति श्रुतावुत्तरत्र "गुहाशयां निर्मिताः सप्त" इति ज्ञानार्थत्वेन विशेषितत्वादित्यर्थः । गुहाशयां बुद्धौ, बुद्ध्यर्थात् इत्यर्थात् । चस्त्वनुक्तसमुच्चये । "सप्त प्राणास्त्ववगतेः पञ्च प्राणाश्च कर्मणः । एवं प्राणद्वादशकं शरीरे नित्यसंस्थितम् ।" इति वचनाच्चेत्यर्थः । तथा च "द्वादश वा एते प्राणाः" इति श्रुत्या प्राणानां द्वादशत्वेऽपि "सप्त प्राणाः" इति श्रुतेः श्रोत्रचक्षुस्त्वग्रसनघ्राणमनोबुद्धीनां ज्ञानहेत्विन्द्रियत्वविवक्षया सप्तपरत्वोपपत्तेः न तयोर्विरोध इति भावः ।

---

### ಅಧಿಕರಣದ ವಿಷಯ ಮತ್ತು ಸೂತ್ರಾರ್ಥ

ಈ ಅಧಿಕರಣದಲ್ಲಿ ಇಂದ್ರಿಯಗಳ ಸಂಖ್ಯೆಯ ವಿಷಯದಲ್ಲಿ ಶ್ರುತಿಗಳಿಗೆ ಅವಿರೋಧವನ್ನು ಹೇಳಲಾಗುವುದು. 'ಪ್ರಾಣಾಃ' ಎಂಬ ಪದವು ಅಧ್ಯಾಹಾರಗೊಳ್ಳುವುದು. ಗತೇಃ–ಜ್ಞಾನಕ್ಕೆ ಸಂಬಂಧಿಸಿದ ಅಂದರೆ ಜ್ಞಾನಜನಕವಾದ, ಪ್ರಾಣಾಃ–ಇಂದ್ರಿಯಗಳು, ಸಪ್ತ–ಏಳು. ಏಕೆಂದರೆ, ವಿಶೇಷಿತತ್ವಾತ್ – 'ಸಪ್ತ ಪ್ರಾಣಾಃ ಪ್ರಭವಂತಿ' (ಮು. ೨-೧-೮) ಎಂಬ ಶ್ರುತಿಯಲ್ಲಿ ಮುಂದೆ 'ಗುಹಾಶಯಾಂ ನಿಹಿತಾಃ ಸಪ್ತ' ಎಂಬುದಾಗಿ ಏಳು ಇಂದ್ರಿಯಗಳು ಜ್ಞಾನಾರ್ಥವಾಗಿ ಸ್ಥಾಪಿತವಾಗಿವೆ ಎಂದು ವಿಶೇಷಣವನ್ನು ಕೊಟ್ಟಿರುವುದರಿಂದ ಎಂದು ಅರ್ಥ. ಗುಹಾಶಯಾಂ–ಬುದ್ಧಿಯಲ್ಲಿ ಅರ್ಥಾತ್ ಜ್ಞಾನಕ್ಕೋಸ್ಕರವಾಗಿ 'ಚ' ಶಬ್ದವು ಅನುಕ್ತಸಮುಚ್ಚಯವನ್ನು ಹೇಳುವುದು. "ಸಪ್ತ ಪ್ರಾಣಾಸ್ತ್ವವಗತೇಃ ಪಂಚ ಪ್ರಾಣಾಶ್ಚ ಕರ್ಮಣಃ | ಏವಂ ಪ್ರಾಣದ್ವಾದಶಕಂ ಶರೀರೇ ನಿತ್ಯಸಂಸ್ಥಿತಂ ||" (ಭವಿಷ್ಯತ್ಪರ್ವ) ಎಂಬ ವಚನದಿಂದಲೂ ಎಂದು ಅರ್ಥ. ಒಟ್ಟಿನಲ್ಲಿ 'ದ್ವಾದಶ ವಾ ಏತೇ ಪ್ರಾಣಾಃ' (ಕೌಂಡಿನ್ಯ ಶ್ರುತಿ) ಎಂಬ ಶ್ರುತಿಯಿಂದ ಇಂದ್ರಿಯಗಳ ಸಂಖ್ಯೆ ಹನ್ನೆರಡಿದ್ದರೂ, ಶ್ರೋತ್ರ, ಚಕ್ಷುಸ್, ತ್ವಕ್, ರಸನ, ಘ್ರಾಣ, ಮನಸ್ಸು ಮತ್ತು ಬುದ್ಧಿ ಎಂಬ ಇಂದ್ರಿಯಗಳು ಜ್ಞಾನಕಾರಣವಾದವುಗಳು ಎಂದು ಹೇಳುವ ದೃಷ್ಟಿಯಿಂದ 'ಸಪ್ತ ಪ್ರಾಣಾಃ' ಎಂಬ ಶ್ರುತಿಗೆ ಇಂದ್ರಿಯಗಳ ಸಂಖ್ಯೆ ಏಳು ಎಂಬ ವಿಷಯದಲ್ಲಿ ತಾತ್ಪರ್ಯವಿರುವುದು ಯುಕ್ತವಾಗುವುದರಿಂದ ಆ ಎರಡು ಶ್ರುತಿಗಳಿಗೆ ವಿರೋಧವಿಲ್ಲವೆಂದು ಭಾವ.

ननु सप्तभ्योऽन्येषां प्राणानां सत्त्वे 'सप्त' इति श्रुतौ तैः सह पाठः स्यादित्यत आह—

॥ ॐ हस्तादयस्तु स्थितेऽतो नैवम् ॐ ॥
२—४—७

स्थित इति बन्धस्थितिहेतुत्वात् कर्मोच्यते । निवृत्तमपि प्रवृत्त-सारूप्याद् गौण्या वृत्त्या स्थितपदेन गृह्यते । तुर्वैलक्षण्यद्योतकः । हस्तपादपायुगुह्यवाचस्तु स्थिते कर्मविषये कर्मार्थानि । अतः कर्मार्थत्व-वैलक्षण्यादेव तैः सह पाठो नास्तीत्यर्थः ॥ ४ ॥

अण्वधिकरणम् — ५

॥ ॐ अणवश्च ॐ ॥ २—४—८

---

ಏಳಲ್ಲದೆ ಬೇರೆ ಇಂದ್ರಿಯಗಳೂ ಇರುವುದಾದಲ್ಲಿ 'ಸಪ್ತ ಪ್ರಾಣಾಃ' ಎಂಬ ಶ್ರುತಿಯಲ್ಲಿ ಏಳರೊಂದಿಗೆ ಅವುಗಳನ್ನೂ ಪಠಿಸಬೇಕಾಗಿತ್ತು ಎಂಬ ಆಕ್ಷೇಪಕ್ಕೆ ಸಮಾಧಾನ—

ಓಂ ಹಸ್ತಾದಯಸ್ತು ಸ್ಥಿತೇಽತೋ ನೈವಮ್ ಓಂ
(೨—೪—೭)

**ಸೂತ್ರಾರ್ಥ**

'ಸ್ಥಿತ' ಶಬ್ದವು ಸಂಸಾರಬಂಧದ ಸ್ಥಿತಿಗೆ ಕಾರಣವಾದ ಕರ್ಮವನ್ನು ಹೇಳುವುದು. ಪ್ರವೃತ್ತಕರ್ಮದ ಸಾದೃಶ್ಯವಿರುವುದರಿಂದ ನಿವೃತ್ತಕರ್ಮವೂ ಗೌಣೀವೃತ್ತಿಯಿಂದ 'ಸ್ಥಿತ' ಪದದಿಂದ ಗ್ರಹಿಸಲ್ಪಡುವುದು. 'ತು' ಶಬ್ದವು ಜ್ಞಾನೇಂದ್ರಿಯಗಳಿಗೂ ಕರ್ಮೇಂದ್ರಿಯಗಳಿಗೂ ಇರುವ ವೈಲಕ್ಷಣ್ಯವನ್ನು ಸೂಚಿಸುವುದು. ಹಸ್ತ, ಪಾದ, ಪಾಯು, ಗುಹ್ಯ ಮತ್ತು ವಾಗಿಂದ್ರಿಯಗಳಾದರೋ, ಸ್ಥಿತೇ–ಕರ್ಮವಿಷಯಕ ವಾದುದು. ಅಂದರೆ ಕರ್ಮಾರ್ಥವಾಗಿರುವುವು. ಅತಃ -ಹೀಗೆ ಕರ್ಮಾರ್ಥವಾಗಿರುವ ವೈಲಕ್ಷಣ್ಯದಿಂದಲೇ ಜ್ಞಾನೇಂದ್ರಿಯಗಳೊಂದಿಗೆ ಇವುಗಳ ಪಠನವಿಲ್ಲ ಎಂದು ಅರ್ಥ.

ಅಣ್ವಧಿಕರಣ—೫

ಓಂ ಅಣವಶ್ಚ ಓಂ (೨—೪—೮)

*

अत्र प्राणाणुत्वानणुत्वश्रुत्यविरोध उच्यते । प्राणा इत्यस्ति । प्राणा अणवस्तेजसा व्याप्ताश्चेत्यर्थः । तथा च "अणुभिः पश्यति" इति श्रुत्या दूरश्रवणादियुक्त्युपेता "दिवीव चक्षुराततम्" इति श्रुतिः न विरुद्ध्यत इति भावः ॥ ५ ॥

श्रेष्ठाधिकरणम्—६

## ॥ ॐ श्रेष्ठश्च ॐ ॥ २-४-९

अत्र मुख्यप्राणजन्माजन्मश्रुत्यविरोध उच्यते । श्रेष्ठश्च प्राण उत्पत्तिमान् न केवलं प्राणा इति चार्थः । "आत्मत एष प्राणो जायते" इति श्रुतिः । 'यत्प्राप्तिः' इति स्मृत्युक्तसर्वोत्पत्तिमृतिहेतुत्व-

---

**ಅಧಿಕರಣದ ವಿಷಯ ಮತ್ತು ಸೂತ್ರಾರ್ಥ**

ಈ ಅಧಿಕರಣದಲ್ಲಿ ಇಂದ್ರಿಯಗಳು ಅಣು—ಅಣುವಲ್ಲ ಎಂದು ಹೇಳುವ ಶ್ರುತಿಗಳಿಗೆ ಅವಿರೋಧವನ್ನು ಹೇಳಲಾಗುವುದು 'ಪ್ರಾಣಾಃ' ಎಂಬ ಪದವು ಅನುವೃತ್ತವಾಗುವುದು. ಇಂದ್ರಿಯಗಳು ಅಣುಗಳು ಮತ್ತು ಪ್ರಕಾಶದಿಂದ ವ್ಯಾಪ್ತಿಯುಳ್ಳವು ಎಂದು ಅರ್ಥ. ಆದ್ದರಿಂದ, 'ಅಣುಭಿಃ ಪಶ್ಯತಿ' (ಕೌಂಡಿನ್ಯಶ್ರುತಿ) ಎಂಬ ಶ್ರುತಿಯಿಂದ, 'ದೂರದಲ್ಲಿರುವ ಶಬ್ದದ ಶ್ರವಣ' ಇತ್ಯಾದಿ ಯುಕ್ತಿಯಿಂದ ಸಹಿತವಾದ 'ದಿವೀವ ಚಕ್ಷುರಾತತಮ್' (ಋ. ೧-೨೨-೨೦) ಎಂಬ ಶ್ರುತಿಗೆ ವಿರೋಧವಿಲ್ಲವೆಂದು ಭಾವ.

ಶ್ರೇಷ್ಠಾಧಿಕರಣ—೬

## ಓಂ ಶ್ರೇಷ್ಠಶ್ಚ ಓಂ (೨-೪-೯)

**ಅಧಿಕರಣದ ವಿಷಯ ಮತ್ತು ಸೂತ್ರಾರ್ಥ**

ಈ ಅಧಿಕರಣದಲ್ಲಿ ಮುಖ್ಯಪ್ರಾಣನಿಗೆ ಉತ್ಪತ್ತಿಯಿದೆ—ಇಲ್ಲ ಎಂದು ಹೇಳುವ ಶ್ರುತಿಗಳಿಗೆ ಅವಿರೋಧವನ್ನು ಹೇಳಲಾಗುವುದು. ಶ್ರೇಷ್ಠಶ್ಚ ಪ್ರಾಣಃ- ಮುಖ್ಯಪ್ರಾಣನೂ, ಉತ್ಪತ್ತಿಯುಳ್ಳವನು, 'ಇಂದ್ರಿಯಗಳಷ್ಟೇ ಅಲ್ಲ' ಎಂದು 'ಚ' ಶಬ್ದದ ಅರ್ಥ. "ಆತ್ಮತ ಏಷ ಪ್ರಾಣೋ ಜಾಯತೇ" (ಪ್ರ. ೩-೩) ಎಂಬ ಶ್ರುತಿಯು ಸ್ಥೂಲ ಮುಖ್ಯಪ್ರಾಣನಿಗೆ ಸಂಬಂಧಪಟ್ಟುದು ಮತ್ತು "ಯತ್ಪ್ರಾಪ್ತಿಃ ಯತ್ಪರಿತ್ಯಾಗಶ್ಚ"[1]

---

1. "ಯತ್ಪ್ರಾಪ್ತಿಃ ಯತ್ಪರಿತ್ಯಾಗಃ ಉತ್ಪತ್ತಿರ್ಮರಣಂ ತಥಾ ।
ತಸ್ಯೋತ್ಪತ್ತಿರ್ಮೃತಿಶ್ಚೈವ ಕಥಂ ಪ್ರಾಣಸ್ಯ ಯುಜ್ಯತೇ ॥"

युक्त्युपेता "नैष प्राण उदेति" इति श्रुतिश्च स्थूलसूक्ष्ममुख्यप्राणविषयेति भावः । "एतेन मातरिश्वा" इत्यत्र बाह्यवायुरूपेणोत्पत्त्युक्तावपि सर्वमृत्यूत्पत्तिहेतुना प्राणरूपेणाप्युत्पत्तिरत्रोच्यत इति ध्येयम् ।

प्राणजन्मश्रुतिः चेष्टादिपरा किं न स्यादित्यत आह—

॥ ॐ न वायुक्रिये पृथगुपदेशात् ॐ ॥ २-४-१०

प्राणोत्पत्तिश्रुतिस्थः प्राणो बाह्यवायुचेष्टारूपक्रिये न भवतः । कुतः ? "स प्राणमसृजत" इत्युक्त्वा "प्राणात् श्रद्धां खं वायुर्ज्योति-

---

(ವಾಯುಪ್ರೋಕ್ತ) ಎಂಬ ಸ್ಮೃತಿಯಲ್ಲಿ ಹೇಳಿರುವ 'ಸರ್ವರ ಉತ್ಪತ್ತಿ-ಮರಣಗಳಿಗೆ ಕಾರಣವಾಗಿರುವಿಕೆ' ಎಂಬ ಯುಕ್ತಿಸಹಿತವಾದ 'ನೈಷ ಪ್ರಾಣ ಉದೇತಿ' ಎಂಬ ಶ್ರುತಿಯು ಸೂಕ್ಷ್ಮ ಮುಖ್ಯಪ್ರಾಣನಿಗೆ ಸಂಬಂಧಪಟ್ಟುದು ಎಂದು ಭಾವ.

**ಏತೇನ ಮಾತರಿಶ್ವಾಧಿಕರಣದಿಂದ ಪುನರುಕ್ತಿಯಿಲ್ಲ**

'ಏತೇನ ಮಾತರಿಶ್ವಾ' (ಬ್ರ ಸೂ. ೨-೩-೮) ಎಂಬಲ್ಲಿ ಬಾಹ್ಯ ವಾಯುರೂಪದಿಂದ ಮುಖ್ಯಪ್ರಾಣನಿಗೆ ಉತ್ಪತ್ತಿಯನ್ನು ಹೇಳಿದ್ದರೂ ಸರ್ವರ ಜನನ-ಮರಣಗಳಿಗೆ ಕಾರಣವಾದ ಪ್ರಾಣರೂಪದಿಂದಲೂ ಉತ್ಪತ್ತಿಯನ್ನು ಈ ಅಧಿಕರಣದಲ್ಲಿ ಹೇಳಲಾಗಿದೆ ಎಂದು ತಿಳಿಯಬೇಕು.

ಪ್ರಾಣನಿಗೆ ಉತ್ಪತ್ತಿಯನ್ನು ಹೇಳುವ ಶ್ರುತಿಯು ಸ್ಪಂದನರೂಪವಾದ ಚೇಷ್ಟೆ, ಭೂತವಾಯು ಇವುಗಳಿಗೆ ಉತ್ಪತ್ತಿಯನ್ನು ಹೇಳುವ ತಾತ್ಪರ್ಯವುಳ್ಳದ್ದಾಗಬಾರದೇಕೆ ಎಂಬ ಆಶಂಕೆಗೆ ಸಮಾಧಾನ—

## ಓಂ ನ ವಾಯುಕ್ರಿಯೇ ಪೃಥಗುಪದೇಶಾತ್ ಓಂ (೨-೪-೧೦)

**ಸೂತ್ರಾರ್ಥ**

ಪ್ರಾಣೋತ್ಪತ್ತಿ ಶ್ರುತಿಯಲ್ಲಿ ಹೇಳಿರುವ ಪ್ರಾಣನು ಬಾಹ್ಯ ವಾಯುವಾಗಲೀ ಸ್ಪಂದನರೂಪವಾದ ಕ್ರಿಯೆಯಾಗಲೀ ಅಲ್ಲ. ಏಕೆಂದರೆ, 'ಸ ಪ್ರಾಣಮಸೃಜತ'[1]

---

1. ಪರಮಪುರುಷನಾದ ಭಗವಂತನು ಜೀವಕಲಾಭಿಮಾನಿಯಾದ ಪ್ರಾಣನನ್ನು ಸೃಜಿಸಿದನು. ಪ್ರಾಣನ ಮೂಲಕ ಆಸ್ತಿಕ್ಯನಿಷ್ಠೆಗೆ ಅಭಿಮಾನಿನಿಯಾದ ಭಾರತಿಯನ್ನೂ ಅನಂತರ ಆಕಾಶ, ವಾಯು, ತೇಜಸ್ಸು, ಜಲ, ಪೃಥಿವೀ ಎಂಬ ಪಂಚಭೂತಗಳನ್ನೂ, ಚಕ್ಷುರಾದಿ ಇಂದ್ರಿಯಗಳನ್ನೂ,

रापः पृथिवीन्द्रियं मनोऽन्नमन्नाद्वीर्यं तपो मन्त्राः कर्म" इति तयोः पृथगुपदेशादित्यर्थः ॥ ६ ॥

चक्षुराद्यधिकरणम्—७

## ॥ ॐ चक्षुरादिवत्तु तत्सहशिष्ट्यादिभ्यः ॐ ॥ २-४-११

अत्र श्रेष्ठस्वातन्त्र्यास्वातन्त्र्यश्रुत्यविरोध उच्यते। श्रेष्ठ इत्यस्ति। तुरेव। श्रेष्ठो मुख्यप्राणः चक्षुरादिवदेव । चक्षुरादि यथेशाधीनं तथाऽयमपि ईशाधीन इति लभ्यते । एवेत्युत्पत्ताविव स्वातन्त्र्यादौ

(ಪ್ರ. ೬—೪) ಎಂದು ಹೇಳಿ, "ಪ್ರಾಣಾತ್ ಶ್ರದ್ಧಾಂ ಖಂ ವಾಯುರ್ಜ್ಯೋತಿರಾಪಃ ಪೃಥಿವೀಂದ್ರಿಯಂ ಮನೋನ್ನಮನ್ನಾದ್ವೀರ್ಯಂ ತಪೋ ಮಂತ್ರಾಃ ಕರ್ಮ" (ಪ್ರ. ೬—೪) ಎಂಬುದಾಗಿ ಬಾಹ್ಯವಾಯು ಮತ್ತು ಕ್ರಿಯೆಗಳನ್ನು ಪ್ರತ್ಯೇಕವಾಗಿ ಹೇಳಿರುವುದರಿಂದ ಎಂದು ಅರ್ಥ.

ಚಕ್ಷುರಾದ್ಯಧಿಕರಣ—೭

## ಓಂ ಚಕ್ಷುರಾದಿವತ್ತು ತತ್ಸಹಶಿಷ್ಟ್ಯಾದಿಭ್ಯಃ ಓಂ (೨—೪—೧೧)

**ಅಧಿಕರಣದ ವಿಷಯ ಮತ್ತು ಸೂತ್ರಾರ್ಥ**

ಈ ಅಧಿಕರಣದಲ್ಲಿ ಮುಖ್ಯಪ್ರಾಣನಿಗೆ ಸ್ವಾತಂತ್ರ್ಯವಿದೆ—ಇಲ್ಲ ಎಂದು ಹೇಳುವ ಶ್ರುತಿಗಳಿಗೆ ಅವಿರೋಧವನ್ನು ಹೇಳಲಾಗುವುದು. ಶ್ರೇಷ್ಠ ಎಂಬ ಪದವು ಅನುವೃತ್ತವಾಗುವುದು. 'ತು' ಶಬ್ದಕ್ಕೆ ಏವ ಎಂದು ಅರ್ಥ. ಶ್ರೇಷ್ಠಃ—ಮುಖ್ಯಪ್ರಾಣನು, ಚಕ್ಷುರಾದಿವದೇವ—ಚಕ್ಷುರಾದಿ ಇಂದ್ರಿಯಗಳು, ಅವುಗಳ ಅಭಿಮಾನಿಗಳು ಹೇಗೆ ಭಗವದಧೀನರೋ ಹಾಗೆ ಇವನೂ ಕೂಡ ಭಗವದಧೀನನಾಗಿದ್ದಾನೆ—ಎಂಬ ಅರ್ಥವು ಲಭಿಸುತ್ತದೆ. 'ಏವ' ಶಬ್ದವು ಉತ್ಪತ್ತಿಯ ವಿಷಯದಲ್ಲಿ ಹೇಗೋ ಹಾಗೆ ಅಸ್ವಾತಂತ್ರ್ಯ

ಮನಸ್ಸು, ಅನ್ನಗಳನ್ನೂ ಸೃಜಿಸಿದನು ಆ ಅನ್ನದ ಮೂಲಕ ರೇತಸ್ಸನ್ನು ಸೃಜಿಸಿದನು. ಅನಂತರ ಜೀವನ ಜ್ಞಾನಾದಿಕಾರಣವಾದ ತಪಸ್ಸನ್ನೂ, ಋಗಾದಿ ಮಂತ್ರಗಳನ್ನೂ ಸೃಷ್ಟಿಸಿದನು. ಅನಂತರ ಪುಣ್ಯಪಾಪರೂಪವಾದ ಕರ್ಮಗಳನ್ನೂ, ಇಂದ್ರಿಯಗಳ ಆಶ್ರಯವಾದ ಗೋಲಕಗಳನ್ನೂ, ದೇವದತ್ತ ಮೊದಲಾದ ನಾಮಗಳನ್ನೂ ಸೃಷ್ಟಿಸಿದನು ಎಂದು ಶ್ರುತ್ಯರ್ಥ.

न व्यवस्थाऽस्तीति सूचयति । कुतः? तत्सहशिष्ट्यादिभ्यः । तैः चक्षुरादिभिः सह शिष्टिः शासनमुक्तिः "सर्वं ह्येवैतत् परमेऽवतिष्ठते प्राणश्च प्राणाश्च प्राणिनश्च" इति प्राणैः सहेशवशत्वेन पाठात् । ननु "यदाश्रयादस्य चेष्टा" इत्युक्तानन्याश्रयत्वयुक्त्युपेता "न प्राणः किञ्चिदाश्रितः" इति श्रुतिः श्रुतिमात्रात् कथमपोद्यत इत्यत उक्तमादिभ्य इति । "सर्वकर्ताऽपि सन् प्राणः परमाधारतः स्थितः" इति, "नान्योऽतोऽस्ति द्रष्टा" इत्यादिवचनादीशद्वयायोगादिरूपयुक्तेश्चेत्यर्थः । "न प्राणः किञ्चिदाश्रितः" इति श्रुतिः अनन्येश्वरत्वावान्तरेश्वरत्वपरेति भावः । प्राधान्यात् चक्षुष आदित्वेनोक्तिः । स्वातन्त्र्ये श्रुतिबाहुल्यमस्तीति चोद्यं तु 'सोऽध्यक्ष' इत्यत्र निरसिष्यते ।

---

ಮೊದಲಾದ ವಿಷಯಗಳಲ್ಲಿ ಯಾವುದೇ ವ್ಯವಸ್ಥೆ ಇಲ್ಲವೆಂದು ಸೂಚಿಸುವುದು. ಚಕ್ಷುರಾದಿಗಳಂತೆ ಪ್ರಾಣನೂ ಭಗವದಧೀನ ಎಂಬುದಕ್ಕೆ ಆಧಾರವೇನು ಎಂಬ ಪ್ರಶ್ನೆಗೆ ಉತ್ತರ—ತತ್ಸಹಶಿಷ್ಟ್ಯಾದಿಭ್ಯಃ ತೈಃ ಸಹ–ಚಕ್ಷುರಾದಿ ಇಂದ್ರಿಯಗಳೊಂದಿಗೆ, ಶಿಷ್ಟಿಃ-ಶಾಸನ ಅಂದರೆ ಉಕ್ತವಾಗಿರುವಿಕೆ. "ಸರ್ವಂ ಹ್ಯೇವ ಏತತ್ ಪರಮೇऽವತಿಷ್ಠತೇ. ಪ್ರಾಣಶ್ಚ ಪ್ರಾಣಾಶ್ಚ ಪ್ರಾಣಿನಶ್ಚ" (ಗೌಪವನಶ್ರುತಿ) ಎಂಬುದಾಗಿ ಶ್ರುತಿಯಲ್ಲಿ ಭಗವದಧೀನನೆಂದು ಪ್ರಾಣನನ್ನು ಇಂದ್ರಿಯಗಳೊಂದಿಗೆ ಪಠಿಸಿರುವುದರಿಂದ 'ಯದಾಶ್ರಯಾದಸ್ಯ ಚೇಷ್ಟಾ' ಎಂಬಲ್ಲಿ ಹೇಳಿರುವ ಅನನ್ಯಾಶ್ರಯತ್ವ ಅಂದರೆ ಯಾರನ್ನೂ ಆಶ್ರಯಿಸದಿರುವಿಕೆ ಎಂಬ ಯುಕ್ತಿಸಹಿತವಾದ 'ನ ಪ್ರಾಣಃ ಕಿಂಚಿದಾಶ್ರಿತಃ' ಎಂಬ ಶ್ರುತಿಯು ಕೇವಲ ಶ್ರುತಿಯಿಂದ ಬಾಧಿತವಾಗುವುದು ಹೇಗೆ ಎಂಬ ಆಶಂಕೆಗೆ ಉತ್ತರವಾಗಿ—'ಆದಿಭ್ಯಃ' ಎಂದು ಹೇಳಲಾಗಿದೆ. 'ಸರ್ವಕರ್ತಾऽಪಿ ಸನ್ ಪ್ರಾಣಃ ಪರಮಾಧಾರತಃ ಸ್ಥಿತಃ' ಎಂಬುದಾಗಿ, ಮತ್ತು 'ನಾನ್ಯೋऽತೋऽಸ್ತಿ, ದ್ರಷ್ಟಾ' ಎಂಬಿವೇ ಮೊದಲಾದ ವಚನಗಳಿಂದ ಮತ್ತು 'ಇಬ್ಬರು ಈಶರು ಇರಲು ಸಾಧ್ಯವಿಲ್ಲ' ಎಂಬ ಯುಕ್ತಿಯಿಂದಲೂ ಪ್ರಾಣನು ಈಶಾಧೀನನೆಂದು ಸಿದ್ಧವಾಗುವನೆಂದು ಅರ್ಥ. 'ನ ಪ್ರಾಣಃ ಕಿಂಚಿದಾಶ್ರಿತಃ' ಎಂಬ ಶ್ರುತಿಯು ಪರಮಾತ್ಮನನ್ನು ಬಿಟ್ಟು ಬೇರೆ ಈಶ್ವರನಿಲ್ಲದವನೆಂದು, ಅಥವಾ ಅಪ್ರಧಾನನಾದ ಈಶ್ವರನೆಂದು ತಿಳಿಸುವ ತಾತ್ಪರ್ಯವುಳ್ಳದ್ದೆಂದು ಭಾವ ಇಂದ್ರಿಯಗಳಲ್ಲಿ ಚಕ್ಷುಸ್ಸಿಗೆ ಪ್ರಾಧಾನ್ಯವಿರುವುದರಿಂದ ಚಕ್ಷುಸ್ಸನ್ನೇ ಪ್ರಾಥಮಿಕವಾಗಿ ಹೇಳಲಾಗಿದೆ. ಮುಖ್ಯಪ್ರಾಣನು ಸ್ವತಂತ್ರನೆಂಬುದರಲ್ಲಿ ಅನೇಕ ಶ್ರುತಿಗಳಿವೆ ಎಂಬ ಆಕ್ಷೇಪವನ್ನು 'ಸೋऽಧ್ಯಕ್ಷೇ' (ಬ್ರ. ಸೂ. ೪—೨-೪) ಎಂಬಲ್ಲಿ ನಿರಾಕರಿಸಲಾಗುವುದು.

श्रेष्ठस्येशायत्तत्वे चक्षुरादिवदवान्तरेश्वरत्वं च न स्यादित्यत आह—

॥ ॐ अकरणत्वाच्च न दोषस्तथा हि दर्शयति ॐ ॥ २-४-१२

श्रेष्ठस्येत्यन्वेति। करणत्वं कर्तृप्रयोज्यत्वम्। श्रेष्ठस्याकरणत्वात्, चक्षुरादेः करणत्वाच्चेति चार्थः। न दोषः तद्वदवान्तरेश्वरत्वाभावदोषो नास्ति। कुतः? हि यस्मात् तथा करणत्वादिना प्राणं चक्षुरादि च दर्शयति "तानि वा एतानि करणानि अथ प्राण एवाकरणः" इति श्रुतिरत इत्यर्थः। सुप्तेऽपि जीवे प्राणव्यापारदृष्टेस्तस्य जीवाप्रयोज्यत्वम्। चक्षुरादेस्तु नैवमिति भावः ॥ ७ ॥

---

ಮುಖ್ಯಪ್ರಾಣನು ಈಶಾಧೀನನಾಗಿರುವುದಾದಲ್ಲಿ ಚಕ್ಷುರಾದಿಗಳಿಗೆ ಹೇಗೆ ಅವಾಂತರೇಶ್ವರತ್ವವಿಲ್ಲವೋ ಮುಖ್ಯಪ್ರಾಣನಿಗೂ ಅವಾಂತರೇಶ್ವರತ್ವವಿಲ್ಲವೆಂದಾದೀತು ಎಂಬ ಆಶಂಕೆಗೆ ಸಮಾಧಾನ—

ಓಂ ಅಕರಣತ್ವಾಚ್ಚ ನ ದೋಷಸ್ತಥಾ ಹಿ ದರ್ಶಯತಿ ಓಂ (೨–೪–೧೨)

**ಸೂತ್ರಾರ್ಥ**

'ಶ್ರೇಷ್ಠಸ್ಯ' ಎಂಬ ಪದವು ಇಲ್ಲಿ ಅನ್ವಯವನ್ನು ಪಡೆಯುವುದು. ಕರಣತ್ವವೆಂದರೆ ಕರ್ತೃಪ್ರಯೋಜ್ಯವಾಗಿರುವುದು ಅಂದರೆ ಕರ್ತೃವಿಗೆ ಅಧೀನವಾದ ಕ್ರಿಯೆಯನ್ನು ಹೊಂದಿರುವುದು. ಶ್ರೇಷ್ಠಸ್ಯ ಅಕರಣತ್ವಾತ್–ಮುಖ್ಯಪ್ರಾಣನು ಕರಣನಲ್ಲವಾದುದರಿಂದ, ಚಕ್ಷುರಾದಿ ಇಂದ್ರಿಯಗಳು ಕರಣವಾಗಿರುವುದರಿಂದಲೂ, ಎಂದು 'ಚ' ಶಬ್ದದ ಅರ್ಥ. ನ ದೋಷಃ–ಚಕ್ಷುರಾದಿಗಳಂತೆ ಪ್ರಾಣನಿಗೆ ಅಪ್ರಧಾನ ಈಶ್ವರತ್ವವೂ ಇಲ್ಲವೆಂಬ ದೋಷವಿಲ್ಲ. ಏಕೆಂದರೆ, ಹಿ–ಯಾವ ಕಾರಣದಿಂದ, ತಥಾ–ಪ್ರಾಣನನ್ನು ಅಕರಣನೆಂದೂ, ಚಕ್ಷುರಾದಿಗಳನ್ನು ಕರಣವೆಂದೂ, ದರ್ಶಯತಿ–'ತಾನಿ ವಾ ಏತಾನಿ ಕರಣಾನಿ, ಅಥ ಪ್ರಾಣ ಏವಾಕರಣಃ' ಎಂಬ ಶ್ರುತಿಯು ಹೇಳುವುದೋ ಆದ್ದರಿಂದ ಎಂದು ಅರ್ಥ. ಜೀವನು ಸುಷುಪ್ತಿಯಲ್ಲಿದ್ದರೂ ಮುಖ್ಯಪ್ರಾಣನ ಕ್ರಿಯೆಯು ಕಾಣಬರುವುದರಿಂದ ಮುಖ್ಯಪ್ರಾಣನು ಜೀವಪ್ರಯೋಜ್ಯನಲ್ಲ, ಚಕ್ಷುರಾದಿ ಇಂದ್ರಿಯಗಳಾದರೋ ಹಾಗಲ್ಲವೆಂದು ಭಾವ.

पञ्चवृत्त्यधिकरणम्—८

## ॥ ॐ पञ्चवृत्तिर्मनोवद्व्यपदिश्यते ॐ ॥ २-४-१३

अत्र प्राणापानादेः श्रेष्ठस्वरूपत्वतद्दासत्वश्रुत्यविरोध उच्यते । श्रेष्ठ इत्यस्ति । श्रेष्ठः पञ्चवृत्तिः पञ्च वृत्तयः प्राणापानव्यानोदान-समानाख्यरूपाणि यस्य स तथा प्राणादिपञ्चस्वरूपवानित्यर्थः । उपलक्षणमेतत् । प्राणादिपञ्चदासवानित्यपि बोध्यम् । कुतः? मनोवत् । यथा मनः मनोबुद्ध्यहङ्कारचित्तचेतनाख्यस्वरूपवत्, तज्जन्यमनःप्रभृतिवृत्तिपञ्चकवच्च तद्वत् श्रेष्ठोऽपि वर्गद्वयवान् व्यप-दिश्यते "अथ पञ्चवृत्त्यैतत् प्रवर्तते" इति श्रुतौ यतोऽत इति

---

ಪಂಚವೃತ್ತ್ಯಧಿಕರಣ—೮

## ಓಂ ಪಂಚವೃತ್ತಿರ್ಮನೋವದ್ವ್ಯಪದಿಶ್ಯತೇ ಓಂ (೨-೪-೧೩)

**ಅಧಿಕರಣದ ವಿಷಯ ಮತ್ತು ಸೂತ್ರಾರ್ಥ**

ಈ ಅಧಿಕರಣದಲ್ಲಿ ಪ್ರಾಣ, ಅಪಾನ ಮೊದಲಾದವರು ಮುಖ್ಯಪ್ರಾಣಸ್ವರೂಪರು ಎಂದು ಹೇಳುವ ಶ್ರುತಿಗೂ ಮುಖ್ಯಪ್ರಾಣನ ದಾಸರೆಂದು ಹೇಳುವ ಶ್ರುತಿಗೂ ಅವಿರೋಧವನ್ನು ಹೇಳಲಾಗುವುದು. 'ಶ್ರೇಷ್ಠಃ' ಎಂಬ ಪದವು ಅನುವೃತ್ತವಾಗುವುದು. ಶ್ರೇಷ್ಠಃ–ಮುಖ್ಯಪ್ರಾಣನು, ಪಂಚವೃತ್ತಿಃ–ಪಂಚ ವೃತ್ತಯಃ ಯಸ್ಯ ಸಃ ಎಂಬ ವಿಗ್ರಹಕ್ಕನುಸಾರವಾಗಿ ಪ್ರಾಣ, ಅಪಾನ, ವ್ಯಾನ, ಉದಾನ ಮತ್ತು ಸಮಾನವೆಂಬ ಪಂಚರೂಪಗಳನ್ನು ಸ್ವರೂಪವಾಗುಳ್ಳವನು. ಇದು ಉಪಲಕ್ಷಣ ಪ್ರಾಣ ಮೊದಲಾದ ಐವರನ್ನು ದಾಸರಾಗುಳ್ಳವನು ಎಂದೂ ತಿಳಿಯಬೇಕು. ಏಕೆಂದರೆ, ಮನೋವತ್–ಮನಸ್ಸು, ಹೇಗೆ ಬುದ್ಧಿ, ಅಹಂಕಾರ, ಚಿತ್ತ ಮತ್ತು ಚೇತನಾ ಎಂಬ ಐದು ಸ್ವರೂಪಗಳನ್ನು ಪಡೆದಿದೆಯೋ ಮತ್ತು ಅವುಗಳಿಂದ ಜನಿಸುವ ಮನಸ್ಸು ಮೊದಲಾದ ಐದು ವೃತ್ತಿಗಳನ್ನು ಪಡೆದಿದೆಯೋ ಹಾಗೆ ಮುಖ್ಯಪ್ರಾಣನೂ "ಅಥ ಪಂಚವೃತ್ತ್ಯಾ ಏತತ್ ಪ್ರವರ್ತತೇ"[1] ಎಂಬ ಶ್ರುತಿಯಲ್ಲಿ ಎರಡು ವರ್ಗಗಳುಳ್ಳವನೆಂದು ಹೇಳ

---

1. "ಅಥ ಪಂಚವೃತ್ತ್ಯೈತತ್ಪ್ರವರ್ತತೇ । ಪ್ರಾಣೋ ವಾವ ಪಂಚವೃತ್ತಿಃ । ಪ್ರಾಣೋಽಪಾನೋ ವ್ಯಾನ ಉದಾನಃ ಸಮಾನ ಇತಿ । ತೇಭ್ಯೋ ವಾ ಏತೇಭ್ಯಃ ಪಂಚ ದಾಸಾಃ ಪ್ರಜಾಯಂತೇ । ಪ್ರಾಣಾದ್ವಾವ ಪ್ರಾಣೋಽಪಾನಾದಪಾನೋ ವ್ಯಾನಾದ್ವ್ಯಾನ ಉದಾನಾದುದಾನಃ ಸಮಾನಾದೇವ ಸಮಾನಃ" ಎಂದು ಶ್ರುತಿ.

योऽयम् । "सर्वे वा एते मुख्यदासा" इति श्रुतेः "मुख्यस्यैव स्वरूपाणि प्राणाद्याः" इति श्रुतेश्च भिन्नप्राणादिपरत्वात् न विरोध इति भावः ॥ ८ ॥

अण्वधिकरणम्—९

## ॥ ॐ अणुश्च ॐ ॥ २-४-१४

अत्र श्रेष्ठस्याणुत्वानणुत्वश्रुत्यविरोध उच्यते । श्रेष्ठ इत्यस्ति । अणुश्च अणुर्व्याप्तश्चेति चार्थः । अन्तः प्राणरूपेणाणुः, बहिर्वायुरूपेण व्याप्त इति भावः । अतः "प्राण एवाधस्तात्" इति श्रुतेः "प्राणो वा अणुः" इति श्रुतेश्च न विरोध इति भावः ॥ ९ ॥

---

ಲ್ಪಟ್ಟಿದ್ದಾನೆ ಎಂದು ಅರ್ಥ. "ಅಥ ಪಂಚವೃತ್ತ್ಯಾ ಏತತ್ ಪ್ರವರ್ತತೇ ಎಂಬ ಶ್ರುತಿಯಲ್ಲಿ" ಎಂಬ ಪದಗಳನ್ನು ಇಲ್ಲಿ ಯೋಜಿಸಿಕೊಳ್ಳಬೇಕು. "ಸರ್ವೇ ವಾ ಏತೇ ಮುಖ್ಯದಾಸಾಃ" ಎಂಬ ಶ್ರುತಿಯು ಮುಖ್ಯಪ್ರಾಣಭಿನ್ನರಾದ ಪ್ರಾಣ ಮೊದಲಾದ ದಾಸರನ್ನು ಹೇಳುವ ತಾತ್ಪರ್ಯವುಳ್ಳದ್ದು ಮತ್ತು "ಮುಖ್ಯಸ್ಯೈವ ಸ್ವರೂಪಾಣಿ ಪ್ರಾಣಾದ್ಯಾಃ ಪಂಚ" ಎಂಬ ಶ್ರುತಿಯು ಮುಖ್ಯಪ್ರಾಣಸ್ವರೂಪರಾದ ಪ್ರಾಣಾದಿಗಳಲ್ಲಿ ತಾತ್ಪರ್ಯವುಳ್ಳದ್ದು ಆದ್ದರಿಂದ ಅವುಗಳಿಗೆ ವಿರೋಧವಿಲ್ಲವೆಂದು ಭಾವ

ಅಣ್ವಧಿಕರಣ—೯

## ಓಂ ಅಣುಶ್ಚ ಓಂ (೨-೪-೧೪)

**ಅಧಿಕರಣದ ವಿಷಯ ಮತ್ತು ಸೂತ್ರಾರ್ಥ**

ಈ ಅಧಿಕರಣದಲ್ಲಿ ಮುಖ್ಯಪ್ರಾಣನು ಅಣು—ಅಣುವಲ್ಲ ಎಂದು ಹೇಳುವ ಶ್ರುತಿಗಳಿಗೆ ಅವಿರೋಧವನ್ನು ಹೇಳಲಾಗುವುದು. 'ಶ್ರೇಷ್ಠ' ಎಂಬ ಪದ ಅನುವೃತ್ತವಾಗುವುದು ಮುಖ್ಯಪ್ರಾಣನು, ಅಣುಶ್ಚ—ಅಣುವಾಗಿದ್ದಾನೆ. ವ್ಯಾಪ್ತನೂ ಆಗಿದ್ದಾನೆಂದು 'ಚ' ಶಬ್ದದ ಅರ್ಥ. ದೇಹದ ಒಳಗೆ ಹೃದಯದಲ್ಲಿರುವ ಪ್ರಾಣರೂಪದಿಂದ ಅಣುವೂ ದೇಹದ ಹೊರಗಿರುವ ವಾಯುರೂಪದಿಂದ ವ್ಯಾಪ್ತನೂ ಆಗಿದ್ದಾನೆಂದು ಭಾವ. ಆದ್ದರಿಂದ, 'ಪ್ರಾಣ ಏವಾಧಸ್ತಾತ್' ಎಂಬ ಶ್ರುತಿಗೂ 'ಪ್ರಾಣೋ ವಾ ಅಣುಃ' ಎಂಬ ಶ್ರುತಿಗೂ ವಿರೋಧವಿಲ್ಲವೆಂದು ಭಾವ.

ज्योतिराद्यधिकरणम् — १०

## ॥ ॐ ज्योतिराद्यधिष्ठानं तु तदामननात् ॐ ॥
## २—४—१५

अत्र चक्षुरादेर्जीवेशकरणत्वश्रुत्यविरोध उच्यते । तुरेव । तदिति व्यस्तं समस्तं च । ज्योतिरादीत्यावृत्तिः । ज्योतिरादिः अधिष्ठानं यस्य स तथा, तन्नियामकमिति यावत् । "योऽग्नौ तिष्ठन्", "यस्तेजसि तिष्ठन्" इत्यादिश्रुतेः अग्न्यादिरूपज्योतिराद्यधिष्ठानं यद् ब्रह्म तत्तु तदेव ज्योतिराद्यधिष्ठानं ज्योतीरूपचक्षुरादिनियामकं, तत्कारणमिति यावत् । कुतः ? तदामननात् तस्य चक्षुराद्यधिष्ठातृत्वस्य "यश्चक्षुषि तिष्ठन्" इत्यादिना आमननादित्यर्थः । ब्रह्मेत्येव

---

ಜ್ಯೋತಿರಧಿಕರಣ—೧೦

## ಓಂ ಜ್ಯೋತಿರಾದ್ಯಧಿಷ್ಠಾನಂ ತು ತದಾಮನನಾತ್ ಓಂ
## (೨—೪—೧೫)

**ಅಧಿಕರಣದ ವಿಷಯ ಮತ್ತು ಸೂತ್ರಾರ್ಥ**

ಈ ಅಧಿಕರಣದಲ್ಲಿ ಚಕ್ಷುರಾದಿ ಇಂದ್ರಿಯಗಳು ಜೀವನ ಕರಣಗಳೆಂದು ಹೇಳುವ ಶ್ರುತಿಗೂ ಈಶನ ಕರಣಗಳೆಂದು ಹೇಳುವ ಶ್ರುತಿಗೂ ಅವಿರೋಧವನ್ನು ಹೇಳಲಾಗುವುದು. 'ತು' ಶಬ್ದಕ್ಕೆ ಏವ ಎಂದು ಅರ್ಥ 'ತತ್' ಶಬ್ದವನ್ನು ಪ್ರತ್ಯೇಕಪದವಾಗಿಯೂ ಮತ್ತು ಸಮಾಸದ ಭಾಗವಾಗಿಯೂ ಪರಿಗಣಿಸಬೇಕು 'ಜ್ಯೋತಿರಾದ್ಯಧಿಷ್ಠಾನಂ' ಎಂಬ ಪದವನ್ನು ಆವೃತ್ತಿಮಾಡಬೇಕು. ಜ್ಯೋತಿರಾದ್ಯಧಿಷ್ಠಾನವೆಂದರೆ ಜ್ಯೋತಿಸ್ಸು ಮೊದಲಾದವುಗಳನ್ನು ಅಧಿಷ್ಠಾನವಾಗುಳ್ಳದ್ದು ಜ್ಯೋತಿರಾದಿಗಳಿಗೆ ನಿಯಾಮಕವಾದುದು ಎಂದು ಭಾವ. "ಯೋಽಗ್ನೌ ತಿಷ್ಠನ್" (ಬೃ. ೫-೭-೫) "ಯಸ್ತೇಜಸಿ ತಿಷ್ಠನ್" (ಬೃ ೫–೭–೧೪) ಇತ್ಯಾದಿ ಶ್ರುತಿಗಳಲ್ಲಿ ಹೇಳಿರುವಂತೆ ಅಗ್ನಿಯೇ ಮೊದಲಾದ ಜ್ಯೋತಿಸ್ಸುಗಳಿಗೆ ನಿಯಾಮಕನಾಗಿ ಯಾವ ಬ್ರಹ್ಮನಿರುವನೋ, ತತ್ತು—ಆ ಬ್ರಹ್ಮನೇ, ಜ್ಯೋತಿರಾದ್ಯಧಿಷ್ಠಾನಂ—ತೇಜೋರೂಪವಾಗಿರುವ ಚಕ್ಷುರಾದಿ ಇಂದ್ರಿಯಗಳಿಗೆ ನಿಯಾಮಕನಾಗಿದ್ದಾನೆ ಚಕ್ಷುರಾದಿಗಳು ಈಶನ ಕರಣಗಳೆಂದು ಭಾವ ಏಕೆಂದರೆ, ತದಾಮನನಾತ್—ಭಗವಂತನು ಚಕ್ಷುರಾದಿಗಳಿಗೆ ನಿಯಾಮಕನಾಗಿರುವನೆಂದು "ಯಶ್ಚಕ್ಷುಷಿ ತಿಷ್ಠನ್" (ಬೃ ೫–೭) ಇತ್ಯಾದಿ ಶ್ರುತಿಗಳಲ್ಲಿ ಹೇಳಿರುವುದರಿಂದ ಎಂದು ಅರ್ಥ.

वाच्ये यदग्न्यादिरूपज्योतिराद्यधिष्ठानमिति ब्रह्मविशेषणोक्तिः ब्रह्मणोऽग्न्यादिरूपभूतप्रेरकत्वात् तदंशभूतचक्षुरादेरपि तस्यैव प्रेरकत्वमिति युक्तिं सूचयितुम् । अत एव ज्योतिरादिभूतकार्यत्वात् । ज्योतिरादिशब्देन चक्षुरादेर्ग्रहणम् । आकाशाद्यधिष्ठानमिति वाच्ये ज्योतिरादीत्युक्तिरपि चक्षुरादीति प्रकृतत्वात् ।

नन्वेवं "जीवस्य करणान्याहुः" इति श्रुतिः कथमित्यत आह—

॥ ॐ प्राणवता शब्दात् ॐ ॥ २-४-१६

प्राणा इन्द्रियाण्यस्य सन्तीति प्राणवान् जीवः तेन । तदित्यस्ति । तद् ब्रह्म प्राणवता जीवेन कर्त्रा स्वकरणैः दर्शनादि कारयति । "एष

---

'ಜ್ಯೋತಿರಾದ್ಯಧಿಷ್ಠಾನಂ' ಎಂಬ ಪದಪ್ರಯೋಗದ ವೈಶಿಷ್ಟ್ಯ

ಬ್ರಹ್ಮನು ಅಗ್ನಿಯೇ ಮೊದಲಾದ ಭೂತಗಳಿಗೆ ಪ್ರೇರಕನಾಗಿರುವುದರಿಂದ ಅವುಗಳ ಅಂಶಗಳಾದ ಚಕ್ಷುರಾದಿಗಳಿಗೂ ಅವನೇ ಪ್ರೇರಕನಾಗಿರುವನೆಂಬ ಯುಕ್ತಿಯನ್ನು ಸೂಚಿಸಲು 'ಬ್ರಹ್ಮ' ಎಂದೇ ಹೇಳಬೇಕಾಗಿದ್ದರೂ ಅಗ್ನಿ ಮೊದಲಾದ ಜ್ಯೋತಿಸ್ಸುಗಳಿಗೆ ಅಧಿಷ್ಠಾನವೆಂಬ ಬ್ರಹ್ಮವಿಶೇಷಣವನ್ನು ಪ್ರಯೋಗಿಸಲಾಗಿದೆ. ಆದ್ದರಿಂದಲೇ ಜ್ಯೋತಿರಾದಿ ಭೂತಗಳಿಂದ ಜನ್ಯವಾಗಿರುವುದರಿಂದ ಚಕ್ಷುರಾದಿಗಳನ್ನು 'ಜ್ಯೋತಿರಾದಿ' ಶಬ್ದದಿಂದ ಗ್ರಹಿಸಲಾಗಿದೆ. 'ಆಕಾಶಾದ್ಯಧಿಷ್ಠಾನಂ' ಎಂದು ಹೇಳಬೇಕಾಗಿದ್ದರೂ, 'ಚಕ್ಷುರಾದಿ' (ಬ್ರ. ಸೂ ೨–೪–೧೧) ಎಂಬಲ್ಲಿ ಪ್ರಸಕ್ತವಾಗಿರುವುದರಿಂದ 'ಜ್ಯೋತಿರಾದಿ' ಎಂದು ಹೇಳಲಾಗಿದೆ.

ಹಾಗಾದರೆ, 'ಜೀವಸ್ಯ ಕರಣಾನ್ಯಾಹುಃ' (ಸೌತ್ರಾಯಣ ಶ್ರುತಿ) ಎಂಬ ಶ್ರುತಿಗೆ ಅರ್ಥವೇನು ? ಎಂಬ ಪ್ರಶ್ನೆಗೆ ಉತ್ತರ—

ಓಂ ಪ್ರಾಣವತಾ ಶಬ್ದಾತ್ ಓಂ (೨-೪-೧೬)

**ಸೂತ್ರಾರ್ಥ**

ಪ್ರಾಣಗಳು ಅಂದರೆ ಇಂದ್ರಿಯಗಳು ಈ ಜೀವನಿಗಿರುವುದರಿಂದ ಜೀವನು ಪ್ರಾಣವಾನ್ ಪ್ರಾಣವತಾ–ಜೀವನಿಂದ. 'ತತ್' ಎಂಬ ಪದವು ಅನುವೃತ್ತವಾಗುವುದು. ತತ್–ಬ್ರಹ್ಮನು, ಪ್ರಾಣವತಾ–ಜೀವನೆಂಬ ಕರ್ತೃವಿನಿಂದ, ತನ್ನ ಕರಣಗಳಾದ ಇಂದ್ರಿಯಗಳ ಮೂಲಕ, ದರ್ಶನ ಮೊದಲಾದ ಕ್ರಿಯೆಗಳನ್ನು ಮಾಡಿಸು

ह्यनेनात्मना चक्षुषा दर्शयति" इत्यादिशब्दादिति योज्यम् । करणानामपीशप्रयोज्यत्वेऽपि जीवस्य तदायत्तकर्तुः कर्मसाधनत्वात् तत्परा श्रुतिरिति भावः । श्रुत्यनुरोधात् आत्मनेति जीवेनेति वा वाच्ये प्राणवतेत्युक्तिः उत्तरयोगे प्राणतत्सम्बन्धयोरन्वयार्था ।

श्रुतेरर्थान्तरमाह—

## ॥ ॐ तस्य च नित्यत्वात् ॐ ॥ २-४-१७

तस्य प्राणवतो जीवस्य । चशब्देन प्राणानां तत्सम्बन्धस्य चेति समुच्चीयते । तयोरपि प्राणवदिति संनिधापितत्वात् । जीवप्राणतत्सम्बन्धानां नित्यत्वादित्यर्थः । जीवकरणसम्बन्धस्य चिरकालीन-

---

ತ್ತಾನೆ. " 'ಏಷ ಹ್ಯನೇನಾತ್ಮನಾ ಚಕ್ಷುಷಾ ದರ್ಶಯತಿ' ಎಂಬ ಶ್ರುತಿಯ ಆಧಾರದಿಂದ " ಎಂದು ಯೋಜಿಸಿಕೊಳ್ಳಬೇಕು. ಇಂದ್ರಿಯಗಳಿಗೆ ಭಗವಂತನೇ ನಿಯಾಮಕನಾಗಿದ್ದರೂ ಭಗವದಧೀನಕರ್ತೃವಾದ ಜೀವನ ಕ್ರಿಯೆಗಳಿಗೆ ಸಾಧನವಾಗಿರುವುದರಿಂದ ಶ್ರುತಿಯು ಇಂದ್ರಿಯಗಳನ್ನು ಜೀವನ ಕರಣಗಳೆಂದು ಹೇಳುವುದೆಂದು ಭಾವ.

**'ಪ್ರಾಣವತಾ' ಎಂಬ ಪದಪ್ರಯೋಗದ ಉದ್ದೇಶ**

'ಏಷ ಹ್ಯನೇನಾತ್ಮನಾ' ಎಂಬ ಶ್ರುತಿಯನ್ನನುಸರಿಸಿ 'ಆತ್ಮನಾ' ಎಂದಾಗಲೀ 'ಜೀವೇನ' ಎಂದಾಗಲೀ ಹೇಳಬೇಕಾಗಿದ್ದರೂ, ಮುಂದಿನ ಸೂತ್ರದಲ್ಲಿ ಪ್ರಾಣ ಮತ್ತು ಅವುಗಳ ಸಂಬಂಧದ ಅನ್ವಯಕ್ಕೋಸ್ಕರ 'ಪ್ರಾಣವತಾ' ಎಂದು ಹೇಳಲಾಗಿದೆ.

'ಜೀವಸ್ಯ ಕರಣಾನ್ಯಾಹುಃ' ಎಂಬ ಶ್ರುತಿಗೆ ಅರ್ಥಾಂತರವನ್ನು ಹೇಳುವ ಸೂತ್ರ—

## ಓಂ ತಸ್ಯ ಚ ನಿತ್ಯತ್ವಾತ್ ಓಂ (೨-೪-೧೭)

**ಸೂತ್ರಾರ್ಥ**

ತಸ್ಯ—ಇಂದ್ರಿಯಸಂಬಂಧ ಪಡೆದ ಜೀವನಿಗೆ. ಪ್ರಾಣವತ್ ಶಬ್ದದಿಂದ ಇಂದ್ರಿಯಗಳು ಮತ್ತು ಅವುಗಳ ಸಂಬಂಧ ಪ್ರಸ್ತುತವಾಗುವುದರಿಂದ 'ಚ' ಶಬ್ದವು ಆವೆರಡರ ಸಮುಚ್ಚಯವನ್ನು ಹೇಳುವುದು. ಜೀವ, ಇಂದ್ರಿಯಗಳು ಮತ್ತು ಅವುಗಳ ಸಂಬಂಧ —ಇವುಗಳು ನಿತ್ಯವಾದುದರಿಂದ ಎಂದು ಅರ್ಥ. ಜೀವ ಮತ್ತು ಇಂದ್ರಿಯಗಳ ಸಂಬಂಧವು ಚಿರಕಾಲವಿರುವುದರಿಂದ ಶ್ರುತಿಯು ಔಪಚಾರಿಕವಾಗಿ ಇಂದ್ರಿಯಗಳನ್ನು

त्वात् जीवकरणत्वश्रुतिरुपचरितार्थेति "ब्रह्मणो वा एतानि करणानि" इति श्रुत्यविरोध इति भावः । सम्बन्धनित्यत्वोक्त्यैव पूर्तौ जीवप्राणयोरपि तदुक्तिः तत्सम्बन्धनित्यत्वार्था । सम्बन्धिनोरभावे तदयोगात् ॥ १० ॥

तइन्द्रियाण्यधिकरणम्—११

॥ ॐ त इन्द्रियाणि तद्व्यपदेशादन्यत्र श्रेष्ठात् ॐ ॥ २-४-१८

अत्र श्रेष्ठस्येन्द्रियानीन्द्रियत्वश्रुत्यविरोध उच्यते । त इति प्राक् चशब्दोक्ताः प्राणा उच्यन्ते । श्रेष्ठादन्यत्र मुख्यप्राणादन्ये ते प्राणा इन्द्रियाणि, न श्रेष्ठः । कुतः ? तद्व्यपदेशात् तस्य श्रेष्ठादन्येषामिन्द्रिय-

---

ಜೀವನ ಕರಣಗಳೆಂದು ಹೇಳುವುದು. ಆದ್ದರಿಂದ 'ಬ್ರಹ್ಮಣೋ ವಾ ಏತಾನಿ ಕರಣಾನಿ' ಎಂಬ ಶ್ರುತಿಯು ವಿರೋಧವಿಲ್ಲವೆಂದು ಭಾವ. ಜೀವ ಮತ್ತು ಇಂದ್ರಿಯಸಂಬಂಧ ನಿತ್ಯವೆಂದು ಹೇಳಿದ್ದರೂ ಸಾಕಾಗಿತ್ತು. ಆದರೂ ಸಂಬಂಧಿಗಳಾದ ಜೀವ ಮತ್ತು ಇಂದ್ರಿಯಗಳೇ ಇಲ್ಲದಿದ್ದಲ್ಲಿ ಸಂಬಂಧ ನಿತ್ಯವಾಗಲು ಸಾಧ್ಯವಿಲ್ಲದ್ದರಿಂದ ಜೀವ ಮತ್ತು ಇಂದ್ರಿಯಗಳೂ ನಿತ್ಯಗಳೆಂದು ಹೇಳಲಾಗಿದೆ.

ತಇಂದ್ರಿಯಾಧಿಕರಣ—೧೧

## ಓಂ ತ ಇಂದ್ರಿಯಾಣಿ ತದ್ವ್ಯಪದೇಶಾದನ್ಯತ್ರ ಶ್ರೇಷ್ಠಾತ್ ಓಂ (೨-೪-೧೮)

**ಅಧಿಕರಣದ ವಿಷಯ ಮತ್ತು ಸೂತ್ರಾರ್ಥ**

ಈ ಅಧಿಕರಣದಲ್ಲಿ ಮುಖ್ಯಪ್ರಾಣನೂ ಇಂದ್ರಿಯವೆಂದು ಹೇಳುವ ಶ್ರುತಿಗೂ ಇಂದ್ರಿಯವಲ್ಲವೆಂದು ಹೇಳುವ ಶ್ರುತಿಗೂ ಅವಿರೋಧವನ್ನು ಹೇಳಲಾಗುವುದು. 'ತೇ' ಎಂಬ ಪದವು ಹಿಂದಿನ ಸೂತ್ರದಲ್ಲಿ 'ಚ' ಶಬ್ದದಿಂದ ಹೇಳಲ್ಪಟ್ಟಿರುವ ಪ್ರಾಣಗಳನ್ನು ಹೇಳುವುದು. ಶ್ರೇಷ್ಠಾತ್ ಅನ್ಯತ್ರ—ಮುಖ್ಯಪ್ರಾಣನನ್ನು ಬಿಟ್ಟು ಇತರ, ತೇ—ಆ ಪ್ರಾಣಗಳು, ಇಂದ್ರಿಯಾಣಿ—ಇಂದ್ರಿಯಗಳು, ಮುಖ್ಯಪ್ರಾಣನಲ್ಲ. ಏಕೆಂದರೆ, ತದ್ವ್ಯಪದೇಶಾತ್, ತಸ್ಯ—ಮುಖ್ಯಪ್ರಾಣನನ್ನುಳಿದು ಇತರ ಪ್ರಾಣಗಳಿಗೆ ಇಂದ್ರಿಯತ್ವ

त्वस्य "द्वादश वेन्द्रियाण्याहुः । मुख्यप्राणस्त्वनिन्द्रियम्" इति व्यपदेशादित्यर्थः । श्रेष्ठोऽनिन्द्रियमिति वाच्ये श्रेष्ठादन्यत्रेत्याद्युक्तिः श्रेष्ठादन्येषामिन्द्रियत्वं श्रेष्ठस्य त्वनिन्द्रियत्वं, "प्राणा वा इन्द्रियाणि" इति सामान्यश्रुतिः श्रेष्ठादन्यप्राणविषयेति सूचयितुम् । अत एवान्यत्रेति सप्तम्युक्तिः ।

एवं च श्रेष्ठोऽनिन्द्रियं चेत् चक्षुरादेरपि तन्न स्यात्, ईशवशत्वाविशेषादित्यत आह—

॥ ॐ भेदश्रुतेः ॐ ॥ २-४-१९

---

ವಿರುವುದನ್ನು, ವ್ಯಪದೇಶಾತ್ – "ದ್ವಾದಶ ವಾ ಇಂದ್ರಿಯಾಣ್ಯಾಹುಃ, ಮುಖ್ಯ ಪ್ರಾಣಸ್ತ್ವನಿಂದ್ರಿಯಮ್" (ಪೌತ್ರಾಯಣಶ್ರುತಿ) ಎಂಬ ಶ್ರುತಿಯಲ್ಲಿ ಹೇಳಿರುವುದ ರಿಂದ ಎಂದು ಅರ್ಥ.

### 'ಶ್ರೇಷ್ಠಾದನ್ಯತ್ರ' ಎಂಬ ಪ್ರಯೋಗದ ವಿಶೇಷ

'ಶ್ರೇಷ್ಠಃ ಅನಿಂದ್ರಿಯಮ್' – ಮುಖ್ಯಪ್ರಾಣನು ಇಂದ್ರಿಯವಲ್ಲ ಎಂದು ಹೇಳಬಹುದಾಗಿದ್ದರೂ, ಮುಖ್ಯಪ್ರಾಣನನ್ನು ಬಿಟ್ಟು ಉಳಿದ ಪ್ರಾಣಗಳು ಇಂದ್ರಿಯ ಗಳು, ಮುಖ್ಯಪ್ರಾಣನು ಇಂದ್ರಿಯವಲ್ಲ; 'ಪ್ರಾಣಾ ವಾ ಇಂದ್ರಿಯಾಣಿ' ಎಂಬ ಸಾಮಾನ್ಯಶ್ರುತಿಯು ಮುಖ್ಯಪ್ರಾಣನನ್ನು ಬಿಟ್ಟು ಉಳಿದ ಪ್ರಾಣಗಳನ್ನು ಕುರಿತದ್ದು ಎಂದು ಸೂಚಿಸಲು 'ಶ್ರೇಷ್ಠಾದನ್ಯತ್ರ' ಎಂದು ಮುಂತಾಗಿ ಹೇಳಲಾಗಿದೆ ಆದ್ದರಿಂದಲೇ [1] 'ಅನ್ಯತ್ರ' ಎಂದು ಸಪ್ತಮೀವಿಭಕ್ತಿಯನ್ನು ಪ್ರಯೋಗಿಸಲಾಗಿದೆ.

ಹಾಗಾದಲ್ಲಿ, ಮುಖ್ಯಪ್ರಾಣನಂತೆ ಇತರರೂ ಭಗವಂತನಿಗೆ ಅಧೀನರಾಗಿರುವ ವಿಷಯದಲ್ಲಿ ಸಮಾನರಾಗಿರುವುದರಿಂದ ಮುಖ್ಯಪ್ರಾಣನು ಇಂದ್ರಿಯವಲ್ಲದಿದ್ದರೆ ಚಕ್ಷುರಾದಿಗಳೂ ಇಂದ್ರಿಯವಾಗದಿರಲಿ ಎಂಬ ಆಕ್ಷೇಪಕ್ಕೆ ಸಮಾಧಾನ—

ಓಂ ಭೇದಶ್ರುತೇಃ ಓಂ (೨-೪-೧೯)

---

1. ಸಪ್ತಮೀ ವಿಭಕ್ತಿಯ ಅರ್ಥ ವಿಷಯತ್ವ. 'ಪ್ರಾಣಾ ವಾ ಇಂದ್ರಿಯಾಣಿ' ಎಂಬ ಶ್ರುತಿಯು ಇತರ ಪ್ರಾಣವಿಷಯಕವಾದುದು, ಮುಖ್ಯಪ್ರಾಣವಿಷಯಕವಲ್ಲ—ಎಂಬ ಅರ್ಥವು ಲಭಿಸುವುದೆಂದು ಭಾವ.

भेदो विशेषः । त इति श्रेष्ठादिति च पदं विपरिणम्यान्वेति । तेषां द्वादशप्राणानां श्रेष्ठस्य च भेदश्रुतेः त एवेन्द्रियाणीत्यर्थः । "स्थित एव हीदं मुख्यप्राणः करोति कारयति" इति श्रुतौ श्रेष्ठस्य सर्वकर्तृकारयितृत्वेन ईशसाम्यस्यान्येषां तद्भावस्योक्तेरिति भावः ।

प्राणानां श्रेष्ठस्य च केवलश्रुत्या भेदमुक्त्वा प्रत्यक्षश्रुतिभ्यां च तदाह—

॥ ॐ वैलक्षण्याच्च ॐ ॥ २-४-२०

प्राणानां श्रेष्ठस्य च जीवप्रयत्नाधीनत्वतदनधीनत्वरूपवैलक्षण्यात् क्रमात् प्रत्यक्षश्रुतिभ्यां सिद्धं त एवेन्द्रियाणीत्यर्थः । प्राणानां प्रवृत्तेः

---

**ಸೂತ್ರಾರ್ಥ**

ಭೇದವೆಂದರೆ ವಿಶೇಷ. 'ತೇ', 'ಶ್ರೇಷ್ಠಾತ್' ಎಂಬ ಪದಗಳು ವಿಭಕ್ತಿಯ ಬದಲಾವಣೆಯೊಂದಿಗೆ ಅನ್ವಯವನ್ನು ಪಡೆಯುತ್ತವೆ. ತೇಷಾಂ—ಆ ಹನ್ನೆರಡು ಪ್ರಾಣಗಳಿಗೂ, ಶ್ರೇಷ್ಠಸ್ಯ ಚ—ಮುಖ್ಯಪ್ರಾಣನಿಗೂ, ಭೇದಶ್ರುತೇಃ—ವಿಶೇಷವು ಶ್ರುತವಾಗಿರುವುದರಿಂದ ಆ ದ್ವಾದಶ ಪ್ರಾಣಗಳೇ ಇಂದ್ರಿಯಗಳೆಂದು ಅರ್ಥ. "ಸ್ಥಿತ ಏವ ಹಿ ಇದಂ ಮುಖ್ಯಪ್ರಾಣಃ ಕರೋತಿ ಕಾರಯತಿ" ಎಂಬ ಶ್ರುತಿಯಲ್ಲಿ ಮುಖ್ಯ ಪ್ರಾಣನು ಸರ್ವವನ್ನೂ ಮಾಡುವವನು, ಮಾಡಿಸುವವನು ಎಂದು ಭಗವಂತನ ಸಾಮ್ಯವನ್ನು ಹೇಳಿರುವುದರಿಂದ ಇತರ ಪ್ರಾಣಗಳಿಗೆ ಆ ಸಾಮ್ಯವಿಲ್ಲದಿರುವುದನ್ನು ಹೇಳಿರುವುದರಿಂದ ಎಂದು ಭಾವ.

ಮುಖ್ಯಪ್ರಾಣನಿಗೂ, ಇತರ ಪ್ರಾಣಗಳಿಗೂ ಇರುವ ವಿಶೇಷವನ್ನು ಕೇವಲ ಶ್ರುತಿಯ ಆಧಾರದಿಂದ ಹೇಳಿದ ನಂತರ ಪ್ರತ್ಯಕ್ಷ ಮತ್ತು ಶ್ರುತಿಗಳ ಆಧಾರದಿಂದಲೂ ವಿಶೇಷವನ್ನು ಹೇಳುವ ಸೂತ್ರ—

ಓಂ ವೈಲಕ್ಷಣ್ಯಾಚ್ಚ ಓಂ (೨–೪–೨೦)

**ಸೂತ್ರಾರ್ಥ**

ಇಂದ್ರಿಯಗಳು ಜೀವನ ಪ್ರಯತ್ನಾಧೀನವಾಗಿವೆ, ಮುಖ್ಯಪ್ರಾಣನು ಜೀವ ಪ್ರಯತ್ನಾಧೀನವಾಗಿಲ್ಲ ಎಂಬ ವೈಲಕ್ಷಣ್ಯವು ಕ್ರಮವಾಗಿ ಪ್ರತ್ಯಕ್ಷ ಮತ್ತು ಶ್ರುತಿಗಳಿಂದ ಸಿದ್ಧವಾಗಿರುವುದರಿಂದ ಆ ಪ್ರಾಣಗಳೇ ಇಂದ್ರಿಯಗಳು ಎಂದು ಅರ್ಥ.

जाग्रत्येव भावेन सुप्तावभावेन जीवायत्तत्वं प्रत्यक्षसिद्धम् । श्रेष्ठस्य तु "प्राणाग्नय एवास्मिन् पुरे जाग्रति" इति श्रुत्या चशब्दसूचितया सिद्धमिति ध्येयम् ॥ ११ ॥

संज्ञामूर्त्यधिकरणम्—१२

## ॥ ॐ संज्ञामूर्तिक्लृप्तिस्तु त्रिवृत्कुर्वत उपदेशात् ॐ ॥ २-४-२१

अत्र नामरूपयोः विरिञ्चेशसृष्टत्वश्रुत्यविरोध उच्यते । तुरेव । मूर्तिर्देहः । उपलक्षणमेतत् । संज्ञामूर्त्योः नामप्रपञ्चदेहादिरूपप्रपञ्चयोः

---

ಇಂದ್ರಿಯಗಳ ಪ್ರವೃತ್ತಿಯು ಜಾಗ್ರತ್ಕಾಲದಲ್ಲಿ ಮಾತ್ರ ಇರುವುದರಿಂದ, ಸುಷುಪ್ತಿ ಕಾಲದಲ್ಲಿ ಇಲ್ಲದಿರುವುದರಿಂದ ಇಂದ್ರಿಯಗಳು ಜೀವಪ್ರಯತ್ನಾಧೀನವಾಗಿವೆಯೆಂದು ಪ್ರತ್ಯಕ್ಷಸಿದ್ಧವಾಗಿದೆ. ಮುಖ್ಯಪ್ರಾಣನು ಜೀವಪ್ರಯತ್ನಾಧೀನನಲ್ಲವೆನ್ನುವುದು [1]'ಪ್ರಾಣಾಗ್ನಯ ಏವ ಅಸ್ಮಿನ್ ಪುರೇ ಜಾಗ್ರತಿ' ಎಂಬ, ಸೂತ್ರದ 'ಚ' ಶಬ್ದ ಸೂಚಿತವಾದ ಶ್ರುತಿಯಿಂದ ಸಿದ್ಧವಾಗಿದೆ ಎಂದು ತಿಳಿಯಬೇಕು.

ಸಂಜ್ಞಾಧಿಕರಣ—೧೨

## ಓಂ ಸಂಜ್ಞಾಮೂರ್ತಿಕ್ಲೃಪ್ತಿಸ್ತು ತ್ರಿವೃತ್ಕುರ್ವತ ಉಪದೇಶಾತ್ ಓಂ (೨-೪-೨೧)

**ಅಧಿಕರಣದ ವಿಷಯ ಮತ್ತು ಸೂತ್ರಾರ್ಥ**

ಈ ಅಧಿಕರಣದಲ್ಲಿ, ನಾಮರೂಪಗಳು ವಿರಿಂಚನಿಂದ ಸೃಷ್ಟವಾಗಿವೆ ಎಂದು ಹೇಳುವ ಶ್ರುತಿಗೂ ಭಗವಂತನಿಂದ ಸೃಷ್ಟವಾಗಿವೆ ಎಂದು ಹೇಳುವ ಶ್ರುತಿಗೂ ಅವಿರೋಧವನ್ನು ಹೇಳಲಾಗುವುದು. 'ತು' ಶಬ್ದಕ್ಕೆ ಏವ ಎಂದು ಅರ್ಥ. ಮೂರ್ತಿ

---

1. ಸುಷುಪ್ತಿಕಾಲದಲ್ಲಿ ಪ್ರಾಣ, ಅಪಾನ ಮೊದಲಾದ ಮುಖ್ಯಪ್ರಾಣರೂಪವಾದ ಅಗ್ನಿಗಳು ಶರೀರಧಾರಣವೇ ಮೊದಲಾದ ಕ್ರಿಯೆಗಳನ್ನು ಮಾಡುವವರೆಂದು ಪ್ರಶ್ನಶ್ರುತಿಯ ಭಾವ.

क्लृप्तिः सृष्टिस्त्रिवृत्कुर्वत एव । त्रीणि तेजोबन्नानि वृणोति मिश्रयतीति त्रिवृत् । भावप्रधानम् । भावे क्विबन्तं वा । तेजोऽबन्नानां मिश्रणं कुर्वतो विष्णोरेव न विरिञ्चात् । कुतः ? उपदेशात् । "सर्वाणि रूपाणि विचित्य धीरो नामानि कृत्वा" इति श्रुतेरित्यर्थः । "विरिञ्चो वा इदं सर्वं विरेचयति" इति श्रुतिरवान्तरकर्तृत्वपरा । तेन "परमाद्ध्येते नामरूपे व्याक्रियेते" इति श्रुतेरविरोध इति भावः । परादित्येव वाच्ये त्रिवृदित्याद्युक्तिः त्रिवृत्कर्तृत्वयुक्तिसूचनाय । त्रिवृत्करणाभावे रूपोत्पत्तेरयोगस्याग्रे स्पष्टत्वात् । रूपाभावे नामक्लृप्तेरयोगादिति ।

---

ಎಂದರೆ ದೇಹ. ಈ ಶಬ್ದವು ಉಪಲಕ್ಷಣವಾಗಿದೆ.[1] ಸಂಜ್ಞಾಮೂರ್ತ್ಯೋಃ–ನಾಮಾತ್ಮಕವಾದ ಪ್ರಪಂಚ ಮತ್ತು ದೇಹಾದಿರೂಪವಾದ ಪ್ರಪಂಚದ, ಕ್ಲೃಪ್ತಿಃ–ಸೃಷ್ಟಿಯು, ತ್ರಿವೃತ್ಕುರ್ವತ ಏವ—ತ್ರೀಣಿ–ತೇಜಸ್ಸು, ಅಪ್ ಮತ್ತು ಅನ್ನ—ಈ ಮೂರನ್ನು, ವೃಣೋತಿ–ಮಿಶ್ರಿತಗೊಳಿಸುತ್ತಾನೆ ಎಂದು ತ್ರಿವೃತ್ ಶಬ್ದದ ಅರ್ಥ. ಈ ಶಬ್ದವು ಭಾವಪ್ರಧಾನವಾಗಿದೆ. ಅಥವಾ ಭಾವಾರ್ಥಕವಾದ ಕ್ವಿಪ್ ಪ್ರತ್ಯಯಾಂತವಾಗಿದೆ—ತೇಜೋಽಬನ್ನಗಳ ಮಿಶ್ರಣವನ್ನು ಮಾಡುವ ವಿಷ್ಣುವಿನಿಂದಲೇ ಆಗಿದೆ ಹೊರತು ವಿರಿಂಚನಿಂದಲ್ಲ. ಏಕೆಂದರೆ, ಉಪದೇಶಾತ್– "ಸರ್ವಾಣಿ ರೂಪಾಣಿ ವಿಚಿತ್ಯ ಧೀರೋ ನಾಮಾನಿ ಕೃತ್ವಾ" (ತೈ. ಆ. ೩–೧೨) ಎಂಬ ಶ್ರುತಿಯಿಂದ ಎಂದು ಅರ್ಥ. "ವಿರಿಂಚೋ ವಾ ಇದಂ ಸರ್ವಂ ವಿರೇಚಯತಿ" (ಗೌಪವನ ಶ್ರುತಿ) ಎಂಬ ಶ್ರುತಿಯು ವಿರಿಂಚನಿಗೆ ಅಪ್ರಧಾನ ಕರ್ತೃತ್ವವನ್ನು ಹೇಳುವ ತಾತ್ಪರ್ಯವುಳ್ಳದ್ದು. ಆದ್ದರಿಂದ "ಪರಮಾದ್ಧ್ಯೇತೇ ನಾಮರೂಪೇ ವ್ಯಾಕ್ರಿಯೇತೇ" (ಅಗ್ನಿವೇಶ್ಯಶ್ರುತಿ) ಎಂಬ ಶ್ರುತಿಯು ವಿರೋಧವಿಲ್ಲವೆಂದು ಭಾವ.

**'ಸಂಜ್ಞಾಮೂರ್ತಿ', 'ತ್ರಿವೃತ್ಕುರ್ವತ' ಎಂಬ ಪದಪ್ರಯೋಗದ ಸ್ವಾರಸ್ಯ**

'ಪರಾತ್'—ಭಗವಂತನಿಂದ—ಎಂದೇ ಹೇಳಬಹುದಾಗಿದ್ದರೂ ತ್ರಿವೃತ್ಕರ್ತೃತ್ವವೆಂಬ ಯುಕ್ತಿಯನ್ನು ಸೂಚಿಸಲು 'ತ್ರಿವೃತ್ಕುರ್ವತಃ' ಎಂದು ಹೇಳಲಾಗಿದೆ.

---

1. 'ಮೂರ್ತಿ' ಶಬ್ದವು ಉಪಲಕ್ಷಣವಾದ್ದರಿಂದ ದೇಹ ಎಂದು ಮಾತ್ರ ಅರ್ಥವನ್ನಿಟ್ಟುಕೊಳ್ಳದೇ ದೇಹಾದಿಪ್ರಪಂಚ ಎಂಬ ಅರ್ಥವನ್ನಿಟ್ಟುಕೊಳ್ಳಲಾಗಿದೆ.

संज्ञेत्याद्युक्तिः श्रौतनामरूपे व्याख्यातुम् । इन्द्रियाश्रयदेहोक्त्या पूर्वोत्तरसङ्गतिं सूचयितुं चेति केचित् ॥ २१ ॥

मांसाधिकरणम्—१३

## ॥ ॐ मांसादि भौमं यथाशब्दमितरयोश्च ॐ ॥ २-४-२२

अत्र प्रस्तुतदेहकारणश्रुत्यविरोध उच्यते । मांसादीति सावधारणम् । कार्यमिति शेषः । अङ्गीकार्यमिति च । प्रस्तुतदेहस्थं मांसाद्येव

---

ತ್ರಿವೃತ್ಕರಣವಿಲ್ಲದಿದ್ದರೆ ರೂಪಾತ್ಮಕ ಪ್ರಪಂಚದ ಉತ್ಪತ್ತಿಯಾಗಲಾರದೆಂದು ಮುಂದೆ ಸ್ಪಷ್ಟಪಡಿಸಿರುವುದರಿಂದ, ರೂಪಾತ್ಮಕ ಪ್ರಪಂಚವಿಲ್ಲದಿದ್ದಲ್ಲಿ ನಾಮಸೃಷ್ಟಿಯು ಸಾಧ್ಯವಿಲ್ಲದಿರುವುದರಿಂದ ವಿಷ್ಣುವೇ ನಾಮರೂಪಗಳನ್ನು ಸೃಷ್ಟಿಸಿದ್ದಾನೆನ್ನಲು ತ್ರಿವೃತ್ಕರ್ತೃತ್ವವು ಯುಕ್ತಿಯಾಗಿದೆ. ಶ್ರುತಿಯಲ್ಲಿ ನಾಮರೂಪ ಶಬ್ದಗಳನ್ನು ವ್ಯಾಖ್ಯಾನಿಸಲು 'ಸಂಜ್ಞಾ' ಇತ್ಯಾದಿ ಹೇಳಲಾಗಿದೆ. ಇಂದ್ರಿಯಗಳಿಗೆ ಆಶ್ರಯವಾದ ದೇಹವನ್ನು ಹೇಳುವ ಮೂಲಕ ಪೂರ್ವೋತ್ತರ ಅಧಿಕರಣಗಳ ಸಂಗತಿಯನ್ನು ಸೂಚಿಸುವುದಕ್ಕಾಗಿಯೂ 'ಸಂಜ್ಞಾಮೂರ್ತಿ' ಎಂದು ಹೇಳಲಾಗಿದೆ ಎಂದು ಕೆಲವರು ಹೇಳುವರು.

ಮಾಂಸಾಧಿಕರಣ—೧೩

## ಓಂ ಮಾಂಸಾದಿ ಭೌಮಂ ಯಥಾಶಬ್ದಮಿತರಯೋಶ್ಚ ಓಂ (೨-೪-೨೨)

**ಅಧಿಕರಣದ ವಿಷಯ ಮತ್ತು ಸೂತ್ರಾರ್ಥ**

ಈ ಅಧಿಕರಣದಲ್ಲಿ, ಪ್ರಸ್ತುತವಾದ ಶರೀರದ ಕಾರಣಕ್ಕೆ ಸಂಬಂಧಿಸಿದ ಶ್ರುತಿಗಳಿಗೆ ಅವಿರೋಧವನ್ನು ಹೇಳಲಾಗುವುದು. 'ಮಾಂಸಾದಿ' ಪದವು ಅವಧಾರಣಸಹಿತವಾಗಿದೆ. 'ಕಾರ್ಯಂ' ಎಂಬ ಶೇಷವನ್ನು ಸೇರಿಸಿಕೊಳ್ಳಬೇಕು. 'ಅಂಗೀಕಾರ್ಯಂ' ಎಂಬ ಪದವನ್ನೂ ಹಾಗೆಯೇ ಸೇರಿಸಿಕೊಳ್ಳಬೇಕು.

ಹಿಂದಿನ ಅಧಿಕರಣದಲ್ಲಿ ಪ್ರಸ್ತುತವಾಗಿರುವ ದೇಹದಲ್ಲಿ ಇರುವ, ಮಾಂಸಾದ್ಯೇವ–ಮಾಂಸ ಮೊದಲಾದ ಕಠಿಣ ವಸ್ತುವೇ, ಭೌಮಂ–ಪಾರ್ಥಿವವಾಗಿದೆ. ಸರ್ವಶರೀರವೂ

कठिनं वस्तु भौमं पार्थिवं, न सर्वशरीरं, किन्त्वितरयोरप्तेजसोश्च कार्यम् । यथाशब्दं "यत्कठिनं सा पृथिवी यद्द्रवं तदापो यदुष्णं तत्तेजः असृग्वारि तेजो मज्जा" इति शब्दोक्तदिशाऽङ्गीकार्यमित्यर्थः । एवं च देहस्य "इमास्तिस्रो देवताः पुरुषं प्राप्य" इति भूतत्रयात्मकत्वश्रुत्यविरोध इत्याकूतम् । यद्वा मांसादि भौमं भूमिकार्यं, नैतावदेव, किन्त्वप्तेजसोश्च कार्यं यथाशब्दमुपेयम् । "विमिश्राणि हि भूतानि" इति शब्दे भूम्यादिभूतशब्दानां स्वतो मिश्रत्वोक्त्या नैकभूतत्वं मांसशोणितादेरिति 'आपो वाव मांसम्" इत्यादितर्पकत्वादियुक्त्युपेताप्यत्वादिश्रुत्यविरोध इति भावः ।

कथं तर्हि विशिष्याप्यत्वाद्युक्तिरत आह—

---

ಪಾರ್ಥಿವವಲ್ಲ. ಆದರೆ, ಇತರಯೋಃ—ಅಪ್, ತೇಜಸ್ಸುಗಳ ಕಾರ್ಯವೆಂದು, ಯಥಾ ಶಬ್ದಂ—"ಯತ್ಕಠಿನಂ ಸಾ ಪೃಥಿವೀ ಯದ್ದ್ರವಂ ತದಾಪೋ ಯದುಷ್ಣಂ ತತ್ತೇಜಃ ಅಸೃಗ್ ವಾರಿ ತೇಜೋ ಮಜ್ಜಾ" (ಗರ್ಭ. ೩) ಎಂದು ಶ್ರುತಿಯಲ್ಲಿ ಹೇಳಿರುವಂತೆ ಅಂಗೀಕರಿಸಬೇಕೆಂದು ಅರ್ಥ. ಆದ್ದರಿಂದ "ಇಮಾಸ್ತಿಸ್ರೋ ದೇವತಾಃ ಪುರುಷಂ ಪ್ರಾಪ್ಯ" ಎಂದು ಶರೀರವು ಭೂತತ್ರಯಾತ್ಮಕವಾಗಿದೆ ಎಂದು ಹೇಳುವ ಶ್ರುತಿಯು ವಿರೋಧವಿಲ್ಲವೆಂದು ಭಾವ.

**ಸೂತ್ರದ ವ್ಯಾಖ್ಯಾನಾಂತರ**

ಅಥವಾ, ಮಾಂಸಾದಿ—ಮಾಂಸಾದಿಗಳು, ಭೌಮಂ—ಭೂಮಿಕಾರ್ಯವಾಗಿದೆ. ಅಷ್ಟೇ ಅಲ್ಲ; ಅಪ್, ತೇಜಸ್ಸುಗಳ ಕಾರ್ಯವೂ ಆಗಿದೆ ಎಂಬುದನ್ನು ಶ್ರುತಿಗನುಗುಣವಾಗಿ ಅಂಗೀಕರಿಸಬೇಕು. 'ವಿಮಿಶ್ರಾಣಿ ಹಿ ಭೂತಾನಿ' ಎಂಬ ಶ್ರುತಿಯಲ್ಲಿ ಭೂಮಿ ಮೊದಲಾದವುಗಳಿಗೆ ಸ್ವಾಭಾವಿಕವಾಗಿ ಮಿಶ್ರಣವಿರುವುದೆಂದು ಹೇಳಿರುವುದರಿಂದ ಮಾಂಸ, ರಕ್ತ ಮೊದಲಾದವುಗಳು ಒಂದೇ ಭೂತವಲ್ಲ. ಆದ್ದರಿಂದ, 'ಆಪೋ ವಾವ ಮಾಂಸಂ' ಇತ್ಯಾದಿಯಾದ ತರ್ಪಕತ್ವಯುಕ್ತಿಸಹಿತವಾದ ಆಪ್ಯತ್ವಾದಿ ಶ್ರುತಿಯಿಂದ ವಿರೋಧವಿಲ್ಲವೆಂದು ಭಾವ.

ಹಾಗಾದರೆ, ಮಾಂಸವು ಅಪ್‌ಕಾರ್ಯವೆಂದು ಪ್ರತ್ಯೇಕವಾಗಿ ಹೇಳಿರುವುದು ಹೇಗೆ ಎಂಬ ಆಶಂಕೆಗೆ ಸಮಾಧಾನ—

## ॥ ॐ वैशेष्यात्तु तद्वादस्तद्वादः ॐ ॥ २-४-२३

भूम्यादिभूतसंयोगवैशेष्यात् तद्वादः भौमत्वादिविशेषवाद इत्यर्थः । द्विरुक्तिरुक्तसर्वावधारणार्था ॥ १३ ॥

इति श्रीमद्राघवेन्द्रयतिकृततन्त्रदीपिकायां द्वितीयाध्यायस्य
चतुर्थः पादः समाप्तः ॥ श्रीकृष्णार्पणमस्तु ॥

**द्वितीयाध्यायः समाप्तः**

---

## ಓಂ ವೈಶೇಷ್ಯಾತ್ತು ತದ್ವಾದಸ್ತದ್ವಾದಃ ಓಂ (೨-೪-೨೩)

**ಸೂತ್ರಾರ್ಥ**

ಭೂಮಿ ಮೊದಲಾದ ಭೂತಗಳ ಸಂಯೋಗವೆಂಬ ವಿಶೇಷತೆಯಿಂದಾಗಿ, ತದ್ವಾದಃ_ಮಾಂಸ ಮೊದಲಾದವು ಭೂಮಿ ಮೊದಲಾದವುಗಳ ಕಾರ್ಯವಾಗಿವೆ ಎಂಬ ವಿಶೇಷ ವಾದವಿದೆ ಎಂದು ಅರ್ಥ. ಇಲ್ಲಿ ಹೇಳಿರುವ ಎಲ್ಲ ವಿಷಯವನ್ನೂ ದೃಢೀಕರಿಸುವ ಸಲುವಾಗಿ ದ್ವಿರುಕ್ತಿಯನ್ನು ಪ್ರಯೋಗಿಸಲಾಗಿದೆ.

ಶ್ರೀಮದ್ರಾಘವೇಂದ್ರಯತಿಗಳು ರಚಿಸಿರುವ ತಂತ್ರದೀಪಿಕೆಯಲ್ಲಿ
ದ್ವಿತೀಯಾಧ್ಯಾಯದ ಚತುರ್ಥಪಾದವು ಸಮಾಪ್ತವಾಯಿತು.

ಶ್ರೀಕೃಷ್ಣಾರ್ಪಣಮಸ್ತು

**ದ್ವಿತೀಯಾಧ್ಯಾಯವು ಸಮಾಪ್ತವಾಯಿತು.**

***

## ನಮ್ಮ ಪ್ರಕಟಣೆಗಳು

೧. ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯ ವಿರಚಿತ
" **ಶ್ರೀ ಬ್ರಹ್ಮಸೂತ್ರಾಣುಭಾಷ್ಯವು** " ಮತ್ತು
ಶ್ರೀ ರಾಘವೇಂದ್ರ ರಚಿತ " **ತತ್ತ್ವಮಂಜರೀ** "
—ಪ್ರೊ|| ಕೆ. ಟಿ. ಪಾಂಡುರಂಗಿ ಅವರ ಕನ್ನಡಾನುವಾದ ಸಹಿತ.
(ಪ್ರತಿಗಳು ಮುಗಿದಿವೆ)

೨. **ವರಾಹಪುರಾಣೋಕ್ತ " ಶ್ರೀ ಗೀತಾ ಮಾಹಾತ್ಮ್ಯಂ ".**

೩. ಶ್ರೀ ರಾಘವೇಂದ್ರಗುರುಸಾರ್ವಭೌಮ ವಿರಚಿತ "**ಶ್ರೀರಾಮಚಾರಿತ್ರ್ಯಮಂಜರೀ**"
ಮತ್ತು " **ಶ್ರೀಕೃಷ್ಣಚಾರಿತ್ರ್ಯ ಮಂಜರೀ** ".

೪. ಶ್ರೀ ರಾಘವೇಂದ್ರಗುರುಸಾರ್ವಭೌಮ ವಿರಚಿತ " **ತಂತ್ರದೀಪಿಕಾ** "
ಪ್ರೊ|| ಡಿ. ಪ್ರಹ್ಲಾದಾಚಾರ್ಯ, ಎಂ.ಎ., ವಿದ್ವಾನ್, ಇವರಿಂದ
ರಚಿತವಾದ ಕನ್ನಡಾನುವಾದ ಸಹಿತ.

***